ಶ್ರೀ

# ನವನಾಥ ಭಕ್ತಿಸಾರ.




ಲೇಖಕ:—

ಶ್ರೀನಿವಾಸ ನರಸಿಂಹ ಆಲಗೂರ.

ನಾಲತವಾಡ.





ಪ್ರಕಾಶಕ:—



ಆರ್. ಟಿ. ಕರ್ಪೂರ,

ಮ್ಯಾನೇಜರ ಸ. ಜ.

ಆನಂದವನ.



1925.



ಬೆಲೆ. ೩-೮-೦ರೂ.

# ಪ್ರಸ್ತಾವನೆ.



ಶ್ರೀ ನವನಾಥ ಭಕ್ತಿಸಾರವು ಬಹು ಪ್ರಾಸಾದಿಕ ಗ್ರಂಥವು. ನಮ್ಮ ಕನ್ನಡ ವಾಚಕರಿಗೆ ಈ ಪ್ರಾಸಾದಿಕ ಗ್ರಂಥದ ಆಸ್ವಾದವು ಲಭಿಸಬೇಕೆಂದು ಬಹು ದಿವಸಗಳಿಂದ ನಮ್ಮ ಮನಸ್ಸಿನಲ್ಲಿತ್ತು; ಆದರೆ ಈಗ ಶ್ರೀ ಗುರು ಕೃಪೆಯಿಂದ ಈ ಯೋಗವು ಒದಗಿ ಬಂದಿತೆಂದು ತಿಳಿಸಲು ತುಂಬಾ ಸಂತೋಷವಾಗುತ್ತದೆ.

ಭೂಲೋಕದ ನಿವಾಸಿಗಳಿಗೆ ಕಲ್ಯಾಣಮಾಡುವ ಉದ್ದೇಶದಿಂದಲೇ, ಶ್ರೀ ನವನಾರಾಯಣರು ಅವತರಿಸಿ ನಾಥಪಂಥವನ್ನು ಸ್ಥಾಪಿಸಿ, ನವನಾಥರೆಂಬ ಹೆಸರಿನಿಂದ ಪ್ರಸಿದ್ಧರಾದರು. ಈ ನಾಥಪಂಥವು ಕರ್ಮಪ್ರಧಾನವಾದದ್ದಲ್ಲ; ಭಕ್ತಿಪ್ರಧಾನವಾದದ್ದು. ಗುರುನಿಷ್ಠೆಯೇ ಇದರಲ್ಲಿ ಮುಖ್ಯವಾದದ್ದು. ತನ್ನ ಗುರುವಿನ ಹೊರತು ಅನ್ಯರ ಪ್ರತಿಷ್ಠೆಯನ್ನು ಈ ಪಂಥವು ಮಾನ್ಯಮಾಡುವದಿಲ್ಲ. ವಿರಕ್ತಿ-ತಪಸ್ಸು, ಇವೇ ಈ ಪಂಥಕ್ಕೆ ಅಲಂಕಾರಪ್ರಾಯವಾದ ಮುಖ್ಯ ಸಂಗತಿಗಳು. ಶಾಬರೀವಿದ್ಯೆಯ ಪ್ರಭಾವವನ್ನು ತೋರ್ಪಡಿಸಿ ಜಗತ್ತಿನ ಕಲ್ಯಾಣವನ್ನು ಸಾಧಿಸುವದೇ ಈ ಪಂಥದ ಉದ್ದೇಶವು. ಈ ಪಂಥದ ಜನರು ಈಗ ಉತ್ತರಹಿಂದುಸ್ತಾನದಲ್ಲಿ ಸಿಕ್ಕುವರು. ನಮ್ಮ ದೇಶದಲ್ಲಿ ಈ ಪಂಥದ ಪ್ರಸಾರವಿಲ್ಲ. ನಾಥರು ಚಿರಜೀವಿಗಳಾದ್ದರಿಂದ ಅವರ ಪಂಥವಾಪರೂ ಸ್ಥಿರವಾದದ್ದೆಂದೇ ಹೇಳಬಹುದು. ಇರಲಿ.

ಈ ಪವಿತ್ರ ಗ್ರಂಥದ ವಾಚನದಿಂದ ನಮ್ಮ ವಾಚಕರಿಗೆ ಹಲವು ವಿಷಯಗಳ ಬೋಧವಾಗುವದು. ಅವನ್ನೆಲ್ಲ ಇಲ್ಲಿ ವಿಸ್ತರಿಸಿದರೆ, ಇದೇ ಒಂದು ಗ್ರಂಥವೇ ಆಗಬಹುದು. ಆದ್ದರಿಂದ ನಮ್ಮ ಪ್ರಿಯವಾಚಕರು ಗ್ರಂಥವನ್ನು ಸಾವಧಾನದಿಂದ ಓದಿ, ಹೊರಡಬಹುದಾದ ಬೋಧಾಮೃತವನ್ನು ಪಾನಮಾಡಿ ತೃಪ್ತರಾಗಬೇಕೆಂದು ಸವಿನಯವಾಗಿ ಪ್ರಾರ್ಥಿಸಲಾಗುವದು. ಇದು ಪ್ರಾಸಾದಿಕ ಗ್ರಂಥವಾದ್ದರಿಂದ ಭಾವಿಕರಿಗೆ ಇದರಿಂದಾಗುವ ಲಾಭವನ್ನು ವರ್ಣಿಸುವದು ಅಶಕ್ಯವೇ ಸರಿ! ಇಂಥ ಈ ಅಪೂರ್ವಗ್ರಂಥವನ್ನು ಕನ್ನಡಕ್ಕೆ ಪರಿವರ್ತಿಸಿ, ನಮ್ಮ ಸಂಸ್ಥೆಗೆ ಕೃತಾರ್ಥವಾಗಿ ಕೊಟ್ಟ ಶ್ರೀಮಾನ್ ಶ್ರೀ-ನ-ಆಲಗೂರ ಇವರನ್ನು ಮನಃಪೂರ್ವಕವಾಗಿ ಅಭಿನಂದಿಸುವೆವು.

ಶ್ರೀ ಕ್ಷೇತ್ರ ಆನಂದವನ.
ತಾ|| ೨-೮-೧೯೩೫

ವಿಧೇಯ,
ಆರ್. ಟಿ. ಕಪೂರ್, (ಪ್ರಕಾಶಕ.)

# ವಿಷಯಾನುಕ್ರಮಣಿಕೆ.







|| ಶ್ರೀ ಗಣೇಶಾಯನಮಃ ||



# ನವನಾಥ ಭಕ್ತಿಸಾರ.



## ಅಧ್ಯಾಯ ೧



### ಮಚ್ಛೀಂದ್ರನಾಥನ ಜನ್ಮ.





ಒಂದಾನೊಂದು ಕಾಲದಲ್ಲಿ ಜಗನ್ಮಾತೆಯಾದ ಪಾರ್ವತಿಯು ಶ್ರೀ ಶಂಕರನನ್ನು ಕುರಿತು ಪ್ರಾರ್ಥಿಸಿದ್ದೇನಂದರೆ:— "ಹೇ ದಯಾಘನನಾದ ಪರಮೇಶ್ವರಾ, ನೀನು ಪ್ರತಿನಿತ್ಯ ಯಾವ ಮಂತ್ರದ ಜಪಮಾಡುತ್ತಿರುವಿಯೋ ಆ ಪವಿತ್ರವಾದ ಮಂತ್ರವನ್ನು ನನ್ನಗೋಸ್ಕರವಾಗಿ ಹೇಳುವ ಅನುಗ್ರಹಮಾಡಬೇಕು." ಜಗಜ್ಜನನಿಯ ಈ ಇಚ್ಛೆಯನ್ನು ಅರಿತು ಶಂಕರನು ಅವಳಿಗೆ ಹೇಳಿದ್ದೇನಂದರೆ—"ನಾನು ನಿನಗೆ ಆ ಮಂತ್ರವನ್ನು ಉಪದೇಶಿಸುವೆನು; ಆದರೆ ಅದರ ಸಲುವಾಗಿ ಪವಿತ್ರವೂ ಏಕಾಂತವೂ ಆದ ಸ್ಥಾನಬೇಕು." ಈ ಪ್ರಕಾರ ಉಮಾಮಹೇಶ್ವರರ ಭಾಷಣವಾದ ನಂತರ ಅವರಿಬ್ಬರು ನಂದಿಕೇಶ್ವರನ ಮೇಲೆ ಆರೂಢರಾಗಿ ಪೃಥ್ವಿಯಮೇಲೆ ಸಂಚಾರಮಾಡತೊಡಗಿದರು. ಸಂಚಾರ ಮಾಡುತ್ತ ಮಾಡುತ್ತ ಅವರು ಯಮುನಾ ನದಿಯ

ತೀರಕ್ಕೆ ಪ್ರಾಪ್ತರಾದರು. ಅದು ಪೂರ್ಣ ಏಕಾಂತ ಸ್ಥಳವಿದ್ದದರಿಂದ ಮಂತ್ರೋಪದೇಶ ಮಾಡಲಿಕ್ಕೆ ಯೋಗ್ಯವಿರುವದೆಂದು ತಿಳಿದು ಶಂಕರನು ಆ ಸ್ಥಳದಲ್ಲಿ ನಂದಿಕೇಶ್ವರನಿಗೆ ನಿಲ್ಲಲಿಕ್ಕೆ ಅನುಜ್ಞೆಯನ್ನಿತ್ತನು. ಪರಮೇಶ್ವರನ ಆಜ್ಞೆಯ ಪ್ರಕಾರ ನಂದಿಕೇಶ್ವರನು ನಿಲ್ಲಲು ಶ್ರೀ ಶಂಕರನು ಭವಾನಿಯೊಡನೆ ಕೆಳಗೆ ಇಳಿದು, ಯಮುನಾನದಿಯ ಪ್ರವಾಹದ ಸಮೀಪಕ್ಕೆ ಹೋದನು. ನಂದಿಯು ತಟಾಕದ ಸಮೀಪದಲ್ಲಿಯೇ ನಿಂತುಬಿಟ್ಟನು. ಗಿರಿಜೆಯ ಇಚ್ಛಾನುಸಾರ ಶ್ರೀ ಶಂಕರನು ಆವಾಗ ಸಂಜೀವಿನೀ ಮಂತ್ರದ ಉಪದೇಶ ಮಾಡಿದನು. ಮಂತ್ರೋಪದೇಶ ಪೂರ್ಣವಾದ ಕೂಡಲೆ ಈಶ್ವರನು ಪಾರ್ವತಿಯನ್ನುದ್ದೇಶಿಸಿ—"ನಾನು ಹೇಳಿದಂಥ ಮಂತ್ರದ ಸಾರವೇನೆಂಬದನ್ನೂ ಮತ್ತು ಆ ಮಂತ್ರೋಪದೇಶದಿಂದ ನಿನಗೆ ಏನು ಜ್ಞಾನವಾಗಿದೆ ಎಂಬದನ್ನೂ ಸ್ಪಷ್ಟವಾಗಿ ನನಗೆ ಹೇಳು" ಎಂದನು. ಶಂಕರನ ಆಜ್ಞೆಗನುಸಾರವಾಗಿ ಪಾರ್ವತಿಯು [illegible] ಯೋಚಿಸತಕ್ಕವಳು; ಅಷ್ಟರೊಳಗೆ ಆ ಸ್ಥಳದಲ್ಲಿ ನೀರೊಳಗಿಂದ ಈ ಪ್ರಕಾರ ಶಬ್ದ ಹೊರಟಿತು—"ಈಗ ನಾನು ನೀನು ಎಂಬ ಭೇದಭಾವವು ಉಳಿಯಲಿಲ್ಲ. ದೃಷ್ಟಿಗೆ ಕಾಣಿಸುವದೆಲ್ಲ ಮಿಥ್ಯವು; ಸೂಕ್ಷ್ಮತನ ಪರಬ್ರಹ್ಮ ವಸ್ತುವೊಂದೇ ನಿಜವು. ಜಗತ್ತಿನಲ್ಲಿಯ ಸಜೀವ, ನಿರ್ಜೀವ ವಸ್ತುಗಳಿಗೆ ನಾನಾವ ರೂಪವನ್ನು ಧಾರಣಮಾಡಿ ದ್ದಾಗ್ಯೂ ಆ ಎಲ್ಲವುಗಳ ದೃಶ್ಯಸ್ವರೂಪವು ಭ್ರಮರೂಪವಾಗಿದೆ. ಸರ್ವತ್ರದಲ್ಲಿ ಬ್ರಹ್ಮವೊಂದೇ ವ್ಯಾಪಕವಾಗಿದೆ. ಹ್ಯಾಗೆ ಸುವರ್ಣದ ಅಲಂಕಾರಗಳು ಪ್ರತ್ಯಕ್ಷ ದೃಷ್ಟಿಗೆ ಕಂಡು ಬಂದರೂ ಅವುಗಳ ದೃಶ್ಯಸ್ವರೂಪವು ಮಿಥ್ಯವಿದ್ದು ಸರ್ವ ವಸ್ತುಗಳಲ್ಲಿದ್ದ ಸುವರ್ಣವೊಂದೇ ಹ್ಯಾಗೆ ಸತ್ಯವೋ ಆ ಪ್ರಕಾರ ಸರ್ವ ಚರಾಚರ ಸೃಷ್ಟಿಯಲ್ಲಿ ಕ್ರಿಮಿ ಕೀಟಕ ಮೊದಲ್ಗೊಂಡು ಬ್ರಹ್ಮದೇವನ ಪರ್ಯಂತರ ಎಲ್ಲ ರೂಪಗಳು ಅಸತ್ಯವಿದ್ದು ಅವುಗಳಲ್ಲಿದ್ದ ಪರಬ್ರಹ್ಮವೊಂದೇ ಸತ್ಯವಾಗಿದೆ."

ಯಮುನಾನದಿಯ ಪ್ರವಾಹದೊಳಗಿಂದ ಹೊರಟ ಈ ಜ್ಞಾನಪೂರ್ಣ ಭಾಷಣವನ್ನು ಕೇಳಿ ಶಂಕರನು ಚಕಿತನಾದನು. ಪಾರ್ವತಿಯು ಜಿಜ್ಞಾಸಯುಕ್ತಳಾಗಿ ತನ್ನ ಪ್ರಿಯಪತಿಯನ್ನು ಕುರಿತು ಇದೇನೆಂದು ವಿಚಾರಿಸಿದಳು. ಶ್ರೀ ಶಂಕರನು ಜ್ಞಾನದೃಷ್ಟಿಯಿಂದ ನೋಡಲು ಸರ್ವವು ತಿಳಿದು ಬಂದಿತು. ಆಗ ಜಗದಂಬೆಗೆ ಹೇಳಿದನೇನಂದರೆ—"ಕೆಲವು ದಿವಸಗಳ ಪೂರ್ವದಲ್ಲಿ ಉಪ

ರಕ್ಷನೆಂಬ ವಸು ವಿಮಾನದಲ್ಲಿ ಕುಳಿತು ಆಕಾಶಮಾರ್ಗದಿಂದ ಸಂಚಾರ ಮಾಡು
ತ್ತಿರಲು ಉರ್ವಶಿ ಎಂಬ ಸುಂದರ ಅಪ್ಸರೆಯು ವಸುವಿನ ದೃಷ್ಟಿಗೆ ಬಿದ್ದಳು.
ಆ ದೇವಾಂಗನೆಯ ದಿವ್ಯ ಸೌಂದರ್ಯವನ್ನು ನೋಡಿ ವಸುವಿಗೆ ಅವಳಲ್ಲಿ
ಮೋಹ ಉತ್ಪನ್ನವಾಯಿತು. ವಸುವಿನ ದೃಷ್ಟಿಯು ಆ ಸ್ವರ್ಗಕಾಮಿನಿ
ಯಲ್ಲಿ ನಟ್ಟಿರಲು, ಕೂಡಲೆ ಅವಳು ಒಮ್ಮಿಂದೊಮ್ಮೆ ಅದೃಶ್ಯಳಾದಳು.
ಉರ್ವಶಿಯು ಮರೆಯಾದರೂ ಅವಳ ಸೌಂದರ್ಯದಿಂದ ಉತ್ಪನ್ನವಾದ
ವಸುವಿನ ಮನಸ್ಸಿನೊಳಗಿನ ಮೋಹವು ಮಾತ್ರ ಮರೆಯಾಗಲಿಲ್ಲ. ಅವಳ
ವಿರಹದಿಂದ ಅವನು ವ್ಯಾಕುಲನಾದನು; ಅವನ ವಿರಹವೃಷ್ಟಿಯು ಯಮುನಾ
ನದಿಯಲ್ಲಿ ಒಂದು ಹೆಣ್ಣು ಮೀನದ ಮೇಲೆ ಬಿದ್ದಿತು. ಆ ದೃಷ್ಟಿಯ ಪ್ರಭಾ
ವದಿಂದ ಆ ಮೀನಕ್ಕೆ ಗರ್ಭಧಾರಣೆಯಾಯಿತು. ಪ್ರಿಯೇ, ಆ ಗರ್ಭದಲ್ಲಿ
ನವನಾರಾಯಣರಲ್ಲಿ ಒಬ್ಬನಾದ ಕವಿನಾರಾಯಣನು ಸಂಚಾರ ಮಾಡಿ
ದ್ದಾನೆ; ಮುಂದೆ ಆ ಕವಿನಾರಾಯಣನು ಮೀನದ ಉದರದಲ್ಲಿ ಹುಟ್ಟಿ ಬರತ
ಕ್ಕವನಿದ್ದಾನೆ; ಆದರೆ ಈಗ ಗರ್ಭದಲ್ಲಿರುವಾಗಲೇ ಆ ನಾರಾಯಣನು ನಾನು
ನಿನಗೆ ಮಾಡಿದ ಸಂಜೀವಿನೀ ಮಂತ್ರದ ಉಪದೇಶವನ್ನು ಶ್ರವಣ ಮಾಡಿ
ದನು. ಆ ಮಂತ್ರದ ಪ್ರಭಾವದಿಂದ ಅವನಿಗೆ ಸ್ಫೂರ್ತಿಯುಂಟಾಗಿ ಹೀಗೆ
ಅಗಾಧವಾದ ಜ್ಞಾನವಾಣಿಯನ್ನು ನುಡಿದನು.''

ಈ ಪ್ರಕಾರ ಕವಿನಾರಾಯಣನ ಜನ್ಮದ ಪೂರ್ವ ವೃತ್ತಾಂತವನ್ನು
ತನ್ನ ಭಾರ್ಯೆಗೆ ಹೇಳಿದ ಬಳಿಕ ಶಂಕರನು ಮತ್ಸ್ಯೋದರದಲ್ಲಿದ್ದ ಆ ಬಾಲ
ಕನನ್ನುದ್ದೇಶಿಸಿ—"ಹೇ ಕವಿರಾಯಾ! ಪರಿಶುದ್ಧವೂ ಏಕಾಂತವೂ ಆದ
ಸ್ಥಾನವೆಂದು ಇಲ್ಲಿಗೆ ಪ್ರಾಪ್ತನಾದೆನು. ಯೋಗಾಯೋಗದಿಂದ ನನ್ನ
ಉಪದೇಶವು ನಿನಗೆ ಲಭಿಸಿತು; ಮುಂದೆ ನೀನು ಜಗತ್ತಿನಲ್ಲಿ ಪ್ರಕಟನಾಗತಕ್ಕ
ವನಿರುತ್ತೀ; ನಿನ್ನ ಜನ್ಮವಾದ ನಂತರ ಸ್ಮರಣದಿಂದ ಬದರಿಕಾಶ್ರಮಕ್ಕೆ ಬಾ.
ಅಲ್ಲಿ ನಿನಗೆ ದತ್ತಾತ್ರೇಯನ ಕಡೆಯಿಂದ ಮಂತ್ರೋಪದೇಶ ಮಾಡಿಸಿ ನಾನು
ಪ್ರತ್ಯಕ್ಷ ದರ್ಶನ ಕೊಡುವೆನು'' ಈ ಮೇರೆಗೆ ಹೇಳಿ ಪಾರ್ವತಿ ಸಹಿತನಾಗಿ
ಕೈಲಾಸವನ್ನು ಕುರಿತು ತೆರಳಿದನು.

ಈಶ್ವರನು ಕೈಲಾಸಕ್ಕೆ ಹೋದ ಬಳಿಕ ಕವಿನಾರಾಯಣನು ಮೀನದ
ಉದರದಲ್ಲಿಯೇ ಆ ಸಂಜೀವಿನೀ ಮಂತ್ರವನ್ನು ಪಠಿಸುತ್ತಿದ್ದನು. ಪೂರ್ಣ ದಿವ
ಸಗಳು ತುಂಬಿ ಮೀನವು ಪ್ರಸೂತವಾಗುವ ಸಮಯವು ಪ್ರಾಪ್ತವಾಯಿತು;

ಆಗ ಮೀನವು ಜಲದಿಂದ ಹೊರಗೆ ಬಂದು ತೀರದಲ್ಲಿ ತತ್ತಿಯನ್ನು ಹಾಕಿ ಪುನಃ ನೀರಲ್ಲಿ ಹೊರಟು ಹೋಯಿತು; ಆ ತತ್ತಿಯು ನದಿಯ ದಂಡೆಯ ಮೇಲೆ ಬಿದ್ದಿರಲು ಆ ಸ್ಥಳಕ್ಕೆ ಆಹಾರದ ಸಲುವಾಗಿ ಬಕಪಕ್ಷಿಗಳ ಸಮೂಹವು ಪ್ರಾಪ್ತವಾಯಿತು. ಅವಕ್ಕೆ ಆ ತತ್ತಿಯು ಕಂಡ ಕೂಡಲೇ ಅವು ಅದರ ಮೇಲೆ ಬಿದ್ದವು. ಆ ತತ್ತಿಯನ್ನು ತಿನ್ನುವ ಉದ್ದೇಶದಿಂದ ಆ ಪಕ್ಷಿಗಳ ಸಮುದಾಯವು ತಮ್ಮ ಚುಂಚುವಿನಿಂದ ಚುಚ್ಚಲಾರಂಭಿಸಿದವು. ಆ ಆಘಾತದಿಂದ ತತ್ತಿಯು ಒಡೆದು ಎರಡು ಭಾಗವಾಯಿತು. ಈ ಮೇರೆಗೆ ತತ್ತಿಯು ಒಡೆದು ಅದರೊಳಗಿಂದ ಬಾಲಕನ ಜನ್ಮವಾಗಿ ಅವನು ದೊಡ್ಡ ಧ್ವನಿ ತೆಗೆದು ಅಳಹತ್ತಿದನು. ಆ ಸಪ್ಪಳವನ್ನು ಕೇಳಿ ಎಲ್ಲ ಪಕ್ಷಿಗಳು ಕೂಡಲೆ ಹಾರಿ ಹೋದವು. ಈ ಮೇರೆಗೆ ಮತ್ಸ್ಯದ ಉದರದಲ್ಲಿ ವಸುಪ್ರಸಾದದಿಂದ ಯಾವ ಬಾಲಕನು ಜನಿಸಿದನೋ ಅವನೇ ಮಚ್ಛಿಂದ್ರನಾಥನು!

ಆ ಸಮಯಕ್ಕೆ ಕರ್ಮಧರ್ಮಸಂಯೋಗದಿಂದ ಕಾಮಿಕನೆಂಬ ಒಬ್ಬ ಮೀನಬಲೆಗಾರನು ಮೀನಗಳನ್ನು ಹಿಡಿಯುವದಕ್ಕಾಗಿ ಅಲ್ಲಿಗೆ ಬಂದು ಈ ಸುಂದರ ಬಾಲಕನನ್ನು ಕಂಡನು. ಅಪೂರ್ವ ಕಾಂತಿಯಿಂದ ಮಿನುಗುವ ಆ ಬಾಲಕನು ಯಾರೂ ದಿಕ್ಕಿಲ್ಲದೆ ನದಿಯ ದಂಡೆಯ ಮೇಲೆ ಬಿದ್ದಿರುವದನ್ನು ಕಂಡು ಕಾಮಿಕನ ಹೃದಯದಲ್ಲಿ ಅಂತಃಕರಣವುತ್ಪನ್ನವಾಯಿತು. ಆ ಕೋಮಲ ಬಾಲಕನನ್ನು ಇಲ್ಲೇ ಬಿಟ್ಟುಗೊಟ್ಟರೆ ಹಿಂಸ್ರ ಪಶುಪಕ್ಷಿಗಳಿಂದ ಕೇಡು ಸಂಭವಿಸಬಹುದೆಂದು ಬಗೆದು ಆತನು ಆ ಕೂಸನ್ನು ತನ್ನ ಮನೆಗೆ ತೆಗೆದುಕೊಂಡು ಹೋಗುವ ವಿಚಾರ ಮಾಡಿದನು. ಆದರೆ ಈ ಶಿಶುವು ಯಾರದಾಗಿರಬಹುದು? ಯಾರೂ ಇಲ್ಲದ ಏಕಾಂತ ಸ್ಥಳದಲ್ಲಿ ಹೀಗೆ ಬೀಳಲು ಕಾರಣವೇನು? ಇವೇ ಮುಂತಾದ ವಿಚಾರಗಳು ಉಂಟಾಗಲು ಆ ಕಾಮಿಕನು ಬಾಲಕನನ್ನು ಸ್ಪರ್ಶ ಮಾಡುವ ವಿಷಯದಲ್ಲಿ ಸಾಶಂಕಿತನಾದನು. ಮೋಹ ಮತ್ತು ಶಂಕೆ ಇವುಗಳ ಜಗ್ಗಾಟದಿಂದ ಆತನು ವಿಚಾರಮಗ್ನನಾಗಿರಲು ಒಮ್ಮಿಂದೊಮ್ಮೆ ಈ ಮೇರೆಗೆ ಆಕಾಶವಾಣಿಯಾಯಿತು—"ಹೇ ಕಾಮಿಕಾ, ಈ ಬಾಲಕನ ವಿಷಯದಲ್ಲಿ ಸರ್ವ ಸಂಶಯಗಳನ್ನು ಬಿಟ್ಟುಗೊಡು; ಇವನು ಸಾಕ್ಷಾತ್ ಕವಿನಾರಾಯಣನಿದ್ದು ಮೀನದ ಉದರದಲ್ಲಿ ಜನ್ಮಿಸಿದ್ದಾನೆ; ಈ ಕಾರಣದಿಂದ ಇವನಿಗೆ ಮಚ್ಛಿಂದ್ರನಾಥನೆಂಬ ನಾಮ

ವು ಪ್ರಾಪ್ತವಾಗಿದೆ; ಇವನ ಪ್ರಸಾದದಿಂದ ಜಗತ್ತಿನಲ್ಲಿ ಅನೇಕ ಪತಿತರ ಉದ್ಧಾರವಾಗುವದು; ನೀನು ನಿಃಶಂಕೆಯಿಂದ ಇವನನ್ನು ಮನೆಗೆ ಕರೆದೊಯ್ದು ಸಂರಕ್ಷಿಸು ''

ಹೀಗೆ ಆದ ಆಕಾಶವಾಣಿಯಿಂದ ಬಾಲಕನ ವಿಷಯವಾಗಿ ಕಾಮಿಕನ ಮನಸ್ಸಿನಲ್ಲಿಂಟಾದ ಸಂಶಯವು ದೂರಾಯಿತು. ಮೊದಲೇ ಹಾಲು ಸೀ; ಅದರಲ್ಲಿ ಸಕ್ಕರೆಯು ಮಿಶ್ರವಾದರೆ ಅದರ ರುಚಿಯನ್ನು ವರ್ಣಿಸುವದೇನು? ಸಂತತಿಯ ಅಭಾವದಿಂದ ವಂಶಖಂಡನವಾಗುವದೆಂಬ ಚಿಂತೆಯಿಂದ ಯಾವನ ಮನಸ್ಸು ಗ್ರಸ್ತವಾಗಿರುವದೋ ಅವನಿಗೆ ಅಕಸ್ಮಾತ್ ಪುತ್ರಪ್ರಾಪ್ತಿಯಾದರೆ ಅವನ ಆನಂದಕ್ಕೆ ಹ್ಯಾಗೆ ಪಾರಾವಾರವೇ ಉಳಿಯುವದಿಲ್ಲವೋ ಮತ್ತು ದಾರಿದ್ರ್ಯವೆಂಬ ವ್ಯಾಧಿಯಿಂದ ದುಃಖಪಡುತ್ತಿರುವವನಿಗೆ ಅಥವಾ ಕವಡಿಯ ಸಲುವಾಗಿ ಪ್ರಾಣ ಕೊಡುವಂಥ ಕೃಪಣನಿಗೆ ಅಕಸ್ಮಾತ ದ್ರವ್ಯ ತುಂಬಿದ ಕೊಡವು ದೊರೆತರೆ ಅವನ ಆನಂದವು ಹೇಗೆ ಮೇರೆ ದಪ್ಪುವದೋ; ಮತ್ತು ಪ್ರತ್ಯಕ್ಷ ಮೃತ್ಯುಬರುವದೆಂಬ ಭಯದಿಂದ ಯಾವನು ಎದೆಯೊಡೆದು ಕೊಂಡಿರುವನೋ ಅವನಿಗೆ ದುರ್ದೈವದಿಂದ ಒಮ್ಮೆಲೆ ಅಮೃತದ ಬಳ್ಳಿಯು ಪ್ರಾಪ್ತವಾದರೆ ಅವನ ಭಯಂಕರ ಚಿಂತೆಯು ಹ್ಯಾಗೆ ದೂರಾಗಿ ಆನಂದವಾಗುವದೋ ಹಾಗೆ ಆ ಆಕಾಶವಾಣಿಯ ಅಮೃತವೃಷ್ಟಿಯಿಂದ ಕಾಮಿಕ ಬಲೆಗಾರನ ಹೃದಯದಲ್ಲಿ ಸಂತೋಷವು ತುಂಬಿಕೊಂಡಿತು. ಆತನು ಕೂಡಲೆ ಮಚ್ಛೇಂದ್ರನನ್ನು ಎತ್ತಿಕೊಂಡನು; ಬಳಿಕ ಅವನು ಸಾನಂದದಿಂದ ತನ್ನ ಮನೆಗೆ ಹೊರಟು ಹೋದನು.

ಮನೆಗೆ ಹೋದ ಕೂಡಲೆ ಕಾಮಿಕನು ಆ ಬಾಲಕನನ್ನು ತನ್ನ ಶಾರದ್ವತೆನಾಮಕ ಹೆಂಡತಿಯ ಸ್ವಾಧೀನಪಡಿಸಿ ಯಮುನೆಯ ತೀರದ ಮೇಲೆ ವರ್ತಿಸಿದ ಎಲ್ಲ ಸಂಗತಿಯನ್ನು ಅವಳಿಗೆ ಹೇಳಿ ನುಡಿದನೇನಂದರೆ—''ಈ ದಿನ ನಮಗೆ ಎಂಥ ಅಲಭ್ಯಲಾಭವಾಗಿದೆ! ನೋಡು! ಇವನನ್ನು ನೀನು ನಿನ್ನ ಪುತ್ರನೆಂದು ತಿಳಿ. ಇವನ ಯೋಗದಿಂದ ನಮ್ಮ ವಂಶವು ಧನ್ಯವಾಗುವದು. ನಾವು ಜಾತಿಯಿಂದ ಹೀನ ಬಲೆಗಾರರಿರುತ್ತೇವೆಂದು ನೀನು ವಿಷಾದ ಪಡಬೇಡ, ಯಾವ ಪರಮ ಉದಾರನಾದ ಕರ್ಣನು ತನ್ನ ನಿರ್ಮಲ ಕೀರ್ತಿಯನ್ನು ಜಗತ್ತಿನಲ್ಲಿ ಅಜರಾಮರ ಮಾಡಿದನೋ ಆ ಕರ್ಣನು ಸಹ ಅಧಿರಥ

ನೆಂಬ ಕಿರಾತನ ಮನೆಯಲ್ಲಿ ಬೆಳೆದಿದ್ದನು; ಈ ಮಚ್ಛಿಂದ್ರನೂ ಕರ್ಣನಂತೆ ವಿಖ್ಯಾತನಾಗುವನು ಇವನ ಯೋಗದಿಂದ ನಮ್ಮ ಭಾಗ್ಯದ ಉದಯವಾಗಿರುವದು; ಈ ಮಚ್ಛಿಂದ್ರನಾಥನು ಯಾವನೊಬ್ಬ ಸಾಮಾನ್ಯ ಮನುಷ್ಯನಲ್ಲ; ಜನರ ಉದ್ಧಾರಕ್ಕಾಗಿ ಪ್ರತ್ಯಕ್ಷ ಕವಿನಾರಾಯಣನೇ ಈ ರೂಪದಿಂದ ಭೂಮಿಯಲ್ಲಿ ಅವತರಿಸಿದ್ದಾನೆ.

ಪತಿಯ ಮುಖದಿಂದ ಸಂತೋಷದಾಯಕವಾದ ಈ ವಾಕ್ಯವನ್ನು ಕೇಳಿ ಶಾರದ್ವತೆಗೆ ಬಹಳ ಸಂಭ್ರಮವಾಯಿತು. ಅವಳ ಮನಸ್ಸು ಪ್ರೇಮದಿಂದ ತುಂಬಿ ಆ ಬಾಲಕನನ್ನು ಅಪ್ಪಿಕೊಂಡಳು; ಚಂದ್ರನ ಪ್ರಕಾಶದಿಂದ ಹೇಗೆ ಸೋಮಕಾಂತವೆಂಬ ಶಿಲೆಯು ದ್ರವಿಸಹತ್ತುವದೋ ಅದರಂತೆ ನಾಥನ ಮುಖವೆಂಬಚಂದ್ರನಿಂದ ಶಾರದ್ವತೆಯ ಹೃದಯವೆಂಬ ಚಂದ್ರಕಾಂತಶಿಲೆಯು ದ್ರವಿಸಿ ಅವಳ ಮೊಲೆಯಲ್ಲಿ ಹಾಲು ಬಂದವು. ಮಚ್ಛಿಂದ್ರನು ನಿರ್ಭಯದಿಂದ ಅವಳ ಸ್ತನಪಾನ ಮಾಡ ಹತ್ತಿದನು. ಪುತ್ರಭಾವದಿಂದ ಆ ಪುಣ್ಯವತಿಯ ದುಗ್ಧಾಮೃತವನ್ನು ಪ್ರಾಶನ ಮಾಡಿ ಮಚ್ಛಿಂದ್ರನು ಸಮಾಧಾನ ಹೊಂದಲು ಶಾರದ್ವತೆಯು ಪ್ರೇಮಾತಿಶಯದಿಂದ ಅವನ ಮುಖ ಚುಂಬನ ಮಾಡಿದಳು; ನಂತರ ಅವನಿಗೆ ಬಿಸಿನೀರಿನಿಂದ ಸ್ನಾನ ಮಾಡಿಸಿ ಅವಳು ಅವನನ್ನು ತೊಟ್ಟಿಲಲ್ಲಿ ಮಲಗಿಸಿ ತೂಗುತ್ತ ಕುಳಿತಳು. ಶಾರದ್ವತೆಯು ಸ್ವರೂಪದಿಂದ ಅಹಿಲ್ಯೆಯಂತೆ ಇದ್ದಳು. ಅವಳಿಗೆ ಪ್ರಪಂಚದಲ್ಲಿ ಆಸಕ್ತಿ ಇದ್ದು ಐಹಿಕ ವಿಷಯೋಪಭೋಗದಿಂದ ಬಿಗಿಯಲ್ಪಟ್ಟಿದ್ದಳು. ಈ ಸ್ಥಿತಿಯಲ್ಲಿ ಅವಳಿಗೆ ಇಂಥ ಪುತ್ರಪ್ರಾಪ್ತಿಯಾದ್ದರಿಂದ ಅವಳ ಭಾಗ್ಯವನ್ನೇನು ವರ್ಣಿಸಬೇಕು? ಮೊದಲೇ ಕಲ್ಪವಲ್ಲಿ! ದರೊಳಗೆ ಪರ್ಜನ್ಯವೃಷ್ಟಿಯಿಂದ ಅದು ಕೋಮಲ ಪಲ್ಲವಗಳಿಂದ ಯುಕ್ತವಾದರೆ ಅದರ ಶೋಭೆಯು ಅವರ್ಣನೀಯವೇ ಸರಿ ಈ ಪ್ರಕಾರದ ಅವರ್ಣನೀಯ ಆನಂದಾವಸ್ಥೆಯಲ್ಲಿ ಶಾರದ್ವತಾ, ಕಾಮಿಕರು ಬಹಳ ಉತ್ಸುಕತೆಯಿಂದ ಮಚ್ಛಿಂದ್ರನಾಥನ ಲಾಲನ ಪಾಲನಗಳನ್ನು ಸಾಗಿಸಿದರು; ಮಚ್ಛಿಂದ್ರನಾಥನಿಗೆ ಆರು ವರ್ಷಗಳು ಕಳೆದವು. ಹೀಗಿರಲು ಒಂದು ದಿವಸ ಕಾಮಿಕನ ಮನಸ್ಸಿನಲ್ಲಿ ನದಿಯ ದಂಡೆಗೆ ಹೋಗಿ ಮೀನಗಳನ್ನು ಹಿಡಿಯಬೇಕೆಂಬ ಇಚ್ಛೆಯುಂಟಾಯಿತು. ಆಗ ಅವನು ಮಚ್ಛಿಂದ್ರನನ್ನು ಸಂಗಡ ಕರಕೊಂಡು ಹೋದನು. ಯಮು

ನಾನದಿಯ ದಂಡೆಗೆ ಹೋದ ಕೂಡಲೆ ಕಾಮಿಕನು ತನ್ನ ಜಾಳಿಗೆಯನ್ನು ನೀರಲ್ಲಿ ಪಸರಿಸಿದನು. ಜಾಳಿಗೆಯಲ್ಲಿ ಮೀನಗಳು ಬಿದ್ದ ಕೂಡಲೆ ಅವುಗಳನ್ನು ಹಿಡತಂದು ಮಚ್ಛಿಂದ್ರನ ಮುಂದೆ ಚಲ್ಲಿ ಪುನಃ ನೀರಲ್ಲಿ ಹೋಗುವನು ಈ ಕ್ರಮವು ಕೆಲಹೊತ್ತಿನ ವರೆಗೆ ನಡೆದು ಬಹಳ ಮೀನಗಳು ಸಿಕ್ಕವು; ಮಚ್ಛಿಂದ್ರನು ದಂಡೆಯ ಮೇಲೆ ಸುಮ್ಮನೆ ನೋಡುತ್ತ ನಿಂತಿದ್ದನು. ಮೀನಗಳ ರಾಸಿಯು ಹಾಗೆಯೇ ಭೂಮಿಯ ಮೇಲೆ ಬಿದ್ದಿರುವದನ್ನು ಕಂಡು ಕಾಮಿಕನು ಮಚ್ಛಿಂದ್ರನನ್ನು ಕುರಿತು—"ನೀನು ಯಾಕೆ ನಿಂತಿರುವಿ? ಈ ಎಲ್ಲ ಮೀನಗಳನ್ನು ಬುಟ್ಟಿಯಲ್ಲಿ ತುಂಬು" ಎಂದು ಹೇಳಿ ಮತ್ತೆ ನೀರಲ್ಲಿ ಇಳಿದನು.

ತಂದೆಯ ಹೇಳಿಕೆಯಂತೆ ಮಚ್ಛಿಂದ್ರನು ಮೀನಗಳನ್ನು ತುಂಬಲಿಕ್ಕೆ ಪ್ರಾರಂಭಿಸಲಿಲ್ಲ. ಅವನು ಮೀನಗಳ ಕಡೆಗೆ ನೋಡುತ್ತ ನಿಂತನು. ಆ ಗುಂಪಿನೊಳಗಿನ ಕೆಲವು ಮೀನಗಳು ನೀರಿಲ್ಲದೆ ಜಡಪಡಿಸುತ್ತಿರುವದನ್ನು ಕಂಡು ಅವನಿಗೆ ಬಹಳ ವಿಷಾದವೆನಿಸಿತು. ಅವನು ಮತ್ಸ್ಯಪುತ್ರನಾದ್ದರಿಂದ ಆ ಎಲ್ಲ ಮೀನಗಳನ್ನು ತನ್ನ ಬಾಂಧವರೆಂದು ತಿಳಿದನು. ತನ್ನ ತಂದೆಯು ತನ್ನ ತಾಯಿಯ ಕುಲದ ಸಂಹಾರ ಮಾಡುವನೆಂಬ ಸಂಗತಿಯು ಅವನಿಗೆ ದುಃಖಕೊಡಹತ್ತಿತು. ಜನಮೇಜಯರಾಯನು ಸರ್ಪಸತ್ರ ಮಾಡಿದ ಕಾಲಕ್ಕೆ ಆಸ್ತಿಕ ಮಹಾಮುನಿಯು ತನ್ನ ಮಾತುಲ ಕುಲವನ್ನು ಹೇಗೆ ಸಂರಕ್ಷಿಸಿದನೋ ಹಾಗೆ ತನ್ನ ತಾಯಿಯ ಕುಲವನ್ನು ಉಳಿಸುವದಕ್ಕಾಗಿ ಸಿದ್ಧನಾಗಿ ಮಚ್ಛಿಂದ್ರನು ಆ ಗುಂಪಿನೊಳಗಿನ ಒಂದೊಂದೇ ಮೀನವನ್ನು ಎತ್ತಿ ನೀರಲ್ಲಿ ಒಗೆಯಹತ್ತಿದನು. ಅವನ ಈ ಕೃತ್ಯನೋಡಿದ ಕೂಡಲೆ ಅವನ ತಂದೆಯು ಕೋಪಿಷ್ಟನಾದನು. ಕಾಮಿಕನ ಅಂತಃಕರಣರೂಪೀ ಕುಂಡದಲ್ಲಿ ಕ್ರೋಧರೂಪೀ ಅಗ್ನಿಯು ಪ್ರದೀಪ್ತವಾಯಿತು. ಮೇಘಮಂಡಲದಲ್ಲಿ ಹೇಗೆ ಮಿಂಚು ಪ್ರಕಾಶಿಸುತ್ತದೆಯೋ ಹಾಗೆ ಅವನ ಹೃದಯದಲ್ಲಿ ಕ್ರೋಧಾಗ್ನಿಯು ಪ್ರಜ್ವಲಿಸಿ ಅವನು ಒಮ್ಮೆಲೆ ನೀರೊಳಗಿಂದ ಕಡೆಗೆ ಬಂದು ಮಚ್ಛಿಂದ್ರನ ಕೆನ್ನೆಗೆ ಹೊಡೆದನು; ಮತ್ತು ನುಡಿದನೇನಂದರೆ—"ದುಷ್ಟಾ, ಮೀನಗಳು ನೀರೊಳಗಿಂದ ಸುಮ್ಮನೆ ಹೊರಗೆ ಬಂದಿರುವದಿಲ್ಲ; ಅವುಗಳನ್ನು ಹೊರಗೆ ತೆಗೆಯಲಿಕ್ಕೆ ಶ್ರಮಪಡಬೇಕಾಗುತ್ತದೆ. ಇದು ನಿನಗೆ ಕಾಣಿಸುವದಿಲ್ಲವೇ! ನೀನು ಆ ಮೀನುಗಳನ್ನು ಪುನಃ ನೀರಲ್ಲಿ ಬಿಡುವ ಪ್ರಯತ್ನ ನಡಿ

ಸಿರುವಿ, ಈ ನಿನ್ನ ಭೂತದಯೆಯನ್ನು ಸಾಕುಮಾಡು. ಮೂರ್ಖಾ, ಮೀನ ಗಳನ್ನು ನೀರಲ್ಲಿ ಬಿಟ್ಟು ಹೊಟ್ಟೆಗೆ ಏನುಮಾಡುವಿ? ನನಗೆ ನಿನ್ನ ನಡತೆಯು ಸರಿಯಾಗಿ ಕಾಣಿಸುವದಿಲ್ಲ. ನೀನು ಮುಂದೆ ಕೈಯಲ್ಲಿ ಪರಟೀ ಹಿಡಿಯು ವದು ನಿಜ!''

ಕಾಮಿಕನ ಬೆದರಿಕೆಗೆ ಮಚ್ಛೇಂದ್ರನು ಸ್ವಲ್ಪಾದರೂ ಹೆದರಲಿಲ್ಲ. ಅಥವಾ ಅವನ ಕ್ರೋಧಯುಕ್ತ ಭಾಷಣದಿಂದ ಕೋಪಿಷ್ಠನೂ ಆಗಲಿಲ್ಲ; ಅವನು ಆ ಮಾತಿನೊಳಗಿನ ಉಪದೇಶವನ್ನು ಸ್ವೀಕರಿಸಿ, ಭಿಕ್ಷಾನ್ನದಂಥ ಪವಿತ್ರ ಅನ್ನವು ಬೇರೊಂದಿಲ್ಲವೆಂದು ಮನಸ್ಸಿನಲ್ಲಿ ನಿಶ್ಚಯಿಸಿದನು.

ಕಾಮಿಕನು ನದಿಯಲ್ಲಿ ಮೀನಗಳನ್ನು ಹಿಡಿಯುವದರಲ್ಲಿ ತೊಡಗಿರಲು ಮಚ್ಛೇಂದ್ರನು ಅವನ ದೃಷ್ಟಿತಪ್ಪಿಸಿ, ಪೃಥ್ವಿಯಮೇಲೆ ಸಂಚಾರ ಮಾಡುವ ದಕ್ಕೋಸ್ಕರ ಎತ್ತೋ ಹೊರಟು ಹೋದನು.

ತಿರಗುತ್ತ ತಿರಗುತ್ತ ಮಚ್ಛೇಂದ್ರನಾಥನು ಉತ್ತರದಿಕ್ಕಿನ ದಾರೀ ಹಿಡಿದು ಬದರಿಕಾಶ್ರಮಕ್ಕೆ ತಲ್ಪಿದನು. ಆ ಸ್ಥಳದಲ್ಲಿ ಹನ್ನೆರಡು ವರುಷ ವಾಸಮಾಡಿ ತಪಸ್ಸು ಮಾಡಿದನು, ಮುಳ್ಳಿನ ಆವುಗೆಯ ಮೇಲೆ ನಿಂತು ಕಠಿಣವಾದ ತಪಸ್ಸನ್ನು ನಡಿಸಿದನು. ಅವನು ವಾಯು ಆಹಾರವನ್ನು ಮಾಡಹತ್ತಿದನು. ಸೂರ್ಯನ ಕಡೆಗೆ ಒಂದೇ ಸಮನೆ ದೃಷ್ಟಿಯನ್ನಿಟ್ಟನು; ಮುಖದಿಂದ ಯಾವಾಗಲೂ ಶ್ರೀ ಕೃಷ್ಣನಾಮದ ಸಂಕೀರ್ತನೆಯನ್ನು ನಡಿ ಸಿದನು. ದೇಹ, ಮನ ಪ್ರಾಣ ಈ ಎಲ್ಲವುಗಳನ್ನು ಈಶ್ವರನಿಗೆ ಒಪ್ಪಿಸಿ ದನು. ಶರೀರ ಕ್ಲೇಶಕ್ಕೆ ಅವನು ಎಷ್ಟು ಮಾತ್ರವೂ ಲಕ್ಷ್ಯಕೊಡಲಿಲ್ಲ; ಇಂಥ ಕಠಿಣ ತಪಶ್ಚರ್ಯದಿಂದ ಅವನ ದೇಹದೊಳಗಿನ ಎಲ್ಲ ಮಾಂಸವು ಕ್ಷಯ ವಾಯಿತು; ಅವನಲ್ಲಿ ಅಸ್ಥಿ-ಚರ್ಮ ಮಾತ್ರ ಉಳಿದವು; ಅವನ ತೇಜವೆಲ್ಲ ಕಳೆಗುಂದಿ, ಕಣ್ಣುಗಳು ಒಳಸೇರಿದವು; ಅವನ ಶರೀರದೊಳಗಿನ ನರಗಳೆಲ್ಲ ಸ್ಪಷ್ಟವಾಗಿ ಕಾಣಿಸಹತ್ತಿದವು; ಅವನ ದೇಹವೆಂದರೆ ತ್ವಚೆಯಿಂದ ಸುತ್ತಿದ ಎಲುವಿನ ಹಂದರದಂತೆ ತೋರಹತ್ತಿತು.

ಮಚ್ಛೇಂದ್ರನು ಈ ಪ್ರಕಾರ ತಪಸ್ಸನ್ನಾಚರಿಸುತ್ತಿರಲು, ಆ ಸ್ಥಳದಲ್ಲಿ ದತ್ತಾತ್ರೇಯನು ಪ್ರಾಪ್ತನಾದನು; ಅವನು ದೇವಾಲಯದಲ್ಲಿ ಪ್ರವೇಶಮಾಡಿ ಶಂಕರನನ್ನು ಸ್ತವಿಸಿದನು. ಆತನ ಸ್ತುತಿಗೆ ಶಂಕರನು ಸಂತುಷ್ಟನಾಗಿ ಅಲ್ಲಿ

ಪ್ರಕಟನಾದನು. ಬಳಿಕ ಕೇಳುವದೇನು? ಅವರು ಒಬ್ಬರನ್ನೊಬ್ಬರು ಪ್ರೇಮದಿಂದ ಗಟ್ಟಿಯಾಗಿ ಅಪ್ಪಿಕೊಂಡರು; ಬಳಿಕ ಕುಶಲ ಪ್ರಶ್ನೆಗಳಾದ ಮೇಲೆ ದತ್ತಮುನಿಗಳು ಬದರಿಕಾಶ್ರಮದೊಳಗಿನ ವನವನ್ನು ನೋಡುವ ಇಚ್ಛೆಯನ್ನು ವ್ಯಕ್ತಗೊಳಿಸಿದರು. ಅವರ ಇಚ್ಛೆಯಂತೆ ಶಂಕರನು ಅವರೊಡನೆ ಅರಣ್ಯದಲ್ಲಿ ಸಂಚರಿಸಲಿಕ್ಕೆ ಹೊರಟನು. ದೈವವು ಅನುಕೂಲಿಸುವ ಸಮಯ ಬಂದರೆ ಭಾಗ್ಯವು ಅನಾಯಾಸದಿಂದ ಮನೆಗೆ ನಡೆಯುತ್ತ ಬರುತ್ತದೆಂಬ ಮಾತು ಸುಳ್ಳಲ್ಲ; ಲಾಭದ ಕಾಲವು ಒದಗಿಬಂದರೆ ಬೀದಿಯಲ್ಲಿ ಸಂಚರಿಸುವಾಗ ಕಾಲಿಗೆ ದ್ರವ್ಯದ ಕೊಡವು ಹತ್ತುತ್ತದೆ. ಸೂರ್ಯನ ಉಷ್ಣತೆಯಿಂದ ತಪ್ತನಾಗಿ ಗಿಡದ ಛಾಯೆಯನ್ನು ಬಯಸುವವನಿಗೆ ಕಲ್ಪತರುವಿನ ನೆರಳು ಪ್ರಾಪ್ತವಾದಂತೆ ಮಚ್ಛಿಂದ್ರನ ಸ್ಥಿತಿಯಾಯಿತು; ದತ್ತಮಹಾರಾಜರು ವನಶ್ರೀ ನೋಡಲಿಕ್ಕೆ ಹೊರಟ ಉದ್ದೇಶವು ಬೇರೆಯೇ ಇತ್ತು; ಆದರೆ ಅವರ ಈ ಸಹಜ ಹೇತುವೇ ಮಚ್ಛಿಂದ್ರನ ಭಾಗ್ಯದ ಬೀಜವನ್ನು ಬಿತ್ತಿದಂತಾಯಿತು.

---

## ಅಧ್ಯಾಯ ೨



### ಮಚ್ಛಿಂದ್ರನ ಸಿದ್ಧ್ಯರ್ಥ ಸಾಧನ.



ತಮ್ಮ ಆಹಾರವನ್ನು ಶೋಧಿಸುವದಕ್ಕಾಗಿ ಪಕ್ಷಿಗಳು ಗಿಡದಿಂದ ಗಿಡಕ್ಕೆ ಹ್ಯಾಗೆ ಹಾರುತ್ತವೆಯೋ ಹಾಗೆ ಶಂಕರ-ದತ್ತಾತ್ರೇಯರಿಬ್ಬರು ಆ ಅರಣ್ಯದಲ್ಲಿ ಅತ್ತಿಂದಿತ್ತ ಸಂಚರಿಸುತ್ತ ಮೂರು ದಿವಸಗಳನ್ನು ಕಳೆದರು. ನಾಲ್ಕನೆಯ ದಿನ ಸಂಚಾರ ಮಾಡ ಮಾಡುತ್ತ ಅವರು ಒಂದು ಪುಷ್ಪವಟಿಕೆಯಲ್ಲಿ ಸೇರಿದರು. ಆ ಸ್ಥಳದಲ್ಲಿಯೇ ಮಚ್ಛಿಂದ್ರನು ತಪಶ್ಚರ್ಯ ಮಾಡುತ್ತಿದ್ದನು. ಅವನ ಬೆನ್ನು ಹೊಟ್ಟೆಗಳು ಒಂದೇ ಆಗಿದ್ದವು. ಅವನ ದೇಹದಲ್ಲಿ ಕೇವಲ ಎಲವು ತೊಗಲು ಇವೆರಡೇ ಉಳಿದಿದ್ದವು. ಅವನ ತಲೆಯು

ಮೇಲೆ ಕಂದೀಬಣ್ಣದ ಜಟಾಭಾರವಿತ್ತು; ಅವನ ನಖಗಳು ಉದ್ದ ಬೆಳೆದು ತುದಿಯಲ್ಲಿ ಬಾಗಿದ್ದವು. ಅವನ ಮುಖದಿಂದ ಹರಿನಾಮಸ್ಮರಣೆಯು ಅಖಂಡವಾಗಿ ನಡೆದಿತ್ತು. ಇಂಥ ಯೋಗಿಶ್ರೇಷ್ಠನನ್ನು ಕಂಡು ಅವರಿಬ್ಬರಿಗೂ ಬಹಳ ಆಶ್ಚರ್ಯವೆನಿಸಿತು. ಕಲಿಯುಗದಲ್ಲಿ ಇಂಥ ತಪೋರಾಸಿಯು ಇವನಾರು? ಎಂದು ನುಡಿದು ಅವನೊಡನೆ ಮಾತಾಡಬೇಕೆಂದು ನಿಶ್ಚಯಿಸಿದರು. ಆಗ ಶಂಕರನು ದತ್ತಮಹಾರಾಜನನ್ನು ಅವನಲ್ಲಿಗೆ ಕಳುಹಿ ತಾನು ದೂರ ಕುಳಿತನು.

ಶಂಕರನ ಸೂಚನೆಯ ಮೇರೆಗೆ ದತ್ತಾತ್ರೇಯನು ಮಚ್ಛಿಂದ್ರನ ಮುಂದೆ ನಿಂತುಗೊಂಡು, ಅವನಿಗೆ ಪ್ರಶ್ನಮಾಡಿದ್ದೇನಂದರೆ—"ಹೇ, ಮುನಿಶ್ರೇಷ್ಠ, ನೀನು ಇಂಥ ಘೋರ ತಪಶ್ಚರ್ಯವನ್ನು ನಡಿಸಿರುವ ಕಾರಣವೇನು? ನಿನ್ನ ಇಚ್ಛೆ ಏನಿರುವದು? ಸ್ಪಷ್ಟವಾಗಿ ಹೇಳು"

ದತ್ತಮಹಾರಾಜನ ಮುಖದಿಂದ ಹೀಗೆ ಶಬ್ದಗಳು ಹೊರಡಲು ಮಚ್ಛಿಂದ್ರನು ಆಕಾಶದ ಕಡೆಗೆ ಇಟ್ಟ ತನ್ನ ದೃಷ್ಟಿಯನ್ನು ಕಿತ್ತಿ ಕೆಳಗೆ ಮಾಡಿದನು. ಆದರೆ ದತ್ತಮುನಿಯನ್ನು ಅವನು ಗುರ್ತಿಸಲಿಲ್ಲ! ನನ್ನಂತೆ ಯಾವನಾದರೂ ಒಬ್ಬ ಯೋಗಿಯು ನನ್ನ ಮನೋಬಯಕೆಯನ್ನು ವಿಚಾರಿಸುತ್ತಿರಬಹುದೆಂದು ಅವನಿಗೆ ಅಲ್ಲಿಂದಲೇ ನಮಸ್ಕಾರ ಮಾಡಿ ಮಾತಾಡಿದನೇನಂದರೆ—ಇಂದಿಗೆ ಹನ್ನೆರಡು ವರ್ಷಗಳಿಂದ ಈ ವನದಲ್ಲಿ ನಾನು ತಪಸ್ಸನ್ನಾಚರಿಸುತ್ತೇನೆ. ಈ ಅವಧಿಯಲ್ಲಿ ನನಗೆ ಮನುಷ್ಯಮಾತ್ರರ ದರ್ಶನವಿಲ್ಲ; ಹೀಗಿದ್ದು ತಾವು ಇಲ್ಲಿಗೆ ಬಂದು ನನ್ನ ಮನಸ್ಸಿನ ಕಾಮನೆಯನ್ನು ವಿಚಾರಿಸುವಿರೆಂದ ಮೇಲೆ ತಾವು ಯಾರೋ ಮಹಾತ್ಮರಾಗಿರಬೇಕು" ತಾವು ನಿಜವಾಗಿಯೂ ಯಾರಿದ್ದೀರೆಂಬದನ್ನು ನನಗೆ ತಿಳಿಸುವ ಕೃಪೆಮಾಡಬೇಕು" ಮಚ್ಛಿಂದ್ರನ ಭಾಷಣದಿಂದ ದತ್ತಮಹಾರಾಜಗೆ ಆನಂದವೆನಿಸಿತು; ಅವರು ತಮ್ಮ ವಿಶ್ವರೂಪವನ್ನು ಪ್ರಕಟಮಾಡಿ ಮಚ್ಛಿಂದ್ರನಿಗೆ ತಾವು ಯಾರಿದ್ದೇವೆಂಬದನ್ನು ಹೇಳಿದರು. ಶ್ರೀ ದತ್ತನ ಪ್ರತ್ಯಕ್ಷ ದರ್ಶನವು ಲಭಿಸಿದ ಕೂಡಲೆ ಮಚ್ಛಿಂದ್ರನ ಮನಸ್ಸು ಅವರ ಚರಣದಲ್ಲಿ ಸ್ಥಿರವಾಯಿತು. ಆಗ ಅವನ ಭಾವನೆಯನ್ನರಿತು ದತ್ತಮುನಿಗಳು ಪುನಃ ಅವನನ್ನು ಕುರಿತು—"ನಿನ್ನ ಮನಸ್ಸಿನಲ್ಲಿ ಯಾವ ಬಯಕೆಯದೆ? ಎಂದು ಕೇಳಿದರು.

ದತ್ತಾತ್ರೇಯನು ತನಗೆ ವರಪ್ರದಾನ ಮಾಡುವನೆಂದು ಮಚ್ಛಿಂದ್ರ ನಿಗೆ ಆನಂದವು ಮೇರೆದಪ್ಪಿತು. ಯಾವಳೊಬ್ಬ ತರುಣ ಸ್ತ್ರೀಯು ಬಹು ದಿವಸ ಅತ್ತೆಯ ಮನೆಯಲ್ಲಿದ್ದು ಸಂಸಾರ ಮಾಡಿ ಬೇಸತ್ತಿರಲು ಅವಳಿಗೆ ತನ್ನ ತಾಯಿಯ ದರ್ಶನವಾದರೆ ಹೇಗೆ ಆನಂದವಾಗಿ ಅವಳು ತಾಯಿಯ ಕೊರಳಿಗೆ ಅಪ್ಪಿಕೊಳ್ಳುವಳೋ, ಅಡವಿಯಲ್ಲಿ ತಪ್ಪಿಸಿಕೊಂಡ ಕರುವಿಗೆ ತಾಯಿಯು ಸಿಕ್ಕರೆ ಹೇಗೆ ಅದಕ್ಕೆ ಅನಿವಾರ ಪ್ರೇಮವಾಗುವದೋ ಅದರಂತೆ ಮಚ್ಛಿಂದ್ರನ ಸ್ಥಿತಿಯಾಗಿ ಅವನು ದತ್ತ ಚರಣದಲ್ಲಿ ಸಾಷ್ಟಾಂಗಗೈದನು; ತಾನು ಹನ್ನೆರಡು ವರ್ಷಗಳಿಂದ ಮಾಡಿದ ತಪಶ್ಚರ್ಯವು ಫಲದ್ರೂಪವಾ ಗುವ ಸಮಯ ಬಂತೆಂದು ಅವನ ಹೃದಯದಲ್ಲಿ ಆನಂದವು ಉಕ್ಕೇರಿತು. ಕಣ್ಣಿಳಗಿಂದ ಪ್ರೇಮಾಶ್ರುಗಳು ಉದರ ಹತ್ತಿದವು; ದತ್ತನ ಚರಣಕ್ಕೆ ನೇತ್ರೋದಕದಿಂದ ಸ್ನಾನ ಮಾಡಿಸಿ ಆತನು ರೋದನಯುಕ್ತ ಸ್ವರದಿಂದ ದತ್ತನನ್ನು ಕುರಿತು—"ಭಗವನ್; ನೀನು ತ್ರಿಮೂರ್ತಿಗಳ ಮೂರ್ತಸ್ವರೂ ಪನು; ಸರ್ವಸಾಕ್ಷಿ ಪರಮಾತ್ಮನು; ಹೀಗಿರಲು ಹನ್ನೆರಡು ವರ್ಷಗ ಳವರೆಗೆ ನಿನಗೆ ನನ್ನ ಸ್ಮರಣೆಯಾಕೆ ಆಗಲಿಲ್ಲ? ನನ್ನಿಂದ ಬುದ್ಧಿಪೂರ್ವಕವಾಗಿ ಅಂಥ ಯಾವ ಅಪರಾಧವು ಘಟಿಸಿರಬಹುದು? ಇದು ನನಗೆ ತಿಳಿಯದು. ಹೀಗೆ ನುಡಿದು ಮಚ್ಛಿಂದ್ರನು ಅಶ್ರುಗಳನ್ನು ಉದರಿಸ ಹತ್ತಿದನು.

ಅವನ ಈ ದೀನಾವಸ್ಥೆಯನ್ನು ಕಂಡು ನಿತ್ಯ ಶಾಂತ ಮೂರ್ತಿಯಾದ ದತ್ತಾತ್ರೇಯನು ಅವನನ್ನು ಸಮಾಧಾನ ಗೊಳಿಸಿ ನುಡಿದನೇನಂದರೆ— "ನೀನು ಸಮಾಧಾನವನ್ನು ತಾಳು. ನಿನ್ನ ಪ್ರಾರಬ್ಧರೂಪವಾದ ಪರ್ವತ ದಿಂದ ಭಾಗ್ಯನದಿಯು ಉತ್ಪನ್ನವಾಗಿ ಪಾತ್ರತುಂಬಿ ಹರಿಯಹತ್ತುವದು."

ಹೀಗೆಂದು ದತ್ತಮುನಿಗಳು ತಮ್ಮ ವರದ ಹಸ್ತವನ್ನು ಮಚ್ಛಿಂದ್ರನ ಮಸ್ತಕದ ಮೇಲಿಟ್ಟು ಅವನ ಕಿವಿಯಲ್ಲಿ ದಿವ್ಯವಾದ ಮಂತ್ರೋಪದೇಶ ಮಾಡಿದರು. ಪರಬ್ರಹ್ಮಸ್ವರೂಪನಾದ ದತ್ತಾತ್ರೇಯನ ಮುಖದಿಂದ ಹೊರ ಟಂಥ ಮಂತ್ರೋಪದೇಶವನ್ನು ಶ್ರವಣ ಮಾಡಿದ ಕೂಡಲೆ ಮಚ್ಛಿಂದ್ರನ ಮನಸ್ಸಿನೊಳಗಿನ ಅಜ್ಞಾನವೆಂಬ ಕಗ್ಗತ್ತಲೆಯು ನಾಶವಾಯಿತು. ಸದ್ಗುರು ವಿನ ಅಮೃತ ವಚನವೆಂಬ ಸೂರ್ಯೋದಯದಿಂದ ಮಚ್ಛಿಂದ್ರನ ಹೃದಯ ದಲ್ಲಿ ಜ್ಞಾನತೇಜಸ್ಸು ಪ್ರಕಾಶಿಸ ಹತ್ತಿತು. ಅವನ ಮನಸ್ಸಿನೊಳಗಿನ ಭೇದ

ಭಾವವು ನಾಶವಾಯಿತು.; ಚರಾಚರ ಸ್ಥಳದಲ್ಲಿ ಒಬ್ಬನೇ ಅವಿನಾಶಿಯಾದ ಬ್ರಹ್ಮನು ತುಂಬಿದ್ದಾನೆಂಬದು ಅವನಲ್ಲಿ ಮನದಟ್ಟಾಯಿತು. ನದಿ, ಸಮುದ್ರ ಗಳ ಹೆಸರುಗಳು ಭಿನ್ನವೆಂದು ಕಂಡರೂ ವಿಚಾರಿಸಿದರೆ ಆ ಎರಡರಲ್ಲಿ ಭೇದ ವಿಲ್ಲ. ಅದರಂತೆ ಎಲ್ಲ ಜಗತ್ತಿನ ಇರುವಿಕೆಯುದೆ. ಹೀಗೆ ಮಚ್ಛಿಂದ್ರನ ತಿಳವಳಿಕೆಯು ಸ್ಥಿರವಾಯಿತು ಮಚ್ಛಿಂದ್ರನ ಸಮದೃಷ್ಟಿಯನ್ನು ಪರೀಕ್ಷಿ ಸಬೇಕೆಂದು ದತ್ತಗುರುಗಳು ಮಚ್ಛಿಂದ್ರನಿಗೆ—ಹೆ ಮುನಿವರ್ಯ! ನಿನಗೆ ನನ್ನ ದರ್ಶನವು ಲಭಿಸಿತು. "ಆದರೆ ಲಕ್ಷ್ಮೀಪತಿಯಾದ ಭಗವಾನ್ ವಿಷ್ಣುವು ಎಲ್ಲಿ ವಾಸ ಮಾಡಿರುತ್ತಾನೆಂಬದು ನಿನಗೆ ಗೊತ್ತಾಗುವದೇನು?"

ಗುರುಗಳ ಪ್ರಶ್ನಗೆ ನಾಥನು ಉತ್ತರಕೊಟ್ಟದ್ದೇನಂದರೆ—"ಮಹಾ ರಾಜ, ತಾವು ಹೀಗೆ ಪ್ರಶ್ನಮಾಡುವದು ಆಶ್ಚರ್ಯವಲ್ಲವೆ? ಸತ್ವಗುಣ ಸಂಪನ್ನನಾದ ವಿಷ್ಣುಪರಮಾತ್ಮನು ಸರ್ವತ್ರದಲ್ಲಿ ವ್ಯಾಪಕನಾಗಿದ್ದಾನೆ. ಜಲದಲ್ಲಿ, ಸ್ಥಳದಲ್ಲಿ, ಕಾಷ್ಟದಲ್ಲಿ, ಪಾಷಾಣದಲ್ಲಿ ಹೀಗೆ ಎಲ್ಲ ಪರಾತ್ಪರ ಸೃಷ್ಟಿಯಲ್ಲಿ ವಿಷ್ಣುವೇ ವಾಸವಾಗಿದ್ದಾನೆ. ಕಡ್ಡಿಯಿಂದ ಬ್ರಹ್ಮಾಂಡದ ವರೆಗೆ ವಿಷ್ಣುವಿಲ್ಲದ ಸ್ಥಳವು ದೊರೆಯುವದಿಲ್ಲ"

ಮಚ್ಛಿಂದ್ರನ ಈ ಉತ್ತರದಿಂದ ದತ್ತಮಹಾರಾಜರು ತಲೆದೂಗಿದರು. ತಮ್ಮ ಉಪದೇಶವು ಇವನ ಹೃದಯದಲ್ಲಿ ಸರಿಯಾಗಿ ಬಿಂಬಿಸಿದ್ದನ್ನು ಕಂಡು ದತ್ತ ಗುರುಗಳು ಶಿಷ್ಯನ ಕೈಹಿಡಿದು ಅವನನ್ನು ಶ್ರೀ ಶಂಕರನು ಕುಳಿತಲ್ಲಿಗೆ ಕರೆದೊಯ್ದರು.

ನಾಥನು ಶಂಕರನ ಚರಣಕಮಲದಲ್ಲಿ ಮಸ್ತಕವನ್ನಿಟ್ಟನು. ಈ ಮಚ್ಛಿಂದ್ರನು ಇದುವರೆಗೆ ಯಾವ ವಿದ್ಯೆಯಲ್ಲಿಯೂ ಪಾರಂಗತನಾಗಿರು ವದಿಲ್ಲ; ಯಾವ ಕಲೆಯನ್ನೂ ಅಭ್ಯಾಸಮಾಡಿಲ್ಲ; ಹೀಗಿದ್ದರೂ ಅವನು ಕವಿನಾರಾಯಣನಿದ್ದಾನೆಂದು ತಿಳಿದು ಶಂಕರನು ಅವನನ್ನು ಅಪ್ಪಿಕೊಂಡನು. ಮತ್ತು ದತ್ತಾತ್ರಯನನ್ನು ಕುರಿತು "ಹೇ ಗುರುಮೂರ್ತಿ ದತ್ತಾತ್ರೇಯಾ, ನೀನು ಇವನಿಗೆ ವೇದವನ್ನು ಹೇಳಿಕೊಡು; ಹಾಗು ಎಲ್ಲ ಕಲೆಗಳ ಅಭ್ಯಾಸ ಮಾಡಿಸಿ ಸರ್ವಸಿದ್ಧಿಯ ಜ್ಞಾನಮಾಡಿಕೊಡು; ಮತ್ತು ಎಲ್ಲ ಬೀಜಮಂತ್ರ ಗಳನ್ನು ಹೇಳಿ ಇವನಿಂದ ಯಥಾಸಾಂಗ ತಪಾಚರಣ ಮಾಡಿಸು." ಎಂಬು ನುಡಿದನು.

ಶಂಕರನ ಆಜ್ಞೆಯ ಮೇರೆಗೆ ದತ್ತ ಗುರುಗಳು ಅವನಿಗೆ ಸರ್ವ ವಿದ್ಯೆ, ಕಲೆ, ಮಂತ್ರ, ತಂತ್ರ ಇವುಗಳ ಜ್ಞಾನವಮಾಡಿಕೊಟ್ಟರು. ಜಾರಣ, ಮಾರಣ, ಉಚ್ಚಾಟಣ ಮೊದಲಾದವುಗಳಲ್ಲಿ ಮಚ್ಛಿಂದ್ರನು ನಿಷ್ಣಾತನಾದನು. ಅವನ ಮಂತ್ರ ಸಾಮರ್ಥ್ಯದಿಂದ ಸೂರ್ಯ, ಚಂದ್ರ, ಮಂಗಳ, ಶುಕ್ರ ಇತ್ಯಾದಿ ಗ್ರಹಗಳು ಅವನಿಗೆ ವರವನ್ನು ಕೊಡಲು ಸಿದ್ಧವಾದವು. ನಾಗಾಸ್ತ್ರ, ವಾತಾಸ್ತ್ರ, ವಜ್ರಾಸ್ತ್ರ ಈ ಪ್ರಕಾರದ ಅಸ್ತ್ರ ವಿದ್ಯೆಗಳಲ್ಲಿಯೂ ಅವನು ನಿಪುಣನಾದನು ಸಾರಾಂಶ, ಶ್ರೀ ದತ್ತಾತ್ರೇಯರಂಥ ಯೋಗಿಶ್ರೇಷ್ಠ ಮಹಾತ್ಮರ ಪ್ರಸಾದದಿಂದ ಮಚ್ಛಿಂದ್ರನ ಸಾಮರ್ಥ್ಯವು ಹೆಚ್ಚಿತು. ದತ್ತಗುರುಗಳು ತಮ್ಮ ಸಾಂಪ್ರದಾಯಕ್ಕನುಸರಿಸಿ ಮಚ್ಛಿಂದ್ರನಿಗೆ ಯೋಗ ದೀಕ್ಷೆಯನ್ನು ಕೊಟ್ಟರು; ಅವರು ಅವನ ಹೆಸರಿನ ಹಿಂದೆ ನಾಥನೆಂಬ ಉಪಪದವನ್ನು ಜೋಡಿಸಿದರು. ಈ ಮೇರೆಗೆ ದೀಕ್ಷೆಯನ್ನು ಕೊಟ್ಟು ಸಚ್ಚಿದಾನಂದ ಸ್ವರೂಪರಾದ ದತ್ತಾವಧೂತರು ಹೊರಟು ಹೋದರು. ಇತ್ತ ಮಚ್ಛಿಂದ್ರನೂ ಮಹಾದೇವನಿಗೆ ವಂದಿಸಿ, ತೀರ್ಥಯಾತ್ರೆಗಾಗಿ ನಡೆದನು.

ಯಾತ್ರೆಯನ್ನು ಮಾಡುತ್ತ ಮಾಡುತ್ತ ಮಚ್ಛಿಂದ್ರನಾಥನು ಸಪ್ತ ಶೃಂಗಕ್ಕೆ ತಲ್ಪಿದನು. ಅಲ್ಲಿ ಅಂಬಿಕೆಯ ದರ್ಶನವನ್ನು ಹೊಂದಿ, ಅವನು ಅವಳ ಸ್ತವನಮಾಡಹತ್ತಿದನು. ಆ ಕಾಲಕ್ಕೆ ಅವನಲ್ಲಿ ಲೋಕೋಪಯೋಗವಾದ ಕವಿತ್ವಗಳನ್ನು ಮಾಡಬೇಕೆಂಬ ಸ್ಫೂರ್ತಿಯುಂಟಾಯಿತು. ತನ್ನ ಕೋರಿಕೆಯು ಕೈಗೂಡುವದಕ್ಕಾಗಿ ಕೂಡಲೆ ಅವನು ಅಲ್ಲಿ ಅನುಷ್ಠಾನಕ್ಕೆ ಪ್ರಾರಂಭಿಸಿದನು. ಅವನು ದೇವಿಯ ಪ್ರೀತ್ಯರ್ಥವಾಗಿ ವೇದಬೀಜದಿಂದ ಅಭಿಷೇಕ ಮಾಡಿದನು. ಅಲ್ಲಿಯ ದೇವಿಯ ಮೂರ್ತಿಯು ಜಾಗೃತವಾಗಿತ್ತು; ನಾಥನ ಅನುಷ್ಠಾನದಿಂದ ಜಗದಂಬೆಯು ಪ್ರಸನ್ನಳಾಗಿ ಅವನಿಗೆ ವರಪ್ರದಾನ ಮಾಡಲು ಸಿದ್ಧಳಾದಳು. ಆಗ ನಾಥನು ದೇವಿಗೆ—"ನನ್ನ ಮನಸ್ಸಿನಲ್ಲಿ ಶಾಂಬರಿ ವಿದ್ಯೆಯ ಕವಿತ್ವಮಾಡಬೇಕೆಂಬ ಇಚ್ಛೆಯದೆ, ಈ ಇಚ್ಛೆಯು ಸಫಲವಾಗುವ ಉಪಾಯಗಳನ್ನು ಹೇಳು." ಎಂದು ಪ್ರಾರ್ಥಿಸಿದನು.

ನಾಥನ ಮನೋಭಾವವನ್ನರಿತು ದೇವಿಯು ಅವನನ್ನು ಮಾರ್ತಂಡ ಪರ್ವತಕ್ಕೆ ಕರಕೊಂಡು ಹೋದಳು. ಆ ಸ್ಥಳದಲ್ಲಿ ಅವಳು ನಾಥನಿಂದ

ಬೀಜಮಂತ್ರಗಳ ಉಚ್ಚಾರ ಮಾಡಿಸಿ ಹವನಮಾಡಿಸಿದಳು. ಹೋಮವು ಪೂರ್ಣವಾದ ಮೇಲೆ ಅಲ್ಲಿ ಗುಪ್ತವಾಗಿದ್ದ ಗಗನಚುಂಬಿತವಾದ ನಾಗ ವೃಕ್ಷವು ದೃಶ್ಯಮಾನವಾಯಿತು. ಆ ನಾಗವೃಕ್ಷವು ವರ್ಣದಿಂದ ಬಂಗಾ ರದಂತಿದ್ದು ಅತಿ ಶೋಭಾಯಮಾನವಾಗಿತ್ತು. ಆ ವೃಕ್ಷವು ಎಲ್ಲ ಸಿದ್ಧಿಯ ತವರಮನೆಯಾಗಿತ್ತು. ಅದರ ಟೊಂಗೆ-ಟೊಂಗೆಗಳಲ್ಲಿ ಅನೇಕ ದೇವತೆಗಳು ವಾಸಮಾಡಿದ್ದವು; ಆಗ ಭಗವತಿಯು ನಾಥನಿಗೆ ಎಲ್ಲ ದೇವತೆಗಳ ಹೆಸರು ಗಳನ್ನು ಹೇಳಿಕೊಟ್ಟಳು. ನರಸಿ, ವ್ಯ್ ಮುದಾ, ವೀರಭದ್ರ, ಮಾರುತಿ ಮೊದ ಲಾದ ಐವತ್ತೆರಡು ಬೀರಗಳು; ವೀರ, ಕುಮಾರಿ, ಧನದಾ, ನಂದಾ ಇತ್ಯಾದಿ ಜಲದೇವತೆಗಳು; ಕಾಳ, ರುದ್ರ, ಬಾಳ, ಸಿದ್ಧ ಮೊದಲಾದ ಅಷ್ಟಭೈರವಗಳು;, ಶಂಖಿನಿ, ಡಂಖಿನಿ, ಯಕ್ಷಿಣಿ ಮೊದಲಾದ ಬಹಿಣಿ; ದಮಿ, ಧುಮಿ, ಜ್ವಾಳಾ ಇತ್ಯಾದಿ ಸಪ್ತಸ್ತ್ರೀಯರು; ಅಣಿಮಾ, ಗರಿಮಾದಿ ಅಷ್ಟ ಸಿದ್ಧಿಗಳು; ಈ ಪ್ರಕಾರ ಕ್ಷುದ್ರ ಹಾಗು ಮುಖ್ಯ ದೇವತೆಗಳು ಗಿಡದ ಟೊಂಗೆಗಳನ್ನು ವ್ಯಾಪಿಸಿ ಕುಳಿತದ್ದನ್ನು ಕಂಡು ನಾಥನು ಚಕಿತ ನಾದನು. ಆ ಎಲ್ಲ ದೇವತೆಗಳು ತನಗೆ ವಶವಾಗುವ ಉಪಾಯವನ್ನು ಶೋಧಿಸುವದರಲ್ಲಿ ಮುಳುಗಿಬಿಟ್ಟನು. ಅವನು ಆ ಮಹತ್ವಾಕಾಂಕ್ಷೆಯಿಂದ ದೇವಿಯ ಮುಖವನ್ನು ನೋಡಲು, ಅವಳು—"ಋಷಿಮುಖ ಪರ್ವತದಲ್ಲಿ ಬ್ರಹ್ಮಗಿರಿಯ ಹತ್ತಿರ ಅಂಜನವೆಂಬ ಪರ್ವತವದೆ, ಅಲ್ಲಿ ಕಾಚಿತ್ ಎಂಬ ಹೆಸ ರಿನ ನದಿಯು ದಕ್ಷಿಣಾಭಿಮುಖವಾಗಿ ಹರಿಯುತ್ತದೆ. ನದಿಯ ತಟಾಕದ ಹತ್ತರ ಹೋದರೆ ಅಲ್ಲಿ ಒಂದರ ಮುಂದೆ ಒಂದು ಹೀಗೆ ನೂರು ಕುಂಡಗಳಿ ರುತ್ತವೆ. ಅವುಗಳ ಆಕಾರವು ಆನೆಯ ಹೆಜ್ಜೆಯಷ್ಟು ಇರುತ್ತದೆ. ಅಲ್ಲಿ ಮಹಾಕಾಲಿಯು ಸ್ಥಾನವದೆ, ಆ ಸ್ಥಳಕ್ಕೆ ನೀನು ಹೋಗು. ದೇವೀ ಭಗವ ತಿಗೆ ವಂದನಮಾಡಿ ನೀನು ಆ ಕುಂಡಗಳ ಕಡೆಗೆ ಹೋಗು. ಅಲ್ಲಿ ನಿನಗೆ ಶ್ವೇತವರ್ಣದ ಒಂದು ಬಳ್ಳಿಯು ಕಂಗೊಳಿಸುವದು; ಆ ಬಳ್ಳಿಯ ಒಂ ದೊಂದು ಚೂರನ್ನು ನೀನು ಆ ಕುಂಡಗಳಲ್ಲಿ ಒಗೆಯುತ್ತ ಕಡೆಯ ಕುಂಡದ ವರೆಗೆ ಹೋಗು; ಆ ಎಲ್ಲ ಕುಂಡಗಳು ಸ್ವಚ್ಛವಾದ ನೀರಿನಿಂದ ತುಂಬಿರು ತ್ತವೆ; ಕಡೆಯ ಕುಂಡದಲ್ಲಿ ಬಳ್ಳಿಯ ಚೂರನ್ನು ಹಾಕಿದ ಕೂಡಲೆ ಅಲ್ಲಿಂದ ನೀನು ತಿರುಗಬೇಕು; ತಿರುಗಿ ಬರುವಾಗ ಕುಂಡಗಳನ್ನು ಒಳ್ಳೇ ಸೂಕ್ಷ್ಮ

ರೀತಿಯಿಂದ ಶೋಧಿಸುತ್ತ ಬಾ. ಯಾವ ಕುಂಡದಲ್ಲಿ ಬಳ್ಳಿಯು ಸಜೀವವಾಗಿ ಚಿಗಿತಿರುತ್ತದೆಯೋ ಆ ಕುಂಡದೊಳಗಿನ ನೀರಿನಿಂದ ಸ್ನಾನಮಾಡು; ಮತ್ತು ಸ್ವಲ್ಪ ನೀರನ್ನು ಪ್ರಾಶನಮಾಡು. ಆ ಜಲಪಾನದಿಂದ ನಿನಗೆ ಕೆಲಹೊತ್ತು ಮೂರ್ಛೆ ಬರುವದು. ಆ ಮೂರ್ಛೆಯಲ್ಲಿ ನಿನಗೆ ಜ್ಞಾನವಿರುವದು; ಮೂರ್ಛೆ ತಿಳಿಯುವ ತನಕ ನೀನು ಸೂರ್ಯನ ಹನ್ನೆರಡು ಹೆಸರುಗಳನ್ನು ಜಪಿಸುತ್ತಿರು; ಆ ಜಪದಿಂದ ನಿನಗೆ ಸೂರ್ಯನಾರಾಯಣನ ದರ್ಶನವಾಗುವದು: ಆ ನಾರಾಯಣನಿಗೆ ನಮಸ್ಕಾರಮಾಡಿ ನೀನು ಒಂದು ಕಾಜಿನ ಶಿಸೆಯಲ್ಲಿ ಆ ಕುಂಡದೊಳಗಿನ ನೀರನ್ನು ತುಂಬಿಕೊಂಡು ಬಾ. ಸೂರ್ಯನಾರಾಯಣನ ದ್ವಾದಶ ಹೆಸರುಗಳ ಜಪಮಾಡುತ್ತ ಆ ನೀರಿನಿಂದ ಈ ನಾಗವೃಕ್ಷಕ್ಕೆ ಸ್ನಾನಮಾಡಿಸಿದರೆ ಈ ಗಿಡದಲ್ಲಿ ವಾಸಮಾಡಿದಂಥ ಎಲ್ಲ ದೇವತೆಗಳು ನಿನ್ನ ಅಧೀನವಾಗುವವು. ಆದರೆ ಈ ಎಲ್ಲ ಸಂಗತಿಯು ಒಮ್ಮೆಲೆ ಸಾಧಿಸುವದಿಲ್ಲ; ಒಂದೊಂದು ಸಾರೆ ಒಂದೊಂದು ದೇವತೆಯು ಪ್ರಸನ್ನವಾಗುವದು.'' ಎಂದು ಹೇಳಿ ದೇವಿಯು ಸ್ವಸ್ಥಾನಕ್ಕೆ ಹೊರಟು ಹೋದಳು.

ಮಚ್ಛಿಂದ್ರನಿಗೆ ದೇವಿಯ ಮಾತಿನಲ್ಲಿ ಪೂರ್ಣ ವಿಶ್ವಾಸವಿತ್ತು. ಅವನು ಅವಳ ಉಪದೇಶದಂತೆ ಯಥಾಸ್ಥಿತವಾಗಿ ಆಚರಿಸಿದನು. ನಾಗವೃಕ್ಷಕ್ಕೆ ಸ್ನಾನ ಮಾಡಿಸಿ ಬಂದು ದೇವತೆಯನ್ನು ಪ್ರಸನ್ನ ಮಾಡಿಕೊಂಡನು. ಹೀಗೆ ಎಲ್ಲದೇವತೆಗಳನ್ನು ಪ್ರಸನ್ನ ಮಾಡಿಕೊಂಡು ಅವರಿಂದ ವರವನ್ನು ಸಂಪಾದಿಸಿದನು. ಒಳಿಕ ಅವನು ಬಂಗಾಲದೇಶಕ್ಕೆ ತೆರಳಿದನು.

ಬಂಗಾಲದೇಶದೊಳಗೆ ಚಂದ್ರಗಿರಿ ಎಂಬ ಹೆಸರಿನ ಊರಲ್ಲಿ ಸರ್ವೋಪದಯಾಳನೆಂಬ ಒಬ್ಬ ಗೌಡಬ್ರಾಹ್ಮಣನು ವಾಸಿಸುತ್ತಿದ್ದನು. ಅವನು ವಸಿಷ್ಠ ಗೋತ್ರಜನಿದ್ದು ಸ್ನಾನ-ಸಂಧ್ಯಾದಿ ನಿತ್ಯಕರ್ಮಗಳನ್ನು ತಪ್ಪದೆ ಆಚರಿಸುತ್ತಿದ್ದನು; ಅವನು ವೇದಪಾರಂಗತನಿದ್ದು ಇಂದ್ರಿಯ ನಿಗ್ರಹ ಉಳ್ಳವನಿದ್ದನು. ಅವನು ಯಜ್ಞಕರ್ಮದಲ್ಲಿ ನಿಪುಣನಿದ್ದನು. ಆ ದಯಾಳ ಬ್ರಾಹ್ಮಣನಿಗೆ ಸರಸ್ವತಿ ಎಂಬ ಪತ್ನಿಯಿದ್ದಳು. ಅವಳು ಸದ್ಗುಣಿಯೂ, ರೂಪದಿಂದ ಸುಂದರಿಯೂ. ಸರಳ ಸ್ವಭಾವದವಳೂ ಇದ್ದಳು. ಸರ್ವೋಪದಯಾಳ ಬ್ರಾಹ್ಮಣನ ಸಾಂಪತ್ತಿಕ ಸ್ಥಿತಿಯು ಚನ್ನಾಗಿದ್ದದರಿಂದ ಸರಸ್ವತಿಗೆ ವಸ್ತ್ರ ಪಾತ್ರ, ಆಭರಣಗಳಿಗೆ ಏನೂ ಕೊರತೆ ಇದ್ದಿಲ್ಲ. ಎಲ್ಲ ಪ್ರಾಪಂಚಿಕ ಸುಖಗಳಿ

ದ್ದರೂ ಅವಳಿಗೆ ಸಂತಾನ ಮಾತ್ರವಿರಲಿಲ್ಲ. ಪುತ್ರಪ್ರಾಪ್ತಿಯ ಇಚ್ಛೆಯಿಂದ ಅವಳು ಸದಾ ತಳಮಳಿಸುತ್ತಿದ್ದಳು. ಅವಳು ವ್ರತ, ಉಪವಾಸಾದಿಗಳನ್ನು ಮಾಡಿದಳು. ಅನೇಕ ಸ್ಥಳಗಳಲ್ಲಿಯು ದೇವರನ್ನು ಆರಾಧಿಸಿದಳು. ಯಾವ ಉಪಾಯದಿಂದಲೂ ಸಂತತಿಯ ಲಾಭವಾಗದ್ದರಿಂದ ಅವಳು ನಿರಾಶೆಯನ್ನು ತಾಳಿದಳು; ಗಿಡಗಳಿಲ್ಲದ ಅರಣ್ಯ, ಮೂಗಿಲ್ಲದ ಮುಖ, ಆಕಳಿಲ್ಲದ ಹಕ್ಕೆ ಇವು ಹೇಗೆ ವ್ಯರ್ಥವೋ ಹಾಗೆ ಪುತ್ರನಿಲ್ಲದ ತನ್ನ ಮನೆಯು ವ್ಯರ್ಥವೆಂದು ಅವಳು ತೀರ ಉದಾಸೀನಳಾಗಿದ್ದಳು.

ಹೀಗೆ ಸರಸ್ವತಿಯು ದುಃಖದಿಂದ ಇರುತ್ತಿರಲು, ಆ ಊರಿಗೆ ಮಚ್ಛಿಂದ್ರನು ಬಂದನು. ಮತ್ತು ಭಿಕ್ಷೆಯನ್ನು ಬೇಡುತ್ತ ಸರಸ್ವತಿಯ ಅಂಗಳದಲ್ಲಿ ಬಂದು—'ಓಹೊಲ್ಲಕ' ಎಂಬ ಶಬ್ದಮಾಡಿದನು. ಆ ಶಬ್ದವನ್ನು ಕೇಳಿ ಆಕೆಯು ಹೊರಗೆ ಬಂದಳು. ನಾಥನನ್ನು ನೋಡಿ ಅವಳ ಮನಸ್ಸಿನಲ್ಲಿ ಪೂಜ್ಯಭಾವ ಉತ್ಪನ್ನವಾಯಿತು; ಅವಳು ನಾಥನಿಗೆ ನಮಸ್ಕಾರಮಾಡಿ ಲಗ ಬಗೆಯಿಂದ ಆಸನವನ್ನು ತಂದು ಹಾಕಿ ಅದರ ಮೇಲೆ ಕೂಡ್ರು ಹೇಳಿದಳು. ಅವಳ ಆದರಾತಿಥ್ಯ ನೋಡಿ ನಾಥನು ಸಂತಸ ಒಟ್ಟು ಆಸನಸ್ಥನಾದನು. ಈ ಗೋಸಾವಿಗೆ ಪುತ್ರಪ್ರಾಪ್ತಿಯ ಮಂತ್ರವೇನಾದರೂ ಗೊತ್ತಿದ್ದರೆ ವಿಚಾ ರಿಸಬೇಕೆಂಬ ಉದ್ದೇಶದಿಂದ ಸರಸ್ವತಿಯು ನಾಥನ ಸಮ್ಮುಖದಲ್ಲಿ ಕೆಲವು ಅಂತರದ ಮೇಲೆ ಕುಳಿತಳು. ಅವಳ ಹೊಟ್ಟೆಯಲ್ಲಿ ಪುತ್ರಪ್ರಾಪ್ತಿಯಾಗಿರಲಿ ಲ್ಲೆಂಬ ದುಃಖವು ತುಂಬಿಕೊಂಡಿತ್ತು. ನಾಥನನ್ನು ಕಂಡು ಅವಳ ದುಃಖವು ಅಶ್ರುರೂಪದಿಂದ ಹೊರಬಿದ್ದಿತು. ಅವಳು ಸ್ವಯಂ ಸ್ಫೂರ್ತಿಯಿಂದ ನಾಥ ನನ್ನುದ್ದೇಶಿಸಿ—ಮಹಾರಾಜ, ತಾವು ದೀನರ ಕೈವಾರಿಗಳು. ನಿಮ್ಮಂಥ ಗೋಸಾವಿಗಳು ಅನೇಕ ವಿದ್ಯೆಗಳನ್ನು ಬಲ್ಲವರಿರುತ್ತಾರೆ. ನನ್ನ ಹೃದಯ ದಲ್ಲಿಯ ದುಃಖನಿವಾರಣೆಗೆ ಏನಾದರೂ ಉಪಾಯವಿದ್ದರೆ ಹೇಳಿರಿ. ಹೀಗೆಂದು ಸರಸ್ವತಿಯು ಉತ್ಕಟವಾದ ಇಚ್ಛೆಯಿಂದ ಅವರ ಚರಣದ ಮೇಲೆ ಮಸ್ತಕ ವನ್ನಿಟ್ಟು ಅವರ ದಯೆಯನ್ನು ಅಪೇಕ್ಷಿಸಿದಳು; ಅವಳ ಕಣ್ಣೊಳಗಿಂದ ಅಶ್ರುಬಿಂದುಗಳು ಒಂದೇ ಸಮನೆ ಭೂಮಿಯ ಮೇಲೆ ಬೀಳುತ್ತಿದ್ದವು. ಸರ ಸ್ವತಿಯ ನೇತ್ರರೂಪೀ ಮೋಡದಿಂದ ಅಶ್ರುರೂಪೀ ವೃಷ್ಟಿಯು ನಾಥನ ಚರಣವೆಂಬ ಪೃಥ್ವಿಯ ಮೇಲೆ ಆಗಲು ನಾಥನ ಮನಸ್ಸಿನಲ್ಲಿ ದಯೆಯುತ್ಪ

ನ್ನವಾಯಿತು. ಆಗ ಮಚ್ಛೇಂದ್ರನು ಸರಸ್ವತಿಯನ್ನು ಕುರಿತು—"ಹೇ ಸಾಧ್ವೀಮಣಿಯೇ ನಿನಗೆ ಯಾವ ಮಾತಿನ ಸಲುವಾಗಿ ಕ್ಲೇಶವುಂಟಾಗಿದೆ ಎಂಬದನ್ನು ನನಗೆ ಸ್ಪಷ್ಟವಾಗಿ ಹೇಳು ಎಂದು ನುಡಿದನು."

ನಾಥನ ಬಾಯಿಂದ ಹೊರಟ ವಾಕ್ಯವನ್ನು ಕೇಳಿ ಸರಸ್ವತಿಯು ಪ್ರಾರ್ಥಿಸಿದ್ದೇನೆಂದರೆ—"ಮಹಾರಾಜ, ನಮ್ಮ ವಂಶದಲ್ಲಿ ಸಂತತಿ ಇಲ್ಲ. ಇದೇ ಚಿಂತೆಯಿಂದ ನನ್ನ ಅಂತಃಕರಣವು ತಪ್ತವಾಗಿದೆ. ಈ ನನ್ನ ಎಲ್ಲ ಶರೀರವು ಸುಡಹತ್ತಿದೆ;ತಾವು ಈ ವಿಷಯದಲ್ಲಿ ನನ್ನನ್ನು ಅನುಗ್ರಹಿಸಬೇಕು."

ಹೀಗೆ ಸರಸ್ವತಿಯು ದೀನವಾಣಿಯಿಂದ ಬೇಡಿಕೊಳ್ಳಲು ನಾಥನ ಮನಸ್ಸು ಕಳವಳಗೊಂಡಿತು; ಕೂಡಲೆ ಆತನು ತನ್ನ ಜೋಳಿಗೆಯೊಳಗಿನ ವಿಭೂತಿಯನ್ನು ತೆಗೆದು ಅದನ್ನು ಸೂರ್ಯ ಮಂತ್ರದಿಂದ ಅಭಿಮಂತ್ರಿಸಿ— "ತಾಯೀ, ನೀನು ಈ ವಿಭೂತಿಯನ್ನು ತಕ್ಕೋ; ರಾತ್ರಿಯಲ್ಲಿ ಮಲಗುವ ಮುಂದೆ ಈ ವಿಭೂತಿಯನ್ನು ಸೇವಿಸಬೇಕು. ಇದು ಬೂದಿ ಎಂದು ಉದಾಸೀನ ಮಾಡಲಾಗದು. ಇದರಲ್ಲಿ ಸೂರ್ಯಶಕ್ತಿಯು ವಾಸಮಾಡುತ್ತಿದೆ. ಇದರ ಪ್ರಭಾವದಿಂದ ನಿಮ್ಮ ಹೊಟ್ಟೆಯಲ್ಲಿ ಹರಿನಾರಾಯಣನ ಅವತಾರವಾಗುವದು. ಈ ವಿಭೂತಿಯ ಯೋಗದಿಂದ ನಿಮಗೆ ಜನಿಸುವ ಪುತ್ರನಿಗೆ ನಾನು ಸ್ವತಃ ಅನುಗ್ರಹಮಾಡಿ ಇಡೀ ಬ್ರಹ್ಮಾಂಡದಲ್ಲಿ ಆತನನ್ನು ಶ್ರೇಷ್ಠನನ್ನಾಗಮಾಡುವೆನು. ಆ ಹುಡುಗನು ಸರ್ವ ಸಿದ್ಧಿಗಳನ್ನು ತನ್ನ ಸ್ವಾಧೀನಮಾಡಿಸಿಕೊಳ್ಳುವನು. ತಾರಾಗಣಗಳ ಮಧ್ಯದಲ್ಲಿರುವ ಚಂದ್ರನಂತೆ ಆ ಪುತ್ರನು ತನ್ನ ತೇಜದಿಂದ ಎಲ್ಲ ಭೂಪೃಷ್ಠವನ್ನು ಪ್ರಕಾಶಗೊಳಿಸುವನು; ಅವನ ಯಶೋದುಂದುಭಿಯು ಸರ್ವಬ್ರಹ್ಮಾಂಡದಲ್ಲಿ ಮೊಳಗುವದು; ದೇವ, ದಾನವ, ಮಾನವ, ಸರ್ವ ಚರಾಚರಸೃಷ್ಟಿಯಲ್ಲಿ ಅವನು ವಂದ್ಯನಾಗುವನು; ಆದ್ದರಿಂದ ತಾಯೀ ನೀನು ಈ ಭಸ್ಮವನ್ನು ವಿಶ್ವಾಸದಿಂದ ಭಕ್ಷಣ ಮಾಡು; ಅಂದರೆ ನೀನು ಸಕಲ ಚಿಂತೆಯಿಂದ ಮುಕ್ತಳಾಗಿ ಭಾಗ್ಯದ ಶಿಖರವನ್ನೇರುವಿ" ಎಂದು ಕಟ್ಟಪ್ಪಣೆ ಮಾಡಿ ಭಸ್ಮವನ್ನು ಕೊಟ್ಟು ಅಲ್ಲಿಂದ ಹೊರಹೊರಟನು. ಅಷ್ಟರಲ್ಲಿ ಸರಸ್ವತಿಯು ಪುನಃ ದರ್ಶನವೆಂದಿಗೆ ಆಗುವದು? ಎಂದು ವಿಚಾರಿಸಲು ಅದಕ್ಕೆ ನಾಥನು ಒಂದು ತಪದ ನಂತರ ನಿಮ್ಮ ಪುತ್ರನನ್ನು ಅನುಗ್ರಹಿಸುವದಕ್ಕಾಗಿ ಬರುವೆನೆಂದು ಹೇಳಿದನು ಬಳಿಕ ಆ ಯೋಗಿ

ಶ್ರೇಷ್ಠ ಮಚ್ಛೀಂದ್ರನು ತೀರ್ಥ-ಯಾತ್ರೆ ಮಾಡುವದಕ್ಕಾಗಿ ಹೊರಟು ಹೋದನು.

ಸಿದ್ಧಶ್ರೇಷ್ಠ ಮಚ್ಛೀಂದ್ರನಾಥನು ಹೊರಟು ಹೋಗಲು ಸರಸ್ವತಿಯು ಆ ದಿವ್ಯವಾದ ವಿಭೂತಿಯನ್ನು ಶೀರೆಯ ಶರಗಿನಲ್ಲಿ ಕಟ್ಟಿಕೊಂಡಳು, ನಾಥನ ಅಂಗಾರದಿಂದ ತಾನು ಪುತ್ರನ ಮುಖವನ್ನು ನೋಡುವೆನೆಂಬ ಭಾವೀ ಆನಂದವು ಅವಳ ಹೊಟ್ಟೆಯಲ್ಲಿ ಈಗಲೇ ಹಿಡಿಸದಾಯಿತು. ಆದ್ದರಿಂದ ಅವಳು ನೆರಮನೆಯ ಗೆಳತಿಯ ಮನೆಗೆ ಹೋದಳು, ಅಲ್ಲಿ ನೆರಮನೆಯ ನಾಲ್ಕೈದು ಜನ ಸ್ತ್ರೀಯರು ಹರಟೆ ಕೊಚ್ಚುತ್ತ ಕುಳಿತಿದ್ದರು; ಸರಸ್ವತಿಯೂ ಅವರಲ್ಲಿ ಹೋಗಿ ಕೂತಳು; ಒಬ್ಬರಿಗೊಬ್ಬರ ಪ್ರಪಂಚದ ಕಥೆಯು ನಡೆದಿರಲು ಸರಸ್ವತಿಯು ಆ ಸ್ತ್ರೀಯರಿಗೆ ಮಚ್ಛೀಂದ್ರನಾಥನ ಎಲ್ಲ ಸಂಗತಿಯನ್ನು ಹೇಳಿದ್ದಲ್ಲದೆ ಅವನು ಕೊಟ್ಟ ಭಸ್ಮವು ಇದೇ ಎಂದು ಶರಗನ್ನು ಬಿಚ್ಚಿ ತೋರಿಸಿದಳು.

ಸರಸ್ವತಿಯ ಉತ್ಸಾಹಯುಕ್ತ ಮಾತನ್ನು ಕೇಳಿ ಆ ಸ್ತ್ರೀಯರಿಗೆ ಬಹಳ ಸೋಜಿಗವಾಯಿತು; ಅವರಿಗೆ ಬೈರಾಗಿಗಳ ಮಾತಿನ ಮೇಲೆ ವಿಶ್ವಾಸವಿಲ್ಲ; ಇದರಿಂದ ಅವರು ಉಪಹಾಸಮಾಡಿ ಇಂಥ ಬೂದಿಯಿಂದ ಮಕ್ಕಳಾಗುವವೇ? ಹಲವು ಪ್ರಕಾರದ ಸುಳ್ಳು ಮಾತಾಡಿ ಆ ತಿರುಕ ಗೋಸಾವಿಗಳು ಹೊಟ್ಟೆ ತುಂಬಿಕೊಳ್ಳುತ್ತಿರುವರು. ಅವರು ಇದೇ ರೀತಿ ಜನರನ್ನು ಮೋಸಗೊಳಿಸುತ್ತಾರೆ. ಇದಲ್ಲದೆ ಆ ಠಕ್ಕರು ಭೋಳೇ ಸ್ತ್ರೀಯರಿಗೆ ಆಶೆ ಹಚ್ಚಿ ಅವರನ್ನು ನಾಯಿಯಂತೆ ತಮ್ಮ ಬೆನ್ನ ಹತ್ತಿ ಒರುವಂತೆ ಮಾಡಿಕೊಳ್ಳುತ್ತಾರೆ; ಜಾದುಗಾರರ ಅಂಗಾರವನ್ನು ಪದರಿನಲ್ಲಿ ಕಟ್ಟಿಕೊಂಡರೆ ಯಾವ ಅಪಾಯವು ಸಂಭವಿಸುವದೋ ಹೇಳಲಿಕ್ಕಾಗದು. ಎಂದು ನುಡಿದರು. ಆ ಸ್ತ್ರೀಯರ ಈ ಮಾತನ್ನು ಕೇಳಿ ಸರಸ್ವತಿಯ ಮನಸ್ಸು ಕ್ಷೋಭಿಸಿತು. ಅವಳು ಮನಸ್ಸಿನಲ್ಲಿ ವಿಚಾರ ಮಾಡುತ್ತ ತನ್ನ ಮನೆಗೆ ಹೋದಳು. ಅವಳಿಗೆ ವಿಚಾರ ಶಕ್ತಿಯು ಸಾಲದ್ದರಿಂದ ಅತಿಶಯ ಖಿನ್ನಳಾಗಿ ತನ್ನ ಶರಗಿನೊಳಗಿನ ವಿಭೂತಿಯನ್ನು ತೆಗೆದು ಒಂದು ಆಳವಾದ ತಿಪ್ಪೆಯಲ್ಲಿ ಚಲ್ಲಿಕೊಟ್ಟಳು. ಸಾರಾಸಾರ ವಿಚಾರವಿಲ್ಲದವು ಬಾಳು ಹೀಗೆಯೇ ಸರಿ.

---

# ಅಧ್ಯಾಯ ೩

## ಮಚ್ಛಿಂದ್ರ-ಮಾರುತಿಯರ ಯುದ್ಧ.

ಮಚ್ಛಿಂದ್ರನ ಸದಯಾಂತಃಕರಣದಿಂದ ಸರಸ್ವತಿಗೆ ವಿಭೂತಿಯು ಪ್ರಾಪ್ತವಾಗಿದ್ದರೂ ಅವಳ ದುರ್ದೈವದಿಂದ ಅವಳಿಗೆ ಆ ವಿಭೂತಿಯನ್ನು ತಿಪ್ಪಿಯಲ್ಲಿ ಚಲ್ಲುವ ದುರ್ಬುದ್ಧಿಯುತ್ಪನ್ನವಾಯಿತು. ಭಾಗ್ಯವು ತಾನಾಗಿ ಮನೆಗೆ ನಡೆಯುತ್ತ ಬಂದಿರಲು ಆ ದುರ್ದೈವೀ ಸ್ತ್ರೀಯು ತನ್ನ ಕೈಯಿಂದಲೇ ಅದನ್ನು ದಬ್ಬಿಕೊಟ್ಟಳು. ಆಕಸ್ಮಾತ್ ಚಿಂತಾಮಣಿಯು ಪ್ರಾಪ್ತವಾಗಿರಲು ಅದನ್ನು ಆ ಸ್ತ್ರೀಯು ಕಾಜೆಂದು ಚಲ್ಲಿಕೊಟ್ಟಂತಾಯಿತು. ಅಮೃತದ ಕೊಡವು ದೊರೆತಿರಲು ವಿಷವೆಂದು ತಿಳಿದಂತಾಯಿತು. ಆಕೆಯ ದುರ್ದೈವವು ಬಲವತ್ತರವಿದ್ದದರಿಂದ ನೆರೆಹೊರೆಯ ಸ್ತ್ರೀಯರ ಮಾತು ಆಕೆಗೆ ನಿಜವೆನಿಸಿ ಅವಳು ಆ ವಿಭೂತಿಯನ್ನು ಬೂದಿಯೆಂದು ತಿಪ್ಪಿಯಲ್ಲಿ ಚಲ್ಲಿಕೊಟ್ಟರೂ ಮಚ್ಛಿಂದ್ರನ ಮಂತ್ರಸಾಮರ್ಥ್ಯವು ವ್ಯರ್ಥವಾಗಲಿಲ್ಲ. ಆ ವಿಭೂತಿಯಲ್ಲಿ ಸಂಜೀವಿನೀ ಮಂತ್ರದ ತೇಜಸ್ಸು ವಾಸಿಸಿದ್ದರಿಂದ ಅದು ಶಗಣಿಯಲ್ಲಿ ಬಿದ್ದ ಕೂಡಲೆ ಅದರಲ್ಲಿ ಹರಿನಾರಾಯಣನು ಸಂಚಾರ ಮಾಡಿದನು. ಆದರೆ ಈ ಮಾತು ಸರಸ್ವತಿಗೆ ಹ್ಯಾಗೆ ಗೊತ್ತಾಗಬೇಕು? ಅವಳ ದುಷ್ಟ ಪ್ರಾರಬ್ಧವು ಹೇಗೆ ಪ್ರೇರಿಸಿತೋ ಹಾಗೆ ಮಾಡಿ, ಅವಳು ತನ್ನ ಮನೆಯೊಳಗಿನ ಕೆಲಸ ಬೊಗಸೆಗಳಲ್ಲಿ ರತಳಾದಳು.

ಇತ್ತ ಮಚ್ಛಿಂದ್ರನಾಥನು ತೀರ್ಥಯಾತ್ರೆಗಳನ್ನು ತಿರುಗುತ್ತ ಪೂರ್ವ ಸಮುದ್ರದ ಕಡೆಗೆ ಹೋಗಿ ಜಗನ್ನಾಥನ ದರ್ಶನ ತೆಗೆದುಕೊಂಡನು. ಅಲ್ಲಿಂದ ಅವನು ಸೇತುಬಂಧ ರಾಮೇಶ್ವರನ ದರ್ಶನಕ್ಕೆ ಬಂದನು. ಅಲ್ಲಿ ಅವನಿಗೆ ಬಲಭೀಮನ ದರ್ಶನವಾಯಿತು. ಈ ಸಮಯದಲ್ಲಿ ಮಾರುತಿಯು ವೃದ್ಧಾಪ್ಯದಿಂದ ಜರ್ಜರನಾಗಿ ತೀರ ಸೊರಗಿದ್ದನು. ಆ ಕಾಲಕ್ಕೆ

ಅತಿಶಯವಾಗಿ ಮಳೆಯು ಬೀಳುತ್ತಿತ್ತು. ಪರ್ಜನ್ಯದಿಂದ ತನಗೆ ತ್ರಾಸವಾಗಬಾರದೆಂದು ಆ ರಾಮಭಕ್ತನು ಆಗ ಒಂದು ಗುಹೆಯನ್ನು ಸಿದ್ಧಗೊಳಿಸುವ ಪ್ರಯತ್ನದಲ್ಲಿ ತೊಡಗಿದ್ದನು. ಅದನ್ನು ಕಂಡು ಮಚ್ಛಿಂದ್ರನಿಗೆ ಆಶ್ಚರ್ಯವೆನಿಸಿತು; ಅವನು ಮಾರುತಿಯನ್ನು ಒದರಿ ಬೆದರಿಸಿದ್ದೇನಂದರೆ— "ಮಂಗಾ, ನೀನು ನಿಜವಾಗಿಯೂ ಮೂರ್ಖನು. ನಿನ್ನ ದೇಹವನ್ನು ಸಂರಕ್ಷಣ ಮಾಡುವ ಉಪಾಯವು ಈಗ ಗೊತ್ತಾಯಿತೇ? ಮಳೆಯು ಪ್ರಾರಂಭವಾಗುವದಕ್ಕಿಂತ ಮೊದಲು ನೀನು ಯಾವ ಕೆಲಸದಲ್ಲಿ ತೊಡಗಿದ್ದೀ? ನಿನ್ನ ಈ ಗುಹೆಯು ಸಿದ್ಧವಾಗುವದೆಂದು? ಅಷ್ಟರಲ್ಲಿ ಮಳೆಗಾಲವೇ ಸರಿದು ಹೋಗುವದಲ್ಲವೆ? ಕಳ್ಳನು ಮನೆಯನ್ನು ಲೂಟಿ ಮಾಡಿಕೊಂಡು ಹೋದ ಬಳಿಕ ಸಮಯದಲ್ಲಿ ಎಣ್ಣಿ-ಬತ್ತಿಯನ್ನು ಹಾಕುವ ಪ್ರಯತ್ನ ಮಾಡಿದಂತೆ ನಿನ್ನ ಸ್ಥಿತಿಯದೆ; ನೀನು ನಿನ್ನ ಜಾತಿಯ ಸ್ವಭಾವವನ್ನು ಬಿಟ್ಟೇನು ಮಾಡೀ? ಮಂಗಗಳಿಗಲ್ಲಿಯಾದರೂ ಬುದ್ಧಿ ಇರುವದುಂಟೇ?"

ಮಚ್ಛಿಂದ್ರನಾಥನ ಈ ನಿಂದೆಯ ಭಾಷಣವನ್ನು ಕೇಳಿ ವಾಯುಸುತನು—"ನಿನ್ನ ಎಲ್ಲ ಮಾತುಗಳನ್ನು ಕೇಳಿದೆನು; ಆದರೆ ಇಷ್ಟೊಂದು ಅಧಿಕಪ್ರಸಂಗತನ ಮಾಡುವ ನೀನಾರು?" ನಾಥನು—"ನಾನು ಒಬ್ಬ ಯತಿಯು; ನನಗೆ ಮಚ್ಛಿಂದ್ರನಾಥನೆಂದು ಅನ್ನುತ್ತಾರೆ."

ಯತಿ ಮತ್ತು ನಾಥ ಈ ಶಬ್ದಗಳ ಅರ್ಥದ ಕಡೆಗೆ ಲಕ್ಷ್ಯಗೊಟ್ಟು ಮಾರುತಿಯು ಪುನಃ ಅಂದದ್ದೇನಂದರೆ—"ಈ ಪದವಿಯನ್ನು ಧಾರಣ ಮಾಡಲಿಕ್ಕೆ ನಿನ್ನಲ್ಲಿ ಯಾವ ಸಾಮರ್ಥ್ಯವಿದೆ?"

ನಾಥನು—"ಹಾಗೆ ಸಾಮರ್ಥ್ಯವಿದ್ದ ಹೊರತು ಶ್ರೇಷ್ಠಪದವಿಯನ್ನು ಯಾರು ಸ್ವೀಕರಿಸಿಯಾರು?"

ಇದನ್ನು ಕೇಳಿ ಮಾರುತಿಯು—ಒಬ್ಬ ಹನುಮಂತನೇ ನಿಜವಾದ ಯತಿಯೆಂದು ನಾನು ಕೇಳಿದ್ದೇನೆ. ಆದರೆ ಸುಮ್ಮನೆ ಯತಿಯೆಂದು ಹೇಳಿಕೊಳ್ಳುವ ನೀನಾರು? ಆಗಲಿ ನೀನು ನಿನ್ನ ಮನೆಯಲ್ಲಿ ನಿನಗೆ ಬೇಕಾದ ಹೆಸರನ್ನು ಇಟ್ಟುಕೋ; ಯಾರದೇನು ಹೋಗುವದು? ಆದರೆ ಹೊರಗೆಹಾಗೆ ಹೇಳುವದು ಕಠಿಣವಿರುತ್ತದೆ. ಆದ್ದರಿಂದ ನನ್ನದೊಂದು ಮಾತು ಕೇಳು—ಒಂದು ಕಾಲಕ್ಕೆ ನನಗೆ ಮಾರುತಿಯ ಸಹವಾಸದ ಲಾಭವು ಆಗಿತ್ತು, ಅವನ ಪ್ರಸಾ

ದದಿಂದ ನನಗೆ ಒಂದು ಕಲೆಯು ಪ್ರಾಪ್ತವಾಗಿದೆ. ಆ ಕಲೆಯಲ್ಲಿ ಏನು ಚಮತ್ಕಾರ ಇರುವದೆಂಬದನ್ನು ನಾನು ತೋರಿಸುತ್ತೇನೆ. ನನ್ನ ಆ ಕಲೆಯನ್ನು ನೀನು ನಿವಾರಣ ಮಾಡಿದರೆ ಮಾತ್ರ ನಿನಗೆ ಯತಿ ಎಂಬ ಸಂಜ್ಞೆಯು ಯೋಗ್ಯವಿರುತ್ತದೆ. ಒಂದು ವೇಳೆ ನೀನು ಹಾಗೆ ಮಾಡದಿದ್ದರೆ ನಿನ್ನ ಪದವಿಯನ್ನು ನನ್ನ ಸ್ವಾಧೀನ ಮಾಡಿ ಹೋಗಬೇಕಾಗುವದು.'' ಮಾರುತಿಯ ಪೌರುಷವನ್ನು ಕೇಳಿ ನಾಥನು ಅಂದದ್ದೇನಂದರೆ—ಅಡ್ಡಿ ಇಲ್ಲ; ನಿನ್ನಲ್ಲಿ ಯಾವ ವಿದ್ಯೆಯದೆ ಅದನ್ನು ಪ್ರಕಾಶಗೊಳಿಸು. ನನ್ನ ಗುರುರಾಜನು ನಿನ್ನ ವಿದ್ಯೆಯ ನಿವಾರಣ ಮಾಡುವನು ಇದರಲ್ಲಿ ಸಂದೇಹವಿಲ್ಲ. ರಾಮಚಂದ್ರನು ವೃಕ್ಷದ ಬುಡದಲ್ಲಿ ಸಹಜ ಮಲಗಿರಲು ಕಪಿರಾಜನಾದ ಮಾರುತಿಯು ರಾಮಚಂದ್ರನ ಮೇಲೆ ಅನೇಕ ಪರ್ವತಗಳನ್ನು ಒಗೆದನು; ಆದರೆ ರಾಮಚಂದ್ರನು ತನ್ನ ನಿದ್ರಾಸನವನ್ನು ಬಿಡದೆ ಅದೇ ಸ್ಥಿತಿಯಲ್ಲಿ ತನ್ನ ಹೆದೆಗೆ ಬಾಣವನ್ನು ಹೂಡಿ ಸರ್ವ ಪರ್ವತಗಳನ್ನು ಒಂದು ಕ್ಷಣದಲ್ಲಿ ನಾಶಗೊಳಿಸಿದನು; ಅದರಂತೆ ನನ್ನ ಗುರುವು ಎಲ್ಲ ಅನುಕೂಲವನ್ನು ಒದಗಿಸುಕೊಡುವನು ಸರ್ವ ಬ್ರಹ್ಮಾಂಡದ ಭಾರವನ್ನು ಒಂದು ಉಗುರಿನ ತುದಿಯ ಮೇಲೆ ಧಾರಣ ಮಾಡಲಿಕ್ಕೂ ನನ್ನ ಗುರುರಾಜನು ಸಮರ್ಥನಿದ್ದಾನೆ. ಮುಂಗಾ ನಿನ್ನ ಮಾತೇನು?''

ನಾಥನ ಈ ಅಭಿಮಾನೋಕ್ತಿಗಳನ್ನು ಕೇಳಿ ಮಾರುತಿಯು ಸಂತಪ್ತನಾದನು. ಅವನು ಕೂಡಲೆ ಉಡ್ಡಾಣಮಾಡಿ ಕ್ಷಣಹೊತ್ತು ಕಾಣದಂತಾದನು. ಅವನು ಅಷ್ಟು ಅವಧಿಯಲ್ಲಿ ಭಯಂಕರವಾದ ರೂಪವನ್ನು ಧರಿಸಿ ನಾಥನ ಮೇಲೆ ಒಮ್ಮೆಲೆ [illegible] ಪರ್ವತಗಳನ್ನು ತೂರಿದನು. ಆಕಾಶದಲ್ಲಿ ಸಂಚರಿಸುವ ವಿಸ್ತಾರವಾದ ಮೇಘದ ಬಾಯಿಂದ ಪರ್ವತಗಳು ತನ್ನ ಮೇಲೆ ಬರುವದನ್ನು ಕಂಡು ನಾಥನು ಮಂತ್ರಶಕ್ತಿಯಿಂದ ವಾಯುವನ್ನು ಉತ್ಪನ್ನ ಮಾಡಿ ಆ ಪರ್ವತಗಳನ್ನು ಸ್ಥಿರಗೊಳಿಸುವದಕ್ಕೆ ಆಜ್ಞೆಮಾಡಿದನು. ವಾಯುವಿನ ಯೋಗದಿಂದ ಪರ್ವತಗಳು ಪ್ರತಿಬಂಧವಾಗುವದನ್ನು ಕಂಡು ಮಾರುತಿಯು ಎರಡನೇ ಮೂರನೇ ನಾಲ್ಕನೇ ಹೀಗೆ ಒಂದರ ಹಿಂದೆ ಒಂದರಂತೆ ಅನೇಕ ಪರ್ವತಗಳನ್ನು ಕಿತ್ತಿ ಒಗೆದನು. ನಾಥನು ತನ್ನ ವಾತಪ್ರೇರಕ ಮಂತ್ರದಿಂದ ಆ ಎಲ್ಲ ಪರ್ವತಗಳನ್ನು ಅಲ್ಲಿಂದಲ್ಲೇ ನಿಲ್ಲಿಸಿಬಿಟ್ಟನು; ಕನುವಿನಿಂದ

ತೂರಿದ ಚಂಡಿನಗತಿಗೆ ಮಧ್ಯದಲ್ಲಿಯೇ ತಡೆಉಂಟಾದರೆ ಅದು ಹೇಗೆ ಮುಂದೆ ಹೋಗದೆ ತಿರುಗಿ ಹಿಂದಕ್ಕೆ ತಿರಗುವದೋ ಅದರಂತೆ ಮಾರುತಿಯ ಎಲ್ಲ ಪರ್ವತಗಳ ಸ್ಥಿತಿಯಾಯಿತು. ಅದನ್ನು ಕಂಡು ಆ ಕಪಿರಾಜನು ಪ್ರಲಯ ಕಾಲದ ಅಗ್ನಿಯಂತೆ ಕ್ಷೋಭಿಸಿದನು. ಇನ್ನು ಅವನು ಒಂದು ಬಹು ದೊಡ್ಡ ಪರ್ವತವನ್ನು ಕೈಯಲ್ಲಿ ತಕ್ಕೊಂಡು ಒಗೆಯತಕ್ಕವನು; ಅಷ್ಟರಲ್ಲಿ ನಾಥನು ಸಮುದ್ರದ ನೀರು ತೆಗೆದುಕೊಂಡು ವಾಯು ಆಕರ್ಷಣ ಮಾಡುವ ಮಂತ್ರದಿಂದ ಆ ನೀರನ್ನು ಅಭಿಮಂತ್ರಿಸಿ ಮಾರುತಿಯ ಮೇಲೆ ಉಗ್ಗಿದನು. ಆ ನೀರಿನ ಪ್ರಭಾವದಿಂದ ಮಾರುತಿಯ ಎಲ್ಲ ಪ್ರಾಣವಾಯುವನ್ನು ಒಮ್ಮೆಲೆ ಹೀರಿದಂತಾಯಿತು. ಅವನು ಬಹಿರ್ವ್ಯಾಪಾರರಹಿತನಾದನು. ಅವನು ಎತ್ತಿದ ಎರಡೂ ಕೈಗಳು ಕೆಳಗೆ ಬಾರದಂತಾದವು. ತಲೆಯ ಮೇಲಿನ ಪರ್ವತಗಳು ಅಲ್ಲಿಯೇ ಉಳಿದವು.

ಮಾರುತಿಯ ಈ ದೀನಾವಸ್ಥೆಯನ್ನು ಕಂಡು ಅವನ ತಂದೆಯ ಮನಸ್ಸು ಕಳವಳಗೊಂಡಿತು. ವಾಯುದೇವನು ಆ ಸ್ಥಳದಲ್ಲಿ ಪ್ರಕಟನಾಗಿ ತನ್ನ ಪುತ್ರನನ್ನು ಅಪ್ಪಿಕೊಂಡನು; ಹಾಗು ನಾಥನಿಗೆ ಮಾರುತಿಯನ್ನು ಬಿಟ್ಟುಬಿಡೆಂದು ಪ್ರಾರ್ಥಿಸಿದನು. ವಾಯುವಿನ ವಿನಂತಿಯನ್ನು ಮಾನ್ಯ ಮಾಡಿ ನಾಥನು ವಾತಪೂರಕ ಮಂತ್ರವನ್ನುಚ್ಚರಿಸಿ ಮಾರುತಿಯ ತಲೆಯ ಮೇಲಿನ ಪರ್ವತವನ್ನು ಕೆಳಗಿಳಿಸಿದನು. ಆ ಪರ್ವತವು ಮೊದಲಿದ್ದ ಸ್ಥಳ ವನ್ನು ಸೇರಿತು. ಬಳಿಕ ಮಾರುತಿಯು ಜಾಗೃತನಾದನು. ಅವನ ದೇಹದ ಚಲನವಲನಕ್ಕೆ ಪ್ರಾರಂಭವಾಯಿತು. ಅವನು ಕೂಡಲೆ ನಾಥನ ಕಡೆಗೆ ಹೋಗಿ ಅವನ ಧನ್ಯವಾದವನ್ನು ಮಾಡಿದನು. ಅನಂತರ ಕಪಿಪಿತನಾದ ವಾಯುವು ನುಡಿದದ್ದೇನಂದರೆ—"ಮಾರುತಿರಾಯಾ, ಈ ನಾಥನ ಮುಂದೆ ನಿನ್ನ ಪರಾಕ್ರಮವು ನಡೆಯುವದಿಲ್ಲ; ಅವನು ನಿನ್ನನ್ನೂ ನನ್ನನ್ನೂ ನಿರ್ಬಲರನ್ನಾಗಮಾಡಿದನು. ಯಾವ ಸಿದ್ಧನು ನಿನ್ನ ತಂದೆಯನ್ನೇ ಪ್ರತಿಬಂಧಿಸಿ ಬಿಟ್ಟನೋ ಆ ಸಿದ್ಧನ ಮುಂದೆ ನಿನ್ನ ಪ್ರತಿಷ್ಠೆ ಏನು ನಡೆಯುವದು! ಇವನ ಭಕ್ತಿ-ಶಕ್ತಿಗಳು ಅಪೂರ್ವವಿರುತ್ತವೆ. ಇವನಲ್ಲಿ ಮಂತ್ರಸಿದ್ಧಿ, ಸಿದ್ಧವಾಣಿ, ಭಕ್ತಿ, ಗುರುಶಕ್ತಿ, ಈಶ್ವರನ ಅನುಗ್ರಹ ಈ ಐದು ಶಕ್ತಿಗಳು ಒತ್ತಟ್ಟಿಗೆ ಕೂಡಿರುವದರಿಂದ ಎಲ್ಲ ದೇವತೆಗಳು ಇವನ ಅಧೀನರಾಗಿರುತ್ತಾರೆ"!

ವಾಯುವಿನ ಈ ಮಾತನ್ನು ಕೇಳಿ ಮಾರುತಿಯು ಆನಂದಪಟ್ಟನು. ಮಚ್ಛಿಂದ್ರನಾಥನು ನಿಮಾಣತ್ಸರಿಯಾದ ಮಾರುತಿಯನ್ನೂ ವಾಯುದೇವರನ್ನೂ ಅಭಿವಂದಿಸಿ ನುಡಿದನೇನಂದರೆ—"ಹೀಗೆ ಐದು ಶಕ್ತಿಗಳು ನನ್ನ ಸ್ವಾಧೀನದಲ್ಲಿರುತ್ತವೆಂಬದನ್ನು ನೀವು ತಿಳಿದಿದ್ದರೆ, ನೀವಿಬ್ಬರೂ ನನಗೆ ಸಖ್ಯ ಭಕ್ತಿ ದಾನಮಾಡುವದು ಯೋಗ್ಯವು;" ನಾಥನ ಇಚ್ಛೆಯನ್ನರಿತು ಕೂಡಲೆ ಆ ಪಿತಾ-ಪುತ್ರರು ಪ್ರಸನ್ನರಾಗಿ—ಅಪ್ಪಾ ನಾಥಾ, ನಿನ್ನ ಕೆಲಸಕ್ಕೆ ನಾವು ನಮ್ಮ ಶಕ್ತಿಯನ್ನರ್ಪಿಸುವೆವು. ಶುಕ್ರಾಚಾರ್ಯರು ದಾನವರ ಕಾರ್ಯಕ್ಕಾಗಿ ತಮ್ಮ ವಿದ್ಯೆಯನ್ನು ವೆಚ್ಚಮಾಡಿದರು. ಬ್ರಹ್ಮದೇವರ ಸಂಕಟಕಾಲದಲ್ಲಿ ವಿಷ್ಣುವು ಮತ್ಸ್ಯಾವತಾರ ಧಾರಣಮಾಡಿದನು. ಅಂಬರೀಷ ರಾಜನಿಗೆ ದೂರ್ವಾಸರ ಶಾಪವುಂಟಾಗಲು ಶ್ರೀ ವಿಷ್ಣು ಪರಮಾತ್ಮನು ತಾನು ಕಷ್ಟ ಭೋಗಿಸಿದನು; ಅದರಂತೆ ನಿನ್ನ ಕಾರ್ಯ ಸಿದ್ಧ್ಯರ್ಥವಾಗಿ ನಾವು ನಮ್ಮ ಸಾಮರ್ಥ್ಯವನ್ನು ಕೊಡುವೆವು. ನೀನು ಯತಿಯಿರುತ್ತೀ; ನೀನು ನಿನ್ನ ಖ್ಯಾತಿಯನ್ನು ಮೆರಿಸು." ಎಂದು ನುಡಿದು ತಮ್ಮ ಸಹಾನುಭೂತಿಯನ್ನು ವ್ಯಕ್ತಗೊಳಿಸಿದರು.

ಈ ವರಪ್ರದಾನದಿಂದ ಸಂತುಷ್ಟನಾದ ಮಚ್ಛಿಂದ್ರನಾಥನು ಮಾರುತಿಯನ್ನು ಕುರಿತು ಕೆಲವು ಶಂಕೆಗಳನ್ನು ವಿಚಾರಿಸುವದಕ್ಕೆ ಅಭಯ ಕೇಳಿದನು. ಅದಕ್ಕೆ ಮಾರುತಿಯು ಸಮ್ಮತಿಯನ್ನೀಯಲು, ನಾಥನು—"ತಮ್ಮ ಕೃಪೆಯಿಂದ ನಾನು ಯತಿ ಹೆಸರಿನಿಂದ ಪ್ರಖ್ಯಾತನಾಗುವೆನು; ಆದರೆ ಹೇ ಕಪಿರಾಜ, ನೀನು ಸರ್ವಜ್ಞನಿರುವಿ, ನೀನು ಆಯುಷ್ಯಾದಿ ಭವಿಷ್ಯವನ್ನು ತಿಳಿದುಕೊಳ್ಳುವಿ; ಈ ಪ್ರಕಾರವಿರಲು ನೀನು ನನ್ನೊಡನೆ ವಾದವಿವಾದ ಮಾಡಲಿಕ್ಕೆ ಯಾಕೆ ಸಿದ್ಧನಾದೆ? ನಾಗವೃಕ್ಷದ ಬಳಿಯಲ್ಲಿ ನನಗೆ ನಿಮ್ಮ ಭೆಟ್ಟಿಯಾಗಿತ್ತು. ನನ್ನ ಶಾಂಬರೀ ವಿದ್ಯೆಯ ಕವಿತ್ವಕ್ಕೆ ನೀನು ಆ ಕಾಲಕ್ಕೆ ವರವನ್ನು ಕೊಟ್ಟಿರುವೆ; ಈ ಎಲ್ಲ ಮಾತು ನಿನ್ನ ಸ್ಮರಣದಲ್ಲಿರಲು, ನೀನು ನನ್ನ ಸಂಗಡ ಯುದ್ಧಮಾಡಲಿಕ್ಕೆ ಹೇಗೆ ಪ್ರವೃತ್ತನಾದೆ?"

ನಾಥನ ಪ್ರಶ್ನವನ್ನು ಕೇಳಿ ಮಾರುತಿಯು ಹೀಗೆ ಹೇಳಿದನು—"ಮಚ್ಛಿಂದ್ರಾ, ನೀನು ಸೇತುಬಂಧನದಲ್ಲಿ ಸ್ನಾನಮಾಡುವಾಗ್ಗೆ ನಾನು ನಿನ್ನನ್ನು ಗುರ್ತಿಸಿ ನಿನ್ನ ಕಡೆಗೆ ಬಂದೆನು. ನೀನು ಸಾಕ್ಷಾತ್ ಕವಿನಾರಾಯಣನಿದ್ದು

ಮೀನದ ಉದರದಿಂದ ಪ್ರಕಟನಾಗಿರುವಿ? ಇದನ್ನು ನಾನು ತಿಳಿದಿರುವೆನು; ಆದರೆ ನಾಗ ಅಶ್ವತ್ಥದ ಹತ್ತರ ನಿನಗೆ ದೇವತೆಗಳು ಯಾವ ವರವನ್ನು ಕೊಟ್ಟರು? ಆ ವರದಿಂದ ನಿನಗೆ ಯಾವ ವಿದ್ಯೆಯು ಪ್ರಾಪ್ತವಾಗಿರುವದು? ಅದು ನಿನ್ನಲ್ಲಿ ಫಲಿಸಿರುವದೋ ಇಲ್ಲವೋ ಇದನ್ನು ನೋಡಬೇಕು; ಎಂಬ ಇಚ್ಛೆಯು ನನಗೆ ಆದ್ದರಿಂದ ಹೀಗೆ ನಿನ್ನನ್ನು [illegible], ನೀನು ಇಲ್ಲಿಂದ ಸ್ತ್ರೀರಾಜ್ಯಕ್ಕೆ ಹೋಗುವವನಾಗಿ [illegible] ಸ್ತ್ರೀ ರಾಜ್ಯವು ಬಹಳ ಭಯಂಕರವಿದೆ; ಆ ಸ್ಥಳದಲ್ಲಿ ಪುರುಷರ ಪ್ರವೇಶವಾಗುದಿಲ್ಲ. ಒಂದು ವೇಳೆ ಯಾರಾದರೂ ಆ ರಾಜ್ಯದಲ್ಲಿ ಸೇರುವ ಪ್ರಯತ್ನ ಮಾಡಿದರೆ ಅವರು ಕೂಡಲೆ ಮರಣ ಹೊಂದುತ್ತಾರೆ; [illegible] ನಿನ್ನ ಭೆಟ್ಟಿಯಾದದ್ದು ದೊಡ್ಡ ಸುಯೋಗವು, ನಿನ್ನಿಂದ ನನ್ನದೊಂದು ದೊಡ್ಡ ಕೆಲಸವಾಗಬೇಕಾಗಿದೆ. ನನ್ನ ತಲೆಯ ಮೇಲಿನ ಭಾರವನ್ನು ಇಳಿಸಲಿಕ್ಕೆ ನೀನೇ ಸಮರ್ಥನು.''

ಮಾರುತಿಯು ಈ ಚಮತ್ಕಾರಿಕ ಮಾತನ್ನು [illegible] ಮಚ್ಛೇಂದ್ರನು ಆಶ್ಚರಿಗೊಂಡು ಸ್ಪಷ್ಟವಾಗಿ ಹೇಳಬೇಕೆಂದು ಬಿನ್ನವಿಸಿದನು. ಆಗ ಮಾರುತಿಯು ''ಹೇ ಯೋಗಿಶ್ರೇಷ್ಠನೇ ನಾನು ರಾಮನ ದಾಸನಿದ್ದೇನೆ. ರಾಮಕಾರ್ಯಕ್ಕಾಗಿ ನಾನು ಸೀತೆಯನ್ನು ಹುಡುಕಿದ ಬಳಿಕ ರಾಮಚಂದ್ರನು ರಾವಣನನ್ನು ಕೊಂದನು. ಇದು ಸರ್ವಶ್ರುತವೇ ಆದೆ. ಈ ಸೇವೆಯ ಸಲುವಾಗಿ ನನ್ನ ಮೇಲೆ ಸೀತಾಮಾತೆಯು ಬಹಳ ಪ್ರೇಮ ವ್ಯಕ್ತಗೊಳಿಸಿದಳು. ನಾನು ಸಾಂಸಾರಿಕನಾಗಬೇಕೆಂದು ಆ ಮಾತೆಯು ಇಚ್ಛಿಸಿದಳು. ಆದರೆ ನಾನು ಬ್ರಹ್ಮಚಾರಿಯಾದ್ದರಿಂದ ಈ ಮಾತಿಗೆ ಒಪ್ಪಲಿಕ್ಕಿಲ್ಲವೆಂದು ಭಾವಿಸಿ ಜಾನಕಿಯು ನನಗೆ ಮೋಸ ಮಾಡಿ ನನ್ನಿಂದ ವಚನ ತೆಗೆದುಕೊಳ್ಳಬೇಕೆಂದು ನನ್ನನ್ನು ತನ್ನ ಹತ್ತರ ಕರೆದಳು; ನಾನು ಬಳಿಯಲ್ಲಿ ಹೋಗಲು ಆ ಸೀತಾಮಾತೆಯು ನನ್ನನ್ನು ತೀರ ಹತ್ತಿರ ಕುಳ್ಳಿರಿಸಿಕೊಂಡು ಬಹಳ ಪ್ರೇಮದಿಂದ ನನ್ನ ಮೋರೆಯ ಮೇಲೆ ಕೈಯಾಡಿಸಿದಳು. ನಂತರ ಆ ಮಾತೆಯು ಅಪ್ಪಾ ಮಾರುತಿರಾಯಾ, ಮೂರು ಲೋಕಗಳಲ್ಲಿ ನೀನು ಧನ್ಯನಿರುವಿ. ನಾನು ನಿನ್ನಲ್ಲಿ ಒಂದು ಮಾತನ್ನು ಬೇಡುತ್ತೇನೆ. ನೀನು ನನಗೆ ಮೊದಲು ವಚನ ಕೊಡು ಅಂದರೆ ನನಗೆ ಆನಂದವಾಗುವದು. ನೀನು ನನಗೆ ಒಪ್ಪಿಗೆ ಕೊಡದೆ

ಇರಲಿಕ್ಕಿಲ್ಲ ಯಾಕಂದರೆ ನೀನು ಬಹಳ ಉದಾರನಿರುತ್ತೀ ಉದಾರಜನರು ತಮ್ಮ ಪ್ರಾಣವನ್ನಾದರೂ ಕೊಟ್ಟು ಬಿಡುತ್ತಾರೆ; ಅವರ ಬಾಯಿಂದ ನಕಾರ ಶಬ್ದವು ಬರಲಾರದು. ಈ ರೀತಿ ನುಡಿದ ಸೀತಾಮಾತೆಯು ಭಾಷಣದಿಂದ ಸಂತುಷ್ಟನಾದೆನು. ನಾನು ಹೆಚ್ಚಿಗೆ ವಿಚಾರ ಮಾಡದೆ ವಚನ ಕೊಟ್ಟೆನು. ನನ್ನ ವಚನವು ಸಿಕ್ಕ ಕೂಡಲೆ ಆಕೆಯು—ಮಾರುತಿರಾಯಾ, ನೀನು ಗೃಹಸ್ಥಾಶ್ರಮವನ್ನು ವಹಿಸು. ನೀನು ಲಗ್ನ ಮಾಡಿಕೊಂಡು ಪತ್ನೀಸಮೇತನಾಗಿ ಸಂಸಾರಸುಖವನ್ನು ಅನುಭವಿಸಬೇಕೆಂದು ನನ್ನ ಮನಃಪೂರ್ವಕವಾದ ಇಚ್ಛೆಯದೆ, ಎಂದಳು. ಮಾತೆಯು ಈ ಮಾತನ್ನು ಹೇಳಿದ ಕೂಡಲೆ ನಾನು ದೊಡ್ಡ ಗೊಂದಲದಲ್ಲಿ ಬಿದ್ದೆನು. ನನ್ನ ಮೋರೆಯು ಕಪ್ಪಾಯಿತು; ನನಗೆ ಯಾವದೂ ತಿಳಿಯದಂತೆ ಆಯಿತು. ಆ ಕಾಲಕ್ಕೆ ನಾನು ಏನೂ ಉತ್ತರ ಕೊಡದೆ ರಾಮಚಂದ್ರನ ಸಮ್ಮುಖದಲ್ಲಿ ಹೋಗಿ ಮ್ಲಾನಮುಖದಿಂದ ಕುಳಿತುಕೊಂಡೆನು. ನನ್ನ ಮ್ಲಾನಮುಖವನ್ನು ಕಂಡು ದಯಾಳು ರಾಮಚಂದ್ರನು ನನ್ನನ್ನು ಅಪ್ಪಿಕೊಂಡನು; ಮತ್ತು ನನ್ನ ಚಿಂತೆಯ ಕಾರಣವನ್ನು ಕೇಳಿದನು. ಆಗ ನಾನು ರಾಮನ ಹತ್ತರ ಎಲ್ಲ ಸಂಗತಿಯನ್ನು ಹೇಳಿ, ಖಿನ್ನನಾಗಿ ಮೆಲ್ಲಮೆಲ್ಲಗೆ ಕಣ್ಣೀರು ಉದುರಿಸ ಹತ್ತಿದೆನು. ನನ್ನ ಈ ದೀನ ಅವಸ್ಥೆಯನ್ನು ಕಂಡು ಅಂತರಸಾಕ್ಷಿಯಾದ ರಾಮಚಂದ್ರನು ನನಗೆ ಕೇಳಿದನೇನಂದರೆ—"ಕಪಿರಾಯಾ, ವ್ಯರ್ಥವಾಗಿ ದುಃಖಾಶ್ರುಗಳನ್ನು ಯಾಕೆ ಉದುರಿಸುತ್ತೀ? ಸ್ತ್ರೀರಾಜ್ಯದಲ್ಲಿ ಎಷ್ಟು ಮಂದಿ ಸ್ತ್ರೀಯರಿರುವರೋ ಅವರೆಲ್ಲರು ನಿನ್ನ ಹೆಂಡರೇ ಆಗಿರುವರು."

ರಾಮಚಂದ್ರನ ಈ ಮಾತಿನಿಂದ ನಾನು ವಿಸ್ಮಯಾನ್ವಿತನಾದೆನು. ಅದನ್ನು ಕಂಡು ರಾಮನು ನನಗೆ ಪೂರ್ವವೃತ್ತಾಂತವನ್ನು ಹೀಗೆ ಹೇಳಿದನು—"ಕೃತ ತ್ರೇತ, ದ್ವಾಪರ, ಮತ್ತು ಕಲಿ ಈ ನಾಲ್ಕು ಯುಗಗಳಿಗೆ ಕೂಡಿ ಒಂದು ಮಹಾ ಯುಗವೆನ್ನುವರು. ಇಂಥ ಮಹಾ ಯುಗಗಳು ೩೯೬ ಇರುತ್ತವೆ. ಈ ಎಲ್ಲ ಯುಗಗಳಲ್ಲಿ ನಾನು-ನೀನು ಮತ್ತು ರಾವಣ ಹೀಗೆ ಮೂವರು ಜನ್ಮತಾಳಬೇಕಾಗುತ್ತದೆ. ಸಧ್ಯಕ್ಕೆ ನಮ್ಮ ಮೂವರ ೯೯ ನೆಯ ಅವತಾರವು ನಡೆಯುತ್ತಿದೆ; ರಾವಣನ ವಧಮಾಡಿ ಬಂದ ನಂತರ ನೀನು ಸ್ತ್ರೀರಾಜ್ಯದಲ್ಲಿ ಹೋಗಬೇಕಾದ ಪರಿಪಾಠವಿರುತ್ತದೆ. ಅದರಂತೆ ಈಗಲೂ

ದರೂ ನಿನ್ನ ಸರತಿ ಬಂದದೆ. ಅಂದಮೇಲೆ ನೀನು ಗೃಹಸ್ಥಾಶ್ರಮಕ್ಕೆ ಇಷ್ಟೇಕೆ ಭಯಪಡುತ್ತೀ? ನೀನು ಸ್ತ್ರೀರಾಜ್ಯಕ್ಕೆ ಪ್ರಯಾಣ ಮಾಡಿದರೆ ಜಾನಕಿಗೆ ಕೊಟ್ಟ ವಚನವನ್ನು ಪೂರ್ಣ ಮಾಡಿದಂತಾಗುವದು.''

ರಾಮನ ಈ ಮಾತು ನನಗೆ ನಿಜವೆನಿಸಿತು; ಆದರೆ ಪುನಃ ನನ್ನ ಮನಸ್ಸಿನಲ್ಲಿ ಕೆಲವು ವಿಚಾರಗಳು ಬಂದು ನಾನು ರಾಮನನ್ನು ಕುರಿತು—ತಮ್ಮ ಎಲ್ಲ ಮಾತುಗಳು ಯಥಾರ್ಥವಾಗಿವೆ; ಆದರೆನಾನು ಬಾಲಬ್ರಹ್ಮಚಾರಿಯು; ಗರ್ಭದಲ್ಲಿರುವಾಗಲೇ ನಾನು ದೃಢವಾದ ಕೌಪೀನ ಧಾರಣ ಮಾಡಿದ್ದೇನೆ. ಈ ವರೆಗೂ ನನ್ನ ಗರ್ಭಲಂಗೋಟಿಯು ಬಿಚ್ಚಿರುವದಿಲ್ಲ. ಇದು ತಮಗೆ ಅರಿಯದ ಸಂಗತಿಯಲ್ಲ. ಆದರೆ ಇಂಥ ನಾನು ಸ್ತ್ರೀರಾಜ್ಯದಲ್ಲಿ ಹೋಗಿ ಉಪಯೋಗವೇನು? ಎಂದು ಕೇಳಿದೆನು. ನನ್ನ ಈ ಸಯುಕ್ತಿಕ ಪ್ರಶ್ನೆ ವನ್ನು ಕೇಳಿ ರಾಮನು—''ನಾನು ನಿನಗೆ ಈ ಹೊತ್ತು ವರದಾನ ಮಾಡುವ ದೇನಂದರೆ—ನಿನ್ನ ಬ್ರಹ್ಮಚರ್ಯಕ್ಕೆ ಎಷ್ಟು ಮಾತ್ರಕ್ಕೂ ಕುಂದು ಬರುವ ದಿಲ್ಲ. ನೀನು ಸ್ತ್ರೀರಾಜ್ಯದಲ್ಲಿ ಹೋದೆಯಂದರೆ ಕೇವಲ ನಿನ್ನ ಭುಭುಃಕಾರ ದಿಂದಲೇ ಸ್ತ್ರೀಯರು ಗರ್ಭವತಿಯರಾಗುವರು. ಆದ್ದರಿಂದ ನೀನು ಎಲ್ಲ ಸಂಶಯಗಳನ್ನು ಬಿಟ್ಟು ಈಗ ಆ ಶೈಲ್ಯದೇಶಕ್ಕೆ ಪ್ರಯಾಣ ಮಾಡು.'' ಎಂದು ಅಪ್ಪಣೆ ಮಾಡಿದನು.

ಈ ಮೇರೆಗೆ ವಾದ ವಿವಾದವಾಗಿ ನಾನು ಶೈಲ್ಯದೇಶದಲ್ಲಿ ಹೋದೆನು. ಶೈಲ್ಯದೇಶದಲ್ಲಿ ಸರ್ವತ್ರ ಸ್ತ್ರೀರಾಜ್ಯವಿತ್ತು. ಮೈನಾಕಾ ಎಂಬ ಸ್ತ್ರೀಯು ಅಲ್ಲಿಯ ರಾಜ್ಯಭಾರ ಮಾಡುತ್ತಿದ್ದಳು. ಆ ಸ್ತ್ರೀರಾಜ್ಯದಲ್ಲಿ ಯಾವ ಪುರುಷರ ಪ್ರವೇಶವೂ ಆಗುತ್ತಿರಲಿಲ್ಲ.

ಹೀಗಿರಲು ಮೈನಾಕಿಯು ಅನ್ಯದೇಶದಲ್ಲಿರುವ ಸ್ತ್ರೀಪುರುಷರ ಸಂಸಾರವಾರ್ತೆಯನ್ನು ಕೇಳಿ ತಾನೂ ಅದರಂತೆ ಸೌಖ್ಯಹೊಂದಬೇಕೆಂದು ಮನಸ್ಸಿನಲ್ಲಿ ಮಾಡಿದಳು. ಕೂಡಲೆ ಅವಳು ನನ್ನನ್ನು ಕುರಿತು—ಅನುಷ್ಠಾನ ನಡಿಸಿದಳು. ಮತ್ತು ಒಂದು ಹೋಮಕುಂಡವನ್ನು ರಚಿಸಿ ತನ್ನ ಮಾಂಸವನ್ನು ಕೊಯ್ದು ನನ್ನ ಹೆಸರಿನಿಂದ ಆಹುತಿ ಹಾಕಹತ್ತಿದಳು. ಹೀಗೆ ಅವಳು ೧೨ ವರುಷಗಳವರೆಗೆ ತಪಸ್ಸುಮಾಡಿ ಕೇವಲ ಕೃಶಾಂಗಿನಿಯಾದಳು. ಅವಳ ಶರೀರದೊಳಗಿನ ಮಾಂಸವೆಲ್ಲ ಹೋಯಿತು. ಆಗ ನಾನು

ಅವಳಿಗೆ ಪ್ರಸನ್ನನಾದೆನು ನನ್ನ ದರ್ಶನವಾದ ಕೂಡಲೆ ಅವಳು ನನ್ನ ಚರಣಗಳ ಮೇಲೆ ಮಸ್ತಕವನ್ನಿಟ್ಟು ನನಗೆ ಅಂದದ್ದೇನಂದರೆ—ಹೇ ಕಪಿ ರಾಯಾ, ನಾನು ಯಾವ ಉದ್ದೇಶದಿಂದ ನಿನ್ನ ಆರಾಧನೆಯನ್ನು ಮಾಡಿರು ವೆನೋ ಆ ಉದ್ದೇಶವು ಪೂರ್ಣವಾಹ ಹೊರತು ನಾನು ನಿನ್ನ ಕಾಲುಗಳನ್ನು ಬಿಡುವದಿಲ್ಲ ನೀನು ನನ್ನನ್ನು ಸ್ವೀಕಾರಮಾಡಿ ನಿಜವಾದ ಗೃಹಸ್ಥಾಶ್ರ ಮಿಯಾಗು. ಸ್ವರ್ಗ, ಮೃತ್ಯು, ಪಾತಾಳಗಳಲ್ಲಿ ಯಾವ ಆಚಾರವು ನಡೆ ದಿರುತ್ತದೆಯೋ ಅದು ಈ ಶೈಲ್ಯ ದೇಶವಲ್ಲಿಯೂ ನಿನ್ನಿಂದ ಪ್ರಾರಂಭವಾಗ ಬೇಕು.'' ರಾಣಿಯ ಭಾಷಣವು ಮುಗಿದ ಕೂಡಲೆ ನಾನು ಅವಳಿಗೆ ನನ್ನ ಗರ್ಭ ಲಂಗೋಟಿಯ ಎಲ್ಲ ಸಂಗತಿಯನ್ನು ಹೇಳಿದೆನು. ನಾನು ಅಂಜನೀ ಮಾತೆಯ ಉದರದಲ್ಲಿರುವಾಗಲೇ ಎಂದೂ ಬಿಚ್ಚದಂಥ ಕೌಪೀನವನ್ನು ಹಾಕಿ ರುವನೆಂಬದು ತಿಳಿಯಲು ಮೈನಾಕಿನಿಯು ಬಹು ವಿಷಾದಗೊಂಡಿದಳು ಅವಳ ತಪಶ್ಚರ್ಯದಿಂದ ನಾನು ಬದ್ಧಿತನಾಗಿದ್ದೆನು. ಆದ್ದರಿಂದ ಅವಳ ದೈನ್ಯವನ್ನು ಕಂಡು ಹೇಳಿದ್ದೇನಂದರೆ—''ನೀನು ಈಗ ಚಿಂತೆಯನ್ನು ಬಿಡು. ನಿನ್ನ ತಪಶ್ಚರ್ಯದ ಶ್ರಮವು ಸಫಲವಾಗುವದಕ್ಕಾಗಿ ನಾನು ಈ ಸ್ಥಳದಲ್ಲಿ ಮಚ್ಛೇಂದ್ರನೆಂಬ ಒಬ್ಬ ಯತಿಯನ್ನು ತಂದು ಸ್ಥಾಪಿಸುವೆನು. ಆ ಮಚ್ಛೇಂದ್ರನಾಥನು ಸಾಮಾನ್ಯ ಮನುಷ್ಯನಲ್ಲ ಅವನು ಪ್ರತ್ಯಕ್ಷ ಕವಿ ಹೆಸರಿನ ನಾರಾಯಣನಿದ್ದಾನೆ ಅವನು ನಿನ್ನ ಮನಸ್ಸಿನ ಎಲ್ಲ ಬಯಕೆ ಯನ್ನು ಪೂರ್ಣಮಾಡುವನು''

ಮಚ್ಛೇಂದ್ರನೇ ಹೀಗೆ ಹೇಳಿ ನಾನು ಆ ಮೈನಾಕಿಯ ಪಾಶದಿಂದ ಮುಕ್ತನಾಗಿದ್ದೇನೆ ಇಷ್ಟರ ಸಲುವಾಗಿ ನೀನು ಆ ಶೈಲ್ಯರಾಜ್ಯದಲ್ಲಿ ಹೋಗಿ ಮೈನಾಕಿನಿಗೆ ನಿನ್ನ ಸಹವಾಸದ ಲಾಭಕೊಡು; ಅಂದರೆ ನಿನ್ನದು ನನ್ನ ಮೇಲೆ ದೊಡ್ಡ ಉಪಕಾರವಾಗುವದು.''

ಮಾರುತಿಯ ಈ ವಿನಂತಿಯಿಂದ ನಾಥನಿಗೆ ದೊಡ್ಡ ಸಂಕಟವಿತ್ತು. ಮಾರುತಿಯು ಯಾವಚಿಂತೆಯಿಂದ ವ್ಯಾಪಿಸಿದ್ದನೋ ಅದೇ ಚಿಂತೆಯಿಂದ ಲೇ ಮಚ್ಛೇಂದ್ರನು ಹೈರಾಣಾದನು. ಆಗ ಅವನು ಮಾರುತಿಯನ್ನು ಕುರಿತು—ನಿನ್ನಂತೆ ನನಗೂ ಈ ಕೆಲಸ ಮಾಡಲು ಸಾಧ್ಯವಿಲ್ಲ. ನಾನು ತಪಸ್ವಿಯಾಗಿದ್ದೇನೆ. ನಾನು ಸ್ತ್ರೀರಾಜ್ಯಕ್ಕೆ ಹೋದರೆ ನನ್ನ ವ್ರತಭಂಗ

ವಾಗುವದು. ನಾನು ಪೂರ್ಣ ನಿರಿಚ್ಛೆನಿದ್ದು ಜಗತ್ತಿನಲ್ಲಿ ಯತಿಯೆನಿಸಿ ಕೊಂಡಿದ್ದೇನೆ. ಸ್ತ್ರೈಲ್ಯದೇಶದಲ್ಲಿ ಪ್ರವೇಶಮಾಡಿದರೆ ನನ್ನ ನಾಥಪಂಥವು ಮಲಿನವಾಗುವದು. ನಾಥಪಂಥಕ್ಕೆ ಕುಂದುಹತ್ತುವದು. ಸ್ತ್ರೀ ಮೋಹ ವು ಕೆಟ್ಟದು. ಇದರ ಯೋಗದಿಂದ ಅನೇಕ ಜನ ಪುಣ್ಯವಂತರು ನರಕದಲ್ಲಿ ಬಿದ್ದಿರುತ್ತಾರೆ. ಈ ಮೋಹದಿಂದಲೇ ಇಂದ್ರನು ಗೌತಮನ ಶಾಪವನ್ನು ಅನುಭೋಗಿಸಬೇಕಾಯಿತು. ಚಂದ್ರನಿಗೆ ಕಲಂಕ ಹತ್ತಿತು. ರಾವಣನ ಸರ್ವವೈಭವವು ನಾಶಹೊಂದಿತು. ಬ್ರಹ್ಮದೇವನೂ ತಿರಸ್ಕಾರ ಹೊಂದಿ ದನು. ವಿಶ್ವಾಮಿತ್ರನು ರಂಭೆಯ ಮೋಹದಲ್ಲಿ ಬಿದ್ದು ತನ್ನ ತಪಸ್ಸಿನ ರಾಶಿಯನ್ನು ವ್ಯರ್ಥವಾಗಮಾಡಿದನು. ಆದ್ದರಿಂದ ಮಾರುತಿರಾಯಾ, ಈ ಕೆಲಸ ನನಗೆ ಹೇಳಬೇಡ. ನೀನು ನನ್ನ ಮುಂದೆ ಭಯಂಕರವಾದ ಅಗ್ನಿ ಕುಂಡವನ್ನು ಪ್ರಜ್ವಲಿಸಿ ಇಟ್ಟಂತಾಗಿರುತ್ತದೆ. ತಾವಾಗಿ ವ್ಯಾಘ್ರಮುಖ ದಲ್ಲಿ ಯಾರು ಪ್ರವೇಶಮಾಡಿಯಾರು? ಈ ನಿನ್ನ ಬುದ್ಧಿವಾದವನ್ನು ನಾನು ಹೇಗೆ ಮಾನ್ಯ ಮಾಡಲಿ? ಎಂದು ನುಡಿದನು.

ನಾಥನ ಈ ಪ್ರತಿಪಾದನವನ್ನು ಕೇಳಿ ಮಾರುತಿಯು ಪುನಃ ಅವನಿಗೆ ಅಂದದ್ದೇನಂದರೆ—"ಇದು ಅನಾದಿಯಿಂದ ಬಂದ ಮಾತಾಗಿದೆ. ರಾಮನು ನನಗೆ ಯಾವ ಸಂಗತಿಯನ್ನು ಹೇಳಿದನೋ ಅದಕ್ಕಿಂತಲೂ ಹೆಚ್ಚಿಗೆ ಇನ್ನೇನು ಹೇಳಲಿ? ನಮ್ಮಂತೆ ನೀನೂ ತೊಂಬತ್ತರೊಂಬತ್ತನೆಯ ಮಚ್ಛೇಂದ್ರನಿರುತ್ತೀ; ಇದನ್ನು ಮರೆಯಬೇಡ. ನಾನು ರಾಮಚಂದ್ರನ ವಚನವನ್ನು ಮಾನ್ಯ ಮಾಡಿದಂತೆ ನೀನೂ ನನ್ನ ಮಾತಿನಲ್ಲಿ ವಿಶ್ವಾಸವನ್ನಿಡು. ಮೈನಾಕೆಯಿಂದ ನಿನಗೆ ಮೀನನಾಥನೆಂಬ ಪುತ್ರನು ಜನಿಸಿ ಅವನು ಕೀರ್ತಿಧ್ವಜವನ್ನು ಮೆರಿ ಸುವನು. ನಿನ್ನ ತಂದೆಯಾದ ಉಪರಿಕ್ಷನೇ ನಿನ್ನ ಹೊಟ್ಟೆಯಲ್ಲಿ ಹುಟ್ಟಿ ಬರುವನು. ಆದ್ದರಿಂದ ನೀನು ನನ್ನ ವಿನಂತಿಯನ್ನು ಮನ್ನಿಸಲೇಬೇಕು!!

ಮಾರುತಿಯ ಈ ಮಾತಿನಿಂದ ನಾಥನು ಪ್ರಸನ್ನಚಿತ್ತನಾದನು. ಅವನು ಮಾರುತಿಯ ಇಚ್ಛೆಯನ್ನು ಪೂರ್ಣಪಡಿಸುವದಕ್ಕಾಗಿ ವಚನ ಕೊಟ್ಟನು. ಹೀಗೆ ನಾಥನ ವಚನ ಸಿಕ್ಕಕೂಡಲೆ ಅವರು ಒಬ್ಬರಿಗೊಬ್ಬರು ನಮಸ್ಕಾರ ಮಾಡಿದರು. ಬಳಿಕ ಮಾರುತಿಯು ಅದೃಶ್ಯನಾಗಿ ತನ್ನ ಕೆಲಸಕ್ಕೆ ಹೊರಟು ಹೋದನು. ಅದನ್ನು ಕಂಡು ಮಚ್ಛೇಂದ್ರನಾಥನು ತನ್ನ ಮಾರ್ಗವನ್ನು ಕ್ರಮಿಸಹತ್ತಿದನು.

ಮಾರ್ಗಕ್ರಮಣ ಮಾಡಮಾಡುತ್ತ ನಾಥನ ಮನಸ್ಸಿನಲ್ಲಿ ಹಿಂಗಳಾದೇವಿಯ ದರ್ಶನಕ್ಕೆ ಹೋಗುವ ಇಚ್ಛೆಯುಂಟಾಯಿತು. ಕೂಡಲೆ ಅವನು ಆ ಸ್ಥಾನದ ಕಡೆಗೆ ಸಾಗಿದನು. ಅಲ್ಲಿ ಹೋಗಿ ನೋಡುತ್ತಾನೆ. ಆ ದೇವಿಯ ದ್ವಾರದಲ್ಲಿ ಎಂಟು ಜನ ಭೈರವರು ದ್ವಾರರಕ್ಷಣಾರ್ಥವಾಗಿ ನಿಂತಿದ್ದರು. ಅವರು ಬಹಳ ಭಯಂಕರರಾಗಿದ್ದರು. ಪ್ರಸಂಗದಲ್ಲಿ ಯಮನಿಗೂ ದಂಡನ ಮಾಡುವಷ್ಟು ಸಾಮರ್ಥ್ಯಸಂಪನ್ನರಿದ್ದರು. ಇವರಲ್ಲದೆ ಅಲ್ಲಿ ಸಹಸ್ರಗಟ್ಲೆ ಚಾಮುಂಡಿದೇವತೆಗಳು ವಾಸಮಾಡಿಕೊಂಡಿದ್ದವು. ಶಂಖಿನಿ, ಡಂಖಿನಿ, ಮೊದಲಾದ ದೇವತೆಗಳು ಉಗ್ರರೂಪವನ್ನು ಧಾರಣ ಮಾಡಿ ಅಲ್ಲಿ ಪೂರ್ವದಿಂದ ವಾಸಮಾಡಿದ್ದವು; ದೇವಾಲಯದ ಸುತ್ತು ವಿಸ್ತೀರ್ಣವಾಗಿ ಅರಣ್ಯವು ಪಸರಿಸಿತ್ತು; ನಾಲ್ಕೂ ಕಡೆಗೆ ಭಯಂಕರವಾದ ಪರ್ವತಗಳು ವ್ಯಾಘ್ರ-ಸಿಂಹಾದಿ ಪಶುಗಳಿಗೆ ಆಶ್ರಯಸ್ಥಾನವಾಗಿದ್ದವು. ಆ ಅರಣ್ಯವು ಇವೆಲ್ಲ ಸಾಧನಗಳಿಂದ ಅತ್ಯಂತ ಉಗ್ರವಾಗಿತ್ತು.

---

# ಅಧ್ಯಾಯ ೫



## ಭೈರವರ ಪರಾಜಯ-ಜ್ವಾಲಾಮುಖಿಯದರ್ಶನ.



ಇಂಥ ಭಯಂಕರವಾದ ಆ ಅಡವಿಯಲ್ಲಿ ಹಿಂಗಳಾದೇವಿಯು ವಾಸಮಾಡಿದ್ದಳು. ಆ ಆದಿಶಕ್ತಿಯು ಜ್ವಾಲಾಮುಖಿಯಾಗಿದ್ದಳು, ತನ್ನ ತೇಜದಿಂದ ಸದೈವ ಪ್ರದೀಪ್ತಳಾಗಿದ್ದಳು. ಮಚ್ಛಿಂದ್ರನು ದೇವಿಯ ಮಹಾದ್ವಾರಕ್ಕೆ ಬಂದು ತಲ್ಪಿದನು; ಆ ದ್ವಾರವು ಐವತ್ತು ಮೊಳ ಎತ್ತರವಿದ್ದು ಅದು ಚಚ್ಚೌಕು ಸುಮಾರು ಆರನೂರು ಮೊಳವಿತ್ತು; ಅದರ ದಕ್ಷಿಣಕ್ಕಿದ್ದ ಅಷ್ಟಭೈರವರು ನಾಥನನ್ನು ಕಂಡರು; ಅವನನ್ನು ಕಂಡಕೂಡಲೇ ಅವರಿಗೆ ನಾಗಅಶ್ವತ್ಥದ ಸ್ಮರಣವಾಯಿತು. ಕಠಿಣ ತಪಶ್ಚರ್ಯ ಮಾಡಿ ಯಾವನು ಸರ್ವದೈವತಗಳನ್ನು ಸ್ವಾಧೀನ ಮಾಡಿಕೊಂಡಿರುವನೋ ಅವನೇ ಈ ಮಚ್ಛಿಂದ್ರ

ನಾಥನು ಎಂಬದನ್ನು ಗುರ್ತಿಸಿದರು. ದೇವತೆಗಳ ವರದಿಂದ ಅವನು ಶಾಬರೀವಿದ್ಯೆಯ ಕವಿತ್ವ ಮಾಡಿರುವನೆಂಬದು ಅವರಿಗೆ ಸ್ಮರಣವಾಯಿತು. ಆದರೆ ಆ ವಿದ್ಯೆಯು ಅವನಲ್ಲಿ ಎಷ್ಟರಮಟ್ಟಿಗೆ ಜಾಗ್ರತವಿರುವದೆಂಬದನ್ನು ನೋಡುವ ಸಲುವಾಗಿ ಆ ಎಲ್ಲ ಭೈರವರು ನಾಥನ ಎದುರಿಗೆ ಬಂದರು; ಮತ್ತು ಅವರು ಅವನನ್ನು ಕುರಿತು—"ಹೇ ಸಾಧುಶ್ರೇಷ್ಠಾ, ಈಗ ಎಲ್ಲಿಗೆ ಹೋಗುವಿ? ಎಂದು ಕೇಳಿದರು." ಈ ಜನರು ತಪ್ಪಂತೆ ದರ್ಶನೇಚ್ಛುಗಳಿರಬಹುದೆಂದು ತಿಳಿದು ನಾಥನು ಅವರಿಗೆ ನನ್ನೊಡನೆ ನೀವೂ ದೇವೀದರುಶನಕ್ಕೆ ಬರುತ್ತಿದ್ದರೆ ಬರ್ರಿ ಎಂದನು.

ಭೈರವರು ನಕ್ಕು ಎಲೈ ಜೋಗೀ ನಾವು ಈ ದೇವಿಯು ಕಾವಲುಗಾರರು. ದೇವಿಯು ದರುಶನಕ್ಕೆ ಬಂದ ಪುಣ್ಯವಂತರನ್ನು ಒಳಗೆ ಬಿಡುವೆವು; ಪಾಪಿಷ್ಠರನ್ನು ನರಕಕ್ಕೆ ಅಟ್ಟುವೆವು. ನೀನು ದೇವಿಯು ದರ್ಶನವನ್ನಿಚ್ಛಿಸುತ್ತಿದ್ದರೆ ನಮಗೆ ನಿನ್ನ ಪಾಪ ಪುಣ್ಯಗಳ ಲೆಕ್ಕ ಹೇಳು. ಒಂದು ವೇಳೆ ಸುಳ್ಳು ಮಾತಾಡಿದರೆ ನಿನಗೆ ತಕ್ಕ ಶಿಕ್ಷೆ ಮಾಡುವೆವು. ಎಂದರು.

ಭೈರವರ ಬೆದರಿಕೆಯನ್ನು ಕೇಳಿ ಮಚ್ಛಿಂದ್ರನು ಅಂದದ್ದೇನಂದರೆ—ದ್ವಾರಪಾಲಕರೇ, ನಾನು ಪಾಪ-ಪುಣ್ಯಗಳನ್ನು ಎಂದೂ ಮಾಡಿರುವದಿಲ್ಲ. ನನ್ನಿಂದ ಯಾವದಾದರೊಂದು ಕರ್ಮವೊದಗಿದ್ದರೆ ಅದು ಕೇವಲ ಈಶ್ವರನ ಸಲುವಾಗಿಯೇ ಆಗಿರುವದು. ನನಗೂ ಕರ್ಮಗಳಿಗೂ ಸಂಬಂಧವಿಲ್ಲ. ನಾವೆಯಲ್ಲಿ ಕುಳಿತು ಹೋಗುವವನಿಗೆ ದಂಡೆಯ ಮೇಲಿನ ಗಿಡಗಳು ಓಡುತ್ತಿರುವಂತೆ ತೋರುತ್ತವೆ. ವಸ್ತುತಃ ಆ ಗಿಡಗಳು ಓಡುವದಿಲ್ಲ. ಹಾಗೆ ಕರ್ಮಗಳು ಜಡದೇಹದಿಂದ ಮಾಡಲ್ಪಡುವದಿಲ್ಲ.

ನಾಥನ ಈ ಉಕ್ತಿಯನ್ನು ಕೇಳಿ ದ್ವಾರಪಾಲಕರು—ನೀನು ಶ್ರೇಷ್ಠ ಪುರುಷನಿದ್ದು ಹೀಗೆ ಯಾಕೆ ಮಾತಾಡುತ್ತೀ? ಜಗತ್ತಿನಲ್ಲಿ ಯಾವನು ದೇಹಧಾರಣ ಮಾಡಿರುವನೋ ಅವನ ದೇಹ ಬೀಳುವವರೆಗೆ ಅವನು ಕರ್ಮಾಕರ್ಮದಿಂದ ಅಲಿಪ್ತನಾಗಿರುವದು ಶಕ್ಯವಿಲ್ಲ. ನೀನು ಹೀಗೆ ಅಡ್ಡ-ತಿಡ್ಡ ಮಾತಾಡಿದರೆ ನಿನ್ನ ಕಾರ್ಯವಾಗುವದಿಲ್ಲ. ಇಷ್ಟೇ ಅಲ್ಲ; ನಿನ್ನನ್ನು ನಾವು ಚನ್ನಾಗಿ ಶಿಕ್ಷಿಸಿದೆ ಬಿಡಲಾರೆವು, ಎಂದರು.

ಭೈರವರ ಪೌರುಷವನ್ನು ಕೇಳಿದ ಕೂಡಲೇ ಮಚ್ಛಿಂದ್ರನಾಥನು ತಿರಸ್ಕಾರದಿಂದ ಮಾತಾಡಿದನು—"ಎಲೋ ಹುಡುಗರೇ, ಎಲ್ಲ ಜಗತ್ತಿಗೆ ಶಾಸನ ಮಾಡುವ ಯಮನಂತಿರುವ ನಾನು ನಿಮ್ಮ ಮುಂದೆ ನಿಂತಿರಲು ನೀವು ನನಗೆ ಶಾಸನ ಮಾಡುವ ಭರವಸವನ್ನು ಹಿಡಿಯುತ್ತೀರಿ. ನಿಮ್ಮ ಗರ್ವವನ್ನು ಎಷ್ಟು ವರ್ಣನ ಮಾಡಬೇಕು! ಮಹಾಪ್ರಲಯ ಕಾಲದಲ್ಲಿ ಬ್ರಹ್ಮಾಂಡದ ರುದ್ರನನ್ನೇ ಗ್ರಾಸಮಾಡುವ ಸಾಮರ್ಥ್ಯವುಳ್ಳ ನನ್ನ ಮುಂದೆ ನಿಮ್ಮಂಥ ದೋಮೆಯೋಪಾದಿಯಲ್ಲಿರುವ ಹುಡುಗರ ಯೋಗ್ಯತೆ ಎಷ್ಟರದು!

ಮಚ್ಛಿಂದ್ರನ ಈ ಗರ್ವಯುಕ್ತ ಮಾತನ್ನು ಕೇಳಿ ಆ ಅಷ್ಟಭೈರವರು ಸಂತಪ್ತರಾದರು. ಆ ಎಲ್ಲ ಜನರು ನಾಥನೊಡನೆ ಯುದ್ಧ ಮಾಡಲಿಕ್ಕೆ ಶಸ್ತ್ರಾಸ್ತ್ರಗಳಿಂದ ಸಿದ್ಧರಾದರು. ಈ ಪ್ರಕಾರವನ್ನು ಕಂಡು ಮಚ್ಛಿಂದ್ರನು ತನ್ನ ಜೋಳಿಗೆಯೊಳಗಿಂದ ಒಂದು ಚಿಮುಟಿಗೆ ಭಸ್ಮವನ್ನು ಹೊರಗೆ ತೆಗೆದನು. ಅವನು ದತ್ತನಾಮದ ಜಯಘೋಷ ಮಾಡಿ ವಿಭೂತಿಯನ್ನು ತನ್ನ ಮೈಗೆ ಚರ್ಚಿಸಿಕೊಂಡನು. ಆ ಮೇಲೆ ದಶದಿಕ್ಕುಗಳಿಗೆ ವಿಭೂತಿಯನ್ನು ತೂರಿ ಕ್ಷಿ ಎಲ್ಲ ದಿಕ್ಕುಗಳನ್ನು ತುಂಬಿಬಿಟ್ಟನು. ಆ ನಂತರ ಅವನು ಸೂರ್ಯ, ಅಗ್ನಿ, ವಾಯು' ವರುಣ ಅಶ್ವಿನಿಕುಮಾರ, ಇಂದ್ರ, ಗಂಧರ್ವ, ಋದ್ಧಿ, ಸಿದ್ಧಿ, ಭೂದೇವಿ ಇತ್ಯಾದಿ ದೇವತೆಗಳಿಗೆ ನಮಸ್ಕಾರ ಮಾಡಿ ,ಅವರನ್ನು ತನ್ನ ಸಹಾಯಕ್ಕೆ ಬಂಮಾಡಿಕೊಂಡನು. ಬಳಿಕ ನಾಥನು ಮಂತ್ರ ಸಾಮರ್ಥ್ಯದಿಂದ ವಜ್ರದೇಹಿಯಾಗಿ ಅಷ್ಟಭೈರವರನ್ನು ಯುದ್ಧಕ್ಕೆ ಕರೆದನು. ಕೂಡಲೆ ನಾಥನಿಗೂ ಭೈರವರಿಗೂ ಯುದ್ಧಕ್ಕೆ ಪ್ರಾರಂಭವಾಯಿತು. ಭಾಲೆ, ಪರಶು, ತ್ರಿಶೂಲ ಮೊದಲಾದವುಗಳನ್ನು ಭೈರವರು ನಾಥನ ಮೇಲೆ ಪ್ರಯೋಗಿಸಿದರು. ಆದರೆ ಆದಕ್ಕೆ ನಾಥನು ಸ್ವಲ್ಪಾದರೂ ಅಂಜಲಿಲ್ಲ; ಅವನು ಆ ಎಲ್ಲ ಶಸ್ತ್ರಗಳ ಘಾಯಗಳನ್ನು ತೃಣಸಮಾನ ತಿಳಿದನು. ತಮ್ಮ ಎಲ್ಲ ಶಸ್ತ್ರಗಳ ಹೊಡತವು ನಿಷ್ಫಲವಾಗುವದನ್ನು ಕಂಡು ಭೈರವರು ಕ್ರುದ್ಧರಾದರು. ಅವರು ನಾಥನ ಮೇಲೆ ಅಸ್ತ್ರಗಳ ಪ್ರಯೋಗ ನಡಿಸಿದರು. ಒಬ್ಬನು ವಾತಾಸ್ತ್ರವನ್ನು ಬಿಟ್ಟನು ಎರಡನೆಯವನು ಕಾಮಾಸ್ತ್ರವನ್ನು ಬಿಟ್ಟನು. ಮೂರನೆಯವನು ಇಂದ್ರಾಸ್ತ್ರದ ಪ್ರಯೋಗವನ್ನು ಮಾಡಿದನು. ನಾಲ್ಕನೆಯವನು ಸರ್ಪಾಸ್ತ್ರವನ್ನು ಬಿಟ್ಟನು. ಐದನೆಯವನು ಭಯಂಕರವಾದ

ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಬ್ರಹ್ಮಾಂಡವು ದಗ್ಧವಾಗುವಂಥ ರುದ್ರಾಸ್ತ್ರವನ್ನು ಆರನೆಯವನು ಬಿಟ್ಟನು ಏಳನೇ ಭೈರವನು ರಾಕ್ಷಸಾಸ್ತ್ರವನ್ನು ಪ್ರಯೋಗಿಸಿದನು. ಪ್ರತ್ಯಕ್ಷ ಮಹಾಕಾಲನ ಪ್ರಾಣವನ್ನೂ ಕೊಳೆಯುವಂಥ ಕೃತಾಂತವೆಂಬ ಅಸ್ತ್ರವನ್ನು ಎಂಟನೇ ಭೈರವನು ಬಿಟ್ಟನು. ಆ ಎಂಟೂ ಅಸ್ತ್ರಗಳು ಒಮ್ಮೆಲೆ ನಾಥನ ಮೈಮೇಲೆ ಬಂದದ್ದರಿಂದ ಬಹು ದೊಡ್ಡ ಗೊಂದಲವೆದ್ದಿತು. ವಾತಾಸ್ತ್ರದ ಯೋಗದಿಂದ ಪೃಥ್ವಿಯೊಳಗಿನ ಪರ್ವತಗಳು ಅರಳೆಯಂತೆ ವಾಯುಚಕ್ರದಲ್ಲಿ ಭ್ರಮಣ ಮಾಡಹತ್ತಿದವು. ಕಾಮಾಸ್ತ್ರದಿಂದ ಉರ್ವಶಿಯನ್ನು ಹೋಲುವಂಥ ಅಸಂಖ್ಯ ಸ್ತ್ರೀಯರು ಉತ್ಪನ್ನರಾಗಿ ನಾಥನಿಗೆ ಮೋಹವನ್ನುಂಟು ಮಾಡಲು ಪ್ರಯತ್ನಿಸತೊಡಗಿದರು. ಆ ಎಲ್ಲ ಅಸ್ತ್ರಗಳ ತಾಕಲಾಟದಿಂದ ನಕ್ಷತ್ರಗಳು ಕಾಣದಂತಾದವು; ಚಂದ್ರನು ಮರೆಯಾದನು. ಪ್ರಲಯಕಾಲವೇ ಒದಗಿತು. ಪ್ರತ್ಯಕ್ಷ ಶಂಕರನು ಭೀತಿಯಿಂದ ಗುಹೆಯಲ್ಲಿ ಅಡಗಿಕೊಂಡನು. ಸರ್ಪಾಸ್ತ್ರದಿಂದ ವಿಷದ ಜ್ವಾಲೆಯುತ್ಪನ್ನವಾಯಿತು. ಬ್ರಹ್ಮಾಸ್ತ್ರ ರುದ್ರಾಸ್ತ್ರಗಳು ದಶದಿಕ್ಕುಗಳನ್ನು ಸುಡಲಾರಂಭಿಸಿದವು. ಹೀಗೆ ಕೋಲಾಹಲವುಂಟಾಗಲು ಮಚ್ಛೀಂದ್ರನು ಬೆದರದೆ ಆ ಎಲ್ಲ ಅಸ್ತ್ರಗಳ ದೇವತೆಗಳನ್ನು ಬರಮಾಡಿಕೊಂಡನು; ಹಾಗು ಆ ಅಸ್ತ್ರಗಳ ಪ್ರತೀಕಾರಕ್ಕೆ ಮಂತ್ರಪೂತ ಬೂದಿಯನ್ನು ತೂರಿದನು. ನಾಥನು ವಿಭೂತಿಯನ್ನು ತೂರುವದೊಂದೇ ತಡ; ಒಂದು ಚಮತ್ಕಾರವಾಯಿತು. ಭೈರವರ ವಾತಾಸ್ತ್ರಕ್ಕೆ ನಾಥನ ಪರ್ವತಾಸ್ತ್ರವು ಸುತ್ತುಗಟ್ಟಿತು. ಕಾಮಾಸ್ತ್ರದಮುಂದೆ ವಿರಕ್ತಾಸ್ತ್ರವು ನಿಲ್ಲಲು ಕಾಮಾಸ್ತ್ರವು ದೀನವಾಗಿ ತಿರುಗಿ ಹೋಯಿತು. ಇಂದ್ರಾಸ್ತ್ರಕ್ಕೆ ಮೋಹನಾಸ್ತ್ರವು ಎದುರಾಗಲು ಆ ಇಂದ್ರಾಸ್ತ್ರವು ಕುಂಠಿತವಾಯಿತು. ಸರ್ಪಾಸ್ತ್ರಕ್ಕೆ ಗರುಡಾಸ್ತ್ರವು ಮೂಲವಾಯಿತು. ಬ್ರಹ್ಮಾಸ್ತ್ರಕ್ಕೆ ಪ್ರತಿಯಾಗಿ ಶಾಂತ್ಯಸ್ತ್ರವು ಹೊರಡಲು ಅದು ಸ್ಥಿರವಾಯಿತು. ರುದ್ರಾಸ್ತ್ರಕ್ಕೆ ಕಾರ್ತಿಕಾಸ್ತ್ರವು ಗಂಟು ಬಿದ್ದಿತು. ನಾಥನ ದೇವಾಸ್ತ್ರಕ್ಕೆ ಭೈರವರ ರಾಕ್ಷಸಾಸ್ತ್ರವು ಕಾಲ್ದೆಗೆಯಿತು. ಕೃತಾಂತಾಸ್ತ್ರವನ್ನು ಸಂಜೀವಿನೀ ಅಸ್ತ್ರವು ನಾಶಗೊಳಿಸಿತು. ಈ ಪ್ರಕಾರ ಭೈರವರ ಎಂಟೂ ಅಸ್ತ್ರಗಳನ್ನು ನಾಥನ ಎಂಟು ಅಸ್ತ್ರಗಳು ನಾಮಶೇಷವಾಗ ಮಾಡಿದವು; ಬಳಿಕ ನಾಥನು ಬಿಟ್ಟ ವಾತಾಕರ್ಷಕವೆಂಬ ಒಂಬತ್ತನೇ ಅಸ್ತ್ರವು ಭೈರವರ ಶರೀರದಲ್ಲಿ ಸೇರಿತು. ಆಗ ಭೈರವರು ನಿರ್ವೀರ್ಣ್ಣರಾಗಿ ಬಿದ್ದರು.

ಆಗ ಜಗದಂಬೆಯು ತನ್ನ ಎಲ್ಲ ದಾಸಿಯರನ್ನು ಭೈರವರ ಸಹಾಯಕ್ಕೆ ಕಳಿಸಿದಳು. ಚಾಮುಂಡಿಗಳು, ಡಂಖಿನಿ, ಶಂಖಿನಿ, ಯೋಗಿನಿ, ಜಲದೇವತೆ ಮೊದಲಾದ ಸ್ತ್ರೀಯರು ನಾಥನ ಮೇಲೆ ಶಸ್ತ್ರಾಸ್ತ್ರಗಳ ಪ್ರಯೋಗ ನಡಿಸಿದರು; ಆದರೆ ಆ ವೀರಶ್ರೇಷ್ಠನಾದ ನಾಥನು ಆ ಎಲ್ಲ ಅಸ್ತ್ರಗಳ ನಿವಾರಣ ಮಾಡಿದನು. ಆ ನಂತರ ನಾಥನು ಮೋಹನಾಸ್ತ್ರದ ಪ್ರಯೋಗ ಮಾಡಿ, ಕಾಮಾಸ್ತ್ರವನ್ನು ಬಿಡಲು, ಆ ಎಲ್ಲ ಸ್ತ್ರೀಯರು ಭ್ರಮಿಷ್ಟರಾಗಿ ಪಿಶಾಚಿಯಂತೆ ವರ್ತಿಸತೊಡಗಿದರು; ಬಳಿಕ ನಾಥನು ವ್ರಾಹ್ಯ ನಾಮಕ ಅಸ್ತ್ರವನ್ನು ಬಿಟ್ಟನು. ಆ ಬಲವಾನ್ ಅಸ್ತ್ರವು ಆ ಎಲ್ಲ ಸ್ತ್ರೀಯರ ವಸ್ತ್ರಗಳನ್ನು ಹರಣ ಮಾಡಿತು. ಆ ವಸ್ತ್ರಗಳು ಆಕಾಶದಲ್ಲಿ ಹಾರಿಹೋದವು. ಹೀಗೆ ಸ್ತ್ರೀಯರು ವಸ್ತ್ರಹೀನರಾಗಲು ನಾಥನು ಮಾಯಾಸ್ತ್ರದ ಯೋಗದಿಂದ ಅನೇಕ ಜನ ಪುರುಷರನ್ನು ನಿರ್ಮಾಣ ಮಾಡಿ, ಸ್ಮರಣಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರದಿಂದ ಎಲ್ಲ ದಾಸಿಯರು ಜಾಗ್ರತರಾದರು. ಆಗ ಅವರಿಗೆ ಬಹಳ ನಾಚಿಕೆಯುಂಟಾಯಿತು. ಆದ್ದರಿಂದ ಅವರು ಆ ಸ್ಥಳವನ್ನು ಬಿಟ್ಟು ಓಡಿದರು. ಓಡುವಾಗ ಅವರು ಮೃತಪ್ರಾಯರಾಗಿ ಬಿದ್ದಿರುವ ಎಲ್ಲ ಭೈರವರನ್ನು ಕಂಡರು. ಭೈರವರ ಹೀನ ಅವಸ್ಥೆಯನ್ನು ಕಂಡು ಅವರು ಭಯಭೀತರಾಗಿ, ಜಗದಂಬೆಯ ಕಡೆಗೆ ಓಡಿಹೋದರು.

ಹೀಗೆ ಓಡಿಬಂದ ದಾಸಿಯರನ್ನು ಕಂಡು ಜಗದಂಬೆಯು ಚಕಿತಳಾದಳು. ದಾಸಿಯರು ಎಲ್ಲ ಸಂಗತಿಯನ್ನು ಹೇಳಲು, ನಾಥನ ಪರಾಕ್ರಮವು ದೇವಿಗೆ ಹೊಳೆಯಿತು. ಬಳಿಕ ಅವಳು ಜ್ಞಾನದೃಷ್ಟಿಯಿಂದ ನೋಡಲು ನಾಥನು ಯಾರೆಂಬುದು ಗೊತ್ತಾಯಿತು. ಬಳಿಕ ಜಗದಂಬೆಯು ದಾಸಿಯರೊಡನೆ ತಾನೇ ನಾಥನ ಬಳಿಗೆ ಹೋದಳು. ಆ ಜಗಜ್ಜನನಿಯ ಮನಸ್ಸಿನಲ್ಲಿ ಪ್ರೇಮವುತ್ಪನ್ನವಾಗಿ ಅವಳು ಮಚ್ಛಿಂದ್ರನನ್ನು ಅಪ್ಪಿಕೊಂಡಳು. ಮಚ್ಛಿಂದ್ರನೂ ಜಗದಂಬೆಯ ಚರಣಗಳ ಮೇಲೆ ಮಸ್ತಕವನ್ನಿಟ್ಟನು. ಜಗದಂಬೆಯು ನಾಥನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡಳು. ಅವಳು ಅವನನ್ನು ಬಹಳವಾಗಿ ಗೌರವಿಸಿ ಭೈರವರನ್ನು ಸಾವಧಾನರನ್ನಾಗಮಾಡಲು ಹೇಳಿದಳು. ಅಂಬೆಯ ಆಜ್ಞೆಯು ಆದಕೂಡಲೇ ನಾಥನ ಮನಸ್ಸು ಪ್ರಸನ್ನವಾಯಿತು. ಅವನು ವಾತಾಕರ್ಷಣಾಸ್ತ್ರವನ್ನು ಬಿಟ್ಟನು.

ಕೂಡಲೆ ಅಷ್ಟಭೈರವರು ಸಾಂಧರಾದರು; ಬಳಿಕ ಅವರು ನಾಲ್ಕೂ ಕಡೆಗೆ ನೋಡಹತ್ತಿದರು. ಅವರಿಗೆ ಆಗ ಜಗದಂಬೆಯು ಮಚ್ಛಿಂದ್ರನಾಥನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡದ್ದು ಗೊತ್ತಾಯಿತು. ಎಲ್ಲ ಭೈರವರು ಮಚ್ಛಿಂದ್ರನಾಥನ ಪ್ರತಾಪದ ಸ್ತುತಿಯನ್ನು ಮಾಡಿದರು. ಬಳಿಕ ಮಚ್ಛಿಂದ್ರನು ಜಗದಂಬೆಯ ಇಚ್ಛೆಯ ಮೇರೆಗೆ ಒಂದು ಪರ್ವತವನ್ನು ಆಕಾಶದಲ್ಲಿ ಪರಿಭ್ರಮಣಮಾಡಿಸಿ ಕೆಳಗಿಳಿಸಿದನು, ಆತನ ಮಂತ್ರಸಾಮರ್ಥ್ಯಕ್ಕೆ ದೇವಿಯು ಪ್ರಸನ್ನಳಾದಳು. ಮತ್ತು ಸ್ಪರ್ಶಾಸ್ತ್ರ, ಭಿನ್ನಾಸ್ತ್ರಗಳೆಂಬ ಎರಡು ದಿವ್ಯ ಅಸ್ತ್ರಗಳನ್ನು ಅವನಿಗೆ ಕೊಟ್ಟಳು. ನಾಥನು ದೇವಿಯಲ್ಲಿ ಮೂರು ದಿನ ಇದ್ದು, ಮುಂದೆ ದ್ವಾದಶ ಮಲ್ಹಾರನ ಕಡೆಗೆ ಸಾಗಿದನು.

---

# ಅಧ್ಯಾಯ ೫

—[-೦-]—

ಕೆಲವು ದಿನಗಳಲ್ಲಿ ನಾಥನು ದ್ವಾದಶ ಮಲ್ಹಾರಕ್ಕೆ ತಲ್ಪಿದನು. ಅಲ್ಲಿ ಒಂದು ದೇವಾಲಯವಿತ್ತು; ಅದರಲ್ಲಿ ಮಚ್ಛಿಂದ್ರನು ವಾಸಿಸಿದನು; ದೇವಾಲಯದ ಸುತ್ತುಮುತ್ತು ಬಹು ದೊಡ್ಡ ಅರಣ್ಯವಿತ್ತು. ಮಧ್ಯರಾತ್ರಿಯ ಸುಮಾರಕ್ಕೆ ಆ ಅರಣ್ಯದಲ್ಲಿ ಅಸಂಖ್ಯಾತ ದೀವಟಿಗೆಗಳ ಪ್ರಕಾಶವು ನಾಥನಿಗೆ ಕಾಣಿಸಿತು; ಇದು ಪಿಶಾಚಿಗಳ ಚೇಷ್ಟೆ ಇರಬಹುದೆಂದು ತಿಳಿದನು. ಈ ಪಿಶಾಚಿಗಳನ್ನು ಸ್ವಾಧೀನಪಡಿಸಿಕೊಂಡರೆ ಪ್ರಸಂಗದಲ್ಲಿ ಉಪಯೋಗವಾಗಬಹುದೆಂದು ಎಣಿಸಿ ನಾಥನು ಆ ಉದ್ಯೋಗಕ್ಕೆ ಹತ್ತಿದನು. ವಸ್ತುತಃ ಮಚ್ಛಿಂದ್ರನಾಥನಂಥ ಯೋಗಿಶ್ರೇಷ್ಠನಿಗೆ ಕ್ಷುದ್ರಭೂತಗಳಿಂದ ಏನೂ ಪ್ರಯೋಜನವಿದ್ದಿಲ್ಲ; ಆದರೆ ಮಹಾತ್ಮರು ಯಾವದನ್ನೂ ಕ್ಷುದ್ರವೆಂದು ತಿಳಿಯುವದಿಲ್ಲ. ತುಳಸೀದಾಸರಿಗೆ ರಾಮದರ್ಶನದ ವಿಷಯದಲ್ಲಿ ಭೂತವೇ ಸಹಾಯ ಮಾಡಿತು ಇರಲಿ. ಆಗ ನಾಥನು ದೇವಿಯಿಂದ ದೊರೆತ ಸ್ಪರ್ಶಾಸ್ತ್ರವನ್ನು ಆ ಭೂತಗಳ ಮೇಲೆ ಪ್ರಯೋಗಿಸಿದನು. ಬಳಿಕ ಕೇಳುವದೇನು? ಆ ಎಲ್ಲ ಪಿಶಾಚಿಗಳು ಗಿಡಗಳಂತೆ ನಿಂತಲ್ಲಿ ನಿಂತುಬಿಟ್ಟವು. ಆ ಅರಣ್ಯದಲ್ಲಿ

ಅಸಂಖ್ಯಭೂತಗಳಿದ್ದವು. ಅವು ಪ್ರತಿನಿತ್ಯ ವೇತಾಳರಾಜನ ಭೆಟ್ಟಿಗೆ ಹೋಗುತ್ತಿದ್ದವು. ಆದರಂತೆ ಆ ದಿನವೂ ಎಲ್ಲಕಡೆಗಳ ಪಿಶಾಚಿಗಳು ವೇತಾಳನ ಸನ್ನಿಧಿಗೆ ಬಂದವು; ಆದರೆ ನಾಥನು ಪ್ರತಿಬಂಧಿಸಿದ ಭೂತಗಳು ಮಾತ್ರ ಬಾರದ್ದರಿಂದ ಅವುಗಳ ಶೋಧಕ್ಕಾಗಿ ವೇತಾಳರಾಜನು ಬೇರೆ ಭೂತಗಳನ್ನು ಕಳಿಸಿದನು.

ಮಚ್ಛಿಂದ್ರನು ಪ್ರತಿಬಂಧಿಸಿದ ಪಿಶಾಚಿಗಳು ಕರಭನದಿಯ ತೀರದಲ್ಲಿದ್ದವು. ಶೋಧಕ್ಕಾಗಿ ಹೊರಟ ಪಿಶಾಚಿಗಳು ಆ ನದೀತೀರಕ್ಕೆ ಬಂದವು. ಆ ಸ್ಥಳದಲ್ಲಿ ಆ ಎಲ್ಲ ಪಿಶಾಚಿಗಳು ಬಲರಹಿತವಾಗಿ ಪರ್ವತಗಳಂತೆ ನಿಶ್ಚಲವಾಗಿ ನಿಂತಿದ್ದವು. ಅದನ್ನು ಕಂಡು ಆ ಶೋಧಕ ಪಿಶಾಚಿಗಳಿಗೆ ನಡೆದ ಪ್ರಕಾರವು ಹೊಳೆಯಿತು. ಬಳಿಕ ಅವು ಯಾವ ಸಿದ್ಧನು ಹೀಗೆ ಮಾಡಿರುವನೆಂದು ಯೋಚಿಸಿ ಅವನನ್ನು ಹುಡುಕ ಹತ್ತಿದವು. ಅರಣ್ಯದಲ್ಲಿ, ಪರ್ವತದಲ್ಲಿ ಶೋಧಮಾಡಿ ನಿರಾಶವಾದವು. ನಂತರ ಅವು ಸಮೀಪದಲ್ಲಿರುವ ದೇವಾಲಯದಲ್ಲಿ ಹೋದವು. ಆ ಸ್ಥಳದಲ್ಲಿ ಮಚ್ಛಿಂದ್ರನಾಥನು ಅವುಗಳ ದೃಷ್ಟಿಗೆ ಬಿದ್ದನು. ಅವನನ್ನು ಕಂಡು ಆ ಪಿಶಾಚಿಗಳು ಗಾಬರಿಯಾದವು. ನಾಥನು ಕೊರಳಲ್ಲಿ ಬಂಗಾರದ ಕೋಡುಗಳನ್ನು ಧರಿಸಿದ್ದನು. ಅವನ ಕೈಯಲ್ಲಿ ವೀರಕಂಕಣವಿತ್ತು. ಅವನ ಭುಜದಲ್ಲಿ ಮಾರುತಿಯ ಮೂರ್ತಿಯಿತ್ತು; ಅವನು ಸೂರ್ಯಪ್ರಭೆಯಂತೆ ಬೆಳಗುತ್ತಲಿದ್ದನು; ಇಂಥ ನಾಥನನ್ನು ನೋಡಿ ತಮ್ಮ ಬಾಂಧವರನ್ನು ಈತನೇ ಪ್ರತಿಬಂಧಿಸಿರಬಹುದೆಂದು ತಿಳಿದವು. ಬಳಿಕ ಅವು ನಾಥನ ಮುಂದೆ ಹೋಗಿ—ಸಿದ್ಧಶ್ರೇಷ್ಠನೇ, ನಮ್ಮ ಬಾಂಧವರನ್ನು ಯಾಕೆ ಪ್ರತಿಬಂಧಿಸಿದೆ? ಎಂದು ಕೇಳಿದವು. ತನ್ನ ಬಳಿಗೆ ಪಿಶಾಚಿಗಳು ಬಂದದ್ದನ್ನು ನೋಡಿ ನಾಥನಿಗೆ ಆಶ್ಚರ್ಯವಾಯಿತು. ಇವು ಬೇರೆ ಕಡೆಯಿಂದ ಬಂದಿರಬೇಕೆಂದು ತರ್ಕಿಸಿ—ನೀವು ಇಲ್ಲಿಗೆ ಯಾಕೆ ಬಂದಿರಿ? ಎಂದು ಕೇಳಿದನು. ಆಗ ಪಿಶಾಚಿಗಳು ವೇತಾಳರಾಜನ ಸಂಗತಿಯನ್ನು ಹೇಳಿ ಈ ಪಿಶಾಚಿಗಳನ್ನು ಹುಡುಕುವ ದಕ್ಕಾಗಿ ಬಂದಿದ್ದೇವೆಂದು ತಿಳಿಸಿದವು; ಆ ಬಳಿಕ ಅವು ತಮ್ಮ ಬಾಂಧವರನ್ನು ಬಿಡುವಂತೆ ಹೇಳಿಕೊಂಡವು. ನಾಥನು ಅದಕ್ಕೆ ಅಸಮ್ಮತಿಯನ್ನು ತೋರಿಸಿದನು. ನಾಥನು ವೇತಾಳನ ಅಧಿಕಾರವನ್ನು ಲಕ್ಷಿಸದೆ ಇದ್ದದ್ದನ್ನು ಕಂಡು ಆ ಪಿಶಾಚಿಗಳು ಪುನಃ ನಾಥನನ್ನು ಕುರಿತು—ಮಹಾರಾಜ, ತಾವು ಹೀಗೆ ನಮ್ಮ ನಾಶವನ್ನು ನಿರಾಕರಿಸಿದರೆ

ಒಳಿತಾಗಲಿಕ್ಕಿಲ್ಲ. ನಮ್ಮ ವೇತಾಳರಾಜನು ತನ್ನ ಮಲ್ಲರ ಸಹಿತನಾಗಿ ಯುದ್ಧಕ್ಕೆ ಸಿದ್ಧನಾದರೆ ಅವನ ಮುಂದೆ ಯಾರೂ ನಿಲ್ಲಲಾರರು. ದೇವ, ದಾನವರು, ಗಂಧರ್ವರು ಸಹ ವೇತಾಳರಾಜನನ್ನು ಬಲಾಢ್ಯನೆಂದು ಭಾವಿಸುತ್ತಾರೆ, ಆದ್ದರಿಂದ ನಮ್ಮ ವೇತಾಳರಾಜನಿಗೆ ಈ ಸುದ್ದಿಯು ಹತ್ತುವದರೊಳಗಾಗಿ ನೀವು ಈ ಪಿಶಾಚಿಗಳನ್ನು ಬಿಟ್ಟು ಬಿಡಿರಿ. ಎಂದವು. ಹೀಗೆ ವೇತಾಳರಾಜನ ವರ್ಣನೆ ಕೇಳಿ ನಾಥನು—ನೀವು ನಿಮ್ಮ ಯಜಮಾನನ ಸ್ತುತಿಯನ್ನು ವ್ಯರ್ಥವಾಗಿ ಯಾಕೆ ಮಾಡುತ್ತೀರಿ? ನಿಮ್ಮ ಸ್ವಾಮಿಯ ಬಲವನ್ನು ನೋಡುವದಕ್ಕಾಗಿ ನಾನು ಇಚ್ಛಿಸುತ್ತೇನೆ. ನಾನು ನಿಮ್ಮನ್ನು ಪ್ರತಿಬಂಧಿಸುವದಿಲ್ಲ. ನಿಮ್ಮರಾಜನನ್ನು ಕರಕೊಂಡು ಇಲ್ಲಿಗೆ ಬರ್ರಿ ಅವನನ್ನು ಕ್ಷುದ್ರ ಪದಾರ್ಥವೆಂದು ತಿಳಿಯುತ್ತೇನೆ ಎಂದನು.

ನಾಥನ ಉತ್ತರವನ್ನು ಕೇಳಿ ಆ ಪಿಶಾಚಿಗಳು ವೇತಾಳನ ಕಡೆಗೆ ಹೊರಟುಹೋದವು. ಅವು ಎಲ್ಲ ಸಂಗತಿಯನ್ನು ವೇತಾಳರಾಜನಿಗೆ ಹೇಳಿದವು. ಅದನ್ನು ಕೇಳಿ ವೇತಾಳರಾಜನು ಕ್ಷೋಭಿಸಿದನು. ಅವನು ತನ್ನ ಕೈಯೊಳಗಿನ ಪಿಶಾಚಿಗಳಿಗೆ ಬೇರೆ ಬೇರೆ ಕಡೆಯಲ್ಲಿ ಜಪ್ಪಿಸಿ ಕೂಡ್ರಲು ಅಪ್ಪಣೆಮಾಡಿದನು. ಹಾಗು ಕೆಲವಕ್ಕೆ ಎಲ್ಲ ಪಿಶಾಚಿಗಳಿಗೆ ಸುದ್ದೀ ಮುಟ್ಟಿಸಲು ಹೇಳಿದನು. ವೇತಾಳನ ಆಜ್ಞೆಗನುಸರಿಸಿ ಎಷ್ಟೋ ಪಿಶಾಚಿಗಳು ದೇಶಾಂತರಕ್ಕೆ ಹೋದವು. ಆ ವೇತಾಳ ಸೇವಕರು ಸಪ್ತ ದ್ವೀಪಗಳಲ್ಲಿ ಹೋಗಿ ಅಲ್ಲಲ್ಲಿಯ ಅಧಿಕಾರಿಗಳಿಗೆ ತಿಳಿಸತಕ್ಕದ್ದನ್ನು ತಿಳಿಸಿದರು. ರಾಜನ ಆಜ್ಞೆಯನ್ನು ಕೇಳಿ ಭೂತಗಣಗಳೂ, ಸರ್ವಮಾಂಡಲಿಕರೂ ತಮ್ಮ ತಮ್ಮ ಸೈನ್ಯಸಹಿತವಾಗಿ ಸಿದ್ಧರಾದರು. ಎಂಟು ಸ್ಥಳಗಳಲ್ಲಿ ಪಿಶಾಚಿಗಳ ದೊಡ್ಡ ದೊಡ್ಡ ಪೀಠಗಳಿದ್ದವು. ಪ್ರತಿಯೊಂದು ಪೀಠದದಂಡು ವೇತಾಳರಾಜನ ಕಡೆಗೆ ಹೊರಟಿತು. ಮ್ಹಮುದಾ, ಮೈರಾಸುರ, ಮುಂಜಾ ಈ ಪ್ರಕಾರ ಎಲ್ಲ ವೀರರು ಸಜ್ಜಾಗಿ ಬಂದರು. ವೇತಾಳನ ಸ್ವಂತ ದರ್ಬಾರದಲ್ಲಿ ಅಸಂಖ್ಯವೀರರಿದ್ದರು. ವೇತಾಳರಾಜನ ಆಶೀರ್ವಾದ ಪಡೆದು ಆ ಎಲ್ಲ ವೀರರು ಸೈನ್ಯಸಹಿತವಾಗಿ ಶರಭನದಿಯ ದಂಡೆಗೆ ಬಂದರು. ಆ ಸ್ಥಳದಲ್ಲಿ ಅವರು ಭಯಂಕರವಾದ ಯುದ್ಧವನ್ನು ಹೂಡಿದರು. ಅವರ ಅಬ್ಬರಕ್ಕೆ ಮೂರು ಲೋಕಗಳು ಗಡಬಡಿಸಿದವು. ಇದನ್ನು ಕಂಡು

ಮಚ್ಛಿಂದ್ರನಾಥನು ಕೈಯಲ್ಲಿ ಭಸ್ಮವನ್ನು ಧರಿಸಿದನು. ಅದರಲ್ಲಿ ಎಲ್ಲ ಮಂತ್ರದೈವತಗಳನ್ನೂ ಸ್ಥಾಪಿಸಿದನು. ಅವನು ವಜ್ರಾಸ್ತ್ರ ಮಂತ್ರದಿಂದ ತನ್ನ ಸುತ್ತುಮುತ್ತು ಒಂದು ಮಂಡಲಾಕಾರವಾದ ರೇಷೆಯನ್ನು ತೆಗೆದನು. ಅದರಿಂದ ನಾಥನ ಸನ್ನಿಧಿಯಲ್ಲಿ ಭೂತಗಳ ಸಂಚಾರವಾಗದಂತಾಯಿತು. ಆಗ ಆ ಭೂತಗಳು ನಾಥನ ಮೇಲೆ ಬಾಣದ ಮಳೆಗರೆದವು. ಪರ್ಜನ್ಯದ ಹನಿಗಳಂತೆ ನಾಥನ ತಲೆಯಮೇಲೆ ಶರವೃಷ್ಟಿಯಾಗಹತ್ತಿತು. ಅದಕ್ಕೆ ನಾಥನು ರತಿಮಾತ್ರವೂ ಹೆದರಲಿಲ್ಲ; ಆಗ ಪಿಶಾಚಿಗಳು ಅತ್ಯಂತ ಭಯಂಕರ ರೂಪವನ್ನು ಧರಿಸಿ ನಾಥನ ಮೇಲೆ ದೊಡ್ಡದೊಡ್ಡ ಗಿಡಗಳನ್ನು ಕಿತ್ತಿ ಒಗೆಯ ಹತ್ತಿದವು, ನಾಥನ ಮಂತ್ರಪ್ರಭಾವದಿಂದ ಆ ಎಲ್ಲ ಗಿಡಗಳು ಹಾರಿ ಹೋಗಲಾರಂಭಿಸಿದವು; ಒಳಿಕ ನಾಥನು ಅಗ್ನಿಅಸ್ತ್ರವನ್ನು ಬಿಟ್ಟನು. ಪಿಶಾಚಿಗಳು ಅದರ ಮೇಲೆ ನೀರಿನ ಮಳೆಗರೆದವು; ಆದರೆ ಆ ಅಸ್ತ್ರಜನ್ಯ ಅಗ್ನಿಯು ಶಾಂತಹೊಂದಲಿಲ್ಲ. ಎಲ್ಲ ಪಿಶಾಚಿಗಳು ಗುಪ್ತವಾಗಿ ಅಗ್ನಿ ಪ್ರಲಯವನ್ನು ನೋಡಹತ್ತಿದವು; ಪಿಶಾಚಿಗಳು ಮರೆಯಾದ್ದರಿಂದ ಅಗ್ನಿಯು ಉಪಯೋಗವಾಗದ್ದನ್ನು ಕಂಡು ನಾಥನು ಜಲಾಸ್ತ್ರದಿಂದ ಆ ಅಗ್ನಿಯನ್ನು ಶಾಂತಗೊಳಿಸಿದನು; ಅಗ್ನಿಯು ನಾಶವಾದದ್ದನ್ನು ಕಂಡು ಭೂತಗಣವು ಪ್ರಕಟವಾಯಿತು. ಅದನ್ನು ಕಂಡು ನಾಥನು ಸ್ಪರ್ಶಾಸ್ತ್ರ ಬಿಟ್ಟನು. ಆ ಅಸ್ತ್ರದಿಂದ ಎಲ್ಲ ಪಿಶಾಚಿಗಳು ಭೂಮಿಗೆ ಅಂಟಿಕೊಂಡವು. ಅವುಗಳಲ್ಲಿ ಎಂಟು ಮುಖ್ಯ ಪಿಶಾಚಿಗಳು ಮಾತ್ರ ಸ್ಪರ್ಶಾಸ್ತ್ರವನ್ನು ಲೆಕ್ಕಿಸಲಿಲ್ಲ. ಅವು ನಾಥನನ್ನು ಹಿಡಿಯುವದಕ್ಕಾಗಿ ತೀರ ಹತ್ತರ ಬಂದವು; ಆದರೆ ನಾಥನ ಸುತ್ತುಮುತ್ತು ವಜ್ರಾಸ್ತ್ರವಿದ್ದದರಿಂದ ಅವುಗಳ ಆಟವು ಸಾಗಲಿಲ್ಲ. ಆಗ ಅವು ವೇತಾಳನನ್ನು ಸ್ಮರಣಮಾಡಿದವು. ವೇತಾಳನು ಒಮ್ಮಿಂದೊಮ್ಮೆ ಪ್ರಕಟನಾಗಿ ನಾಥನ ವಜ್ರಾಸ್ತ್ರವನ್ನು ನುಂಗಿಬಿಟ್ಟನು. ಇದನ್ನು ಕಂಡು ನಾಥನು ವಾಸವಿಯನ್ನು ಬಿಟ್ಟನು. ವೇತಾಳ ಮತ್ತು ನಾಥನ ವಾಸವಿಶಕ್ತಿಗಳು ಹೋರಾಡಹತ್ತಿದವು. ಅವುಗಳ ಯುದ್ಧದ ಅಬ್ಬರಕ್ಕೆ ಏಳುಸಮುದ್ರಗಳು ಕಾದುಹೋದವು. ನಕ್ಷತ್ರಗಳು ಥಳಮಳಿಸಹತ್ತಿದವು. ವೇತಾಳನ ಸದಾರರು ಮಚ್ಛಿಂದ್ರನಾಥನ ಕಾಲುಗಳನ್ನು ಹಿಡಿದು ಪ್ರತಿಬಂಧ ಮಾಡಲಿಕ್ಕೆ ಉಪಕ್ರಮಿಸಿದರು. ನಾಥನು ಅಷ್ಟರಲ್ಲಿ

ಚಾಪಲ್ಯದಿಂದ ಪುನಃ ವಜ್ರಾಸ್ತ್ರವನ್ನು ಜಪಿಸಿದನು. ಮತ್ತು ದಾನವಾಸ್ತ್ರ ಜಪಿಸಿ ಒಂದರಹಿಂದೆ ಒಂದರಂತೆಮಧು, ತ್ರಿಪುರ, ಕುಂಭಕರ್ಣಾದಿ ಏಳು ಜನ ದಾನವರನ್ನು ನಿರ್ಮಾಣ ಮಾಡಿದನು. ಘೋಟಿಂಗ, ಮ್ಹಮುದಾ, ಮುಂಜಾ, ಇವರೇ ಮೊದಲಾದವರೊಡನೆ ದಾನವರ ಕುಸ್ತಿಗೆ ಪ್ರಾರಂಭ ವಾಯಿತು.

ಮುಷ್ಟಿ ಪ್ರಹಾರದಿಂದ ಎಷ್ಟೋ ಪಿಶಾಚಿಗಳು ಮೂರ್ಛಿತವಾದವು ಕಡೆಗೆವೇತಾಳಗಣವನ್ನು ಜರ್ಜರವಾಗಿ ಮಾಡಿ ಆ ದಾನವರು ಗುಪ್ತರಾದರು. ನಾಥನು ಪುನಃ ಸಮಯವನ್ನು ಸಾಧಿಸಿ ವೇತಾಳರಾಜನ ಮೇಲೆ ವಾಸವಿ ಯನ್ನು ನೂಕಿದನು. ಆ ವಿಚಿತ್ರ ಶಕ್ತಿಯ ಅಬ್ಬರಕ್ಕೆ ವೇತಾಳನು ಮೂರ್ಛಿತನಾದನು. ಮುಂದೆ ಸ್ವಲ್ಪ ವೇಳೆಯಲ್ಲಿ ವೇತಾಳನು ತನ್ನ ಸರ ದಾರ ಸಹಿತನಾಗಿ ಸಾವಧನಾದನು. ಬಳಿಕ ಎಲ್ಲರು ನಾಥನ ಮೇಲೆ ಪುನಃ ಸಾಗಿಹೋದರು. ಅಷ್ಟರಲ್ಲಿ ನಾಥನು ವಾತಾಕರ್ಷಕ ಮಂತ್ರ ಜಪಿಸಿ ವಿಭೂತಿಯನ್ನು ತೂರಿದನು. ಕೂಡಲೆ ಪಿಶಾಚಿಗಳ ಪ್ರಾಣವಾಯುವು ಅಪಹರಿಸಲ್ಪಟ್ಟಿತು. ಪಿಶಾಚಿಗಳು ನಿರ್ವೀರ್ಣ್ಣವಾದವು.

ಬಳಿಕ ಅವು ನಾಥನಿಗೆ ಶರಣು ಬಂದವು, ಅವು ಕೈಜೋಡಿಸಿಕೊಂ ಡು ನಾಥನಿಗೆ ಹೇಳಿಕೊಂಡದ್ದೇನಂದರೆ;—"ಹೇ ತಪೋಧನ, ನಮ್ಮ ಪರಾ ಕ್ರಮವು ಇಲ್ಲಿಗೆ ತೀರಿತು. ಹೇ ಸರ್ವಜ್ಞನೇ, ನಮ್ಮನ್ನು ಸಂರಕ್ಷಿಸು. ನಾವು ಅನನ್ಯರಾಗಿ ನಿನಗೆ ಶರಣು ಬಂದಿದ್ದೇವೆ. ನಮ್ಮ ಪ್ರಾಣವನ್ನು ಉಳಿಸು. ಶುಕ್ರನು ಹೇಗೆ ಕಚನಿಗೆ ಸಂಜೀವಿನಿ ಮಂತ್ರವನ್ನು ದಾನ ಮಾಡಿದನೋ ಅದರಂತೆ ನೀನು ನಮಗೆ ಜೀವದಾನಕೊಡು; ನೀನು ಪ್ರತ್ಯಕ್ಷ ನಾರಾಯಣನಿರುವಿ; ಇದನ್ನು ತಿಳಿಯದೆ ನಾವು ಯುದ್ಧಮಾಡಿದೆವು; ಆಕಾ ಶದಲ್ಲಿ ಸಂಚರಿಸುವ ಪಕ್ಷಿಗಳು ಗರ್ವದಿಂದ ಉಬ್ಬಿ ಸೂರ್ಯನ ಎದುರಿಗೆ ಶೌರ್ಯತೋರಿಸುವ ಪ್ರಯತ್ನ ಮಾಡಿದಂತೆ ನಾವು ನಿನ್ನಂಥ ತೇಜಸ್ವಿಯ ಮುಂದೆ ಪ್ರತಾಪತೋರಿಸುವ ಮೂರ್ಖತನ ಮಾಡಿದೆವು. ನಮ್ಮ ಅಪರಾಧ ಕ್ಷಮಿಸಿ ನಮ್ಮ ಮೇಲೆ ಕೃಪೆಮಾಡು. ನೀನು ನಮ್ಮಮೇಲೆ ಉದಾರತನ ತೋರಿಸಿದರೆ ನಾವು ಜಗತ್ತಿನಲ್ಲಿ ನಿನ್ನ ಕೀರ್ತಿಯನ್ನು ಪಸರಿಸುವೆವು. ನಾವು ಎಲ್ಲ ಪಿಶಾಚಿಗಳೂ ನಿನಗೆ ಅನುಕೂಲರಾಗುವೆವು. ಯಮನ ದೂತರು

ಯಮನ ಮುಂದೆ ಧಾವಿಸುವಂತೆಯೂ, ವಿಷ್ಣುಗಣವು ಅವನ ಆಜ್ಞೆಯನ್ನು ಪಾಲಿಸುವಂತೆಯೂ ನಾವು ನಿನ್ನ ಆಜ್ಞೆ ಪಾಲಿಸುತ್ತೇವೆ. ನಮ್ಮ ಈ ಮಾತನ್ನು ಅಸತ್ಯವಾಗಿ ಎಣಿಸಬೇಡ. ನಾವು ಒಂದುವೇಳೆ ಅಸತ್ಯ ಮಾತನಾಡಿದರೆ ನಮ್ಮ ಎಲ್ಲ ಪೂರ್ವಜರು ನರಕದಲ್ಲಿ ಬಿದ್ದಾರು; ನಮಗೆ ಪಂಚಮಹಾಪಾತಕ ಬರಲಿ; ನಾವು ಲೀನರಾಗಿದ್ದೇವೆ. ನಮ್ಮ ಮೇಲೆ ವಿಶ್ವಾಸವಿಡು. ಈಗ ನಮ್ಮ ಮೇಲೆ ದಯಮಾಡು.

ಅವರ ಲೀನತೆಯನ್ನು ಕಂಡು ನಾಥನ ಮನಕರಗಿತು. ಅವನು ಅವರಿಂದ ತನ್ನ ಶಾಬರೀ ಕವಿತ್ವಕ್ಕೆ ಸಹಾಯ ಮಾಡುವ ವಚನ ತೆಗೆದುಕೊಂಡನು. ಆ ಮೇಲೆ ನಾಥನು ವಿಭಕ್ತಅಸ್ತ್ರವನ್ನು ಜಪಿಸಿ ಎಲ್ಲ ಭೂತಗಳನ್ನು ಬಿಡಿಸಿದನು. ಬಳಿಕ ಎಲ್ಲ ಪಿಶಾಚಿಗಳು ನಾಥನಿಗೆ ನಮಸ್ಕಾರ ಮಾಡಿ ಅವನ ಮುಂದೆ ಕೈಮುಗಿದುಕೊಂಡು ನಿಂತವು. ಆಗ ಮಚ್ಛಿಂದ್ರನು ಅವಕ್ಕೆ ಹೋಗಲು ಅಪ್ಪಣೆ ಕೊಟ್ಟನು. ಅವು ನಾಥನನ್ನು ನಮಿಸಿ ಹೊರಟು ಹೋದವು.

---

# ಅಧ್ಯಾಯ ೮

## ಕಾಲಿಕಾಸ್ತ್ರ ಪ್ರಾಪ್ತಿ.



ಬಾರಾಮಲ್ಲಾಗತೀರ್ಥದಲ್ಲಿ ಪಿಶಾಚಿಗಳೊಡನೆ ಯುದ್ಧಮಾಡಿ ಜಯಶಾಲಿಯಾದ ಬಳಿಕ ಮಚ್ಛಿಂದ್ರನಾಥನು ಕುಮಾರ ರೈವತನ ದರ್ಶನಕ್ಕೆ ಹೋದನು. ಅಲ್ಲಿಂದ ಅವನ ಕೊಂಕಣಪ್ರಾಂತದಲ್ಲಿ ಶೇರಿ ಅಡುಳ ಎಂಬ ಊರಲ್ಲಿ ಇಳಿದುಕೊಂಡನು. ಆ ಗ್ರಾಮದ ಹೊರಗೆ ಒಂದು ಕಾಲಿಕಾದೇವಿಯ ದೇವಾಲಯವಿತ್ತು. ಮಚ್ಛಿಂದ್ರನಿಗೆ ಆ ಸಂಗತಿ ಗೊತ್ತಾಗಲು ಅವನು ದುರ್ಗೆಯ ದರ್ಶನಕ್ಕಾಗಿ ಹೋದನು. ಆ ಕಾಲಿಕೆಯು ಪ್ರತ್ಯಕ್ಷ ಶಂಕರನ ಆಜ್ಞೆಯಿಂದಲೇ ಆ ಸ್ಥಳದಲ್ಲಿ ವಾಸಮಾಡಿದ್ದಳು. ಒಮ್ಮೆ ಮದೋನ್ಮತ್ತ ರಾಕ್ಷಸರಿಗೂ ಶಂಕರನಿಗೂ ಯುದ್ಧವಾಯಿತು. ಆ

ಕಾಲಕ್ಕೆ ಶಂಕರನು ಕಾಲಿಕಾಸ್ತ್ರದಿಂದ ರಾಕ್ಷಸರನ್ನು ಸಂಹರಿಸಿದನು. ಆ ಕಾಲಿಕಾಸ್ತ್ರದ ಅಧಿದೈವತೆಯಾದ ಕಾಲಿಕಾಂಬೆಗೆ ವಿಶ್ರಾಂತಿ ದೊರೆಯು ಲೆಂದು ಶಂಕರನು ಆಕೆಯನ್ನು ಇಲ್ಲಿ ಸ್ಥಾಪಿಸಿದ್ದನು. ಈ ಕಾಲಿಕಾದೇವ ತೆಯು ಅತಿಶಯ ಉಗ್ರವಿರುವದೆಂಬ ಖ್ಯಾತಿಯನ್ನು ಮಚ್ಛೇಂದ್ರನು ಕೇಳಿ ದ್ದನು. ಮಚ್ಛೇಂದ್ರನು ಕಾಲಿಕೆಯ ದೇವಾಲಯದಲ್ಲಿ ಪ್ರವೇಶ ಮಾಡಿ ಅವಳಿಗೆ ನಮಸ್ಕಾರ ಮಾಡಿದನು. ಆ ಮೇಲೆ ಆ ದೇವಿಯನ್ನು ಕುರಿತು- "ಜಗದಂಬೇ, ನೀನು ನನ್ನ ಕವಿತ್ವಕ್ಕೆ ಸಹಾಯ ಮಾಡು. ನೀನು ನನಗೆ ವರಕೊಟ್ಟು ನನ್ನ ವಿದ್ಯೆಯನ್ನು ಗೌರವಿಸುವದಕ್ಕಾಗಿ ನನ್ನ ಕೈಯಲ್ಲಿ ವಾಸ ಮಾಡು'' ಎಂದು ಪ್ರಾರ್ಥಿಸಿದನು.

ಆ ಮಹಾಕಾಲಿಯು ಶಂಕರನ ಸೇವೆಯನ್ನು ಮಾಡಿ ಬಹಳ ಬೇಸತ್ತಿ ದ್ದಳು. ಆದ್ದರಿಂದ ಅವಳು ಮಚ್ಛೇಂದ್ರನ ಈ ಮಾತನ್ನು ಕೇಳಿ ಬಹಳ ವಾಗಿ ಸಂತಪ್ತಳಾದಳು. ಆಗ ಅವಳು ನಾಥನನ್ನು ಕುರಿತು—"ಹೇ, ನಷ್ಟಪಾಪೀ ಪುರುಷನೇ, ನಾನು ಶಂಕರನ ಕೈಯಲ್ಲಿರುವಾಗ ಕೆಲಸ ಮಾಡಿ ದಣಿದಿದ್ದೇನೆ. ಹೀಗಿರಲು ನೀನು ನನಗೆ ದುಃಶಬ್ದದಿಂದ ತಾಡನ ಮಾಡುತ್ತಿ ರುವೆ; ಇದು ಒಳ್ಳೇದಲ್ಲ. ನೀನು ಕವಿತ್ವ ಮಾಡಿ ನನ್ನ ವಿದ್ಯೆಯ ಅಪ ಮಾನ ಮಾಡಬೇಕೆನ್ನುತ್ತೀ; ಹೇ ದುಷ್ಟಬುದ್ಧಿ ನಾಥನೇ, ನಾನು ಈ ನಿವಾಂತಸ್ಥಳದಲ್ಲಿ ಬಂದು ಸ್ವಸ್ಥವಾಗಿ ಕುಳಿತಿರಲು ನೀನು ಇಲ್ಲಿಗೆ ಬಂದು ನನಗೆ ಯಾಕೆ ತ್ರಾಸ ಕೊಡುತ್ತೀ; ನೀನು ಈಗಲೇ ಹೊರಹೊರಡು; ಇಲ್ಲ ದಿದ್ದರೆ ಶಿಕ್ಷೆಗೆ ಗುರಿಯಾಗುವಿ ಎಂದಳು.

ದೇವಿಯ ಈ ಆತ್ಮಸ್ತುತಿಯನ್ನು ಕೇಳಿ ಮಚ್ಛೇಂದ್ರನು ನುಡಿದ ನೇನಂದರೆ—"ಜಗದಂಬೆ, ಪತಂಗಕ್ಕೆ ನನ್ನನ್ನು ಹೋಲಿಸಬೇಡ. ನೀನು ನನ್ನನ್ನು ಕ್ಷುದ್ರನೆಂದು ಭಾವಿಸಬೇಡ. ಸೂರ್ಯಬಿಂಬವು ಸಣ್ಣದಾಗಿ ಕಂಡರೂ ಹೇಗೆ ತನ್ನ ತೇಜದಿಂದ ಎಲ್ಲ ಜಗತ್ತನ್ನೂ ಬೆಳಗುತ್ತದೋ ಹಾಗೆ ನಾನು ನನ್ನ ಪರಾಕ್ರಮದಿಂದ ಜಗತ್ತನ್ನು ದಂಗು ಬಡಿಸುವೆನು. ಅರ್ಜು ನನು ತನ್ನ ಪ್ರತಾಪದಿಂದ ಮಾರುತಿಯನ್ನು ತನ್ನ ರಥದ ಮೇಲೆ ಕೂಡ್ರಿಸಿ ಕೊಂಡು ಕೀರ್ತಿಶಾಲಿಯಾದಂತೆ ದತ್ತಾತ್ರಯನ ಶಿಷ್ಯನಾದ ನಾನು ಈ ವೇಳೆಯಲ್ಲಿ ನಿನ್ನನ್ನು ಗೆದ್ದು ನಿನ್ನಿಂದ ವರವನ್ನು ಪಡೆದು ನಿರ್ಮಲಕೀರ್ತಿ

ಯನ್ನು ಭೂಮಂಡಲದಲ್ಲಿ ಹಬ್ಬಿಸುವೆನು. ಸವ್ವನೆ ಹೋಗಲು ನಾನು ಬಡಜೋಗಿಯೇ!''

ನಾಥನ ಗರ್ವೋಕ್ತಿಗಳನ್ನು ಕೇಳಿ ದೇವಿಯು ಮತ್ತಿಷ್ಟು ಸಂತಪ್ತಳಾದಳು. ಅವಳು ಪುನಃ ಅವನನ್ನು ಧಿಕ್ಕರಿಸಿ—ಭ್ರಷ್ಟಾ, ನೀನು ನಾಥ ಪಂಥದ ಆಯುಧಗಳನ್ನು ತೆಗೆದುಕೊಂಡಿರುವಿ, ಹಣೆಗೆ ಸಿಂದೂರ ಹಚ್ಚಿರುವಿ; ನಿನ್ನ ಈ ವೇಷಕ್ಕೆ ನಾನ ಹೆದರವದಿಲ್ಲ. ನೀನು ದೊಡ್ಡ ದೊಡ್ಡ ಮಾತುಗಳನ್ನು ಆಡುತ್ತಿರುವಿ. ಆದರೆ ನಿನ್ನ ನಿಜಯೋಗ್ಯತೆಯು ನನಗೆ ಗೊತ್ತಿರುವದು. ನಿನ್ನ ಉತ್ಪತ್ತಿಯು ನನಗೆ ಗೊತ್ತಿದೆ ಹೇಳಿ-ಕೇಳಿ ನೀನು ಮೀನ ಬಲೆಗಾರನ ಮಗನು; ಹೊಟ್ಟೆಯ ಪಾಡಿಗಾಗಿ ಮೀನ ಹಿಡಿಯುವ ಉದ್ಯೋಗಬಿಟ್ಟು ನೀನು ಈ ಅಸ್ತ್ರವಿದ್ಯೆಯ ಬೆನ್ನ ಹತ್ತಿ ಯಾಕೆ ತಿರುಗುತ್ತೀ? ಎಲೋ ನರಿಯೊಡನೆ ಕಾದಿದರೆ ಏನು ಪ್ರಯೋಜನ? ನಿನ್ನ ಅಬ್ಬರಕ್ಕೆ ನಾನು ಮೋಸ ಹೋಗುವದಿಲ್ಲ; ನಿನ್ನ ಎಲ್ಲ ಗರ್ವವು ನಿನ್ನಲ್ಲಿಯೇ ಇರಲಿ. ನೀನು ಪಿಶಾಚಿಗಳನ್ನು ಗೆದ್ದೆನೆಂದು ಬಹಳ ಏರಿರುವಿ; ಆದರೆ ಈ ಗರ್ವವನ್ನು ತೆಗೆದು ಹಾಕು. ನಾನು ಶಂಕರನ ಅಸ್ತ್ರವಾಗಿದ್ದೇನೆ. ನನ್ನ ಮುಂದೆ ನಿನ್ನ ಆಟ ನಡೆಯಲಾರದು. ಎಲೋ, ನಾನು ಕಣ್ಣು ತೆಗೆದರೆ ಎಲ್ಲ ಬ್ರಹ್ಮಾಂಡವು ಸುಟ್ಟು ಬೂದಿಯಾಗುವದು. ಹೀಗಿರಲು ನನ್ನನ್ನು ಸೋಲಿಸಲು ನೀನೆಷ್ಟರವನು? ಎಂದು ಮಾತನಾಡಿದಳು.

ದೇವಿಯ ಈ ಮಾತಿಗೆ ಪ್ರತ್ಯುತ್ತರವಾಗಿ ನಾಥನು ಒಂದೇ ಮಾತನ್ನಾಡಿದನು. ಏನಂದರೆ—ಬಲಿರಾಜನು ವಾಮನನನ್ನು ನೊಣದಂತೆ ತಿಳಿದನು; ಆದರೆ ಆ ನೊಣದಂತಿರುವ ವಾಮನನೇ ಬಲಿಯನ್ನು ಪಾತಾಳಕ್ಕೆ ಮೆಟ್ಟಿದನು. ಇದನ್ನು ನೀನು ಸ್ಮರಿಸಿಕೋ'' ಈ ಬಗೆಯ ಮಾತುಗಳಿಂದ ಅವರಿಬ್ಬರು ಸಂತಾಪಗೊಳ್ಳಲು ಕ್ರೋಧರೂಪೀ ಅಗ್ನಿಯು ಪ್ರಜ್ವಲಿಸಿತು. ತನ್ನ ಕೋಪಾಗ್ನಿಯಿಂದ ಮಚ್ಛಿಂದ್ರನನ್ನು ಭಸ್ಮ ಮಾಡಲಿಕ್ಕೆ ಸಿದ್ಧಳಾದಳು. ಮಚ್ಛಿಂದ್ರನೂ ಟೊಂಕ ಕಟ್ಟಿದನು.

ಮಚ್ಛಿಂದ್ರನ ಯುದ್ಧದ ಸಿದ್ಧತೆಯನ್ನು ಕಂಡು ಆ ಮಹಾಕಾಳಿಯು ಅತಿಶಯವಾಗಿ ಸಂತಪ್ತಳಾದಳು ಆಕೆಯು ಮಿಂಚಿನಂತೆ ಕಡಕಡ ಶಬ್ದಮಾಡಲಾರಂಭಿಸಿದಳು. ಆ ಭೀಷಣವಾದ ಧ್ವನಿಯಿಂದ ಪರ್ವತಗಳು ನಡುಗ

ಲಾರಂಭಿಸಿದವು; ಭೂಮಾತೆಯು ನಡುಗಿದಳು. ಎಂಟು ದಿಕ್ಕುಗಳ ಪಾಲಕರಿಗೆ ಮರಣಕಾಲದಂತೆ ಭಾಸವಾಯಿತು. ಮಹಾಸಾಗರದನೀರು ಉಕ್ಕೇರಿತು. ಸರ್ವತ್ರ ಹಾ, ಹಾ, ಕಾರವೆದ್ದಿತು. ಆಗ ದೇವಿಯು ಮಚ್ಛಿಂದ್ರನನ್ನು ಕುರಿತು—ಜೋಗೀ ನಿನ್ನ ಪ್ರಾಣವನ್ನು ಸಂಬಾಳಿಸಿಕೋ. ನೀನು ನನ್ನ ಕ್ರೋಧಾಗ್ನಿಯನ್ನು, ಪ್ರದೀಪ್ತ ಮಾಡಿರುವಿ. ಈ ಕಾಲಕ್ಕೆ ನೀನು ನಿನ್ನ ಗುರುವಿನ ಸ್ಮರಣ ಮಾಡು. ವಜ್ರಾಸ್ತ್ರದಿಂದ ಪರ್ವತಗಳು ಚೂರಾಗುವಂತೆ ನನ್ನ ಹೊಡತಕ್ಕೆ ನೀನು ಚೂರಾಗುವಿ ಎಂದಳು ದೇವಿಯು ಈ ಮಾತಿಗೆ ಮಚ್ಛಿಂದ್ರನು ನಕ್ಕು—ದೇವೀ, ವೃಥಾ ಪೌರುಷವನ್ನು ಕೊಚ್ಚಿಕೊಳ್ಳಬೇಡ; ಆತ್ಮಸ್ತುತಿಯು ಮಹಾ ಪಾಪವು; ನಿನಗೆ ನನ್ನ ಸಾಮರ್ಥ್ಯವನ್ನು ತೋರಿಸುತ್ತೇನೆ ಜಾಗರೂಕಳಾಗಿರು ಎಂದನು.

ಈ ಪ್ರಕಾರ ಮಚ್ಛಿಂದ್ರನು ದೇವಿಯನ್ನು ಕುರಿತು ನುಡಿದು ಬಗಲೊಳಗಿನ ಜೋಳಿಗೆಯಿಂದ ಭಸ್ಮವನ್ನು ತೆಗೆದನು. ಹಾಗು ಅದರಲ್ಲಿ ವಾಸವೀಶಕ್ತಿಯ ಪ್ರಯೋಗ ಮಾಡಿದನು. ಬಳಿಕ ಅವನು ಆ ಭಸ್ಮವನ್ನು ಗಗನ ಮಂಡಲದಲ್ಲಿ ಹಾರಿಸಿ ಬಿಟ್ಟನು. ಸಹಸ್ರ ಸೂರ್ಯರ ತೇಜಸ್ಸಿನಿಂದ ಯುಕ್ತವಾದ ಆ ವಾಸವೀಶಕ್ತಿಯು ಕಾಲಿಕಾರೂಪೀ ಕಗ್ಗತ್ತಲೆಯನ್ನು ನಾಶಪಡಿಸಲು ಸಿದ್ಧವಾಯಿತು. ಕೂಡಲೆ ವಾಸವೀಅಸ್ತ್ರಕ್ಕೂ ಕಾಲಿಕಾಸ್ತ್ರಕ್ಕೂ ಕಾಳಗವುಂಟಾಯಿತು. ಕಾಲಿಕಾಸ್ತ್ರವು ಶಂಕರನ ಕೈಯೊಳಗಿನದು; ವಾಸವೀಅಸ್ತ್ರವು ಇಂದ್ರನ ಕೈಯೊಳಗಿನದು; ಹೆಚ್ಚು ಹೇಳಲೇನು? ಅವುಗಳ ಯುದ್ಧವು ಭಯಂಕರವಾಯಿತು; ಜರಾಸಂಧ ಭೀಮ ಇವರಂತೆ ಆ ಅಸ್ತ್ರಗಳು ಒಂದನ್ನೊಂದು ನಾಶಪಡಿಸಲು ಪ್ರಯತ್ನಿಸತೊಡಗಿದವು; ಆ ಎರಡೂ ಶಸ್ತ್ರಗಳ ಪರಸ್ಪರ ಪ್ರಹಾರದಿಂದ ಎಲ್ಲ ದಿಕ್ಕುಗಳಿಗೆ ಬೆಂಕಿ ಹತ್ತಲು ಕಾಲಿಕಾಸ್ತ್ರವು ವಾಸವೀಶಕ್ತಿಯನ್ನು ನುಂಗಿ ಬಿಡುವಂತೆ ತೋರಿತು ಅದನ್ನು ಕಂಡು ಮಚ್ಛಿಂದ್ರನು ರುದ್ರಮಂತ್ರವನ್ನು ಜಪಿಸಿ ಹನ್ನೊಂದು ಮಂದಿ ರುದ್ರರನ್ನು ಪ್ರಕಟಮಾಡಿದನು. ಆಗ ಕಾಲಿಕಾಸ್ತ್ರವು ನಮ್ರವಾಗಿ ರುದ್ರರನ್ನು ಸ್ತುತಿಸಿ ಅವರನ್ನು ಪ್ರಸನ್ನವಾಗ ಮಾಡಿಕೊಂಡಿತು. ಏಕಾದಶರುದ್ರರು ಶಾಂತರಾದರು. ಆಗ ಮಚ್ಛಿಂದ್ರನು ಭಯಂಕರವಾದ ಧೂಮ್ರಾಸ್ತ್ರವನ್ನು ಬಿಟ್ಟನು. ಅದರ ಯೋಗದಿಂದ ಎಲ್ಲ ದಿಕ್ಕುಗಳು ಹೊಗೆಯಿಂದ

ಮುಚ್ಚಲ್ಪಟ್ಟವು. ಎಲ್ಲ ಕಡೆಯಲ್ಲಿಯೂ ಕತ್ತಲೆ ತುಂಬಿಕೊಂಡಿತು. ಈ ಸಮಯವನ್ನು ನೋಡಿ ಬಿಟ್ಟ ವಜ್ರಾಸ್ತ್ರವು ದೇವಿಯ ಮಸ್ತಕದ ಮೇಲೆ ಬಿದ್ದಿತು. ಆದರೆ ಆ ಚಪಲ ದೇವಿಯು ಆ ವಜ್ರಾಸ್ತ್ರವನ್ನು ಹಿಡಿದು ಶೈಲ ಪರ್ವತದ ಮೇಲೆ ಅಪ್ಪಳಿಸಿದಳು. ಆ ಆಘಾತದಿಂದ ಶೈಲಪರ್ವತವು ಚೂರು ಚೂರಾಯಿತು. ನಾಥನ ವಜ್ರಾಸ್ತ್ರವು ಈ ಪ್ರಕಾರ ನಾಶವಾಗಲು ಧೂಮ್ರಾಸ್ತ್ರವನ್ನು ಆ ದೇವಿಯು ನುಂಗಿ ಬಿಟ್ಟಳು. ಈ ಪ್ರಕಾರವಾದದ್ದನ್ನು ಕಂಡು ನಾಥನು ಸರ್ವತ್ರದಲ್ಲಿ ಜಯಶಾಲಿಯಾದ ವಾತಾಕರ್ಷಾಸ್ತ್ರದ ಜಪಮಾಡಿದನು, ಶುಕ್ರಾಚಾರ್ಯನಿಗೆ ಸಂಜೀವಿನೀ ಮಂತ್ರವು ಪ್ರಾಪ್ತವಾದಂತೆಯೂ ವಶಿಷ್ಠರಿಗೆ ಕಾಮಧೇನುವು ಸಿಕ್ಕಂತೆಯೂ ಶ್ರೀವಿಷ್ಣುವಿಗೆ ಸುದರ್ಶನ ಚಕ್ರವಿದ್ದಂತೆಯೂ ಮಚ್ಛಿಂದ್ರನಿಗೆ ವಾತಾಕರ್ಷಕ ಅಸ್ತ್ರವು ದೊರೆತಿತ್ತು. ಈ ಅಸ್ತ್ರವು ಕಾಲಿಕಾದೇವಿಯು ದೇಹದಲ್ಲಿ ಪ್ರವೇಶ ಮಾಡಿತು. ಕೂಡಲೆ ಅವಳ ಚಲನ ವಲನವು ಕುಂಠಿತವಾಯಿತು. ವಾತಾಕರ್ಷಣದಿಂದ ದೇವಿಯು ವ್ಯಾಕುಲಳಾಗಿ ಭೂಮಿಯ ಮೇಲೆ ಬಿದ್ದಳು. ಆಕೆಯ ಕಣ್ಣುಗಳು ಬೆಳ್ಳಗಾದವು. ಆಕೆಯ ದೀನವಾಣಿಯನ್ನು ಕೇಳಿ ಕೈಲಾಸನಾಥನಾದ ಶಂಕರನು ಸಮಾಧಿಯನ್ನು ಬಿಟ್ಟು ನಂದಿವಾಹನನಾಗಿ ಆ ಯುದ್ಧಭೂಮಿಗೆ ಪ್ರಾಪ್ತನಾದನು. ಶಂಕರನು ದೃಷ್ಟಿಗೆ ಬಿದ್ದ ಕೂಡಲೆ ಮಚ್ಛಿಂದ್ರನು ಧಾವಿಸಿ ಬಂದು ನಿಷ್ಕಾಮಭಾವನೆಯಿಂದ ಅವನ ಚರಣಗಳಮೇಲೆ ಮಸ್ತಕವನ್ನಿಟ್ಟನು. ಭಕ್ತಪ್ರಿಯನಾದ ಕೈಲಾಸಪತಿಯು ಮಚ್ಛಿಂದ್ರನನ್ನು ಹಿಡಿದೆತ್ತಿ ಬಹಳ ಪ್ರೇಮದಿಂದ ಆಲಿಂಗನ ಮಾಡಿದನು. ಮತ್ತು ಬಾಲಕನೇ, ನೀನು ಈ ದಿವಸ ಅದ್ಭುತ ಪರಾಕ್ರಮ ತೋರಿಸಿರುತ್ತೀ. ನೀನು ನನ್ನ ಕೈಯೊಳಗಿನ ಕಾಲಿಕಾಸ್ತ್ರವನ್ನು ಗೆದ್ದದ್ದರಿಂದ ನೀನು ಧನ್ಯನೇ ಸರಿ! ಎಂದು ನುಡಿದನು.

ಶಂಕರನ ಈ ಮಾತು ಕೇಳಿ ನಾಥನು ಕೈಮುಗಿದು ನುಡಿದನೇನಂದರೆ—ಹೇ ಆದಿನಾಥನೇ, ಇದೆಲ್ಲ ನಿನ್ನ ಕೃಪೆಯೇ ಸರಿ. ಬದರಿಕಾಶ್ರಮದಲ್ಲಿ ನೀನೇ ನನಗೆ ಶ್ರೀದತ್ತಾತ್ರೇಯರಿಂದ ಅನುಗ್ರಹ ಮಾಡಿಸಿದೆಯಲ್ಲವೆ? ಆದ್ದರಿಂದ ನನಗೆ ಬಂದ ಈ ಸಾಮರ್ಥ್ಯವು ನಿನ್ನದಲ್ಲದೆ ಇನ್ನಾರದು! ನಾಥನ ಈ ಮಾತನ್ನು ಕೇಳಿ ಶಂಕರನು ಸಮಾಧಾನಪಟ್ಟನು. ದೇವಿಯನ್ನು

ಸಾವಧಳನ್ನಾಗಿ ಮಾಡುವದಕ್ಕೆ ಅವನಿಗೆ ಅಜ್ಞೆಯನ್ನು ಕೊಟ್ಟನು. ಅದಕ್ಕೆ ನಾಥನು:—ಪರಮೇಶ್ವರನೇ, ನೀನು ನಿನ್ನ ವರದಹಸ್ತವನ್ನು ನನ್ನ ಮಸ್ತಕದ ಮೇಲೆ ಇಡು. ನಾನು ಮಾಡಿದಂಥ ಶಾಂಬರೀಕವಿಶ್ವಕ್ಕೆ ವರವನ್ನು ಕೊಟ್ಟು ಈ ಕಾಲಿಕಾಸ್ತ್ರವನ್ನು ನನಗೆ ಕೊಡು. ಈ ಕಾಲಿಕೆಯು ನನ್ನ ಎಲ್ಲ ಕಾರ್ಯಗಳನ್ನು ಸಿದ್ಧಿಗೆ ಒಯ್ಯಬೇಕು. ನನ್ನ ಮಂತ್ರವಿದ್ಯೆಗೆ ಪೂರ್ಣ ಅನುಕೂಲಳಾಗಿರಬೇಕು. ಈ ಪ್ರಕಾರ ವರಪ್ರದಾನ ಮಾಡು. ನಾನು ದೇವಿಯನ್ನು ಎಬ್ಬಿಸುವೆನು ಎಂದನು.

ಶಂಕರನು ನಾಥನ ಇಚ್ಛೆಯನ್ನು ಪೂರ್ಣಗೊಳಿಸುವದಕ್ಕಾಗಿ ಅಭಿವಚನಕೊಟ್ಟನು. ಕೂಡಲೆ ನಾಥನು ಶಂಕರನ ಚರಣಗಳ ಮೇಲೆ ಮಸ್ತಕವನ್ನಿಟ್ಟು ವಾತಪೂರಕ ಮಂತ್ರವನ್ನು ಜಪಿಸಿ ದೇವಿಯನ್ನು ಎಚ್ಚರಗೊಳಿಸಿದನು. ಹೀಗೆ ದೇವಿಯು ಎಚ್ಚತ್ತು ನೋಡಲು ಶಂಕರನು ಕಾಣಿಸಿದನು. ಆಗ ಅವಳು ಲಗಬಗೆಯಿಂದ ಈಶ್ವರನ ಚರಣಗಳನ್ನು ಗಟ್ಟಿಯಾಗಿ ಅಪ್ಪಿಕೊಂಡಳು.

ಆಗ ಶಂಕರನು ದೇವಿಯನ್ನು ಸಂತೈಸಿ ಆಕೆಗೆ ಮಚ್ಛಿಂದ್ರನ ಮುಖದಲ್ಲಿರುವಂತೆ ಆಜ್ಞಾಪಿಸಿದನು. ದೇವಿಯು ಅದನ್ನು ಆನಂದದಿಂದ ಒಪ್ಪಿಕೊಂಡಳು. ಅವಳು ಮಚ್ಛಿಂದ್ರನನ್ನು ಮುದ್ದಾಡಿ ಆಲಿಂಗಿಸಿ ಕಾಲಿಕಾಸ್ತ್ರವನ್ನು ಸಮರ್ಪಿಸಿದ್ದಲ್ಲದೆ ಸ್ಮರಣೆ ಮಾಡಿದಾಗ ನಿನಗೆ ದರ್ಶನ ಕೊಟ್ಟು ನಿನ್ನ ಕಾರ್ಯವನ್ನು ಯಶಸ್ವಿಯಾಗಿ ಮಾಡಿಕೊಡುತ್ತೇನೆಂದು ವರವನ್ನು ಕೊಟ್ಟಳು. ಬಳಿಕ ಶಂಕರನು ಮಚ್ಛಿಂದ್ರನನ್ನು ಆಶೀರ್ವದಿಸಿ ಸ್ವಸ್ಥಾನಕ್ಕೆ ಹೊರಟು ಹೋದನು. ಇತ್ತ ಮಚ್ಛಿಂದ್ರನು ದೇವಿಯ ಅಪ್ಪಣೆ ಪಡೆದು ಹರೇಶ್ವರನ ದರ್ಶನಕ್ಕಾಗಿ ನಡೆದನು.

---



# ಅಧ್ಯಾಯ ೭

## ವೀರಭದ್ರನ ಸ್ನೇಹಸಂಪಾದನ.

ಮಚ್ಛಿಂದ್ರನು ಹರೇಶ್ವರ ದರ್ಶನಕ್ಕೆ ಹೋಗಿರಲು, ಅಲ್ಲಿಗೆ ವೀರಭದ್ರನು ಬಂದನು. ಆ ಶಿವಪುತ್ರನು ಅತ್ಯಂತ ತೇಜಃಪುಂಜನಿದ್ದನು. ಅವನು ಕೊರಳಲ್ಲಿ ಬಂಗಾರದೊಂದು ಕೋಡನ್ನು ಧರಿಸಿದ್ದನು. ಅದರ ಸ್ವರವು ಸಾಧಕರಿಗೆ ವೇದಧ್ವನಿಯಂತೆ ಪವಿತ್ರವಾಗಿತ್ತು. ಡಮರು ಮೊದಲಾದವುಗಳು ಅವನ ಕೈಯಲ್ಲಿ ಒಪ್ಪುತ್ತಿದ್ದವು. ಅವನು ಬಿಲ್ಲನ್ನು ಧರಿಸಿದ್ದನು. ಅದು ಧಾತುನಿರ್ಮಿತವಾಗಿರದೆ ಭಕ್ತಿಯುಕ್ತ ವಿವೇಕದಿಂದ ನಿರ್ಮಿತವಾಗಿತ್ತು. ಈ ಪ್ರಕಾರ ದೇದೀಪ್ಯಮಾನನಾದ ವೀರಭದ್ರನು ಮಚ್ಛಿಂದ್ರನನ್ನು ನೋಡಿ ವಿಸ್ಮಯಗೊಂಡನು. ಆಗ ಆತನು ಮಚ್ಛಿಂದ್ರನನ್ನು ಕುರಿತು—ಮಹಾರಾಜ, ತಾವು ಯಾರು? ತಮ್ಮ ಪಂಥವೆಂತಹದು? ಎಂದು ಪ್ರಶ್ನೆ ಮಾಡಿದನು. ಅದಕ್ಕೆ ಮಚ್ಛಿಂದ್ರನು ತನ್ನ ಹೆಸರನ್ನು ಹೇಳಿ ತನ್ನ ಪಂಥವು ನಾಥಪಂಥವೆಂದು ಹೇಳಿದನು. ಅಷ್ಟರಿಂದ ಸಮಾಧಾನ ಪಡೆದ ವೀರಭದ್ರನು—ನಿನಗೆ ಉಪದೇಶವು ಯಾರಿಂದ ಪ್ರಾಪ್ತವಾಗಿದೆ. ನಿಮ್ಮ ಉದ್ಯೋಗವೇನು? ಎಂದು ಪ್ರಶ್ನೆ ಮಾಡಿದನು. ಅದಕ್ಕೆ—

ಮಚ್ಛಿಂದ್ರನು—ಶೈಲಿ-ಕಂಥಾ-ಮುದ್ರಾ ಇವೇ ಮೊದಲಾದವುಗಳನ್ನು ಧರಿಸುವದೇ ನಮ್ಮ ಪಂಥದ ಲಕ್ಷಣವು. ನಮ್ಮ ಉದ್ಯೋಗವೆಂದರೆ ಭೂತಲದ ಮೇಲೆ ಸಂಚಾರ ಮಾಡುವದು !!

ವೀರಭದ್ರನು—ಎಲೈ ನಾಥನೇ, ನಾನು ಕೇಳಿದ್ದನ್ನು ಬಿಟ್ಟು ಬೇರೆ ಸಂಗತಿಗಳನ್ನೇ ಹೇಳುತ್ತಿರುವೆಯಲ್ಲ? ಇರಲಿ, ನಿಮ್ಮ ಜನರು ಕಿವಿಗಳನ್ನು ಯಾಕೆ ಹರಿದುಕೊಳ್ಳುತ್ತಾರೆ? ಇದರ ವಿಚಾರವೇನಾದರೂ ನಿನಗೆ ಗೊತ್ತಿರುವದೇ?

ನಾಥನು—ಅದರ ವಿಚಾರವು ನನಗೆ ಗೊತ್ತಿರುವದಿಲ್ಲ. ನನ್ನ ಗುರುವಿಗೆ ಸಮ್ಮತವಾದ ಮತವು ಇದೊಂದೇ ಎಂದು ತಿಳಿಯುತ್ತೇನೆ. ಗುರುವು ಕೊಟ್ಟ ದೀಕ್ಷೆಯನ್ನು ಕಾಯುವದೂ ಗುರುವಿನ ಉಪದೇಶವನ್ನು ಪಾಲಿಸುವದೂ ಇಷ್ಟೇ ನನ್ನ ಕೆಲಸವು. ಇವುಗಳ ಹೊರತು ನಾನು ಬೇರೆ ಯಾವದನ್ನೂ ಮನ್ನಿಸುವದಿಲ್ಲ.

ವೀರಭದ್ರ—(ನಾಥನನ್ನು ಸಿಟ್ಟಿಗೆಬ್ಬಿಸುವದಕ್ಕಾಗಿ) ನೀವು ಪಾಖಂಡ ಮತವನ್ನು ಸ್ವೀಕರಿಸಿ ಹೀಗೆ ಪೃಥ್ವಿಯಲ್ಲಿ ಸಂಚರಿಸುವದು ನಿಜವಾಗಿಯೂ ನಿಂದ್ಯವಾಗಿರುವದು. ನೀವು ವೇದವಿಹಿತ ಮಾರ್ಗವನ್ನು ಧಿಃಕರಿಸಿ ಪಾಖಂಡಮತದ ಪ್ರಸ್ಥವನ್ನು ಬೆಳೆಯಿಸುತ್ತೀರಿ. ಇಂಥ ಪಂಥವನ್ನುಂಟು ಮಾಡಿದ ನಿನ್ನ ಗುರುವು ಕೇವಲ ದುರಾಚಾರಿಯೆಂದು ತಿಳಿಯಬೇಕು. ಕೇವಲ ತಮಗೆ ತಿಳಿದದ್ದನ್ನೇ ಒಂದು ಪಂಥವನ್ನಾಗ ಮಾಡುವದು ಬುದ್ಧಿವಂತರ ಲಕ್ಷಣವಲ್ಲ. ನೀವು ಈಗ ನಿಮ್ಮ ಈ ನಾಥಪಂಥೀಯ ಲಕ್ಷಣಗಳನ್ನು ತ್ಯಾಗಮಾಡಬೇಕು. ಇಲ್ಲವಿದ್ದರೆ ನಿಮ್ಮನ್ನು ಜನ್ಮಾಗಿ ದಂಡಿಸುವೆನು.

ವೀರಭದ್ರನ ಈ ಅಭದ್ರ ವಾಣಿಯನ್ನು ಕೇಳಿ ಮಚ್ಛೇಂದ್ರನ ಮನಸ್ಸು ಕ್ಷೋಭಿಸಿತು. ಆಗ ಅವನು ಸಂತಾಪದಿಂದ ನುಡಿದನೇನಂದರೆ—ಮೂರ್ಖಾ, ಎಂಥ ಅಸತ್ಯ ಸಂಭಾಷಣವನ್ನು ಮಾಡುತ್ತೀ; ಒಂದುನೊಣದಷ್ಟು ಬೆಲೆಯು ನಿನಗಿಲ್ಲದಿರಲು, ನೀನು ನನ್ನ ಗುರುವನ್ನು ಜರೆಯುವಿಯಾ? ದುಷ್ಟನೇ, ಪರರ ಮನಸ್ಸನ್ನು ನೋಯಿಸುವದು ಮಹಾ ಪಾಪಕರವಲ್ಲವೇ? ಇಂಥ ಉಪದೇಶವನ್ನೇ ನಿನ್ನ ಗುರುವು ಮಾಡಿದ್ದರೆ ಆ ನಷ್ಟ ಗುರುವನ್ನು ತ್ಯಜಿಸಿ ಬೇರೆ ಗುರುವನ್ನು ಆರಾಧಿಸು. ಅಧಮನೇ, ನಿನ್ನಂಥವರ ದರ್ಶನವಾದರೆ ಸ್ನಾನಮಾಡಬೇಕು. ಚಾಂಡಾಲಾ ನೀನು ಇಲ್ಲಿಂದ ಸುಮ್ಮನೆ ಎದ್ದು ಹೋಗು; ಕ್ಷಣಕಾಲ ವಿಲಂಬ ಮಾಡಿದರೆ ನಿನ್ನನ್ನು ಜನ್ಮಾಗಿ ಶಿಕ್ಷಿಸುವೆನು.

ಮಚ್ಛೇಂದ್ರನಾಥನ ಈ ದುರುಕ್ತಿಗಳನ್ನು ಕೇಳಿ ವೀರಭದ್ರನಿಗೆ ಹಿಡಿಸಲಾರದಷ್ಟು ಸಿಟ್ಟು ಬಂದಿತು. ಆಗ ಆತನು ನಾಥನನ್ನು ದಂಡಿಸುವದಕ್ಕಾಗಿ ಧನುಷ್ಯವನ್ನು ಸಜ್ಜುಗೊಳಿಸಿದನು. ವೀರಭದ್ರನ ಸಿದ್ಧತೆಯನ್ನು

ನೋಡಿ ನಾಥನು ಸಿಟ್ಟಿಗೆದ್ದು—ಮೂರ್ಖಾ, ಧನುಷ್ಯವನ್ನು ಎತ್ತಿ ಯುದ್ಧ ಮಾಡುವ ಭಯವನ್ನು ನನಗೆ ತೋರಿಸಬರುತ್ತೀಯಾ? ಬಹುರೂಪಿಗಳು ವೀರರ ವೇಷವನ್ನು ಧರಿಸಿದರೂ ಅವರಿಂದ ನಿಜವಾದ ವೀರರ ಕೆಲಸವಾಗುವದೇ? ಆಡಿನ ಕೊರಳಲ್ಲಿರುವ ಮೊಲೆಗಳು ಎಷ್ಟುದ್ದವಿದ್ದರೇನು? ಅವುಗಳಲ್ಲಿ ಎಂದಾದರೂ ಹಾಲು ಹೊರಡಬಹುದೇ? ಅದರಂತೆ ನಿನ್ನ ಈ ಪೌರುಷ ಪ್ರದರ್ಶನದ ಸ್ಥಿತಿಯಿರುತ್ತದೆ. ಒಂದು ಕ್ಷಣದಲ್ಲಿ ನಿನ್ನೀಬಿಂಕವನ್ನಿಳಿಸುವೆನು ಎಂದು ನುಡಿದನು.

ವೀರಭದ್ರನ ಸಿಟ್ಟು ಮತ್ತಿಷ್ಟು ಹೆಚ್ಚಾಯಿತು. ಅವನು ಸಂತಾಪದಿಂದ ನುಡಿದನೇನಂದರೆ—ಮಚ್ಛಿಂದ್ರಾ, ಬರಿಯ ಬಾಷ್ಕಳ ಮಾತನ್ನು ಯಾಕೆ ಆಡುತ್ತೀ; ನಿನ್ನ ಆಯುಷ್ಯವು ತೀರಿರುತ್ತದೆಂತಲೇ ನನ್ನ ಬಳಿಗೆ ಬಂದಿರುತ್ತೀ; ಇನ್ನೊಂದು ಅರಕ್ಷಣದಲ್ಲಿಯೇ ನಿನ್ನನ್ನು ಯಮಾಲಯಕ್ಕೆ ಅಟ್ಟುತ್ತೇನೆ. ನಿನ್ನ ಪಾಖಂಡೀ ಗುರುವು ಉಪದೇಶಿಸಿದ ರಾಮಮಂತ್ರವು ಸ್ಮರಣೆಗೆ ಬಂದರೆ ಪಠಿಸುತ್ತ ಕೂತುಕೋ;

ಮಚ್ಛಿಂದ್ರನ ಸಂತಾಪವು ಅತಿರೇಕವಾಯಿತು. ಆತನು ವೀರಭದ್ರನನ್ನು ಕುರಿತು—ಪಾಪೀ ಶಿವಪುತ್ರನೇ, ರಾಮಮಂತ್ರದ ಬೆಲೆಯು ಸಣ್ಣದೆಂದು ಭಾವಿಸುವೆಯಾ? ನಿನ್ನ ತಂದೆಯು ರಾಮಮಂತ್ರದಿಂದಲೇ, ಸಂಕಟ ಮುಕ್ತನಾಗಲಿಲ್ಲವೇ? ನಾನು ರಾಮಮಂತ್ರಪ್ರಭಾವದಿಂದ ನಿನ್ನ ಬಿಂಕವನ್ನಿಳಿಸುವೆನು. ಆದರೆ ರಾಮಮಂತ್ರಕ್ಕೆ ಹೊರತಾದ ನೀನು ಮಾತ್ರ ಅಧಃಪತನವನ್ನು ಹೊಂದುವಿ ಎಂದು ನುಡಿದು ಜೋಳಿಗೆಯೊಳಕ್ಕೆ ಕೈಹಾಕಿ ಒಂದು ಚಿಮಟಿಗಿ ಭಸ್ಮವನ್ನು ತೆಗೆದು ವಜ್ರ ಸ್ಥಾಪನೆಮಾಡುವದಕ್ಕೋಸ್ಕರ ಇಂದ್ರಾಸ್ತ್ರಮಂತ್ರವನ್ನು ಪಠಿಸಿ ಆ ಮಂತ್ರಪೂತ ಭಸ್ಮವನ್ನು ತನ್ನ ಸುತ್ತ ತೂರಿದನು. ಆ ಭಸ್ಮದ ಪ್ರಭಾವದಿಂದ ನಾಥನ ಸುತ್ತು ಮುತ್ತು ವಜ್ರದ ಸಲಾಕೆಗಳು ಸಿದ್ಧವಾಗಿ ನಿಂತವು. ಬಳಿಕ ಅವನು ಮತ್ತೊಂದು ಚಿಮಟಿಗಿ ಭಸ್ಮವನ್ನು ತೆಗೆಯಬೇಕೆಂದು ಜೋಳಿಗೆಯಲ್ಲಿ ಕೈಹಾಕುತ್ತಿರಲು ವೀರಭದ್ರನು ಒಂದು ನಿರ್ವಾಣಬಾಣವನ್ನು ಬಿಟ್ಟನು. ಅದು ಸೂ-ಸೂ ಶಬ್ದಮಾಡುತ್ತ ನಾಥನ ಪ್ರಾಣಹರಣ ಮಾಡುವದಕ್ಕೋಸ್ಕರ ಬಂದಿತು; ಆದರೆ ನಾಥನಿಂದ ನಿರ್ಮಿತವಾದ ವಜ್ರವು ಆ ಬಾಣವನ್ನು ಪುಡಿಮಾಡಿಬಿಟ್ಟಿತು.

ತನ್ನ ಬಾಣವು ನಿಷ್ಫಲವಾದದ್ದನ್ನು ಕಂಡು ವೀರಭದ್ರನ ಸಿರೊಚ್ಚಿಗೆದ್ದನು. ಅವನು ಕೂಡಲೆ ಶಕ್ತ್ಯಸ್ತ್ರವನ್ನು ಬಿಟ್ಟು ಅದರ ಬೆನ್ನ ಹಿಂದಿನಿಂದಲೇ ನಾಗಾಸ್ತ್ರವನ್ನು ಪ್ರಯೋಗಿಸಿದನು. ವೀರಭದ್ರನು ಬಿಟ್ಟ ಶಕ್ತ್ಯಸ್ತ್ರವು ಬಹು ಭಯಂಕರವಾದದ್ದಿತ್ತು. ಅದರ ಪ್ರಚಂಡವಾದ ಗರ್ಜನೆಗೆ ಹತದಿಕ್ಕುಗಳು ನಡುಗಿದವು ನಕ್ಷತ್ರಗಳು ಕಳಚಿ ಬೀಳುವವೋ ಎಂಬಂತೆ ಆಯಿತು. ಅದರ ಅಬ್ಬರಕ್ಕೆ ಧರಣಿಯು ನಡುಗಿತು. ಹೀಗೆ ಭಯಂಕರ ಸ್ವರೂಪವನ್ನು ತಾಳಿದ ಆ ಶಕ್ತ್ಯಸ್ತ್ರವು ನಾಥನ ವಜ್ರವನ್ನು ಮುರಿದೊಗೆದು ಒಮ್ಮೆಲೆ ನಾಥನ ಮೈಮೇಲೆ ಬಂದಿತು; ಅದರ ಹಿಂದಿನಿಂದ ನಾಗಾಸ್ತ್ರವೂ ಬಂದು ನಾಥನನ್ನು ಸುತ್ತುಗಟ್ಟಿತು. ಕೂಡಲೆ ಮಚ್ಛಿಂದ್ರನು ರುದ್ರಾಸ್ತ್ರವನ್ನು ಬಿಟ್ಟನು. ಏಕಾದಶರುದ್ರರು ಒಮ್ಮೆಲೆ ಪ್ರಕಟರಾಗಿ ಶಕ್ತ್ಯಸ್ತ್ರವನ್ನು ಧ್ವಂಸಮಾಡಿದರು. ಬಳಿಕ ಮಚ್ಛಿಂದ್ರನು ಗರುಡಾಸ್ತ್ರವನ್ನು ಪ್ರಯೋಗಿಸಿ ಸರ್ಪಾಸ್ತ್ರವನ್ನು ಸೋಲಿಸಿದನು. ಶಕ್ತ್ಯಸ್ತ್ರ-ಸರ್ಪಾಸ್ತ್ರಗಳು ನಾಶ ಹೊಂದಲು ವೀರಭದ್ರನು ಅಚ್ಚರಿಗೊಂಡು ವಾತಾಸ್ತ್ರವನ್ನು ಪ್ರಯೋಗಿಸಿದನು. ಮಚ್ಛಿಂದ್ರನು ಪರ್ವತಾಸ್ತ್ರವನ್ನು ಬಿಟ್ಟು ಎಲ್ಲ ವಾಯುವನ್ನು ತರಬಿ ಹಾಕಿದನು. ಬಳಿಕ ವೀರಭದ್ರನು ಒಮ್ಮೆಲೆ ಆಗ್ನ್ಯಸ್ತ್ರ-ಕಾಮಾಸ್ತ್ರ-ದಾನವಾಸ್ತ್ರಗಳನ್ನು ಪ್ರಯೋಗಿಸಿದನು. ಮಚ್ಛಿಂದ್ರನಾಥನಾದರೂ ಅತಿ ತ್ವರೆಯಿಂದ ಅವಕ್ಕೆ ಪ್ರತಿಯಾಗಿ ಜಲಾಸ್ತ್ರ, ರಕ್ಷ್ಯಸ್ತ್ರ, ದೇವಾಸ್ತ್ರಗಳನ್ನು ಬಿಟ್ಟು ಅವನ್ನು ಸೋಲಿಸಿದನು. ನಾಥನ ಈ ಯುದ್ಧಕೌಶಲ್ಯವನ್ನು ನೋಡಿ ವೀರಭದ್ರನಿಗೆ ಕೌತುಕವಾಯಿತು. ಬಳಿಕ ಅವನು ಬ್ರಹ್ಮಾಸ್ತ್ರವನ್ನು ಬಿಟ್ಟನು. ಕೂಡಲೇ ನಾಥನೂ ವಿಧಿಅಸ್ತ್ರವನ್ನು ಜಪಿಸಿ ಬಿಟ್ಟನು; ಅವೆರಡೂ ಅಸ್ತ್ರಗಳು ಒಂದನ್ನೊಂದು ನಮಸ್ಕರಿಸಿ ಅದೃಶ್ಯವಾದವು. ಆಗ ವೀರಭದ್ರನು ಕಾರ್ತಿಕೇಯಾಸ್ತ್ರವನ್ನು ಬಿಟ್ಟನು. ನಾಥನು ಸ್ತ್ರೀಅಸ್ತ್ರವನ್ನು ಜಪಿಸಿ ಕಾರ್ತಿಕೇಯಾಸ್ತ್ರವನ್ನು ಓಡಿಸಿದನು. ಬಳಿಕ ವೀರಭದ್ರನು ಖತಿಗೊಂಡು ಕಾಲಾಸ್ತ್ರವನ್ನು ಬಿಟ್ಟನು. ನಾಥನು ಮಾಯಾಪ್ರಳಯಾಸ್ತ್ರವನ್ನು ಬಿಟ್ಟನು. ನಾಥನ ಮಾಯಾಪ್ರಳಯಾಸ್ತ್ರದಿಂದ ಕಾಲನ ಸಂಹಾರವು ಆಗಹತ್ತಿತು. ಆಗ ದೇವತೆಗಳು ಗಾಬರಿಯಾದರು. ಇವರಿಬ್ಬರ ಈ ಬಗೆಯ ಯುದ್ಧದಿಂದ ಲೋಕಕ್ಕೆ ಕ್ಷೇಮವಿಲ್ಲೆಂದು ತಿಳಿದು ಭೂಮಿಯ ಮೇಲೆ

ಇಳಿದರು. ಹಾಗು ನಾಥನಿಗೆ ಮಾಯಾಪ್ರಳಯಾಸ್ತ್ರವನ್ನು ಉಪಸಂಹರಿಸಲು ವಿಜ್ಞಾಪಿಸಿದರು. ದೇವತೆಗಳ ಈ ಪ್ರಾರ್ಥನೆಯನ್ನು ಕೇಳಿ ನಾಥನು ವಾಸವೀನಾಮುಖ ಅಸ್ತ್ರವನ್ನು ಬಿಟ್ಟು ಮಾಯಾಪ್ರಳಯಾಸ್ತ್ರವನ್ನು ಹಿಂತಿರುಗಿ ತಕ್ಕೊಂಡನು ನಾಥನ ಈ ಸೌಜನ್ಯವನ್ನೂ ಅಸ್ತ್ರವಿದ್ಯಾನೈಪುಣ್ಯವನ್ನೂ ನೋಡಿ ದೇವತೆಗಳು ಸಂತೋಷಪಟ್ಟು ವೀರಭದ್ರನ ಬಳಿಗೆ ಹೋದರು. ಅವರು ಆತನಿಗೆ ನಾಥನು ಯಾರೆಂಬದನ್ನು ತಿಳಿಸಿ ಹೀಗೆ ಬಡಿದಾಡುತ್ತ ಕೂಡ್ರುವದು ವಿಹಿತವಲ್ಲೆಂದು ಹೇಳಿದರು. ದೇವತೆಗಳ ಮಧ್ಯಸ್ಥಿಕೆಯಿಂದ ನಾಥ ಹಾಗು ವೀರಭದ್ರರಲ್ಲಿ ಸಖ್ಯವು ಬೆಳೆಯಿತು. ವೀರಭದ್ರನು ನಾಥನಿಗೆ ದೃಢಾಲಿಂಗನವನ್ನು ಕೊಟ್ಟನು. ಮತ್ತು ನುಡಿದನೇನಂದರೆ—ಈ ನಾಥನು ಬಹಳ ಪರಾಕ್ರಮಿಯಿರುತ್ತಾನೆ. ಇದು ವರೆಗೆ ನಾನು ಅನೇಕ ಜನ ಮಹಾ ಮಹಾ ಯೋದ್ಧಾಗಳ ಸಂಗಡ ಯುದ್ಧ ಮಾಡಿರುವೆನು. ಆದರೆ ಅವರಲ್ಲಿ ಒಬ್ಬನೂ ನನ್ನ ಮುಂದೆ ಹೀಗೆ ಧೈರ್ಯದಿಂದ ನಿಂತಿರಲಿಲ್ಲ. ಈ ಮಚ್ಛಿಂದ್ರನು ಮಾತ್ರ ನನ್ನನ್ನು ತನ್ನ ಪೌರುಷದಿಂದ ಚಕಿತನನ್ನಾಗ ಮಾಡಿದನು. ಈತನೇ ಧನ್ಯನು; ಈತನಿಗೆ ಮಂತ್ರೋಪದೇಶ ಮಾಡಿದ ಗುರುವೂ ಧನ್ಯನಿರುವನು. ನಾನು ಈತನ ಇಚ್ಛೆಯು ಯಾವದಿದ್ದರೂ ಪೂರ್ಣಪಡಿಸುವೆನು.

ವೀರಭದ್ರನ ಈ ಮಾತಗಳನ್ನು ಕೇಳಿ ದೇವತೆಗಳಿಗೆ ಸಂತೋಷವಾಯಿತು. ಮಚ್ಛಿಂದ್ರನೂ ಸಮಾಧಾನ ತಾಳಿ ನುಡಿದನೇನಂದರೆ—"ಎಲೈ ಪರಮ ಭಾಗ್ಯಶಾಲಿಯಾದಶಿವಪುತ್ರನೇ, ನನ್ನ ವೇಷ-ಭೂಷಣಗಳ ಕಡೆಗೆ ಲಕ್ಷ್ಯಗೊಡಬೇಡ; ನನ್ನ ಉದ್ದೇಶದ ಕಡೆಗೆ ಲಕ್ಷ್ಯಗೊಡು. ನಾನು ಪರಹಿತಕ್ಕಾಗಿ ಶಾಬರಿ ಮಂತ್ರಗಳನ್ನು ರಚಿಸಿರುವೆನು. ಅವನ್ನು ಯಾರು ಪಠಿಸುವರೋ ಅವರಿಗೆ ನೀನು ಪ್ರಸನ್ನನಾಗಿ ಅವರ ಕಾರ್ಯವ ಮಾಡಿಕೊಡಬೇಕು. ಇದೇ ನಿನ್ನಲ್ಲಿ ನನ್ನ ಬೇಡಿಕೆಯು;''

ವೀರಭದ್ರನು ಮಚ್ಛಿಂದ್ರನ ಈ ಬೇಡಿಕೆಯನ್ನು ಮಾನ್ಯಮಾಡಿದನು. ಸಮಸ್ತ ದೇವತೆಗಳು ವೀರಭದ್ರನು ಈ ವರವನ್ನು ಕೊಟ್ಟದ್ದಕ್ಕೆ ಸಂತಸಪಟ್ಟರು. ಮತ್ತು ಬೇರೆ ಬೇರೆ ಮಂತ್ರದೇವತೆಗಳು ಆ ಆ ಮಂತ್ರಗಳಿಗೆ ಅಧೀನರಾಗಿರಲು ಒಪ್ಪಿಕೊಂಡರು. ಅಷ್ಟರಲ್ಲಿ ಬ್ರಹ್ಮ, ವಿಷ್ಣು ಮಹೇಶ್ವರರು ಅಲ್ಲಿ ಪ್ರಕಟರಾದರು. ಮಚ್ಛಿಂದ್ರನು ಅವರೆಲ್ಲರನ್ನು ನಮಸ್ಕರಿಸಿದನು.

ನಾಥನ ವಿನಯವನ್ನು ಕಂಡು ತ್ರಿಮೂರ್ತಿಗಳೂ ಸಂತುಷ್ಟರಾದರು. ಆಗ ಶ್ರೀವಿಷ್ಣುವು ಮಚ್ಛಿಂದ್ರನಿಗೆ ಚಕ್ರಾಸ್ತ್ರವನ್ನು, ಶಂಕರನು ತ್ರಿಶೂಲಾಸ್ತ್ರವನ್ನು ಕೊಟ್ಟರು. ಬ್ರಹ್ಮನು ಆತನಿಗೆ ವಾಕ್‌ಸಿದ್ಧಿಯನ್ನು ಕೊಟ್ಟು ಅವನಲ್ಲಿ ಶಾಪಸಾಮರ್ಥ್ಯವನ್ನುಂಟು ಮಾಡಿದನು. ಇಂದ್ರನು ವಜ್ರಾಸ್ತ್ರವನ್ನು ಕೊಟ್ಟನು. ವರುಣನು ಜಲಾಸ್ತ್ರವನ್ನು ಸಮರ್ಪಿಸಿದನು. ಈ ಅಸ್ತ್ರದಿಂದ ಬೇಕಾದಲ್ಲಿ ನೀರು ಹೊರಡಿಸುವ ಸಾಮರ್ಥ್ಯವು ಪ್ರಾಪ್ತವಾಯಿತು. ಅಗ್ನಿಯು, ಬೇಕಾದಲ್ಲಿ ಅಗ್ನಿಯನ್ನು ಹುಟ್ಟಿಸುವಂಥ ವರವನ್ನು ಕೊಟ್ಟನು. ಅಶ್ವಿನೀಕುಮಾರರು ಮೋಹಿನೀಮಂತ್ರವನ್ನು ಉಪದೇಶಿಸಿದರು. ಈ ಪ್ರಕಾರ ಸಮಸ್ತ ದೇವತೆಗಳೂ ವರವನ್ನು ಕೊಟ್ಟು ತಮ್ಮ ತಮ್ಮ ಸ್ಥಳಗಳಿಗೆ ಹೋಗಲು ಸಿದ್ಧರಾದರು. ಆಗ ಮಚ್ಛಿಂದ್ರನು ಸುರನದಿಯ ಸ್ನಾನ ಮಾಡುವ ಇಚ್ಛೆಯನ್ನು ಪ್ರಕಟ ಮಾಡಿದನು. ಆತನ ಈ ಅಪೇಕ್ಷೆಯನ್ನು ತಿಳಿದು ಶ್ರೀವಿಷ್ಣುವು ಅವನನ್ನು ತನ್ನ ವಿಮಾನದಲ್ಲಿ ಕುಳ್ಳಿರಿಸಿಕೊಂಡು ವಿಷ್ಣುಲೋಕಕ್ಕೆ ಹೋದನು. ಅಲ್ಲಿ ನಾಥನು ಕೆಲದಿನ ವಾಸಿಸಿದನು. ಊಟ-ಉಡಿಗೆ-ಕೊಡುವದು-ನಿಲ್ಲುವದು ಎಲ್ಲ ಕೆಲಸಗಳನ್ನು ನಾಥನು ವಿಷ್ಣುವಿನ ಸಂಗಡ ಅವನ ಸರಿಸಮಾನನಾಗಿ ಮಾಡುತ್ತಿದ್ದನು. ಬಳಿಕ ನಾಥನು ವಿಷ್ಣುವಿನೊಡನೆ ಮೇರುಪರ್ವತಕ್ಕೆ ಹೋದನು. ಅಲ್ಲಿ ಆತನು ತನ್ನ ಪೂರ್ವಜನ್ಮದ ಸಮಾಧಿಯನ್ನು ನೋಡಿದನು. ಅನಂತರ ನಾಥನು ಕೈಲಾಸಕ್ಕೆ ಹೋದನು. ಶಂಕರನೊಡನೆ ಒಂದು ವರುಷದ ವರೆಗೆ ಅಲ್ಲಿದ್ದನು, ಇಂದ್ರನಿಗೆ ಮಚ್ಛಿಂದ್ರನ ಆದರಾತಿಥ್ಯ ಮಾಡಬೇಕೆಂಬ ಇಚ್ಛೆಯುಂಟಾದ್ದರಿಂದ ಅವನು ಕೈಲಾಸಕ್ಕೆ ಹೋಗಿ ನಾಥನನ್ನು ಪ್ರಾರ್ಥಿಸಿ ಅವನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋದನು. ಅಲ್ಲಿ ಅವನು ಕೆಲವು ದಿನಗಳ ವರೆಗೆ ಇರುತ್ತಿರಲು ಬ್ರಹ್ಮನು ನಾರದರ ಮುಖಾಂತರವಾಗಿ ಆಮಂತ್ರಣ ಕಳಿಸಿದನು. ನಾಥನು ಸತ್ಯಲೋಕಕ್ಕೆ ಹೋಗಿ ಅಲ್ಲಿ ಆರು ತಿಂಗಳುಗಳ ವರೆಗೆ ಇದ್ದನು.

ಈ ಮೇರೆಗೆ ನಾಥನು ದೇವ, ಗಂಧರ್ವ, ಯಕ್ಷ, ಕಿನ್ನರ ಮೊದಲಾದವರಲ್ಲಿ ಏಳು ವರುಷಗಳ ವರೆಗೆ ಆತಿಥ್ಯವನ್ನು ಹೊಂದಿ ಪುನಃ ಭೂಲೋಕಕ್ಕೆ ಬಂದನು. ಆತನು ತೀರ್ಥಯಾತ್ರೆಗಳನ್ನು ಮಾಡುತ್ತ ಕೇರಳದೇಶಕ್ಕೆ ಹೋದನು. ಅಲ್ಲಿಂದ ಮುಂದೆ ವಜ್ರವನಕ್ಕೆ ಬಂದನು. ಅಲ್ಲಿ ವಜ್ರಾಬಾಯಿ

ನಾಮಕ ದೇವತೆಯಿದ್ದಳು. ಮಚ್ಛೇಂದ್ರನು ದೇವಿಗೆ ಭಕ್ತಿಯಿಂದ ನಮಸ್ಕರಿಸಿ ಸ್ನಾನಾರ್ಥವಾಗಿ ಕುಂಡಗಳಲ್ಲಿ ಇಳಿದನು. ಅಲ್ಲಿ ಮುನ್ನೂರಾ ಅರವತ್ತು ಕುಂಡಗಳಿದ್ದವು. ಅವೆಲ್ಲ ಬಿಸಿನೀರಿನಿಂದ ಪೂರ್ಣ ತುಂಬಿದ್ದವು. ಆ ಬಿಸಿನೀರಿನ ಕುಂಡಗಳನ್ನು ನೋಡಿ ನಾಥನಿಗೆ ಪರಮಾನಂದವಾಯಿತು. ಆಗ ಅವನು ಅಲ್ಲಿಯ ಪೂಜಾರಿಗಳನ್ನು ಕುರಿತು—ಈ ಕುಂಡಗಳ ನೀರು ಬಿಸಿಯಾಕೆ? ಎಂದು ಕೇಳಿದನು ಆಗ ಆ ಪೂಜಾರಿಗಳು—ಇಲ್ಲಿ ಪೂರ್ವ ಕಾಲದಲ್ಲಿ ವಸಿಷ್ಠಋಷಿಗಳು ಯಜ್ಞಮಾಡಿದರು. ಆ ಯಜ್ಞಕ್ಕೋಸ್ಕರ ಸಮಸ್ತ ದೇವತೆಗಳೂ ಬಂದಿದ್ದರು; ಅವರ ಸ್ನಾನಕ್ಕೋಸ್ಕರ ವಸಿಷ್ಠರು ಈ ಬಿಸಿನೀರಿನ ಕುಂಡಗಳನ್ನು ನಿರ್ಮಾಣ ಮಾಡಿರುತ್ತಾರೆ. ಯಜ್ಞವು ಮುಗಿದು ಹೋದರೂ ಕುಂಡಗಳು ಸ್ಥಿರವಾಗಿ ಉಳಿದಿವೆ. ಎಂದು ಹೇಳಿದರು.

ಪೂಜಾರಿಗಳು ಹೇಳಿದ ಸಂಗತಿಯನ್ನು ಕೇಳಿ ನಾಥನಿಗೆ ಪರಮ ಸಂತೋಷವಾಯಿತು. ಅಲ್ಲಿ ತಾನೊಂದು ಕುಂಡವನ್ನು ನಿರ್ಮಿಸಬೇಕೆಂದು ಇಚ್ಛಿಸಿದನು; ಕೂಡಲೆ ಅವನು ಆ ಕ್ಷೇತ್ರದಲ್ಲಿ ಸರಸ್ವತೀತೀರದಲ್ಲಿರುವ ಒಂದು ವಿಶಾಲವಾದ ಬೈಲನ್ನು ನೋಡಿ ವರುಣಾಸ್ತ್ರವನ್ನು ಜಪಿಸಿದನು. ಮತ್ತು ಪಾತಾಳವನ್ನು ಭೇದಿಸಿ ಅಲ್ಲಿಂದ ಭೋಗವತಿಯ ನೀರನ್ನು ಮೇಲಕ್ಕೆ ತರಿಸಿದನು. ಆತನು ಜಪಿಸಿದ ಅಗ್ನಿಮಂತ್ರದಿಂದ ಆ ನೀರು ತಪ್ತವಾಗಿ ಮೇಲಕ್ಕೆ ಬಂದಿತು ನಾಥನು ತನ್ನ ತ್ರಿಶೂಲದ ಹಿಡಿಕೆಯಿಂದ ಭೂಮಿಗೆ ಹೊಡೆಯಲು ಅಲ್ಲಿ ಒಂದು ಕುಂಡವುತ್ಪನ್ನವಾಯಿತು. ಆ ತಪ್ತನೀರು ಕುಂಡದಲ್ಲಿ ಬರಲು ನಾಥನು ಸ್ನಾನ ಮಾಡಿದನು. ಮತ್ತು ಆ ನೀರಿನಿಂದ ವಜ್ರಾಬಾಯಿಗೆ ಸ್ನಾನ ಮಾಡಿಸಿದನು. ನಾಥನು ತನ್ನ ಪರಾಕ್ರಮದಿಂದ ಪಾತಾಳದಲ್ಲಿರುವ ಭೋಗವತಿಯ ನೀರಿನಿಂದ ಸ್ನಾನ ಮಾಡಿಸಿದ್ದಕ್ಕೆ ದೇವಿಯು ಸಂತುಷ್ಟಳಾದಳು ಅವಳು ನಾಥನನ್ನು ಬಹಳವಾಗಿ ಹೊಗಳಿದಳು. ಆಗ ನಾಥನು ದೇವಿಯ ಸಂಗಡ ಕೇವಲ ಸಖ್ಯದಿಂದ ವರ್ತಿಸಿ—ದೇವೀ ಜಗದಂಬೆ, ನಿನಗೆ ವಜ್ರಾಬಾಯಿ ಎಂಬ ನಾಮವು ಬರಲು ಕಾರಣವೇನೆಂದು ಕೇಳಿದನು. ನಾಥನ ಈ ಪ್ರಶ್ನೆಗೆ ದೇವಿಯು ಉತ್ತರ ಕೊಟ್ಟಿದ್ದೇನಂದರೆ—ಪ್ರಾಚೀನ ಕಾಲದಲ್ಲಿ ವಸಿಷ್ಠಋಷಿಗಳು ಇಲ್ಲಿ ಯಜ್ಞ ಮಾಡಿದಾಗ ದೇವೇಂದ್ರನು ಇಲ್ಲಿಗೆ ಬಂದನು. ಆದರೆ ವಸಿಷ್ಠಋಷಿಗಳು ಅವನಿಗೆ ಮಾಡತಕ್ಕಷ್ಟು

ಸನ್ಮಾನ ಮಾಡಲಿಲ್ಲ. ಆಗ ಆ ಮಾನೀದೇವೇಂದ್ರನು ಕ್ರುದ್ಧನಾಗಿ ಸಮಸ್ತ ಋಷಿಗಳನ್ನು ಸಂಹರಿಸಬೇಕೆಂದು ವಜ್ರವನ್ನು ಬಿಟ್ಟನು. ಆದರೆ ಇಂದ್ರನ ಈ ಅನ್ಯಾಯವನ್ನು ನಡಿಯಗೊಡಬಾರದೆಂದು ಶ್ರೀರಾಮನು ದರ್ಭೆಯನ್ನು ಮಂತ್ರಿಸಿ ಆ ಋಷಿಗಳ ಬಳಿಯಲ್ಲಿ ಸ್ಥಾಪಿಸಿದನು. ನಾನು ಆ ದರ್ಭೆಯಲ್ಲಿ ಶಕ್ತಿರೂಪದಿಂದ ಸೇರಿ ಇಂದ್ರನ ವಜ್ರವನ್ನು ನುಂಗಿದೆನು. ಇಂದ್ರನು ಮುಖಭಂಗಿತನಾಗಿ ರಾಮನನ್ನು ಪ್ರಾರ್ಥಿಸಿ ತನ್ನ ವಜ್ರವನ್ನು ಬೇಡಿದನು. ಶ್ರೀರಾಮನ ಆಜ್ಞೆಯಂತೆ ನಾನು ವಜ್ರವನ್ನು ತಿರುಗಿ ಕೊಟ್ಟೆನು. ಹೀಗೆ ನನ್ನಿಂದ ವಜ್ರವುನುಂಗಲ್ಪಟ್ಟದ್ದರಿಂದ ವಸಿಷ್ಠಋಷಿಗಳು ಸಂತುಷ್ಟರಾಗಿ ನನಗೆ ವಜ್ರಾಬಾಯಿ ಎಂದು ಕರೆದರು. ಮುಂದೆ ಶ್ರೀರಾಮನು ನನ್ನನ್ನು ಇಲ್ಲಿಯೇ ಸ್ಥಾಪಿಸಿದನು. !!

ದೇವಿಯು ಈ ಮಾತುಗಳನ್ನು ಕೇಳಿ ನಾಥನು ಸಂತುಷ್ಟನಾಗಿ ಆಕೆಯ ಆಜ್ಞೆಪಡೆದು ಅಲ್ಲಿಂದ ಹೊರಟನು. ಅವನು ಅನೇಕ ತೀರ್ಥ-ಯಾತ್ರೆಗಳನ್ನು ನೋಡುತ್ತ ಅಯೋಧ್ಯೆಗೆ ಹೋದನು.

---

# ಅಧ್ಯಾಯ ೮

## ಪಾಶುಪತರಾಜನಿಗೆ ಶ್ರೀರಾಮದರ್ಶನ.

ಮಚ್ಛೇಂದ್ರನಾಥನು ಶರಯೂ ನದಿಯಲ್ಲಿ ಸ್ನಾನಮಾಡಿ ಶ್ರೀರಾಮ ದರ್ಶನಕ್ಕಾಗಿ ದೇವಾಲಯಕ್ಕೆ ಹೋದನು. ಆದರೆ ಆ ದಿವಸ ಸೂರ್ಯ ವಂಶೀಯನೂ ಪ್ರಖ್ಯಾತನೂ ಆದ ಪಾಶುಪತರಾಜನು ಶ್ರೀರಾಮಚಂದ್ರನ ಪೂಜೆಗೋಸ್ಕರ ಬಂದದ್ದರಿಂದ ದೇವಾಲಯದ ಸುತ್ತುಮುತ್ತು ಅಸಂಖ್ಯಜನ ಕಾವಲುಗಾರರಿದ್ದರು. ಹತ್ತುಸಾವಿರ ಮಹಾರಥಿಕರು ತಮ್ಮ ಶಸ್ತ್ರಾಸ್ತ್ರ ಗಳನ್ನು ಝುಳಪಿಸುತ್ತ ಗುಡಿಯ ಸುತ್ತುವರೆದು ಪಹರೆಯನ್ನು ನಡಿಸಿದ್ದರು.

ನಾಥನು ದೇವಾಲಯದ ಒಳಗೆ ಪ್ರವೇಶ ಮಾಡಹೋಗಲು ಕಾವಲುಗಾರರು ಅವನನ್ನು ಕುರಿತು ಗದ್ದರಿಸಿ—"ಎಲೈ ಮೂರ್ಖಾ, ನೀನಾರು? ಹೀಗೇಕೆ ಒಳಗೆ ಪ್ರವೇಸಿಸುವೆ? ಕಿವಿಹರಕನಾದ ನಿನಗೆ ಸ್ವಲ್ಪವೂ ಬುದ್ಧಿಯಿದ್ದಂತೆ ತೋರಲಿಲ್ಲ. ನಾವಿಷ್ಟು ಜನರು ಇಲ್ಲಿ ಯಾಕೆ ಪಹರೆ ಮಾಡುತ್ತೇವೆಂಬ ದರ ಜ್ಞಾನವು ನಿನಗಿಲ್ಲವೆಂಬಂತೆ ತೋರುತ್ತಿದೆ. ಮೂರ್ಖಾ, ಪಾಶುಪತ ಮಹಾರಾಜನು ದೇವಪೂಜೆಗೆ ಕುಳಿತಿರುವನು. ಇದು ನಿನ್ನಂಥ ಪಶುವಿಗೆ ಹ್ಯಾಗೆ ತಿಳಿಯಬೇಕು? ಜೋಗೀ ಸುಮ್ಮನೆ ತಿರುಗಿ ಹೋಗು" ಎಂದು ನುಡಿದರು. ದ್ವಾರಪಾಲಕರೆಂದರೆ ಕೇವಲ ಕ್ಷುಲ್ಲಕರಿರುತ್ತಾರೆ. ಅವರು ದ್ವಾರವನ್ನು ಕಾಯುವ ನಾಯಿಗಳೇ ಸರಿ! ಅವರಿಗೆ ಮುಂದಿಯ ಯೋಗ್ಯತೆಯು ಸ್ವಲ್ಪಾದರೂ ತಿಳಿಯುವದಿಲ್ಲ. ಅವರು ಧರ್ಮಕ್ಕೆ ಪ್ರತಿಬಂಧ ಮಾಡುವರು. ನೂರು ಬ್ರಹ್ಮಹತ್ಯೆಗಳನ್ನು ಯಾವನು ಮಾಡುವನೋ ಅವನು ದ್ವಾರಪಾಲಕನಾಗಿ ಜನ್ಮಿಸುವನು. ದ್ವಾರಪಾಲಕನ ಕೆಲಸವು ಇಷ್ಟು ಹೀನತರದ್ದಾಗಿರುವದು. ಅವರು ತಮ್ಮ ರಾಕ್ಷಸೀ ಕೃತ್ಯದಿಂದ ಯಜಮಾನನನ್ನು ಸಹ ಪಾಪದಲ್ಲಿ ಕೆಡಹುವವರು. ಇರಲಿ.

ಈ ರೀತಿಯಾಗಿರುವ ಆ ಹೀನ ದ್ವಾರಪಾಲಕರು ತಿರಸ್ಕರಿಸಿ ಮಾತನಾಡಲು ಮಚ್ಛಿಂದ್ರನ ಕೋಪವು ಮಿತಿಮೀರಿತು. ಆದರೂ ಆ ತ್ರಿಕಾಲಜ್ಞನು ಆ ಕೋಪವನ್ನು ಉಪಸಂಹರಿಸಿ ಮನಸ್ಸಿನಲ್ಲಿ ಈ ರೀತಿ ಯೋಚಿಸಿದನು.—"ಇವರು ಹೇಳಿ ಕೇಳಿ ರಾಜಸೇವಕರು. ಇಂಥ ಕ್ಷುದ್ರ ಜನರ ಸಂಗಡ ವಾದಮಾಡುವದರಿಂದ ಪ್ರಯೋಜನವೇನು? ಪತಿವ್ರತೆಯು ಗಂಡನನ್ನು ಅನುಸರಿಸುವಂತೆಯೂ, ಸೂರ್ಯಕಿರಣವು ಸೂರ್ಯನನ್ನು ಅನುಸರಿಸುವಂತೆಯೂ, ನದಿಯು ಪಾತ್ರವನ್ನು ಹಿಡಿದು ಹೋಗುವಂತೆಯೂ ಈ ಜನರು ರಾಜಾಜ್ಞೆಗನುಸರಿಸಿ ನಡೆಯತಕ್ಕವರು. ಇವರಿಗೆ ಸ್ವಲ್ಪಾದರೂ ಸ್ವಾತಂತ್ರ್ಯವಿಲ್ಲ. ಪರರ ದಾಸ್ಯತ್ವವನ್ನು ಕೈಕೊಂಡ ಇವರೊಡನೆ ನನ್ನ ಕೆಲಸವೇನಿದೆ? ಮುಖ್ಯ ರಾಜನಿಗೆ ನನ್ನ ಸಾಮರ್ಥ್ಯವನ್ನು ತೋರಿಸಿದರೆ ಎಲ್ಲವೂ ತಾನೇ ಅಂಕಿತಕ್ಕೆ ಬರುವದು. ತಲೆಗೆ ಪೆಟ್ಟು ಹಾಕಿದರೆ ಸರ್ವ ಅವಯವಗಳು ಹ್ಯಾಗೆ ನಿಶ್ಚೇಷ್ಟಿತವಾಗುವವೋ, ಸೂರ್ಯನನ್ನು

ಮುಚ್ಚಿದರೆ ಕಿರಣಗಳು ಹ್ಯಾಗೆ ಲೋಪವಾಗುವವೋ ಹಾಗೆ ರಾಜನಿಗೆ ಪೆಟ್ಟು ಹಾಕಿದರೆ ಈ ಸೇವಕರು ತಾವೇ ಬೆಪ್ಪಾಗಿ ನಿಲ್ಲುವರು''

ಈ ಮೇರೆಗೆ ಯೋಚಿಸಿ ಮಚ್ಛಿಂದ್ರನು ಜೋಳಿಗೆಯಿಂದ ಒಂದು ಚಿಮಟಿಗೆ ಭಸ್ಮವನ್ನು ತಕ್ಕೊಂಡನು; ಹಾಗು ಅದನ್ನು ಸ್ಪರ್ಶಾಸ್ತ್ರದಿಂದ ಅಭಿಮಂತ್ರಿಸಿ ಅದನ್ನು ರಾಜನ ಮೇಲೆ ತೂರಿದನು. ಆ ಸಮಯದಲ್ಲಿ ರಾಜನು ಶ್ರೀರಾಮನ ಪೂಜೆ-ಆರತಿಗಳನ್ನು ಮುಗಿಸಿ ರಾಮಚಂದ್ರನ ಚರಣಗಳ ಮೇಲೆ ಮಸ್ತಕವನ್ನಿಟ್ಟಿದ್ದನು. ಅಷ್ಟರಲ್ಲಿ ಮಚ್ಛಿಂದ್ರನ ಮಂತ್ರಪೂತವಿಭೂತಿಯು ಅವನ ಸಮೀಪಕ್ಕೆ ಹೋಗಿ ಅವನನ್ನು ತನ್ನ ಸಾಮರ್ಥ್ಯದಿಂದ ನೆಲಕ್ಕೆ ಅಂಟಿಸಿಬಿಟ್ಟಿತು ರಾಜನು ನಮಸ್ಕರಿಸಿ ಮೇಲಕ್ಕೇಳುವಷ್ಟರಲ್ಲಿ ವಿಭೂತಿಯು ತನ್ನ ಕೆಲಸವನ್ನು ಮಾಡಿಬಿಟ್ಟಿದ್ದರಿಂದ ರಾಜನು ಎಷ್ಟು ಪ್ರಯತ್ನಪಟ್ಟರೂ ಅವನಿಂದ ಮೇಲಕ್ಕೇಳಲಿಕ್ಕಾಗಲಿಲ್ಲ. ಅವನ ಹಣೆ, ಕೈ-ಕಾಲುಗಳನ್ನು ಭೂಮಿಯು ಬಿಡದಾಯಿತು. ರಾಜನು ಗಾಬರಿಯಾಗಿ ಸೇವಕರನ್ನು ಕೂಗಿದನು. ಸೇವಕರು ಬೇಗನೆ ಬಂದು ರಾಜನ ಸ್ಥಿತಿಯನ್ನು ಕಂಡು ಗಾಬರಿಯಾಗಿ ಮುಖ್ಯ ಪ್ರಧಾನನನ್ನು ಕರೆತಂದರು. ಆ ಪ್ರಧಾನನು ಸಾತ್ವಿಕನಿದ್ದನು. ಅವನಲ್ಲಿ ಧೂರ್ತತನವು ವಿಶೇಷವಾಗಿತ್ತು. ಭಕ್ತರಿಗೆ ಅಪಮಾನವಾದರೆ, ದೇವರು ರುಷ್ಟನಾಗುವನೆಂಬ ತತ್ವವು ಅವನಿಗೆ ಗೊತ್ತಿತ್ತು. ದೂರ್ವಾಸಋಷಿಗಳಿಗೆ ಅಂಬರೀಷರಿಂದುಂಟಾದ ತೊಂದರೆಯನ್ನು ಅವನು ಕೇಳಿ ತಿಳಿದಿದ್ದನು. ಆದ್ದರಿಂದ ಅವನು ತನ್ನ ರಾಜನ ದುರವಸ್ಥೆಯನ್ನು ಕಂಡು ಯಾವನೋ ಒಬ್ಬ ಸಿದ್ಧ ಪುರುಷನು ಅವಮಾನದಿಂದ ಸಂತಪ್ತನಾಗಿರಬೇಕು. ಆದ್ದರಿಂದ ಶ್ರೀರಾಮನು ಹೀಗೆ ರಾಜನನ್ನು ಬಿಗಿದು ಕಟ್ಟಿರುವನು ಎಂದು ತರ್ಕಿಸಿದನು. ಅಂಥ ಸಾಧುಪುರುಷನು ಇಲ್ಲಿಗೆ ಯಾವನು ಬಂದಿರುವನೆಂಬದನ್ನು ಅವನು ಶೋಧ ಹಚ್ಚಿದನು. ದೇವಾಲಯದ ಮುಂದೆ ಒಬ್ಬ ಬೈರಾಗಿಯು ಬಂದಿರುವನೆಂಬದು ಆತನಿಗೆ ತಿಳಿಯಿತು. ಕೂಡಲೆ ಆ ಭಾವಿಕ ಪ್ರಧಾನನು ಆ ಬೈರಾಗಿಯು ಬಳಿಗೆ ಹೋಗಿ ಅವನಿಗೆ ದಂಡವತ್ ನಮಸ್ಕಾರ ಮಾಡಿ ಪ್ರಾರ್ಥಿಸಿದನೇನಂದರೆ—''ಮಹಾರಾಜ, ತಾವು ಸಂತಮಹಂತರು; ತಮ್ಮ ದರ್ಶನದಿಂದ ಮನುಷ್ಯನು ಸಂಕಟವಿಮುಕ್ತನಾಗುವನು. ತಾವು ಸಮದೃಷ್ಟಿ

ಯುಳ್ಳವರು. ಪ್ರಾಣಿಗಳಲ್ಲಿ ಭೇದಾ-ಭೇದವನ್ನು ನೋಡತಕ್ಕವರಲ್ಲ. ಮೇಲಾಗಿ ತಾವು ಕ್ಷಮಾಶೀಲರು; ತಮ್ಮ ಕೋಮಲ ಹೃದಯಕ್ಕೆ ಕ್ಷಮಾ ಗುಣವು ಅಲಂಕಾರಪ್ರಾಯವಾಗಿದೆ. ತಮಗೆ ನಮ್ಮಿಂದ ಯಾವದಾದ ರೊಂದು ಅಪರಾಧವು ಸಂಭವಿಸಿದ್ದರೆ ಕ್ಷಮಿಸಿ ಅನುಗ್ರಹಿಸುವದಾಗಬೇಕು.

ಈ ಮೇರೆಗೆ ಮಂತ್ರಿಯು ಪ್ರಾರ್ಥಿಸಲು ನಾಥನ ಅಂತಃಕರಣವು ಕರಗಿತು. ಆತನು ಪಾಶುಪತರಾಜನ ಮೇಲೆ ದಯೆ ತೋರಬೇಕೆಂದು ಇಚ್ಛಿ ಸಿದನು. ಆಗ ಅವನು ಒಂದು ಚಿವುಟಿಗೆಯಷ್ಟು ಭಸ್ಮವನ್ನು ತಕ್ಕೊಂಡು ವಿಭಕಾಸ್ತ್ರದಿಂದ ಅಭಿಮಂತ್ರಿಸಿ ಅದನ್ನು ರಾಜನ ಮೇಲೆ ತೂರಿದನು. ಆ ವಿಭೂತಿಯು ರಾಜನಿಗೆ ತಾಕಲು ಅವನು ಚಟ್ಟನೆದ್ದು ಕುಳಿತನು. ರಾಜನು ಸಂತೋಷ ಹೊಂದಿ ಮುಖ್ಯ ಮಂತ್ರಿಯನ್ನು ಕರೆಯಿಸಿದನು. ರಾಜನು ಕ್ಷೇಮವನ್ನು ಹೊಂದಿದ್ದನ್ನು ಕೇಳಿ ಮುಖ್ಯ ಮಂತ್ರಿಯು ಧಾವಿಸಿ ಹೋಗಿ ಬೈರಾಗಿಯ ವಿಷಯವನ್ನು ಹೇಳಿದನು. ಇಂದಿನ ವರೆಗೆ ಯಾವ ಮಚ್ಛಿಂದ್ರ ನಾಥನ ಅನೇಕ ಸಂಗತಿಗಳನ್ನು ರಾಜನು ಕೇಳಿದ್ದನೋ ಆ ಮಚ್ಛಿಂದ್ರನು ಈಗ ಸಾಕ್ಷಾತ್ತಾಗಿ ಬಂದಿರುವನೆಂದು ತಿಳಿದು ರಾಜನು ಆಶ್ಚರ್ಯಪಟ್ಟು ಧಾವಿಸಿ ಹೋಗಿ ಮಚ್ಛಿಂದ್ರನ ಚರಣಗಳನ್ನು ಹಿಡಿದುಕೊಂಡನು. ರಾಜನ ಈ ಭಕ್ತಿಯನ್ನು ತಿಳಿದು ಮಚ್ಛಿಂದ್ರನು ಸಂತುಷ್ಟನಾದನು.

ಬಳಿಕ ಪಾಶುಪತರಾಜನು ಮಚ್ಛಿಂದ್ರನನ್ನು ವೈಭವದಿಂದ ತನ್ನ ರಾಜಮಂದಿರಕ್ಕೆ ಕರೆದೊಯ್ದು ಬಹಳವಾಗಿ ಆದರ ಸತ್ಕಾರ ಮಾಡಿದನು. ರಾಜನು ಸ್ವತಃ ತಾನೇ ಮಚ್ಛಿಂದ್ರನಾಥನ ಸೇವೆಯಲ್ಲಿ ತತ್ಪರನಾದನು. ಅವನ ಭಕ್ತಿಗೆ ಮಚ್ಛಿಂದ್ರನು ಸುಪ್ರಸನ್ನನಾದನು. ಹೀಗಿರಲು ಒಂದು ದಿನ ಪಾಶುಪತರಾಜನು ಮಚ್ಛಿಂದ್ರನನ್ನು ಕುರಿತು ನುಡಿದನೇಂದರೆ—ಮಹಾ ರಾಜ, ನಾನು ಸೂರ್ಯವಂಶದ ರಾಜನು. ಹೀಗಿದ್ದರೂ ನನಗೆ ರಾಮದ ರ್ಶನವಿಲ್ಲ. ಯಾವ ಶ್ರೀರಾಮನ ಅವತಾರದಿಂದ ನಮ್ಮ ಸೂರ್ಯವಂಶವು ಪುತ್ಪನ್ನವಾಯಿತೋ ಆ ಶ್ರೀರಾಮನ ದರ್ಶನವನ್ನು ಮಾಡಿಸಬೇಕು.''

ಈ ರೀತಿ ಪಾಶುಪತರಾಜನು ಬೇಡಿಕೊಳ್ಳಲು ಮಚ್ಛಿಂದ್ರನಾಥನು ಅವನಿಗೆ ಅಭಯವನ್ನು ಕೊಟ್ಟನು. ಬಳಿಕ ಆತನು ಆ ರಾಜಮಂದಿರವನ್ನು ಬಿಟ್ಟು ಪಾಶುಪತರಾಜನೊಡನೆ ರಾಜಾಂಗಣಕ್ಕೆ ಪ್ರಾಪ್ತನಾದನು. ಆಗ

ಮಚ್ಛಿಂದ್ರನು ಧೂಮ್ರಾಸ್ತ್ರವನ್ನು ಜಪಿಸಿ ಸೂರ್ಯನ ಮೇಲೆ ಬಿಟ್ಟನು. ಪೃಥ್ವಿಯಿಂದ ಆಕಾಶದ ವರೆಗೆ ಸರ್ವತ್ರದಲ್ಲಿ ಧೂಮ್ರಮಯವಾಯಿತು. ಕಗ್ಗತ್ತಲೆಯುತ್ಪನ್ನವಾಯಿತು. ಆ ಧೂಮ್ರವು ಸೂರ್ಯನ ರಥವನ್ನು ಸಹ ವ್ಯಾಪಿಸಿ ಅದರ ಮಾರ್ಗವನ್ನು ನಿರೋಧಿಸಿತು. ಆಗ ಸೂರ್ಯನಾರಾಯಣನು ಜ್ಞಾನದೃಷ್ಟಿಯಿಂದ ವಿಚಾರಿಸಿ ಮಚ್ಛಿಂದ್ರನಾಥನು ಸೂರ್ಯವಂಶೀಯನಾದ ಒಬ್ಬ ರಾಜನ ಸಲುವಾಗಿ ಇಷ್ಟೆಲ್ಲ ಅನರ್ಥವನ್ನುಂಟು ಮಾಡಿದನೆಂದು ತಿಳಿದು ಸಿಟ್ಟಿಗೆದ್ದು ಆ ಧೂಮ್ರವನ್ನು ಹೊಯ್ದೋಡಿಸಲು ವಾತಾಸ್ತ್ರವನ್ನು ಬಿಟ್ಟನು. ಪ್ರಚಂಡವಾದ ಗಾಳಿಯು ಬೀಸಿ ನಭೋಮಂಡಲವನ್ನೆಲ್ಲ ವ್ಯಾಪಿಸಿದ್ದ ಆ ಹೊಗೆಯನ್ನು ಹೊಡೆದೋಡಿಸಿತು. ಆ ಗಾಳಿಯ ಪ್ರತಾಪಕ್ಕೆ ಮಂದರಗಿರಿಯು ಸಹ ನಡುಗಿತು. ಹೀಗೆ ತಾನು ನಿರ್ಮಿಸಿದ ಧೂಮ್ರಾಸ್ತ್ರವು ನಾಶವಾಗಲು ನಾಥನು ಪರ್ವತಾಸ್ತ್ರವನ್ನು ಬಿಟ್ಟನು. ಅದರಿಂದ ಸೂರ್ಯನ ವಾತಾಸ್ತ್ರದ ಗತಿಯು ಕುಂಠಿಸಿತು. ಆಗ ಸೂರ್ಯನು ವಜ್ರಾಸ್ತ್ರವನ್ನು ಬಿಟ್ಟು ಎಲ್ಲ ಪರ್ವತಗಳನ್ನು ಪುಡಿಪುಡಿ ಮಾಡಿದನು. ಕೂಡಲೆ ನಾಥನು ಖತಿಗೊಂಡು ಭ್ರಮಿನಾಮಕ ಅಸ್ತ್ರವನ್ನು ಬಿಟ್ಟನು. ಆ ಅಸ್ತ್ರವು ಸೂರ್ಯನ ರಥದಲ್ಲಿ ಪ್ರವೇಶಿಸಲು ಅರುಣ ಮೊದಲಾದವರ ಬುದ್ಧಿಯು ಭ್ರಂಶವಾಯಿತು. ಅವನು ದಿಕ್ಕು ತಪ್ಪಿ ರಥವನ್ನು ಹೊಡೆಯಲಾರಂಭಿಸಿದನು. ಅದನ್ನು ಕಂಡು ಸೂರ್ಯನು ಜ್ಞಾನಾಸ್ತ್ರವನ್ನು ಬಿಟ್ಟನು. ಆ ಅಸ್ತ್ರದ ಪ್ರಭಾವದಿಂದ ಅರುಣನು ಶುದ್ಧಿಯ ಮೇಲೆ ಬಂದನು. ಗುರುವಿನ ಉಪದೇಶದಿಂದ ಬಾಲಕನ ಅಜ್ಞಾನವು ನಿವಾರಣೆಯಾಗುವಂತೆಯೂ ರಾಮಮಂತ್ರ ಜಪದಿಂದ ಸರ್ವ ಪಾತಕಗಳೂ ಭಸ್ಮೀಭೂತವಾಗುವಂತೆಯೂ ಸೂರ್ಯನ ಜ್ಞಾನಾಸ್ತ್ರದಿಂದ ಅರುಣನ ಭ್ರಮವು ನಿರಸನವಾಗಲು ಅವನು ಸರಿಯಾದ ಮಾರ್ಗವನ್ನು ಹಿಡಿದನು. ಬಳಿಕ ಮಚ್ಛಿಂದ್ರನು ವಾತಾಕರ್ಷಕ ಮಂತ್ರವನ್ನು ಜಪಿಸಿದನು. ಆ ಮಂತ್ರಶಕ್ತಿಯಿಂದ ಅರುಣನು ನಿಶ್ಚೇಷ್ಟಿತನಾದನು. ಕುದುರೆಗಳೂ ನಿಶ್ಚೇಷ್ಟಿತವಾದವು. ಸ್ವತಃ ಸೂರ್ಯನಾರಾಯಣನೂ ನಿಶ್ಚೇಷ್ಟಿತನಾದನು. ವಾಯುವಿನ ಆಧಾರದಿಂದ ನಡೆಯುತ್ತಿದ್ದ ಸೂರ್ಯನ ರಥವು ವಾಯು ನಿರೋಧವಾಗಲು ಆಧಾರತಪ್ಪಿ ಭೂತಲದ ಮೇಲೆ ಬಿದ್ದುಬಿಟ್ಟಿತು. ಆಗ ಸೂರ್ಯನ ಉಗ್ರತೇಜಸ್ಸಿನಿಂದ ಭೂಮಿಯಲ್ಲಿ

ಸರ್ವತ್ರದಲ್ಲಿಯೂ ಉರಿಯು ಎದ್ದಿತು ಆಗ ನಾಥನು ಜಲಾಸ್ತ್ರವನ್ನು ಪ್ರಯೋಗಿಸಿ ಎಲ್ಲ ಕಡೆಗೂ ಶಾಂತಿಯನ್ನುಂಟು ಮಾಡಿದನು.

ಜಗತ್ತಿಗೆ ಪ್ರಕಾಶದಾತೃವಾದ ಸೂರ್ಯನ ಅವಸ್ಥೆಯು ಹೀಗಾಗಲು ಲೋಕದಲ್ಲಿ ಹಾಹಾಕಾರವೆದ್ದಿತು ಸಮಸ್ತ ದೇವತೆಗಳು ಗಾಬರಿಯಾಗಿ ನಾಥನ ಬಳಿಗೆ ಬಂದರು. ಬ್ರಹ್ಮ-ವಿಷ್ಣು-ಮಹೇಶ್ವರರು ಬಂದರು. ಆಗ ವಿಷ್ಣುವು ಮುಂದರಿದು ನಾಥನನ್ನು ಆಲಿಂಗಿಸಿ—ನಾಥನೇ, ಸೂರ್ಯನನ್ನು ಹೀಗೇಕೆ ನಿಬಂಧಪಡಿಸಿದೆ ಎಂದು ಕೇಳಿದನು. ಅದಕ್ಕೆ ಮಚ್ಛೇಂದ್ರನು ನುಡಿದನೇನಂದರೆ—ಭಗವನ್, ಈ ಸೂರ್ಯನು ತನ್ನ ವಂಶದಲ್ಲಿ ಹುಟ್ಟಿದ ಈ ಪಾಶುಪತರಾಜನ ಅಭಿಮಾನವನ್ನು ಹಿಡಿಯಬಾರದೇನು? ಯಾವ ತಾಯಿಯು ತನ್ನ ಮಕ್ಕಳನ್ನು ಸಂರಕ್ಷಿಸುವದಿಲ್ಲವೋ ಆ ತಾಯಿಗೆ ತಾಯಿ ಯೆಂದು ಯಾರಾದರೂ ಕರೆಯುವದೇ? ಅದರಂತೆ ಸೂರ್ಯನು ತನ್ನ ವಂಶೀಕರ ವಿಷಯವಾಗಿ ನಿಷ್ಠುರನಾಗಿದ್ದಾನೆ ಆದ್ದರಿಂದ ಅವನನ್ನು ಹೀಗೆ ಪ್ರತಿಬಂಧಿಸಬೇಕಾಯಿತು ಸೂರ್ಯನನ್ನು ಹೀಗೆ ಪ್ರತಿಬಂಧಿಸುವದರಲ್ಲಿ ಇನ್ನೊಂದು ಉದ್ದೇಶವೇನಂದರೆ— ಈ ಪಾಶುಪತರಾಜನಿಗೆ ಶ್ರೀರಾಮನ ದರ್ಶನ ಮಾಡಿಸುವದು. ಈ ಪಾಶುಪತರಾಜನು ಭಗವದ್ಭಕ್ತನಿರುವನು. ಅವನಿಗೆ ನಾನು ವರವನ್ನು ಕೊಟ್ಟಿದ್ದೇನೆ. ಆದ್ದರಿಂದ ಭಗವಂತನೇ, ನನ್ನ ಈ ಅಪೇಕ್ಷೆಯನ್ನು ಪೂರ್ಣಗೊಳಿಸು. ಇನ್ನೊಂದೇನಂದರೆ ನನ್ನ ಶಾಬರೀವಿದ್ಯೆಗೆ ಈ ಸೂರ್ಯನ ಸಹಾನುಭೂತಿಯನ್ನು ದೊರಕಿಸುವದು'' ಭಗವನ್, ಇಷ್ಟು ಉದ್ದೇಶಗಳಿಂದ ಈ ಕೆಲಸ ಮಾಡಿದ್ದೇನೆ.

ನಾಥನ ಈ ಮಾತುಗಳನ್ನು ಕೇಳಿ ಭಗವಾನ್ ಶ್ರೀವಿಷ್ಣುವು—ನಾಥನೇ, ಮೊದಲು ಸೂರ್ಯನಾರಾಯಣನನ್ನು ಎಬ್ಬಿಸ! ಜಗತ್ತಿನಲ್ಲಿ ಹಾಹಾಕಾರ ವೆದ್ದಿದೆ. ಅದು ಶಾಂತವಾದ ಕೂಡಲೆ ನಿನ್ನ ಇಚ್ಛೆಯನ್ನು ಪೂರ್ಣ ಪಡಿಸುವೆನು. ಎಂದನು; ಅದನ್ನು ಕೇಳಿ ನಾಥನು ಪ್ರಭುವೇ, ಈ ಪಾಶುಪತರಾಜನಿಗೆ ಶ್ರೀರಾಮನ ದರ್ಶನ ಮಾಡಿಸಿದ ಹೊರತು ನನಗೆ ಸಮಾಧಾನವಾಗುವದಿಲ್ಲ ಎನಲು ಶ್ರೀವಿಷ್ಣುವು ಕೂಡಲೆ ತನ್ನ ಅವತಾರ ಲೀಲೆಯನ್ನು ಪ್ರಕಟ ಮಾಡಿದನು. ಲಕ್ಷ್ಮಣ-ಶ್ರೀಸೀತಾಮಾತೆಯರೊಡನೆ ಶ್ರೀರಾಮನು ಪ್ರಕಟನಾದನು. ಶ್ರೀರಾಮನ ಕಾಂತಮೂರ್ತಿಯನ್ನು ನೋಡಿ ಮಚ್ಛೇಂ

ದ್ರನು ಲಗುಬಗೆಯಿಂದ ಧಾವಿಸಿ ಆತನ ಚರಣಗಳನ್ನು ಗಟ್ಟಿಯಾಗಿ ಹಿಡಿದು ಕೊಂಡನು. ಬಳಿಕ ಆತನು ರಾಮಚಂದ್ರನನ್ನು ಕುರಿತು ನುಡಿದನೇನಂದರೆ—ರಘೂತ್ತಮನೇ, ನಿನ್ನ ಚರಿತ್ರೆಯು ಪರಮಪವಿತ್ರವಾಗಿದ್ದು; ನಿನಗೆ ಅನಂತ ನಾಮಗಳಿದ್ದರೂ ಸಕಲ ನದಿಗಳಲ್ಲಿ ಗಂಗಾನದಿಯು ಶ್ರೇಷ್ಠವಿರುವಂತೆ ಎಲ್ಲ ನಾಮಗಳಲ್ಲಿ ನಿನ್ನ ರಾಮನಾಮವು ಶ್ರೇಷ್ಠವಾಗಿರುವದು ಈ ನಾಮಪ್ರಭಾವದಿಂದಲೇ ನಿನ್ನ ಚರಿತೆಗೆ ಪವಿತ್ರತೆಯು ಬಂದಿದೆ ಪ್ರಭುವೇ ನಾನು ಶಾಬರೀವಿದ್ಯೆಯನ್ನು ರಚಿಸುತ್ತೇನೆ. ಇದಕ್ಕೆ ನಿನ್ನ ಆಶೀರ್ವಾದವು ಪೂರ್ಣವಾಗಿರಬೇಕು ಶಾಬರೀಮಂತ್ರಪಾಠಕರಿಗೆ ನೀನು ಸಹಾಯ ಮಾಡಬೇಕು. ಇದಕ್ಕೆ ನಿನಗೆ ಮನಸ್ಸಿಲ್ಲದಿದ್ದರೆ ನನ್ನೊಡನೆ ಯುದ್ಧವಮಾಡು; ನಿನ್ನ ಕೂಡ ಯುದ್ಧ ಮಾಡಲಿಕ್ಕೆ ಈ ರಾಮಸೇವಕನು ಸಿದ್ಧನಿದ್ದಾನೆ.''

ಮಚ್ಛೇಂದ್ರನ ಈ ಭಾಷಣವನ್ನು ಕೇಳಿ ರಾಮಚಂದ್ರನು ನಕ್ಕು—ನಾಥನೇ ನೀನಾರೆಂಬದು ನನಗೆ ಗೊತ್ತಿದೆ. ನನ್ನ ನಿನ್ನಲ್ಲಿ ಭೇದವಿಲ್ಲ. ತ್ರಿಮೂರ್ತಿಗಳ ರೂಪನಾದ ದತ್ತಾತ್ರೇಯನು ನಿನಗೆ ಪೂರ್ಣಾನುಗ್ರಹ ಮಾಡಿರಲು ನಾನು ನಿನಗೆ ಆಶಿರ್ವಾದ ಮಾಡುವದು ಆಶ್ಚರ್ಯವೇ? ಎಂದು ನುಡಿದು ಆತನ ಪ್ರಾರ್ಥನೆಯನ್ನು ಪೂರ್ಣಮಾಡಿಸುತ್ತೇನೆಂದು ವಚನಕೊಟ್ಟನು. ಬಳಿಕ ನಾಥನು ವಾತಪ್ರೇರಕ ಮಂತ್ರವನ್ನು ಜಪಿಸಿದನು ಅದರಿಂದ ಶ್ರೀಸೂರ್ಯನಾರಾಯಣನು ಚೈತನ್ಯಯುಕ್ತನಾಗಿ ಎದ್ದು ಕುಳಿತು ಕಣ್ಣು ತೆರೆದು ನೋಡಿದನು ಆಗ ಅವನಿಗೆ ಅಲ್ಲಿ ಸಮಸ್ತ ದೇವತೆಗಳು ಕೂಡಿರುವದು ಗೊತ್ತಾಯಿತು. ಅವನು ಸನ್ನೆಯಿಂದ ಎಲ್ಲ ದೇವತೆಗಳನ್ನು ಹತ್ತರ ಬರಮಾಡಿಕೊಂಡನು. ದೇವತೆಗಳು ಸೂರ್ಯನ ಹತ್ತರ ಹೋಗಿ ನಮಸ್ಕರಿಸಿದರು. ಆಗ ಸೂರ್ಯನು ಆನಂದದಿಂದ ನುಡಿದನೇನಂದರೆ—ಯಾವ ಪ್ರತಾಪಿಯು ನನ್ನನ್ನು ಹೀಗೆ ಪ್ರತಿಬಂಧಿಸಿ ಪುನಃ ಚೇತನಗೊಳಿಸಿದನೋ ಅವನು ನಿಜವಾಗಿಯೂ ಧನ್ಯನಿದ್ದಾನೆ.''

ಶ್ರೀವಿಷ್ಣುವು ನಾಥನನ್ನು ಸೂರ್ಯನ ಭೆಟ್ಟಿಗೆ ಕಳುಹಿಸಿದನು. ಸೂರ್ಯನಿಂದ ತನಗೆ ಅಪಾಯವಾಗಬಾರದೆಂದು ನಾಥನು ಚಂದ್ರಾಸ್ತ್ರವನ್ನೂ ಜಲಾಸ್ತ್ರವನ್ನೂ ಜಪಿಸಿ ಸರ್ವತ್ರದಲ್ಲಿ ಶಾಂತಿಯನ್ನುಂಟು ಮಾಡಿ ಸೂರ್ಯನ ಬಳಿಗೆ ಹೋದನು. ಶ್ರೀವಿಷ್ಣುವು ಸೂರ್ಯನಿಗೆ ನಾಥನ

ಪರಿಚಯ ಮಾಡಿಕೊಟ್ಟನು. ಆಗ ಸೂರ್ಯನು ಆನಂದಪಟ್ಟು ಕವಿನಾರಾಯಣನು ನನ್ನ ಅಂಶರೂಪನೇ ಇರುವನೆಂದು ನುಡಿದು ನಾಥನ ಇಚ್ಛೆಯಂತೆ ನಡೆದುಕೊಳ್ಳಲು ಒಪ್ಪಿಕೊಂಡನು. ಬಳಿಕ ಸಮಸ್ತ ದೇವತೆಗಳೂ ಸ್ವಸ್ಥಾನಕ್ಕೆ ಹೋದರು. ಶ್ರೀರಾಮದರ್ಶನದಿಂದ ಪಾಶುಪತರಾಜನು ತುಂಬಾ ಆನಂದಹೊಂದಿದನು. ಅನಂತರ ಮಚ್ಛೇಂದ್ರನು ತೀರ್ಥಯಾತ್ರೆಗೆ ಹೊರಟು ಹೋದನು.

---

# ಅಧ್ಯಾಯ ೯

## ಗೋರಕ್ಷನ ಜನನ.

ಅಯೋಧ್ಯೆಯಿಂದ ನಾಥನು ಹೊರಬಿದ್ದು ಮಥುರಾ, ಅವಂತಿಕಾ, ಮಾಯಾ ಇತ್ಯಾದಿ ಉಳಿದ ಪಟ್ಟಣಗಳನ್ನು ನೋಡಲಿಕ್ಕೆ ಹೊರಟನು. ನಂತರ ಮಿಥಿಲಾ, ಪ್ರಯಾಗ ತೀರ್ಥಗಳನ್ನು ಮಾಡಿಕೊಂಡು ಅವನು ಪುನಃ ಬಂಗಾಲದೊಳಗಿನ ಚಂದ್ರಗಿರಿಗೆ ಬಂದನು. ಆ ಊರಲ್ಲಿ ಭಿಕ್ಷೆಯ ಸಲುವಾಗಿ ತಿರುಗುತ್ತಿರಲು ದಯಾಳು ಬ್ರಾಹ್ಮಣನ ಅಂಗಳದಲ್ಲಿ ಹೋಗಿ ನಿಂತುಕೊಂಡನು. ಅವನು ಆ ಮನೆಯನ್ನು ಗುರ್ತಿಸಿದನು. ಆ ಬ್ರಾಹ್ಮಣನಿಗೆ ಸರಸ್ವತಿ ಎಂಬ ಹೆಸರಿನ ಭಾರ್ಯೆಯು ಇದ್ದು ಅವಳಿಗೆ ತಾನು ಅಂಗಾರ ಕೊಟ್ಟದ್ದು ಅವನ ಸ್ಮರಣಕ್ಕೆ ಬಂದಿತು. ತನ್ನ ದಿವ್ಯವಾದ ವಿಭೂತಿಯಿಂದ ಆ ಬ್ರಾಹ್ಮಣಪತ್ನಿಗೆ ಪುತ್ರನು ಆಗಿರಬೇಕೆಂದು ಯೋಚಿಸಿ ಅವನು ಆ ಸ್ತ್ರೀಯನ್ನು ಒದರಿದನು. ಶಬ್ದವನ್ನು ಕೇಳಿದ ಕೂಡಲೆ ಸರಸ್ವತಿಯು ಹೊರಗೆ ಬಂದಳು. ಅವಳು ಮೊದಲು ನಾಥನ ಗುರ್ತು ಹಿಡಿಯಲಿಲ್ಲ. ಯಾವನೋ ಒಬ್ಬ ಗೋಸಾವಿಯು ಭಿಕ್ಷೆಯ ಸಲುವಾಗಿ

ಬಂದಿಂದೇಕೆಂದು ತಿಳಿದು ಸನ್ಯಾಸಿಗೆ ಭಿಕ್ಷೆಯನ್ನು ಹಾಕಹೋದಳು. ಸರಸ್ವತಿಯು ತನ್ನನ್ನು ಗುರ್ತಿಸದ್ದನ್ನು ಕಂಡು ನಾಥನು ಒಳ್ಳೇ ವಿಚಾರದಲ್ಲಿ ಬಿದ್ದನು ಒಂದು ವೇಳೆ ಆ ಸ್ತ್ರೀ ಸಲುವಾಗಿ ತನಗೇ ತಪ್ಪು ತಿಳುವಳಿಕೆಯಾಗಿದ್ದರೂ ಆಗಿರಬಹುದೆಂದು ಅವಳ ಹೆಸರನ್ನು ವಿಚಾರಿಸಿದನು. ಆಗ ತನಗೆ ಆ ಸ್ತ್ರೀ ಬಗ್ಗೆ ತಪ್ಪುತಿಳುವಳಿಕೆ ಆಗಿಲ್ಲವೆಂದು ತಿಳಿಯಲು ಅವನು ಒಮ್ಮೆಲೆ ಆ ಸರಸ್ವತಿಗೆ ಅಂದದ್ದೇನಂದರೆ—"ಮಾಯೀ, ನಿಮ್ಮ ಹುಡುಗನು ಎಲ್ಲಿದ್ದಾನೆ ಅವನನ್ನು ನನಗೆ ತೋರಿಸುವಿರೇನು?"

ಸರಸ್ವತಿಯು.—"ಬೈರಾಗಿಗಳೇ, ತಾವು ಭ್ರವಿಷ್ಟರಾಗಿ ನನ್ನೊಡನೆ ಚೇಷ್ಟೆ ಮಾಡುತ್ತಿರ ವಿರೇನು? ಇಂದಿನವರೆಗೂ ಪುತ್ರನ ಮುಖವು ಎಂತಹದೆಂಬದನ್ನು ನಾನು ನೋಡಿಲ್ಲ."

ಆ ಸಂಗತಿಯು ನಿಜವಿರಲಿಕ್ಕಿಲ್ಲೆಂಬ ಕಲ್ಪನೆಯಿಂದ ನಾಥನು— ತಾಯಿಾ, ನೀನು ಸಳ್ಳು ಯಾಕೆ ಮಾತಾಡುತ್ತೀ? ನಾನು ನಿನಗೆ ಹಿಂದಕ್ಕೆ ಭಸ್ಮವನ್ನು ಕೊಟ್ಟಿದ್ದೆನು ಹನೆರಡು ವರ್ಷಗಳ ನಂತರ ನಾನು ಪುನಃ ಇಲ್ಲಿಗೆ ಬರುವೆನೆಂದ ಅದೇ ಕಾಲಕ್ಕೆ ಹೇಳಿದ್ದೆನು. ನಾನು ಕೊಟ್ಟ ವಿಭೂತಿಯಲ್ಲಿ ಸಂಜೀವಿನೀ ಮಂತ್ರವು ವ್ಯಾಪಿಸಿತ್ತು ಅದರ ಪ್ರಭಾವದಿಂದ ನಿನಗೆ ಅಜರಾಮರನೂ ತೇಜಃಪುಂಜನೂ ಆದಂಥ ಪುತ್ರನು ಆಗಲಿಕ್ಕೇ ಬೇಕು. ನನ್ನ ವಿಭೂತಿಯು ನಿಃಷ್ಫಲವಾಗಲಿಕ್ಕೆ ಶಕ್ಯವೇ ಇಲ್ಲ.

ನಾಥನ ಗುರ್ತಿನ ಮಾತನ್ನು ಕೇಳಿ ಸರಸ್ವತಿಗೆ ವಿಭೂತಿಯು ಸ್ಮರಣವಾಯಿತು. ತಾನು ಆ ವಿಭೂತಿಯನ್ನು ತಿಪ್ಪೆಯಲ್ಲಿ ಹಾಕಿದ್ದು ಅನ್ಯಾಯವೆಂದು ಆಕೆಗೆ ಅನಿಸಿತು ಅವಳು ಭಯದಿಂದ ನಡುಗಹತ್ತಿದಳು. ಈಗ ಈ ನಾಥನು ತನಗೆ ಶಾಸನ ಮಾಡುವನೆಂಬ ಭೀತಿಯಿಂದ ಅವಳು ಪಶ್ಚಾತ್ತಾಪ ಪಡಹತ್ತಿದಳು. ನೆರೆಹೊರೆಯ ಸ್ತ್ರೀಯರ ಅಭಿಪ್ರಾಯವನ್ನು ನಿಜವೆಂದು ನಂಬಿ ನಾನು ಈ ನಾಥನನ್ನು ಕಃಪದಾರ್ಥವೆಂದು ಭಾವಿಸಿದೆನು. ಎಂದು ದುಃಖಪಟ್ಟಳು. ಅವಳು ಕಕ್ಕಾವಿಕ್ಕಿಯಾಗಿ ಥರಥರ ನಡುಗುತ್ತ ಹುಚ್ಚಳಂತೆ ನಿಂತುಕೊಂಡಳು. ಅವಳಿಗೆ ಈ ಕಾಲಕ್ಕೆ ಯಾವ ಮಾರ್ಗವನ್ನು ಸ್ವೀಕಾರ ಮಾಡಬೇಕೆಂಬುವದು ಸೂಚಿಸದಂತಾಯಿತು. ಅವಳು ಗಾಬರಿಯಾದಳು, ಅವಳ ಈ ಶೋಚನೀಯ ಅವಸ್ಥೆಯನ್ನು

ಕಂಡು ನಾಥನು ಗದ್ದರಿಸಿ ನುಡಿದದ್ದೇನಂದರೆ—ಸ್ತ್ರೀಯೇ, ನೀನು ಹೀಗೆ ಪಿಶಾಚಿಯಂತೆ ಚೇಷ್ಟೆಯನ್ನು ಯಾಕೆ ಪ್ರಾರಂಭಿಸಿರುವಿ? ಆ ಹುಡುಗನು ಎಲ್ಲಿ ಇದ್ದಾನೆ ಅವನನ್ನು ಮೊದಲು ತೋರಿಸು. ಒಂದು ಕ್ಷಣ ಸಹ ವಿಲಂಬ ಮಾಡಬೇಡ. ಹುಡುಗನ ಸಂಗತಿಯು ತಿಳಿದ ಹೊರತು ನಾನು ಇಲ್ಲಿಂದ ಚಲಿಸುವದಿಲ್ಲ.

ನಾಥನ ನಿರ್ಧಾರವನ್ನು ಕಂಡು ಅವಳು ಮತ್ತಷ್ಟು ಹೆದರಿದಳು. ಕಡೆಗೆ ಅವಳು ತನ್ನ ಮನಸ್ಸಿನಲ್ಲಿ ವಿಚಾರ ಮಾಡಿದ್ದೇನಂದರೆ—ಹೇಗೇ ಇರಲಿ ನಿಜವಾದ ಸಂಗತಿಯನ್ನು ನಾಥನಿಗೆ ತಿಳಿಸಬೇಕು. ಸತ್ಯಮಾರ್ಗದಲ್ಲಿಯೇ ನಿಜವಾದ ಸೌಖ್ಯವದೆ. ಸತ್ಯದಿಂದಲೇ ಶತ್ರುಗಳು ಸಹ ಮಿತ್ರಭಾವವನ್ನು ಧರಿಸುತ್ತಾರೆ. ಸತ್ಯದಿಂದಲೇ ವಾದಿಯು ಲಜ್ಜೆಯನ್ನು ಹೊಂದುತ್ತಾನೆ ಸತ್ಯಮಾರ್ಗದ ಅವಲಂಬನಮಾಡಿದರೆ ಪಾತಕವು ನಾಶವಾಗುತ್ತದೆ'' ಬಳಿಕ ಅವಳು ನಾಥನ ಪಾದಗಳ ಮೇಲೆ ತಲೆಯನ್ನಿಟ್ಟು ನುಡಿದಳೇನಂದರೆ—''ಹೇ ಕ್ಷಮಾಶೀಲ ಮಹಾರಾಜನೇ, ನೀನು ಕೃಪೆಯಿಂದ ನನಗೆ ಪ್ರಸಾದವನ್ನು ಕೊಟ್ಟದ್ದು ನಿಜವು. ಆದರೆ ನಾನು ದೊಡ್ಡ ಅನ್ಯಾಯವನ್ನು ಮಾಡಿದ್ದೇನೆ. ತಮ್ಮ ಆ ಪ್ರಸಾದರೂಪೀ ವಿಭೂತಿಯನ್ನು ತಿಪ್ಪೆಯಲ್ಲಿ ಒಗೆದೆನು. ತಮ್ಮ ಭೆಟ್ಟಿಯ ವೃತ್ತಾಂತವನ್ನು ನಾನು ನೆರೆಮನೆಯ ಸ್ತ್ರೀಯರಿಗೆ ಹೇಳಿದೆನು. ಆ ಸ್ತ್ರೀಯರು ಅಪ್ರಬುದ್ಧರಿದ್ದರು. ಜನ್ಮಕ್ಕೆ ಬಂದ ಬಳಿಕ ಪರೋಪಕಾರವನ್ನು ಮಾಡಬೇಕು. ಅದು ಆಗದಿದ್ದರೆ ಎರಡನೆಯವರಿಗೆ ಅಪಕಾರವನ್ನಾದರೂ ಮಾಡಬಾರದು; ಪರೋಪಕಾರಾರ್ಥ ವೃಕ್ಷವನ್ನು ಹಚ್ಚಬೇಕು; ಆದಾಗದಿದ್ದರೆ ಹಚ್ಚಿದ ವೃಕ್ಷವನ್ನು ಕಿತ್ತಿ ಹಾಕುವಂಥ ಪಾಪದ ಕೆಲಸವನ್ನಾದರೂ ಮಾಡಬಾರದು ಸದಾಧರ್ಮಶೀಲರಾಗಿರುವದು ಒಳ್ಳೇದು; ಆದಾಗದಿದ್ದರೆ ಧರ್ಮಕ್ಕೆ ಅಡ್ಡಿಯನ್ನಾದರೂ ಮಾಡಬಾರದು. ತನ್ನ ಕಡಿಯಿಂದ ತೀರ್ಥಯಾತ್ರೆಯು ಆಗದಿದ್ದರೆ ತೀರ್ಥಯಾತ್ರೆಗೆ ಹೋಗುವವರನ್ನಾದರೂ ತಡೆಯಬಾರದು. ಯಾವನಿಗಾದರೂ ಪ್ರಯತ್ನಪೂರ್ವಕವಾಗಿ ಲಗ್ನಕ್ಕೆ ಸಹಾಯ ಮಾಡುವದು ಒಳ್ಳೇದು. ಅದನ್ನು ಬಿಟ್ಟು ಲಗ್ನ ಮುರಿಯುವ ಯತ್ನ ಮಾಡಬಾರದು. ಆಕಳು ಪದಾರ್ಥವನ್ನು ಕದ್ದು ತಿಂದರೂ ಅದಕ್ಕೆ ಶಾಸನ ಮಾಡಬಾರದು. ತಂದೆಯು

ಬಳಿಯಲ್ಲಿ ಮಗನ ಅವಗುಣಗಳನ್ನು ಹೇಳಿ ಆ ಪಿತಾ-ಪುತ್ರರಲ್ಲಿ ಕಲಹವನ್ನು ಹಚ್ಚಬಾರದು. ಸೊಸೆಯ ಬಳಿಯಲ್ಲಿ ಅತ್ತೆಯ ನಿಂದೆಯನ್ನು ಮಾಡಬಾರದು. ಪರೋಪಕಾರಾರ್ಥವಾಗಿ ಯಾರಾದರೂ ಭಾವಿ ಅಥವಾ ಕೆರೆಗಳನ್ನು ಕಟ್ಟಿಸುತ್ತಿದ್ದರೆ ಅದರಿಂದ ಅವರ ಮನಸ್ಸನ್ನು ಪರಾವೃತ್ತ ಮಾಡಬಾರದು. ಯಾರಾದರೂ ಕೀರ್ತನಕ್ಕೆ ಹೋಗುತ್ತಿದ್ದರೆ ಅದರಿಂದ ಅವರ ಮನಸ್ಸನ್ನು ತಿರುಗಿಸಬಾರದು. ತನ್ನ ಮಾತಿನಿಂದ ಎರಡನೆಯವರಿಗೆ ಅಪಾಯವಾಗುತ್ತಿದ್ದರೆ ಮೌನವಾಗಿರುವದು ಒಳ್ಳೇದು. ಮಹಾರಾಜ, ಆ ಕಾಲಕ್ಕೆ ನನಗೆ ಇಷ್ಟೊಂದು ವಿಚಾರ ಉತ್ಪನ್ನವಾಗಲಿಲ್ಲ. ತಾವು ವಿಭೂತಿ ಕೊಟ್ಟ ಕಾಲಕ್ಕೆ ನನ್ನಲ್ಲಿ ವಿಶ್ವಾಸ ಉತ್ಪನ್ನವಾಗಿದ್ದಿಲ್ಲ. ಅದರಲ್ಲಿ ನನ್ನ ಗೆಳತಿಯರ ಮಾತಿನಿಂದ ನನ್ನಲ್ಲಿದ್ದ ಅವಿಶ್ವಾಸವು ಇಮ್ಮಡಿಯಾಯಿತು. ಸಾರಾಂಶ ಆ ಕಾಲಕ್ಕೆ ನಾನು ದುರ್ದೈವದಿಂದ ಆ ದಿವ್ಯವಾದ ವಿಭೂತಿಯನ್ನು ತಿಪ್ಪಿಯಲ್ಲಿ ಚಲ್ಲಿದೆನು. ನಾನು ನಿಜವಾದ ದೈವಹೀನಳಾದ್ದರಿಂದ ತಮ್ಮ ವಿಭೂತಿಯಿಂದ ಹಿತವಾಗುವದು ಹೋಗಿ ಅಹಿತವಾತ್ರವಾಯಿತು. ಮಾರ್ಗಕ್ರಮಣ ಮಾಡುವಾಗ್ಗೆ ಮಾರ್ಗದಲ್ಲಿ ದ್ರವ್ಯ ತುಂಬಿದ ಕೊಡವು ಪ್ರಾಪ್ತವಾಗಿರಲು ಕುರುಡರ ಸೋಗನ್ನು ತೆಗೆದ ಕೊಳ್ಳುವ ಇಚ್ಛೆಯುಂಟಾಗಿ ಕಣ್ಣು ಮುಚ್ಚಿಕೊಂಡು ಮಾರ್ಗವನ್ನು ಹುಡುಕುವಂತೆ ನನ್ನ ಸ್ಥಿತಿಯಾಯಿತು. ಕಲ್ಪತರುವಿನ ನೆಳಲಲ್ಲಿ ಕುಳಿತಿರುವಾಗ ತನಗೆ ಪಿಶಾಚಿಯಿಂದ ಮರಣವಾಗಬೇಕೆಂದು ಬಯಸುವಂತೆ ನನ್ನ ಸ್ಥಿತಿಯಾಯಿತು. ಹೀಗಾಗಲಿಕ್ಕೆ ನನ್ನ ದುರ್ದೈವವೇ ಕಾರಣವು. ಮಹಾರಾಜ—ಅಜ್ಞಾನಮೂಲವಾಗಿ ನನ್ನಿಂದ ಬಹಳ ಅಪರಾಧವಾಯಿತು ನಾನು ನನ್ನ ಕೈಯಿಂದಲೇ ಆತ್ಮಘಾತವನ್ನು ಮಾಡಿಕೊಂಡಿದ್ದೇನೆ. ಹೇ ಗುರುಶ್ರೇಷ್ಠನೇ ಈ ಅಪರಾಧವನ್ನು ಕ್ಷಮಿಸು''

ಸರಸ್ವತಿಯ ವಿನಂತಿಯನ್ನು ಕೇಳಿ ಮಚ್ಛಿಂದ್ರನು ಮನಸ್ಸಿನಲ್ಲಿ ಉದ್ವಿಗ್ನನಾದನು. ಅವನು—''ಹರಹರ! ಸ್ತ್ರೀಯರು ಪಾಪಿಷ್ಠರೆನ್ನುವದು ನಿಜ. ಅವರಲ್ಲಿ ಅಧೈರ್ಯದ ಸಂಚಯವಿರುತ್ತದೆ.! ಅವರಿಗೆ ಹಿತಾಹಿತದ ಜ್ಞಾನವಿರುವದಿಲ್ಲ. ಮನಸ್ಸಿಗೆ ಬಂದಂತೆ ಆಚರಿಸಿ ತಮ್ಮ ಪೂರ್ವಜರನ್ನು ಕೂಡ ಪಾಪದಲ್ಲಿ ಹಾಳುತ್ತಾರೆ. ಸ್ತ್ರೀಯರ ಸಹವಾಸದಿಂದ ಯತ್ಕಿಂಚಿ

ತ್ರವೂ ಲಾಭವಾಗುವದಿಲ್ಲ. ಅವರ ಸಹವಾಸವು ಯಾವಾಗಲೂ ಅನರ್ಥಕ್ಕೇ ಕಾರಣವಾಗಿದೆ! ಸ್ತ್ರೀಯರ ಒಲವಿನಂತೆ ಹೋಗುವವನು ಮೂರ್ಖನೇ ಸರಿ. ಬುದ್ಧಿವಂತನು ಎಂದೂ ಅವರ ಮಾತನ್ನು ಲಾಲಿಸಕೂಡದು. ಪ್ರಾತಃಕಾಲ ದಿಂದ ಸಂಜೆಯ ವರೆಗೂ ಶರೀರವನ್ನು ಕ್ಲೇಶಪಡಿಸಿದರೂ ಸ್ತ್ರೀಯರಿಂದ ಕ್ಷಣಮಾತ್ರವೂ ಸುಖ ಮತ್ತು ಶಾಂತಿ ದೊರೆಯುವದಿಲ್ಲ. ಶಿಷ್ಯನ ಪಾಪ ವನ್ನು ಗುರುವು ಅನುಭೋಗಿಸುವಂತೆ ಸ್ತ್ರೀಯರ ಪಾತಕವನ್ನು ಅವರ ಪತಿಯು ಅನುಭೋಗಿಸಬೇಕಾಗುವದು. ಸ್ತ್ರೀಯರು ಸರ್ವ ಅನರ್ಥಕ್ಕೆ ಮೂಲ ಕಾರಣರಾಗಿರುತ್ತಾರೆ. ಸ್ತ್ರೀಯರ ಬುದ್ಧಿಯಂತೆ ವರ್ತಿಸುವವನು ಬಹಳ ಮೂರ್ಖನೂ ಪಾಪಿಷ್ಠನೂ ಇರುವನು. ಅವನ ಪದರಿನಲ್ಲಿ ದುಷ್ಕರ್ಮದ ಸಂಚಯದ ಹೊರತು ಅನ್ಯ ಸಂಚಯವೇ ಆಗಲಾರದು.

ಈ ಪ್ರಕಾರ ಯೋಚನೆಯನ್ನು ಮಾಡಿ ಮಚ್ಛಿಂದ್ರನು ಸರಸ್ವತಿಗೆ ಅಂದದ್ದೇನಂದರೆ—ಅಮ್ಮಾ, ಆ ವಿಭೂತಿಯು ಸಂಜೀವನೀ ಮಂತ್ರದಿಂದ ಮತ್ತು ಸೂರ್ಯಾಸ್ತ್ರದಿಂದ ಪೂತವಾಗಿತ್ತು. ಅದು ಫಲದ್ರೂಪವಾದ ಹೊರತು ಇರುವದಿಲ್ಲ. ಅದು ಎಲ್ಲಿ ಬಿದ್ದಿರುವದೋ ಅಲ್ಲಿ ಮನುಷ್ಯೋ ತ್ಪತ್ತಿ ಆಗಲಿಕ್ಕೆ ಬೇಕು. ಅದು ಅಮೋಘವದೆ. ನಿನ್ನ ದುರ್ದೈವದಿಂದ ಆದದ್ದಾಯಿತು. ನೀನು ಯಾವ ಸ್ಥಳದಲ್ಲಿ ವಿಭೂತಿಯನ್ನು ಚೆಲ್ಲಿರುವಿಯೋ ಅದನ್ನಾದರೂ ನನಗೆ ಕೃಪೆ ಮಾಡಿ ತೋರಿಸು. ನಿನ್ನ ಮೇಲೆ ಸಿಟ್ಟಾದರೆ ನನಗೆ ಯಾವಲಾಭವೂ ಆಗಲಾರದು. ತಾಯಿ! ಆ ಸ್ಥಳವನ್ನು ತೋರಿಸು.

ನಾಥನ ಮಾತನ್ನು ಕೇಳಿ ಸರಸ್ವತಿಯು ಭಯರಹಿತಳಾದಳು. ಆಕೆ ಯ ಮುಖವು ಕಮಲದಂತೆ ಅರಳಿತು. ಅವಳು ನಾಥನೊಡನೆ ತಿಪ್ಪಿಯ ಕಡೆಗೆ ಹೋದಳು. ಆ ತಿಪ್ಪಿಯು ಬಹು ದಿವಸಗಳಿಂದ ಸಂಚಿತವಾದ್ದರಿಂದ ಅದು ಪರ್ವತೋಪಾದಿಯಲ್ಲಿ ಕಾಣಿಸುತ್ತಿತ್ತು. ಆ ಗುಂಪಿನಲ್ಲಿ ಸರಸ್ವತಿ ಯು ವಿಭೂತಿಯನ್ನು ಒಗೆದೆನೆಂದು ಹೇಳಲು ನಾಥನು ದೊಡ್ಡ ದನಿಯಿಂದ ನುಡಿದನೇನಂದರೆ—"ಹೇ, ಹರಿನಾರಾಯಣಾ, ಹೇ ಪ್ರತಾಪವಂತವಿತ್ರಾ, ಹೇ ಸೂರ್ಯತನಯಾ, ನೀನು ಒಂದು ವೇಳೆ ಈ ತಗಣೆಯ ಗುಂಪಿನಲ್ಲಿ ವಾಸಿಸಿದ್ದರೆ ಈ ಕಾಲಕ್ಕೆ ಕೂಡಲೆ ಹೊರಬೀಳು." ಈ ಪರ್ವತೋಪಾ ದಿಯಲ್ಲಿರುವ ಈ ಗೊಬ್ಬರದಲ್ಲಿ ನಿನಗೆ ನರದೇಹಪ್ರಾಪ್ತವಾಗಿದ್ದರೆ ನಾನು

ನಿನಗೆ ಇಂದಿನಿಂದ 'ಗೋರಕ್ಷ'ನೆಂದು ಕರೆಯುತ್ತೇನೆ. ನೀನು ಹನ್ನೆರಡು ವರ್ಷ ಯಾವ ಸ್ಥಳದಲ್ಲಿ ವಾಸ ಮಾಡಿರುವಿಯೋ ಅದಕ್ಕನುಸಾರವಾಗಿ ನಿನಗೆ ಗೋರಕ್ಷನೆಂದು ಕರೆಯುವದು ನನಗೆ ಯೋಗ್ಯವೆನಿಸುತ್ತದೆ. ಗೋರಕ್ಷನಾಥ! ನೀನು ಈಗ ತ್ವರಿತವಾಗಿ ಹೊರಗೆ ಬಾ!!

ಮಚ್ಛಿಂದ್ರನಾಥನು "ಗೋರಕ್ಷನಾಥನೆಂದು ಒದರಿದ ಕೂಡಲೇ ಆ ಗೊಬ್ಬರದ ಗುಂಪಿನಲ್ಲಿ ಮಂಜುಲವಾದ ಧ್ವನಿಯು ಹೊರಬಿದ್ದಿತು. ಏನಂದರೆ—"ಮಹಾರಾಜ, ಗುರುವರ್ಯಾ! ಈ ಸ್ಥಳದಲ್ಲಿ ನಿನ್ನ ಶಿಷ್ಯನಾದ ನಾನು ವಾಸ ಮಾಡಿದ್ದೇನೆ. ಆದರೆ ನನ್ನ ದೇಹವು ಈ ಗೊಬ್ಬರದಲ್ಲಿ ಹುಗಿದು ಹೋಗಿದೆ. ಈ ಗೊಬ್ಬರವನ್ನು ತೋಡಿ ನನ್ನನ್ನು ಹೊರಗೆತೆಗೆ"

ಬಳಿಕ ಮಚ್ಛಿಂದ್ರನು ಸಲಿಕೆ, ಗುದ್ದಲಿಗಳನ್ನು ತರಿಸಿ ಗೊಬ್ಬರದ ಪರ್ವತವನ್ನು ಕೆದರಿಸಿ ಅದರೊಳಗಿಂದ ಗೋರಕ್ಷನಾಥನನ್ನು ಹೊರಗೆ ತೆಗೆದನು. ಗೋರಕ್ಷನಾಥನು ಹೊರಗೆ ಬರಲು ಅವನು ಸೂರ್ಯತುಲ್ಯಕಾಂತಿಯಿಂದ ನಾಲ್ಕೂ ದಿಕ್ಕುಗಳನ್ನು ಪ್ರಕಾಶಮಾನವಾಗ ಮಾಡಿದನು. ಅವನ ದೇಹವು ಮಿಂಚಿನಂತೆ ಹೊಳೆಯುತ್ತಿತ್ತು. ಪೌರ್ಣಿಮೆಯ ಪೂರ್ಣಚಂದ್ರನಂತೆ ಅವನು ತನ್ನ ಅಂಗಕಾಂತಿಯಿಂದ ಶೋಭಿಸುತ್ತಿದ್ದನು. ಭೂಮಿಯಲ್ಲಿ ಮನ್ಮಥನೇ ಈ ಗೋರಖನಾಥನೆಂಬ ಹೆಸರಿನಿಂದ ಅವತರಿಸಿದಂತೆ ಭಾಸವಾಗಹತ್ತಿತು. ಕ್ಷೀರಸಾಗರವನ್ನು ತ್ಯಜಿಸಿ ಚಕ್ರಪಾಣಿಯಾದ ವಿಷ್ಣುಪರಮಾತ್ಮನೇ ಗೋರಕ್ಷನಾಥನ ರೂಪದಿಂದ ಭೂತಲದಲ್ಲಿ ಪ್ರಕಟನಾದಂತೆ ಕಾಣಿಸಹತ್ತಿದನು. ಅವನ ಚರಣಕಮಲಗಳು ಆರಕ್ತವಾಗಿದ್ದವು. ಅವನ ಉಗುರುಗಳು ಇಂದ್ರನೀಲಮಣಿಯ ಕಾಂತಿಯಿಂದ ಯುಕ್ತವಾಗಿದ್ದವು. ಅವನ ಹೊಟ್ಟೆಯು ಸರಳವಾಗಿದ್ದು ತೊಡೆಗಳು ಕದಳೀಸ್ತಂಭಗಳಂತೆ ಶೋಭಿಸುತ್ತಿದ್ದವು. ಅವನ ಟೊಂಕವು ಸಿಂಹಾಕೃತಿಯಂತೆ ಇತ್ತು. ಅವನ ವಕ್ಷಸ್ಥಳವು ಎಲ್ಲ ವಿದ್ಯೆಗಳ ಅದಿಪೀಠವಾಗಿತ್ತು. ಅವನು ಅಜಾನುಬಾಹುವಾಗಿದ್ದನು! ಅವನ ಅಂಗೈಯಲ್ಲಿ ಎಲ್ಲ ಬ್ರಹ್ಮಾಂಡವು ವಾಸಮಾಡಿರುವಂತೆ ಅವನ ಅಂಗೈಯೊಳಗಿನ ರೇಖೆಗಳಿಂದ ಗೊತ್ತಾಗುತ್ತಿತ್ತು. ಕೈಬೆರಳುಗಳು ಸರಳವಿದ್ದು ನಖಗಳು ಬಿದಿಗೆಯ ಚಂದ್ರನನ್ನು ಹೋಲುತ್ತಿದ್ದವು. ಅವನ ಗದ್ದ, ತುಟಿಗಳು ಸುಂದರವಾಗಿದ್ದು ಕಂಠವು ಶಂಖಾಕೃತಿಯುದಾಗಿತ್ತು.

ಅವನ ಹಲ್ಲುಗಳು ಶುಭ್ರವಾಗಿದ್ದವು. ಅವನ ಮುಖವೆಂದರೆ ಎಲ್ಲ ವೇದ ಶಾಸ್ತ್ರಗಳ ನಿವಾಸಸ್ಥಾನವೆಂಬಂತೆ ಕಾಣುತ್ತಿತ್ತು. ಅವನ ಕಣ್ಣುಗಳು ವಿಶಾಲವಾಗಿದ್ದವು ಅವನ ತೇಜಸ್ಸು ಸೂರ್ಯ ಚಂದ್ರರಂತೆ ಪ್ರಕಾಶಮಾನ ವಾಗಿತ್ತು. ಅವನ ಎದೆಯು ವಿಶಾಲವಾಗಿದ್ದು ತಲೆಯ ಮೇಲೆ ಕಪ್ಪು ಬಣ್ಣದ ಉಂಗುರಗೂದಲುಗಳು ಒಪ್ಪುತ್ತಲಿದ್ದವು.

ಈ ಅದ್ಭುತ ಲಕ್ಷಣಗಳಿಂದೊಪ್ಪುವ ಹನ್ನೆರಡು ವರ್ಷಗಳ ಹುಡುಗ ನನ್ನು ಕಂಡು ಸರಸ್ವತಿಯು ತನ್ನ ದುರ್ದೈವಕ್ಕಾಗಿ ವಿಷಾದ ಹೊಂದಿ ನುಡಿ ದದ್ದೇನಂದರೆ—"ನಾನು ನಿಜವಾಗಿಯೂ ದೈವಹೀನಳು! ಈ ದಿವ್ಯ ಪುತ್ರನು ನನ್ನ ಹೊಟ್ಟೆಯಲ್ಲಿ ಹುಟ್ಟಿ ಬರುತ್ತಿದ್ದನು. ಆದರೆ ನನ್ನ ದುರ್ದೈ ವವು ಅಡ್ಡಗಟ್ಟಿದ್ದರಿಂದ ನಾನು ಹತಭಾಗಿನಿಯಾದೆನು. ಹೀಗೆಂದು ಆಕೆಯು ಕಣ್ತುಂಬ ನೀರು ತಂದಳು ಆಕೆಯ ಹೃದಯವು ಮೋಹದಿಂದ ಕರಗಿತು. ಆಕೆಯು ದುಃಖ ಮಾಡ ಮಾಡುತ್ತ ಕೆಲವು ದುಃಶಬ್ದಗಳನ್ನು ಉಚ್ಚರಿಸ ಹತ್ತಿದಳು. ಅವನ್ನು ಕೇಳಿ ನಾಥನು ಸರಸ್ವತಿಯನ್ನು ಕುರಿತು—ತಾಯೀ; ವ್ಯರ್ಥವಾಗಿ ಯಾಕೆ ದುಃಖಿಸುತ್ತೀ? ನಿನ್ನ ದೈವದಲ್ಲಿಲ್ಲದ ಮಗನು ಹೇಗೆ ಪ್ರಾಪ್ತನಾದಾನು. ಉತ್ತಮ ಅನ್ನವು ಸಿದ್ಧವಾದರೂ ಬಾಯಿಯಲ್ಲಿ ಬೀಳುವ ಯೋಗ ಬರಬೇಕಾಗುವದು. ನಾಯಿಗೆ ಮುಂದೆ ಪಂಚಪಕ್ವಾ ನ್ನಗಳಿಂದ ತುಂಬಿದ ತಾಟನ್ನು ಇರಿಸಿದರೂ ಅದು ಜನ್ಮಸ್ವಭಾವದಂತೆ ಎಲ ವನ್ನು ನೆಕ್ಕಲಿಕ್ಕೆ ಹೋಗುವದು, ಇದೇ ನ್ಯಾಯಕ್ಕನುಸರಿಸಿ ಈ ಹುಡು ಗನು ನಿನಗೆ ಲಭಿಸುವ ಯೋಗವಿಲ್ಲ. ನೀನು ವ್ಯರ್ಥವಾಗಿ ಶೋಕ ಮಾಡ ಬೇಡ. ಒಂದು ವೇಳೆ ನೀನು ವಿಲಾಪದಿಂದ ತ್ರಾಸ ಕೊಟ್ಟರೆ ನನಗೆ ಭಯಂಕರವಾದ ಕ್ರೋಧ ಬಂದು ನಿನಗೆ ಶಾಪ ಕೊಡುವ ಪ್ರಸಂಗಬಂದೀತು. ಆದ್ದರಿಂದ ನೀನು ಇಲ್ಲಿಂದ ಹೊರಟುಹೋಗು" ಎಂದನು. ನಾಥನ ಈ ಕ್ರೋಧ ಯುಕ್ತಭಾಷಣವನ್ನು ಕೇಳಿ ಸರಸ್ವತಿಯು ಹೆದರಿದಳು. ಅವಳು ಕೂಡಲೇ ಅಲ್ಲಿಂದ ಕಾಲ್ದೆಗೆದಳು! ಆ ಸ್ತ್ರೀಯು ಹೊರಟು ಹೋದನಂತರ ಗೋರಕ್ಷನು ಮಚ್ಛಿಂದ್ರನಾಥನಿಗೆ ವಂದನೆ ಮಾಡಿದನು. ನಾಥನು ಪ್ರಸನ್ನ ಹೃದಯ ದಿಂದ ಅವನನ್ನು ಅನುಗ್ರಹಿಸಿದನು. ಅವನು ಗೋರಕ್ಷನಿಗೆ ಜ್ಞಾನೋಪದೇ ಶವನ್ನು ಮಾಡಿ ನಾರಾಯಣ ನಾಮ-ಮಂತ್ರವನ್ನು ಹೇಳಿದನು. ಅವನ

ಮಸ್ತಕದ ಮೇಲೆ ವರದಹಸ್ತವನಿಟ್ಟು ಅಜ್ಞಾನವನ್ನು ನಾಶಗೊಳಿಸಿದನು. ಅವನು ತನ್ನ ಕೈಯಿಂದ ಗೋರಕ್ಷನ ಹಣೆಗೆ ಪ್ರಾಸಾದಿಕ ವಿಭೂತಿಯನ್ನು ಹಚ್ಚಿ ಅವನ ಮುಖದ ಮೇಲೆ ಕೈಯಾಡಿಸಿದನು. ಆ ವೇಳೆ ಅವನು ಗೋರಕ್ಷನ ಕೈಹಿಡಿದು ಪ್ರೇಮಾತಿಶಯದಿಂದ ತೀರ್ಥ ಯಾತ್ರೆಗಾಗಿ ತನ್ನ ಸಂಗಡ ಹೊರಡಲು ಆಜ್ಞೆಯನ್ನಿತ್ತನು. ಗೋರಕ್ಷನು ಗುರುವಿನ ಆಜ್ಞೆಯನ್ನು ಶಿರಸಾವಹಿಸಿ ಅವನೊಡನೆ ತೀರ್ಥ ಯಾತ್ರೆಗೆ ಹೊರಟನು.

ಚಂದ್ರಗಿರಿಯನ್ನು ಬಿಟ್ಟು ಅವರಿಬ್ಬರು ಜಗನ್ನಾಥದ ಕಡೆಗೆ ನಡೆದರು. ಮಾರ್ಗದಲ್ಲಿ ಅವರಿಗೆ ಕನಕಗಿರಿಯೆಂಬ ಹೆಸರಿನ ಒಂದು ಊರು ಹತ್ತಿತು. ಆ ಸುಂದರವಾದ ಊರನ್ನು ಕಂಡು ನಾಥನು ಗೋರಕ್ಷನನ್ನುದ್ದೇಶಿಸಿ— "ಗೋರಕ್ಷಾ, ನನಗೆ ಬಹಳ ಹಸಿವೆಯಾಗಿದೆ. ನೀನು ಜೋಳಿಗೆಯನ್ನು ತಕ್ಕೊಂಡು ಊರಲ್ಲಿ ಹೋಗಿ ಮನೆ ಮನೆಗೆ ಭಿಕ್ಷೆಯನ್ನು ಬೇಡಿ ಅನ್ನ ತಂದು ನನ್ನ ಹಸಿವೆಯನ್ನು ಹೋಗಲಾಡಿಸು.'' ಎಂದನು.

ಗುರುಗಳ ಆಜ್ಞೆಯಂತೆ ಗೋರಕ್ಷನಾಥನು ಜೋಳಿಗೆಯನ್ನು ತೆಗೆದುಕೊಂಡು ಊರೊಳಗೆ ಹೋದನು. ಅತ್ತ ಮನೆ ಮನೆಗೆ ಭಿಕ್ಷೆಯನ್ನು ಬೇಡತೊಡಗಿದನು. ತಿರುಗುತ್ತ ಅವನು ಒಬ್ಬ ಬ್ರಾಹ್ಮಣನ ಮನೆಯನ್ನು ಸೇರಿದನು. ಆ ಮನೆಯಲ್ಲಿ ಆ ದಿವಸ ಮನೆಯ ಯಜಮಾನನ ತಂದೆಯ ಶ್ರಾದ್ಧವಿತ್ತು. ಆಮಂತ್ರಿತ ಬ್ರಾಹ್ಮಣರು ಸಂತೃಪ್ತರಾಗಿ ಹೋದನಂತರ ಆ ಯಜಮಾನನು ಇಷ್ಟಮಿತ್ರರ ಸಹವಾಗಿ ಊಟಕ್ಕೆ ಕೊಡುವಷ್ಟರಲ್ಲಿ ಗೋರಕ್ಷನು ಆ ಸ್ಥಳದಲ್ಲಿ 'ಅಲಖ್-ಆದೇಶ' ಎಂದು ಶಬ್ದಮಾಡಿದನು.

ಆ ಬ್ರಾಹ್ಮಣನ ಪತ್ನಿಯು ಬಹು ಚತುರೆಯಿದ್ದಳು. ಆ ಸದ್ಗುಣಸಂಪನ್ನಳಾದ ಸ್ತ್ರೀಯಲ್ಲಿ ಗೋರಕ್ಷನನ್ನು ಕಂಡ ಕೂಡಲೆ ಪ್ರೇಮವುತ್ಪನ್ನವಾಯಿತು. ಇವನು ಯೋಗಭ್ರಷ್ಟ ಮನುಷ್ಯನಿರಬೇಕೆಂದು ತಿಳಿದು ಪೂಜ್ಯಭಾವದಿಂದ ಒಂದು ಪಾತ್ರೆಯನ್ನು ಬಡಿಸಿಕೊಂಡು ಬಂದಳು. ಕೋಸಂಬರಿ, ಪಲ್ಯೆ, ಒಡಿ, ಅನ್ನ, ತೊವ್ವೆ, ತುಪ್ಪ ಮೊದಲಾದ ಎಲ್ಲ ಪದಾರ್ಥಗಳನ್ನು ಯಥೇಷ್ಟವಾಗಿ ಬಡಿಸಿದ್ದಳು. ಅವಳು ಆ ಪಾತ್ರವನ್ನು ಗೋರಕ್ಷನ ಮುಂದೆ ಇಟ್ಟು ನಮಸ್ಕಾರ ಮಾಡಿದಳು. ತುಂಬಿದ ಎಲೆಯನ್ನು ಕಂಡು ಗೋರಕ್ಷನಿಗೆ ಆನಂದವಾಯಿತು. ಈ ಸ್ತ್ರೀಯು ಧನ್ಯಳಿರುವಳೆಂದು ಅವನಿಗೆ ಅನಿಸಿತು.

ಅವನು ಆ ಸ್ತ್ರೀಯನ್ನು ಕುರಿತು—ತಾಯೀ. ನಮ್ಮಿಂದ ನಿನಗೆ ಏನೂ ಉಪಯೋಗವಿಲ್ಲ ವೇಲಾಗಿ ನಮ್ಮ ಓಚಯವು ನಿನಗೆ ಇಲ್ಲದಿದ್ದರೂ ನೀನು ಈ ರೀತಿ ನಮ್ಮ ಮೇಲೆ ಕೃಪೆಮಾಡಿದ್ದನ್ನು ನೋಡಿದರೆ ನಿನ್ನ ಔದಾರ್ಯವು ವ್ಯಕ್ತವಾಗುತ್ತದೆ ಹೀಗೆ ನುಡಿದು ಆ ಎಲೆಯನ್ನು ಜೋಳಿಗೆಯಲ್ಲಿ ಹಾಕಿಕೊಂಡು ಆ ಸ್ತ್ರೀಯನ್ನು ಆಶೀರ್ವದಿಸಿ ಗುರುಗಳ ಕಡೆಗೆ ಹೋದನು. ಗುರುಗಳ ಒಳಗೆ ಒಂದು ಅವರು ಸಾಷ್ಟಾಂಗವಾಗಿ ವಂದಿಸಿ ತನ್ನ ಜೋಳಿಗೆಯನ್ನು ಅವರ ಮುಂದೆ ತೆಗೆದಿಟ್ಟನು. ನಾಥನು ಆ ಜೋಳಿಗೆಯೊಳಗಿಂದ ಬಡಿಸಿದ ಎಲೆಯನ್ನು ತೆಗೆದುಕೊಂಡು ಬಹಳ ಅತ್ಯಹಾಸದಿಂದ ಆ ಸ್ವಾದಿಷ್ಟ ಅನ್ನವನ್ನು ಭಕ್ಷಣ ಮಾಡಿದನು. ಅನ್ನದೊಳಗಿನ ಒಡೆಗಳು ಅವನಿಗೆ ಬಹಳ ರುಚಿಹತ್ತಿದವು. ಅವನು ಎಲ್ಲ ಅನ್ನವನ್ನು ಉಂಡು ಎಲೆಯನ್ನು ತೆರವು ಮಾಡಿದನು. ಆದರೆ ಒಡೆಗಳ ಮೇಲಿನ ಅವನ ಇಚ್ಛೆಯೇ ತೃಪ್ತವಾಗಲಿಲ್ಲ. ಇನ್ನೂ ಕೆಲವು ಆ ಒಡೆಗಳು ಸಿಕ್ಕರೆ ಒಳಿತಾಗುವದೆಂದು ಅಂದನು. ತನ್ನ ಇಚ್ಛೆಯನ್ನು ತೃಪ್ತ ಮಾಡು ದಕ್ಕೋಸ್ಕರ ತಪೋನಿಷ್ಠನಾದ ನಾಥನು ಗೋರಕ್ಷನ ಮುಖವನ್ನು ನೋಡ ಹತ್ತಿದನು. ಆ ಸತ್‌ಶಿಷ್ಯನು ಗುರುಗಳಿಗೆ ನಿಮ್ಮ ಇಚ್ಛೆಯೇನಿರುವದೆಂದು ಕೇಳಿದನು. ನಾಥನು ಒಡೆಗಳ ಇಚ್ಛೆಯನ್ನು ಬಾಯಿಬಿಟ್ಟು ಹೇಳಿದನು. ಗುರುಗಳ ಬಯಕೆಯನ್ನು ತಿಳಿದು ಗೋರಕ್ಷನು ತತ್‌ಕ್ಷಣದಲ್ಲಿದ್ದ ಆ ಬ್ರಾಹ್ಮಣ ಪತ್ನಿಯ ಮನೆಗೆ ಹೋದನು. ಅವನು ದೊಡ್ಡ ಧ್ವನಿಯಿಂದ ಒದರಿ ಆ ಮನೆಯ ಯಜಮಾನತಿಯನ್ನು ಹೊರಗೆ ಬರಮಾಡಿಕೊಂಡನು. ಆಕೆಯು ಹೊರಗೆ ಬಂದ ನಂತರ ಅವನು ದೈನ್ಯೋಕ್ತಿಯಿಂದ—ಅವ್ವಾ ತಾವು ಕೊಟ್ಟ ಒಡೆಗಳು ಬಹಳ ರುಚಿಕರವಾಗಿರುವವು. ನಮ್ಮ ಗುರುಗಳು ಅವುಗಳನ್ನು ಬಹಳ ಆಸ್ಥೆಯಿಂದ ಸ್ವೀಕರಿಸಿದರು. ಆದರೆ ಆ ಒಡೆಗಳನ್ನು ಇನ್ನಷ್ಟು ತಿನ್ನಬೇಕೆಂಬ ಇಚ್ಛೆಯು ನಮ್ಮ ಗುರುಗಳಿಗೆ ಆಗಿರುವದು. ಆದ್ದರಿಂದ ನನಗೆ ಇನ್ನಷ್ಟು ಒಡೆಗಳನ್ನು ಕರುಣಿಸು ಎಂದನು.

ಗೋರಕ್ಷನ ಈ ಮಾತುಗಳು ಆ ಬ್ರಾಹ್ಮಣಪತ್ನಿಗೆ ನಿಜವೆನಿಸಲಿಲ್ಲ. ತನಗೆ ಒಡೆಗಳು ಬೇಕಾಗಿದ್ದು ವ್ಯರ್ಥವಾಗಿ ಗುರುಗಳ ಹೆಸರನ್ನು ಮುಂದೆ

ಮಾಡುತ್ತಾನೆ ಎಂದು ತಿಳಿದಳು. ಆದ್ದರಿಂದ ಅವಳು ಗೋರಕ್ಷನನ್ನು ಕುರಿತು—ಬಾವಾಜೀ, ಒಮ್ಮೆ ಉಶ್ವಾಸದಿಂದ ನಿಮಗೆ ಬಡಿಸಿ ಕೊಟ್ಟೆನು; ಆದರೆ ಈಗ ನಿಮ್ಮ ಗುರುಗಳಿಗೆ ಇನ್ನಿಷ್ಟು ವಡೆಗಳು ಬೇಕಾಗಿದ್ದರೆ ಮಾಡಿ ಕೊಡುವೆನು ಆದರೆ ಈಗ ಮಾತ್ರ ಪುಕ್ಕಟೆಯಾಗಿ ಕೊಡಲಾರೆನು. ಎಂದಳು.

ಆಗ ಗೋರಕ್ಷನು ಒಡೆಗಳ ಸಲುವಾಗಿ ಏನು ಬೇಡಿತ್ತೀರೆಂದು ವಿಚಾರಿಸಲು ಅವಳು—ನೀನು ನಿನ್ನ ಗುರುಭಕ್ತಿ ಪೂರ್ಣವಾಗಿ ನಾನು ಬೇಡಿದ್ದನ್ನು ಕೊಡಬಹುದು ಆರೆ ಪ್ರಯೋಜನವೇನು? ಒಡೆಗಳು ಯಾವಾಗಲೂ ಸಿಗುತ್ತಿರುವದಿಲ್ಲ; ಆದ ಶ್ರಾದ್ಧದ ಪವಿತ್ರವಾದ ಅನ್ನವದೆ ನಿನಗೆ ಆ ಪವಿತ್ರವಾದ ಒಡೆಗಳು ಬೇಕಾಗಿದ್ದರೆ ಅವುಗಳ ಸಲುವಾಗಿ ನೀನು ನಿನ್ನ ಒಂದು ಕಣ್ಣನ್ನು ಕಿತ್ತಿ ಕೊಡು.''

ಈ ಸ್ತ್ರೀಯು ನನ್ನ ಗುರುಭಕ್ತಿಯನ್ನು ಪರೀಕ್ಷಿಸುವದಕ್ಕಾಗಿಯೇ ಕಣ್ಣನ್ನು ಬೇಡುತ್ತಾಳೆ. ಎಂದು ತಿಳಿದು ಗೋರಖನು ಅವಳ ಅಭಿಪ್ರಾಯು ದಂತೆತನ್ನ ಕಣ್ಣನ್ನು ಕೊಡಲಿಕ್ಕೆ ಸಿದ್ಧನಾಗಿ ಕೂಡಲೇ ತನ್ನ ಎರಡು ಬೊಟ್ಟು ಗಳನ್ನು ಕಣ್ಣಲ್ಲಿ ಹಾಕಿ ಕಣ್ಣು ಗುಡ್ಡೆಯನ್ನು ಹೊರಗೆ ತೆಗೆದನು. ಕಣ್ಣಿಗೆ ಅಪಾಯವಾದ್ದರಿಂದ ಅದರೊಳಗಿಂದ ರಕ್ತವು ಹೋರಬಿತ್ತು. ಗಂಗಾನದಿ ಯು ಸ್ವರ್ಗದಿಂದ ಕೆಳಗೆ ಧುಮುಕಿದಂತೆ ಗೋರಕ್ಷನ ನೇತ್ರದೊಳಗಿಂದ ರಕ್ತನದಿಯು ಕೆಳಕ್ಕೆ ಧುಮುಕಲಾರಂಭಿಸಿತು. ಅದು ರಕ್ತವಿರದೆ ಶಿಷ್ಯನ ಗುರುಭಕ್ತಿಯನ್ನು ಪ್ರಕಟಮಾಡುವದಕ್ಕಾಗಿ ಹೊರಟ ಸೇವಾರೂಪೀ ಶಕ್ತಿ ಯೇ ಎಂದು ಹೇಳಬಹುದು. ಆ ವಿಪ್ರಸ್ತ್ರೀಯ ಕಾಮನಾ ರೂಪವಾದ ಪಾತ್ರೆಯಲ್ಲಿ ಆ ಗುರುಭಕ್ತಿಯು ಕೆಂಪುನದಿಯ ರೂಪದಿಂದ ಹರಿಯಲಾರಂಭಿ ಸಿತು. ಆ ಬ್ರಾಹ್ಮಣಪತ್ನಿಯು ಲೀನತೆಯಿಂದ ಯಾವ ಭಾವವನ್ನು ವ್ಯಕ್ತ ಗೊಳಿಸಿದಳೋ ಆ ಲೀಲಾಭಾವರೂಪೀ ಸಗರರ ಉದ್ಧಾರಮಾಡುವದಕ್ಕಾಗಿ ಗೋರಕ್ಷನು ರಕ್ತರೂಪೀ ಭಾಗೀರಥಿಯನ್ನು ತನ್ನ ನೇತ್ರಗಳಿಂದ ತರಿಸ ದನೆಂದು ಹೇಳಿದರೆ ಅತಿಶಯೋಕ್ತಿಯಾಗದು. ಆ ರುಧಿರಪ್ರವಾಹವನ್ನು ಕಂಡು ವಿಪ್ರಸ್ತ್ರೀಯು ಬಹಳ ಚಿಂತೆಯಲ್ಲಿ ಬಿದ್ದಳು. ಭೂಮಿಯ ಮೇಲೆ ಬಿದ್ದ ರಕ್ತವು ಕಂಪಗೆ ಕಾಣಿಸಹತ್ತಿತು. ಆ ಭಯಂಕರವಾದ ಕೃತಿಯನ್ನು ನೋಡಿ ಆ ಬ್ರಾಹ್ಮಣ ಸ್ತ್ರೀಯು ಲಜ್ಜಿತಳಾದಳು. ಒನ್ನ

ವಿನೋದಭಾಷಣವು ವಿಪರ್ಯಾಸವಾಗಿ ಭಯಂಕರವಾಗಿ ಪರಿಣಮಿಸಿದ್ದನ್ನು ನೋಡಿ ಅವಳು ತಳಮಳಿಸಹತ್ತಿದಳು. ಅವಳು ತಾನಾಡಿದ ಮಾತಿಗೆ ಪಶ್ಚಾತ್ತಾಪಪಡಹತ್ತಿದಳು. ಅತುಲಧೈರ್ಯದಿಂದ ತನ್ನ ಕಣ್ಣನ್ನು ಕಿತ್ತು ಗುರುಭಕ್ತಿಯನ್ನು ತೋರಿಸಿದ್ದನ್ನು ಕಂಡು ಆ ಗುರುಭಕ್ತ ಗೋರಕ್ಷನನ್ನು ಕಂಡು ಅವಳಿಗೆ ರವಾಾವಧಿ ಆನಂದವಾಯಿತು. ಅವಳು ತನ್ನಿಂದಲೇ ಈ ಮಹಾತ್ಮನು ಅಂಧನಾದನೆಂಬ ಭೀತಿಯಿಂದ ನಡುಗಹತ್ತಿದಳು. ಕೂಡಲೆ ಅವಳು ಮನೆಯೊಳಗೆ ಹೋಗಿ ಮುಚ್ಚಿಟ್ಟಿದ್ದ ೪-೭ ಒಡೆಗಳನ್ನು ಹೊರಗೆ ತೆಗೆದುಕೊಂಡು ಬಂದು ಗೋರಕ್ಷನ ಮುಂದೆ ಇಟ್ಟಳು; ಮತ್ತು ಕೈಮುಗಿದುಕೊಂಡು ಮಾಡಿದದ್ದೇನಂದರೆ—ಮಹಾರಾಜ, ನಾನು ಅಪರಾಧಿನಿ ಇದ್ದೇನೆ. ನಾನು ತಮ್ಮ ಪರೀಕ್ಷೆಯನ್ನು ಮಾಡುವ ಕುರಿತು ಚೇಷ್ಟೆಯಿಂದ ಮಾತಾಡಿದ್ದಕ್ಕೆ ಹೀಗೆ ಅನರ್ಥವಾಯಿತು. ನಾನು ಬಹಳ ಅನ್ಯಾಯ ಮಾಡಿದೆನು. ತಾವು ನನ್ನನ್ನು ಕ್ಷಮಿಸಬೇಕು. ನೀವು ಕೃಪಾಳುಗಳಾದ ಸಂತರಿದ್ದೀರಿ; ಎರಡನೆಯವರಿಗೆ ಎಂದೂ ಪೀಡೆಯನ್ನು ಕೊಡಲಾರಿರಿ. ಕಮಲದೊಳಗೆ ಕುಳಿತ ಗುಂಗೀಹುಳವು ಸಾಯಂಕಾಲಕ್ಕೆ ಕಮಲವು ಮುಚ್ಚಿದ ಕೂಡಲೆ ಅದರೊಳಗೇ ಉಳಿದು ತನ್ನ ಪ್ರಾಣವನ್ನು ಕೊಡಲಿಕ್ಕೆ ಸಿದ್ಧವಾಗುವದೇ ಹೊರ್ತು ಆ ಕಮಲಕ್ಕೆ ತ್ರಾಸಕೊಡುವದಿಲ್ಲ. ಅದರಂತೆ ತಮ್ಮಂಥ ಸಂತರ ಸ್ಥಿತಿಯದೆ.''

ಆ ಸ್ತ್ರೀಯ ಮಾತಿನ ಮರ್ಮವನ್ನರಿತು ಗೋರಕ್ಷನು ಹೇಳಿದ್ದೇನಂದರೆ—ತಾಯೀ, ಯಾತರ ಸಲುವಾಗಿ ನೀನು ಈ ರೀತಿ ಉದಾಹರಣೆ ಕೊಡುತ್ತೀಯೆಂಬುದು ನನಗೆ ಗೊತ್ತುಂಟು. ಆದರೆ ನೀನು ಭಯಪಡುವ ಕಾರಣವಿಲ್ಲ. ನಾನು ಒಡೆಗಳ ಸಲುವಾಗಿ ಈ ಕಣ್ಣನ್ನು ಕಡೆಗೆ ಮಾಡಿದ್ದೇನೆ; ಈಗ ನಾನು ಈ ಒಡೆಗಳನ್ನು ತೆಗೆದುಕೊಳ್ಳುತ್ತೇನೆ; ನೀನು ಈ ಕಣ್ಣು ಗುಡ್ಡೆಯನ್ನು ನಿರ್ಭಯದಿಂದ ತೆಗೆದುಕೊಳ್ಳಬೇಕು.

ಆ ಸ್ತ್ರೀಯು ಆ ಕಣ್ಣನ್ನು ಸ್ವೀಕರಿಸಲಿಲ್ಲ. ಅವಳು ಮೇಲಿಂದಮೇಲೆ ಗೋರಕ್ಷನಿಗೆ ನಮಸ್ಕಾರ ಮಾಡಿ ಅವನ ಅನುಗ್ರಹವನ್ನು ಬಯಸುತ್ತಿದ್ದಳು. ಅದನ್ನು ನೋಡಿ ಗೋರಕ್ಷನು ಪುನಃ ಅವಳಿಗೆ ಅಭಯವನ್ನು ಕೊಟ್ಟು ತನ್ನ ಕಣ್ಣು ಗುಡ್ಡೆಯನ್ನೂ ಒಡೆಗಳನ್ನೂ ತಕ್ಕೊಂಡು ಅಲ್ಲಿಂದ ಹೊರ ಹೊರ

ಟನು. ಆತನು ನಾಥನ ಮುಂದ ಹೋಗಿ ಒಡೆಗಳನ್ನು ಮುಂದಿಟ್ಟು ನಮಸ್ಕರಿಸಿದನು. ಆ ಕಾಲದಲ್ಲಿ ಗೋರಕ್ಷನು ತನ್ನ ಒಂದು ಕಣ್ಣನ್ನು ಶರಗಿನಿಂದ ಮುಚ್ಚಿದ್ದನು ಚಾಣಾಕ್ಷನಾದ ಮಚ್ಛಿಂದ್ರನಾಗನಿಗೆ ನಡೆದ ಸಂಗತಿಯು ಹೊಳೆಯದೆ ಹೋಗಲಿಲ್ಲ, ಆಗ ಅವನು ಬುದ್ಧಿಪೂರ್ವಕವಾಗಿ ಗೋರಖನನ್ನು ಕುರಿತು—ತಮ್ಮಾ ಕಣ್ಣನ್ನೇಕೆ ಮುಚ್ಚಿರುವೆ? ಎಂದು ಕೇಳಿದನು. ಗುರುಗಳ ಮಾತನ್ನು ಕೇಳಿ ಗೋರಖನು ಅಂಜಿದನು. ನಿಜಸಂಗತಿಯನ್ನು ಹೇಳಿದರೆ ಗುರುಗಳು ಒಡೆಗಳನ್ನೇ ತಿನ್ನಲಿಕ್ಕಿಲ್ಲ ಹೀಗಾದರೆ ಪ್ರಯತ್ನವೆಲ್ಲ ನಿಷ್ಫಲವಾಗುವದು. ಎಂದು ಯೋಚಿಸಿ ನುಡಿದನೇನಂದರೆ—ಮಹಾರಾಜ, ಸ್ವಲ್ಪ ನೋಯುತ್ತಿದ್ದದರಿಂದ ಮುಚ್ಚಿಕೊಂಡಿದ್ದೇನೆ. ತಾವು ಒಡೆಗಳನ್ನು ಸ್ವೀಕರಿಸಬೇಕು.''

ಮಚ್ಛಿಂದ್ರನು ಕಣ್ಣನ್ನು ತೋರಿಸಲೇ ಬೇಕೆಂದು ಹಟ ಹಿಡಿದನು. ನಿರ್ವಾಹವಿಲ್ಲದೆ ಗೋರಖನು ಒಡೆಗಳ ಸಲುವಾಗಿ ನಡೆದ ಎಲ್ಲ ಸಂಗತಿಯನ್ನು ಸವಿಸ್ತಾರವಾಗಿ ಹೇಳಿ ಆ ಸ್ತ್ರೀಗೆ ಅಕಲ್ಯಾಣ ಮಾತ್ರ ಮಾಡಬಾರದೆಂದು ಬೇಡಿಕೊಂಡನು. ಆಗ ಮಚ್ಛಿಂದ್ರನು ಆಶ್ಚರ್ಯಪಟ್ಟು ಶಿಷ್ಯನ ಕೈಯೊಳಗಿನ ಗುಡ್ಡೆಯನ್ನು ಇಸಗೊಂಡು ಸೂರ್ಯಮಂತ್ರವನ್ನು ಜಪಿಸಿದನು. ಆ ಯೋಗೀಶ್ರೇಷ್ಠನ ಮಂತ್ರಸಾಮರ್ಥ್ಯದಿಂದ ಗೋರಖನ ಕಣ್ಣುಗಳು ಮೊದಲಿನಕ್ಕಿಂತಲೂ ತೇಜಃಪುಂಜವಾದವು. ಬಳಿಕ ನಾಥನು ಶಿಷ್ಯನನ್ನು ಆಲಿಂಗಿಸಿ, ತಮ್ಮಾ ನೀನು ಇಂದು ನಿಸ್ಸೀಮ ಗುರುಭಕ್ತಿಯನ್ನು ತೋರಿಸಿ ನನ್ನನ್ನು ಋಣಿಯನ್ನಾಗಿ ಮಾಡಿದೆ. ನಿನ್ನ ಮೇಲೆ ನಾನು ಪ್ರಸನ್ನನಾಗಿರುತ್ತೇನೆ. ಇಂದಿನ ವರೆಗೆ ನಾನು ಸಂಪಾದಿಸಿದ ವಿದ್ಯೆಯನ್ನೆಲ್ಲ ನಿನಗೆ ಕೊಟ್ಟುಬಿಡುತ್ತೇನೆ. ಎಲ್ಲ ಅಸ್ತ್ರವಿದ್ಯೆಯನ್ನೂ ನಿನಗೆ ಹೇಳಿಕೊಡುತ್ತೇನೆ. ಮತ್ತು ನಾನು ಹೊಸದಾಗಿ ರಚಿಸಿದ ಶಾಂಬರೀ ಕವಿತೆಗಳನ್ನೂ ಕೂಡ ನಿನಗೆ ಕಲಿಸುತ್ತೇನೆ. ಎಂದು ನುಡಿದು ಆತನಿಗೆ ಸಮಸ್ತ ವಿದ್ಯೆಗಳನ್ನೂ ಹೇಳಿಕೊಡಲು ಪಕ್ರಮಿಸಿದನು.



# ಅಧ್ಯಾಯ ೧೦

## ಗಹನೀ ಜನ್ಮ.



ವಿಶ್ವ ಹಾಗು ವಿಶ್ವಂಭರರಲ್ಲಿ ಭಿನ್ನಭಾವವಿಲ್ಲ; ಸಮಸ್ತ ಜೀವ ಜಂತುಗಳಲ್ಲಿಯೂ ಅಖಿಲ ಚರಾಚರಗಳಲ್ಲಿಯೂ ಬ್ರಹ್ಮವಸ್ತುವು ವ್ಯಾಪಕ ವಾಗಿರುತ್ತದೆ ಕಲ್ಪಿತವಾದ ವಾಸನಾ, ಕಾಮನಾ, ಇವೆಲ್ಲವುಗಳ ಲಯವು ಒಂದೇ ಬ್ರಹ್ಮವಸ್ತುವಿನಲ್ಲಾಗುತ್ತದೆ ಆತ್ಮಸಾಕ್ಷಾತ್ಕಾರದಿಂದ ಬ್ರಹ್ಮವಸ್ತುವಿನಲ್ಲಿ ಸಾಮರಸ್ಯವುಂಟಾದರೆ ದ್ವೈತಕ್ಕೆ ಎಲ್ಲಿಯೂ ಆಶ್ರಯ ವುಳಿಯುವದಿಲ್ಲ. ಇಂಥ ಬ್ರಹ್ಮವಸ್ತುವಿನಲ್ಲಿ ಗೋರಕ್ಷನು ಸಮರಸವನ್ನು ತಾಳಿದನು ವಾತ, ಪಿತ್ಥ, ಕಫಗಳನ್ನು ನಾಶಗೊಳಿಸುವ ರಸಾ ಯನಗಳು, ಬಂಗಾರ ಮಾಡುವ ವನಸ್ಪತಿಗಳು ಆತನಿಗೆ ಅವಗತವಾದವು. ವೈದ್ಯಶಾಸ್ತ್ರದಲ್ಲಿ ಆವನು ನಿಪುಣನಾದನು ನವರಸಗಳಿಂದ ಯುಕ್ತವಾದ ರಸಾಳ ಕಾವ್ಯವನ್ನು ಮಾಡುವದಕ್ಕಾಗಿ ಹ್ರಸ್ವ, ದೀರ್ಘ, ಮಾತ್ರೆ, ಗಣ, ಅರ್ಥ, ಲಿಂಗ ಮೊದಲಾದವುಗಳ ಜ್ಞಾನವನ್ನು ನಾಥನು ಗೋರಕ್ಷನಿಗೆ ಮಾಡಿಕೊಟ್ಟನು ಋಗ್ವೇದಾದಿ ನಾಲ್ಕು ವೇದಗಳು, ವೇದ, ಛಂದ, ಜ್ಯೋತಿಷ, ಕಲ್ಪ ಶಿಕ್ಷೆ, ವ್ಯಾಕರಣ, ಇತ್ಯಾದಿಗಳು, ಆರುಶಾಸ್ತ್ರಗಳು ಧನುರ್ವಿದ್ಯಾ, ವಾತ, ಮೇಘ, ಮೋಹನ, ಕಾಮ, ಪರ್ವತ, ವಜ್ರ, ವಾಸವ, ಸರ್ಪ, ಗರುಡ, ರುದ್ರ, ಸಂಜೀವನ, ಬ್ರಹ್ಮ, ರಾಕ್ಷಸ, ವಿರಕ್ತ, ಸ್ತವನ, ಹವೆ, ಸ್ಪರ್ಶ, ವಿಭಕ್ತ, ಕಾರ್ತಿಕ, ಶಕ್ತಿ ಇತ್ಯಾದಿ ಅಸ್ತ್ರಗಳು. ವಾತಾಕರ್ಷಣ ಶಾಂಬರೀ ಕವಿತ್ವ ಮೊದಲಾದವುಗಳು ಗೋರಕ್ಷನಿಗೆ ಮಚ್ಛೇಂದ್ರನಿಂದ ಉಪದೇಶಿಸಲ್ಪಟ್ಟವು ಶಾಂಬರೀಮಂತ್ರದ ಪ್ರಭಾವದಿಂದ ಎಲ್ಲ ಮಂತ್ರಗಳ ದೇವತೆಗಳು ಗೋರಕ್ಷನ ಮುಂದೆ ಬಂದು ಪ್ರತ್ಯಕ್ಷವಾಗಿ ಪ್ರಕಟವಾದವು. ನರಸಿ, ಕಾಲಿಕಾ, ಮ್ಹುಮದಾ ಮ್ಹೈಸಾಸುರ, ವೇತಾಳ, ಝೋಟಿಂಗ, ಮಾರುತಿ ಇತ್ಯಾದಿ ಐವತ್ತೆರಡು ಜನ ವೀರರು ಗೋರಕ್ಷನ

ತಲೆಯ ಮೇಲೆ ವರದಹಸ್ತವನ್ನಿಟ್ಟರು. ಶ್ರೀ ರಾಮಚಂದ್ರನೂ ಸಹ ಗೋರಕ್ಷನಿಗೆ ದರ್ಶನ ಕೊಟ್ಟು ಶುಭದಾಯಕವಾದ ಆಶೀರ್ವಾದವನ್ನು ಕೊಟ್ಟನು. ಶ್ರೀಗಜಾನನು ಪ್ರಸನ್ನನಾಗಿ ಗೋರಕ್ಷನನ್ನು ಅಪ್ಪಿಕೊಂಡನು. ಸಿದ್ಧ, ಕಾಳ, ಬಾಳ, ವೀರ ಇತ್ಯಾದಿ ಅಷ್ಟಭೈರವರು, ಕೈಲಾಸನಾಥ ಶಂಕರ, ಬಾಬರದೇವ ಇವರು ಗೋರಕ್ಷನನ್ನು ಅನುಗ್ರಹಿಸಿದರು. ಮುಂಡಾ, ಚಾಮುಂಡಾ, ಶಂಖಿನಿ, ಡಂಖಿನಿ, ಕುಂಡಾ, ರಂಡಾ, ಭಲಾಂಡಾ ಯಕ್ಷಿಣಿ ಇತ್ಯಾದಿ ವನದೇವತೆಗಳು; ಕುಮಾರಿ, ಧನದಾ, ನಂದಾ, ಲಕ್ಷ್ಮೀ, ಬಾಲಾ, ಪ್ರಜ್ಞಾ, ಮಂಗಲಾ, ವಿಮಲಾ ಇತ್ಯಾದಿ ಜಲದೇವತೆಗಳು; ಅಣಿಮಾ, ಲಘಿಮಾ, ಗರಿಮಾ, ಮಹಿಮಾ ಇತ್ಯಾದಿ ಎಂಟು ಸಿದ್ಧಿಗಳು ಗೋರಕ್ಷನಿಗೆ ವರಪ್ರದಾನ ಮಾಡಿ ಮಚ್ಛಿಂದ್ರನನ್ನುದ್ದೇಶಿಸಿ—ಮಹಾರಾಜ, ತಾವು ಈ ಗೋರಕ್ಷನನ್ನು ತಪಶ್ಚರ್ಯಕ್ಕೆ ಕೂಡ್ರಿಸಬೇಕು. ತಪಸ್ಸು ಮತ್ತು ಅನುಷ್ಠಾನ ಇವುಗಳ ಯೋಗದಿಂದ ವಿಲಕ್ಷಣವಾದ ತೇಜಸ್ಸು ಪ್ರಾಪ್ತವಾಗುತ್ತದೆ. ಖಡ್ಗಕ್ಕೆ ನೀರುಣಿಸಿದರೆ ಅದು ಹೇಗೆ ಪ್ರಕಾಶಿಸುವದೋ ಹಾಗೆ ತಪೋತೇಜದಿಂದ ಈ ಗೋರಕ್ಷನ ಎಲ್ಲ ವಿದ್ಯೆಗಳು ಪ್ರಕಾಶಿಸಹತ್ತುವವು. ಈ ಮೇರೆಗೆ ನುಡಿದು ಎಲ್ಲ ದೇವತೆಗಳು ಮಚ್ಛಿಂದ್ರನನ್ನು ವಂದಿಸಿ ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು.

ಬಳಿಕ ಒಂದು ದಿವಸ ಗೋರಖನಾಥನು ಏಕಾಂತದಲ್ಲಿ ಸಂಜೀವಿನೀ ವಿದ್ಯೆಯನ್ನು ಪಠಿಸುತ್ತ ಕುಳಿತಿದ್ದನು. ಆ ಸಮಯದಲ್ಲಿ ಮಚ್ಛಿಂದ್ರನು ಅಲ್ಲಿ ಇದ್ದಿಲ್ಲ. ಗೋರಖನು ತನ್ನ ಪಾಠದಲ್ಲಿ ಮಗ್ನನಾಗಿದ್ದನು. ಆ ಸಮಯದಲ್ಲಿ ಊರೊಳಗಿನ ಕೆಲವು ಹುಡುಗರು ಆಡುತ್ತಾಡುತ್ತ ಆ ಸ್ಥಳಕ್ಕೆ ಬಂದರು. ಆ ಹುಡುಗರ ಕೈಯಲ್ಲಿ ಕೆಸರಿನ ಮುದ್ದಿಯಿತ್ತು. ಹುಡುಗರು ಗೋರಖನ ತೀರ ಸಮೀಪಕ್ಕೆ ಬಂದು—"ಗೋರಕ್ಷ; ನಾವು ಅರಲನ್ನು ತಂದಿದ್ದೇವೆ; ನೀನು ನಮಗೊಂದು ರಥವನ್ನು ಮಾಡಿಕೊಡು. ಎಂದು ಅಂದರು.

ಅದಕ್ಕೆ ಗೋರಖನು—"ಎಲೋ ಹುಡುಗರಿರಾ, ನನಗೆ ರಥವನ್ನು ಮಾಡಲಿಕ್ಕೆ ಬರುವದಿಲ್ಲ. ನೀವೇ ಬಂದಹಾಗೆ ಮಾಡಿಕೊಳ್ಳಿರಿ ಎಂದನು. ಗೋರಖನು ಹೀಗೆನ್ನಲು ಹುಡುಗರು ರಥವನ್ನು ಮಾಡಹತ್ತಿದರು. ಗಾಲಿ,

ತೊಟ್ಟಿಲ, ಈ ೨, ಮೊದಲಾದ ಎಲ್ಲ ಸಾಮಾನುಗಳನ್ನು ಅವರು ಅರಲಿನಿಂದ ಮಾಡಿದರು. ರಥವು ಸಿದ್ಧವಾಗಲು ಆ ರಥಕ್ಕೆ ಸಾರಥಿಯನ್ನು ಮಾಡಬೇಕೆಂಬ ಬುದ್ಧಿಯು ಆ ಹುಡುಗರಿಗೆ ಹುಟ್ಟಿತು. ಕೂಡಲೆ ಅವರು ಕೆಸರಿನ ಉಂಡಿಗಳನ್ನು ಮಾಡಿ ಒಂದರಮೇಲೊಂದು ಇಟ್ಟು ಸಾರಥಿಯ ಗೊಂಬೆಯನ್ನು ರಚಿಸತೊಡಗಿದರು. ಆದರೆ ಅವರಿಗೆ ಅದು ಸಾಧ್ಯವಾಯಿತು. ಆ ಹುಡುಗರು ಗೋರಖನನ್ನು ಕುರಿತು—"ಗೋರಕ್ಷ, ನಮಗೆ ಸಾರಥಿಯನ್ನು ಮಾಡಲಿಕ್ಕೆ ಬಾರದು; ನೀನು ನಮಗೆ ಸಹಾಯ ಮಾಡು. ನಮ್ಮಕ್ಕಿಂತಲೂ ನೀನು ಎಷ್ಟೋ ಜಾಣ ಇದ್ದೀ; ನೀನೇ ನಮಗೆ ಆಡಲಿಕ್ಕೆ ಸಾರಥಿಯನ್ನು ಮಾಡಿಕೊಡು" ಎಂದರು.

ಹುಡುಗರ ಈ ವಿನಂತಿಯನ್ನು ಮಾನ್ಯಮಾಡಿ ಗೋರಖನು ಅವರಿಗೆ ಅರಲು ತರಲಿಕ್ಕೆ ಹೇಳಿದನು. ಹುಡುಗರು ಈ ಮೊದಲು ವಿನಂತಿ ಮಾಡಿಕೊಂಡಾಗ ಅವನು ನಿರಾಕರಿಸಿದ್ದನು. ಆದರೆ ತನಗೆ ಬಂದದ್ದಕ್ಕೆ ನಿರಾಕರಿಸಿದ್ದನೆಂತಲ್ಲ! ಆಗ್ಗೆ ಅದರ ಯೋಗವು ಒದಗಿದ್ದಿಲ್ಲ. ಅವನು ಭೂತಭವಿಷ್ಯ ಕಾಲದೊಳಗಿನ ಅದ್ಭುತ ಸಂಗತಿಗಳನ್ನು ತಿಳಿಯುವಷ್ಟು ಜಾಣನಿದ್ದನು. ಪೂರ್ವಸಂಚಿತಾನುಸಾರ ಬುದ್ಧಿಯು ಪ್ರವರ್ತಿಸುವದು! ಬೀಜದಂತೆ ಫಲವಾಗುವದು! ಮಲತಾಯಿಯು ಧ್ರುವನಿಗೆ ದುಃಖವನ್ನು ಕೊಟ್ಟಳು; ಆದರೆ ಆ ದುಃಖವೇ ಧ್ರುವನಿಗೆ ಶಾಶ್ವತವಾದ ಪದವನ್ನು ಕೊಟ್ಟಿತು; ಇದರಂತೆ ಉಪಮನ್ಯುವಿಗೆ ಕ್ಷೀರಸಮುದ್ರವು ಪ್ರಾಪ್ತವಾಯಿತು ಇರಲಿ. ಪೂರ್ವಜನ್ಮದ ಕರ್ಮಾನುಸಾರ ಪ್ರಾಣಿಗಳಿಗೆ ಯಾವ ಬುದ್ಧಿಯು ಉತ್ಪನ್ನವಾಗುತ್ತದೆಯೋ ಆ ಬುದ್ಧಿಯು ಕ್ಷುಲ್ಲಕವಾಗಿದ್ದರೂ ಪರಿಣಾಮದೃಷ್ಟಿಯಿಂದ ಅತಿ ಮಹತ್ವದ್ದಾಗುತ್ತದೆ. ಅದೇ ಮೇರೆಗೆ ಗೋರಕ್ಷನ ಕೃತಿಯು ಪರಿಣಾಮವಾಯಿತು. ನವನಾರಾಯಣರೊಳಗಿನ ಕರಭಾಜನನೆಂಬ ನಾರಾಯಣನು ಮನುಷ್ಯ ಜನ್ಮಕ್ಕೆ ಬರತಕ್ಕವನಿದ್ದದರಿಂದ ಗೋರಕ್ಷನಿಗೆ ಮಣ್ಣಿನ ಸಾರಥಿಯನ್ನು ಮಾಡುವ ಇಚ್ಛೆಯು ಉತ್ಪನ್ನವಾಯಿತು. ಹುಡುಗರ ವಿನಂತಿಯಂತೆ ಗೋರಖನು ಅರಲನ್ನು ತೆಗೆದುಕೊಂಡು ಮನುಷ್ಯಾಕೃತಿಯ ಒಂದು ಗೊಂಬೆಯನ್ನು ಮಾಡಿದನು. ಅವನು ಗೊಂಬೆಯನ್ನು ರಚಿಸುವಾಗ ಬಾಯಿಂದ ಸಂಜೀವಿನೀ ಮಂತ್ರದ ಉಚ್ಚಾರವನ್ನು ಮಾಡುತ್ತಿದ್ದನು.

ಆ ಮಂತ್ರದ ತೇಜಸ್ಸಿನಿಂದ ಅವನ ಕೆಸರಿನ ಗೊಂಬೆಯು ಪಂಚಭೂತಗಳ ತತ್ವವನ್ನು ಧಾರಣ ಮಾಡಿತು. ಆದರ ಸರ್ವ ಅವಯವಗಳಲ್ಲಿ ಚೇತನೆಯು ಉತ್ಪನ್ನವಾಯಿತು. ಅದರ ಶರೀರದೊಳಗೆ ಅಸ್ಥಿ, ಮಾಂಸ, ರಕ್ತಗಳುತ್ಪನ್ನವಾಗಿ ಮೇಲೆ ಚರ್ಮದ ಹೊದಿಕೆಯು ಸಿದ್ಧವಾಯಿತು. ಆಗ ಭಗವಾನ್ ಕರಭಂಜನನು ಆ ಗೊಂಬೆಯಲ್ಲಿ ಸೇರಿ ಅದನ್ನು ಚೈತನ್ಯಯುಕ್ತವಾಗ ಮಾಡಿದನು. ಮತ್ತು ಬಾಲಸ್ವಭಾವದಿಂದ ರೋದನ ಮಾಡಹತ್ತಿದನು. ಅದನ್ನು ಕಂಡು ಆ ಹುಡುಗರು ಹೆದರಿದರು ಗೋರಕ್ಷನು ಭೂತವನ್ನು ಉತ್ಪನ್ನ ಮಾಡಿದನೆಂದು ಅವರು ಥರಥರ ನಡುಗ ಹತ್ತಿದರು ಈ ಪ್ರಕಾರ ಭೀತರಾಗಿ ಆ ಹುಡುಗರು ದಾರಿ ಸಿಕ್ಕ ಕಡೆಗೆ ಓಡಹತ್ತಿರಲು ಅವರಿಗೆ ಮಾರ್ಗದಲ್ಲಿ ಮಚ್ಛಿಂದ್ರನು ಭೆಟ್ಟಿಯಾದನು. ಆಗ ನಾಥನು ಅವರಿಗೆ ಧೈರ್ಯ ಹೇಳಿ ನಿಲ್ಲಿಸಿದನು ಆಗ ಹುಡುಗರು ನಡೆದ ಎಲ್ಲ ಸಂಗತಿಯನ್ನು ನಿವೇದನ ಮಾಡಿದರು. ಅದನ್ನು ಕೇಳಿ ನಾಥನು ಸಂಶಯಗ್ರಸ್ತನಾದನು. ಹುಡುಗರ ಮಾತಿನ ಮೇಲೆ ಅವನಿಗೆ ಪೂರ್ಣ ವಿಶ್ವಾಸವು ಹುಟ್ಟಲಿಲ್ಲ. ಅವನು ಹುಡುಗರಿಗೆ ಧೈರ್ಯವ ಹೇಳಿ ತನ್ನೊಡನೆ ಬರಲಿಕ್ಕೆ ತಿಳಿಸಿದನು. ಆದರೆ ಆ ಭೂತವು ತಮ್ಮೆಲ್ಲರನ್ನು ತಿನ್ನುವದೆಂಬ ಕಲ್ಪನೆಯಿಂದ ಅವರು ಒಪ್ಪಿಗೆಯನ್ನು ಕೊಡಲಿಲ್ಲ. ಅದನ್ನು ಕಂಡು ನಾಥನು ಅವರಿಗೆ ಹೆಚ್ಚು ಆಗ್ರಹ ಮಾಡದೆ ಭೂತವಿರುವ ಸ್ಥಳವನ್ನು ಮಾತ್ರ ಆ ಹುಡುಗರಿಂದ ಅರಿತುಕೊಂಡು ಮುಂದೆ ನಡೆದನು. ಕೆಲವು ದಿಟ್ಟ ಹುಡುಗರು ನಾಥನ ಹಿಂದೆ ಮೆಲ್ಲ ಮೆಲ್ಲನೆ ನಡೆಯುತ್ತ ಭೂತವಿರುವ ಸ್ಥಳವು ಸಮೀಪಿಸಲು ದೂರಿಂದಲೇ ನಾಥನಿಗೆ ಆ ಸ್ಥಳವನ್ನು ತೋರಿಸಿ ಅಲ್ಲಿಯೇ ನಿಂತುಕೊಂಡವು. ಮಚ್ಛಿಂದ್ರನು ಆಸ್ಥಳಕ್ಕೆ ಹೋಗಿ ನೋಡಲು ಅಲ್ಲಿ ಗೋರಖನು ಇದ್ದಿಲ್ಲ. ಒಂದು ಶಿಶುವು ಮಾತ್ರ ಅಳುತ್ತಿತ್ತು. ಆ ಅರ್ಭಕನ ಬಾಲಸೂರ್ಯನಂತಿರುವ ತೇಜವನ್ನು ನೋಡಿದ ಕೂಡಲೇ ಮಚ್ಛಿಂದ್ರನು ಈತನು ಕರಭಂಜನ ನಾರಾಯಣನೆಂದು ಗುರುತಿಸಿದನು. ಆಗ ಅವನು ತ್ವರೆಯಿಂದ ಬಾಲಕನನ್ನು ಎತ್ತಿಕೊಂಡು ಆ ಸ್ಥಳವನ್ನು ಬಿಟ್ಟು ಹೊರಟನು. ಮಚ್ಛಿಂದ್ರನು ಭೂತವನ್ನು ತೆಗೆದು ಕೊಂಡು ಬಂದು ನಮ್ಮ ಬೆನ್ನು ಹಚ್ಚುವನೆಂದು ತಿಳಿದು ಹುಡುಗರು ದಾರಿ ಸಿಕ್ಕ ಕಡೆಗೆ ಓಡತೊಡಗಿದರು. ಮಚ್ಛಿಂದ್ರನಾಥನು

ಆ ಬಾಲಕನನ್ನು ತೆಗೆದುಕೊಂಡು ಗೋರಖನ ಶೋಧಕ್ಕಾಗಿ ಮನೆ ಮನೆಗ ಳಲ್ಲಿ ನೋಡುತ್ತ ತಿರುಗ ಹತ್ತಿದನು. ಮಚ್ಛಿಂದ್ರನನ್ನು ಕಂಡು ಓಣಿಯೊಳ ಗಿನ ಸಣ್ಣ ಹುಡುಗರು ಅಂಜಿ ಓಡುತ್ತಿದ್ದವು; ಆಗ ಊರೊಳಗಿನ ಜನರು ನಾಥನನ್ನು ತಡೆದ ವಿಚಾರಿಸಿದ್ದೇನಂದರೆ— ಬಾವಾಜೀ, ನೀವು ಹುಡುಗ ರಿಗೆ ಏನು ಭಯ ತೋರಿಸುತ್ತಿರುವಿರಿ? ಮತ್ತು ಈ ಮೊಲೆಕೂಸು ಯಾರ ದು? ನೀವು ಹೀಗೆ ಮನೆ ಮನೆ ಯಾಕೆ ತಿರುಗುತ್ತೀರಿ?''

ಗೋರಕ್ಷನ ಭೆಟ್ಟಿಯಾದ ಹೊರತು ಈ ಪ್ರಶ್ನಕ್ಕೆ ಉತ್ತರ ಕೊಡುವ ದಿಲ್ಲವೆಂದು ಮಚ್ಛಿಂದ್ರನು ಹೇಳುತ್ತಿದ್ದನು ಹೀಗೆ ಹುಡುಕುತ್ತ ಅವನು ಗೋರಕ್ಷನು ಅಡಗಿರುವ ಮನೆಗೆ ಬಂದು ಗೋರಕ್ಷನನ್ನು ಒದರ ಹತ್ತಿದನು. ಗುರುಗಳ ಶಬ್ದವನ್ನು ಕೇಳಿದ ಕೂಡಲೇ ಗೋರಖನು ಅಡಗಿಕೊಂಡ ಸ್ಥಳ ವನ್ನು ಬಿಟ್ಟು ಹೊರಗೆ ಬಂದನು ಆದರೆ ಮಚ್ಛಿಂದ್ರನ ಕೈಯಲ್ಲಿರುವ ಆ ಸಣ್ಣ ಹುಡುಗನನ್ನು ಕಂಡು ಮತ್ತೆ ದೂರ ಓಡಿದನು. ಗೋರಕ್ಷನು ಭಯಗ್ರಸ್ಥನಾದ್ದರಿಂದಲೇ ಹೀಗೆ ಓಡುವನೆಂದು ತಿಳಿದು ಮಚ್ಛಿಂದ್ರನು ತನ್ನ ಮೈಮೇಲಿನ ವಸ್ತ್ರವನ್ನು ತೆಗೆದು ನೆಲದ ಮೇಲೆ ಹಾಸಿ ಅದರ ಮೇಲೆ ಆ ಕೂಸನ್ನು ಮಲಗಿಸಿದನು. ಮತ್ತು ಅವನು ಗೋರಕ್ಷನ ಬೆನ್ನ ಹಿಂದೆ ನಡೆ ದನು. ಕೆಲಹೊತ್ತಿನ ಮೇಲೆ ಒಂದು ಮನೆಯಲ್ಲಿ ಅಡಗಿಕೊಂಡಿರುವ ಗೋರ ಕ್ಷನನ್ನು ಹಿಡಿದನು. ಆಗ ತನ್ನನ್ನು ಹಿಡಿದು ಭೂತದ ಕಡೆಗೇ ಒಯ್ಯುವ ನೆಂದು ತಿಳಿದು ಗೋರಕ್ಷನು ನಡುಗ ಹತ್ತಿದನು. ಅವನು ಗುರುಗಳ ಕೈ ಯಿಂದ ಪಾರಾಗುವ ಯತ್ನವನ್ನು ಮಾಡ ಹತ್ತಿದನು, ಅವನ ಭಯಗ್ರಸ್ತ ಅವಸ್ಥೆಯನ್ನು ಕಂಡು ನಾಥನು ನುಡಿದದೇನಂದರೆ—ಎಲೋ ಗೋರಖ ಸರ್ವ ಭಯವನ್ನು ಬಿಟ್ಟುಕೊಡು. ಆ ಹುಡುಗನು ಭೂತನಲ್ಲ ಅವನು ಮಹಾರಾಜ ಕರಭಂಜನನೆಂಬ ನಾರಾಯಣನಿದ್ದಾನೆ, ಎಂದನು.

ಇದನ್ನು ಕೇಳಿ ಗೋರಕ್ಷನ ಭೀತಿಯು ತುಸ ಕಡಿಮೆಯಾಯಿತು. ಆದರೆ ಆ ಹುಡುಗನ ಜನ್ಮಕಾಲದ ವಿಚಿತ್ರ ಸಂಗತಿಯು ಅವನ ಮನಸ್ಸಿನಲ್ಲಿ ಕಟಿಯುತ್ತಿತ್ತು ಅರಲಿನ ಸಾರಥಿಯನ್ನು ಮಾಡ ಹೋಗಲು ಅದು ಹ್ಯಾಗೆ ಜೀವಗಳೆದುಂಬಿತು? ಎಂದು ಗೋರಕ್ಷನು ಗಾಬರಿಯಾಗಿದ್ದನು. ಅವನು ಕಡೆಗೆ ಗುರುಗಳ ಮುಂದೆ ಎಲ್ಲ ಸಂಗತಿಯನ್ನು ಹೇಳಹತ್ತಿದನು. ಅವನು

ಹೇಳಿದ್ದನ್ನೆಲ್ಲ ಕೇಳಿ, ಮಚ್ಛಿಂದ್ರನು—ಎಲೋ, ನೀನು ಹೀಗೆ ವ್ಯರ್ಥವಾಗಿ ಸಂಶಯದಲ್ಲಿ ಬೀಳಬೇಡ. ಅರಲಿನ ಗೊಂಬೆಯನ್ನು ಮಾಡುತ್ತಿರುವಾಗ ನೀನು ಸಂಜೀವಿನೀ ಮಂತ್ರದ ಉಚ್ಚಾರವನ್ನು ಮಾಡುತ್ತಿದ್ದೆ! ಅದರ ಯೋಗದಿಂದ ಆ ಗೊಂಬೆಯು ಚೈತನ್ಯಯುಕ್ತವಾಯಿತು. ಸೆಗಣಿಯ ಗೊಬ್ಬರದಲ್ಲಿ ನೀನು ಹ್ಯಾಗೆ ಉತ್ಪನ್ನನಾದೆಯೋ ಹಾಗೆ ಈ ಅರಲಿನ ಗೊಂಬೆಯಲ್ಲಿ ಕರಭಂಜನ ನಾರಾಯಣನು ಪ್ರವೇಶ ಮಾಡಿದ್ದಾನೆ; ಇದು ನಿನಗೆ ಹೇಗೆ ಗೊತ್ತಾಗಲಿಲ್ಲ!'' ಎಂದನು.

ಮಚ್ಛಿಂದ್ರನ ಈ ಮಾತಿನಿಂದ ಗೋರಖನ ಎಲ್ಲ ಭೀತಿಯು ನಷ್ಟವಾಯಿತು. ತಾನು ಮಾಡಿದ ಮಣ್ಣಿನ ಮೂರ್ತಿಯಲ್ಲಿ ಭೂತಸಂಚಾರವಾಗದೆ ಅದರಲ್ಲಿ ಮಹಾನ್ ತಪೋರಾಶಿಯು ಪ್ರವೇಶ ಮಾಡಿದ್ದಾನೆಂದು ತಿಳಿದು ಗೋರಕ್ಷನು ಆನಂದಹೊಂದಿದನು. ನಂತರ ಅವನು ಗುರುಗಳ ಹಿಂದಿನಿಂದ ಆ ಮೊಲೆಕೂಸಿನ ಹತ್ತರ ಬಂದನು. ಮತ್ತು ಆ ಹುಡುಗನನ್ನು ಎತ್ತಿಕೊಂಡು ತನ್ನ ಸ್ಥಳಕ್ಕೆ ಬಂದನು. ಬಳಿಕ ಗೋರಕ್ಷನು ಭಿಕ್ಷೆಬೇಡಿ ಆಕಳ ಹಾಲನ್ನು ತಂದನು. ನಾಥನು ಆ ಹುಡುಗನಿಗೆ ಹಾಲನ್ನು ಕುಡಿಸಿದನು. ಇತ್ತ ಗೋರಕ್ಷನು ತನ್ನ ಧೋತರದಿಂದ ಒಂದು ಜೋಳಿಗೆಯನ್ನು ಕಟ್ಟಿ ಅದನ್ನು ಗಿಡಕ್ಕೆ ತೂಗ ಹಾಕಿದನು. ಮಚ್ಛಿಂದ್ರನಾಥನು ಆ ತೊಟ್ಟಿಲದಲ್ಲಿ ಕೂಸನ್ನು ಮಲಗಿಸಿ ತೂಗುತ್ತ ಕುಳಿತುಕೊಂಡನು.

ಈ ಎಲ್ಲ ಸಂಗತಿಯು ಊರೊಳಗೆ ಹಬ್ಬಲು ಆ ಸ್ಥಳದಲ್ಲಿ ಗ್ರಾಮವಾಸಿಗಳ ಜಾತ್ರೆಯು ನೆರೆಯಿತು. ಆ ಕೂಸನ್ನು ಕಂಡು ಸರ್ವರಿಗೂ ಆಶ್ಚರ್ಯವೆನಿಸಿತು. ಆ ಎಲ್ಲ ಜನರು ಉತ್ಸಾಹದಿಂದ ನಾಥನಿಗೆ ಆ ಹುಡುಗನ ವೃತ್ತಾಂತವನ್ನು ಹೇಳಬೇಕೆಂದು ಗಂಟು ಬಿದ್ದರು. ನಾಥನು ಅವರಿಗೆ ಸರ್ವ ಸಂಗತಿಗಳನ್ನು ಶ್ರುತಪಡಿಸಿದನು. ಅವನ್ನು ಕೇಳಿ ಆ ಗ್ರಾಮವಾಸಿಗಳು ದಂಗು ಬಡಿದು ಹೋದರು. ನಾಥನು ಬಹು ಸಾಮರ್ಥ್ಯವಂತನಿದ್ದು, ಅವನಿಂದಲೇ ಈ ಗೋರಕ್ಷನು ಪ್ರತಿಭಾಶಾಲಿಯಾಗಿರುವನೆಂದು ತಿಳಿದರು. ಮತ್ತು ನಾಥನು ಪ್ರತಿಶುಕ್ರಾಚಾರ್ಯರೇ ಆಗಿರುವನೆಂದು ಆತನನ್ನು ಬಹಳವಾಗಿ ಕೊಂಡಾಡಿದರು. ಬಳಿಕ ಅವರು ನಾಥನನ್ನು ನಮಸ್ಕರಿಸಿ ನುಡಿದರೇನಂದರೆ—ಮಹಾರಾಜ, ತಮ್ಮಂಥ ಯೋಗಿಶ್ರೇಷ್ಠರ ದರ್ಶನದಿಂದ ನಾವು ಧನ್ಯ

ರಾದೆವು. ತಾವು ಈ ಶಿಶುವನ್ನು ಕಟ್ಟಿಕೊಂಡು ಹ್ಯಾಗೆ ತೀರ್ಥಾಟನ ಮಾಡುವಿರೆಂದು ನಮಗೆ ಚಿಂತೆಯುತ್ಪನ್ನವಾಗಿದೆ. ಯಾಕಂದರೆ ಮಕ್ಕಳನ್ನು ಸಂರಕ್ಷಿಸುವ ಕೆಲಸವು ಸ್ತ್ರೀಯರದು; ಈ ಕೆಲಸವು ಪುರುಷರಿಂದ ಸರ್ವಥಾ ಆಗದು. ಆದ್ದರಿಂದ ಈ ಬಾಲಕನನ್ನು ಇಲ್ಲಿಯೇ ಯಾರಿಗಾದರೂ ಸಂರಕ್ಷಿಸಲಿಕ್ಕೆ ಕೊಡುವದು ಉಚಿತವಾಗಿ ತೋರುತ್ತದೆ.

ಗ್ರಾಮನಿವಾಸಿಗಳ ಮಾತನ್ನು ಕೇಳಿ ಮಚ್ಛೇಂದ್ರನು—ಅಪ್ಪಗಳಿರಾ, ನಿಮ್ಮ ಮಾತು ನಿಜ; ಆದರೆ ಈ ಹುಡುಗನನ್ನು ಜೋಕೆಮಾಡುವಂಥ ಧರ್ಮಮಾತೆಯು ನಮಗೆಲ್ಲಿ ದೊರೆಯಬೇಕು? ಎಂದನು. ಆಗ ಪುರಜನರು ವಿಚಾರ ಮಾಡಿ—ಮಹಾರಾಜ, ಅದಕ್ಕೆ ಚಿಂತೆ ಮಾಡುವಕಾರಣವಿಲ್ಲ. ಈ ಊರಿನಲ್ಲಿ ಮಧುನಾಮಕ ಬ್ರಾಹ್ಮಣನಿರುವನು. ಅವನು ಸಾತ್ವಿಕನೂ ಆಚಾರಶೀಲನೂ ಇರುವನು. ಅವನಿಗೆ ಗಂಗಾಂಬಿಕೆ ಎಂಬ ಸುಶೀಲ ಪತ್ನಿಯಿರುವಳು. ಆಕೆಯು ಮಹಾ ಸಾಧ್ವಿಯು; ಅವರಿಗೆ ಮಕ್ಕಳಿಲ್ಲ. ನಿಮ್ಮ ಈ ಬಾಲಕನನ್ನು ಅವರು ಬಹುಪ್ರೀತಿಯಿಂದ ಸಂರಕ್ಷಿಸುವರು. ಎಂದರು.

ಮಚ್ಛೇಂದ್ರನು ಸಂತೋಷಪಟ್ಟು ಆ ವಿಪ್ರನ ಹೆಂಡತಿಯನ್ನು ಕರೆಯಿಸಿದನು. ಆ ಸಾಧ್ವಿಯನ್ನು ನೋಡಿ ಸಮಾಧಾನ ಪಟ್ಟು ಆ ಶಿಶುವನ್ನು ಅವರ ಉಡಿಯಲ್ಲಿ ಹಾಕಿ ನುಡಿದನೇನಂದರೆ—ತಾಯಿ, ಈ ಬಾಲಕನು ನಿಮಗೆ ಪೂರ್ವಪುಣ್ಯದಿಂದ ಸಿಕ್ಕಿರುವನು. ಇವನು ಸಾಮಾನ್ಯನಲ್ಲ; ಸಾಕ್ಷಾತ್ ಕರಭಂಜನ ನಾರಾಯಣನು. ಈತನ ಸಂರಕ್ಷಣೆಯನ್ನು ಬಹು ಚನ್ನಾಗಿ ಮಾಡಿರಿ. ಈತನನ್ನು ಅನುಗ್ರಹಿಸುವದಕ್ಕೆ ಪ್ರತ್ಯಕ್ಷ ಶಂಕರನು ಸಹ ನಿಮ್ಮಲ್ಲಿಗೆ ಬರುವನು. ಮುಂದೆ ಶಂಕರನು ನಿವೃತ್ತಿನಾಥನ ಅವತಾರ ಧರಿಸಿದಾಗ ಅನುಗ್ರಹಾರ್ಥವಾಗಿ ಈತನ ಸೇವೆ ಮಾಡುವನು. ನಾವು ಈಗ ತೀರ್ಥ-ಯಾತ್ರೆಗಾಗಿ ಹೋಗುವೆವು. ಹನ್ನೆರಡು ವರ್ಷಗಳ ಮೇಲೆ ಈ ಗೋರಖನಾಥನು ಈ ಹುಡುಗನಿಗೆ ಅನುಗ್ರಹ ಮಾಡುವದಕ್ಕೋಸ್ಕರ ವಾಗಿ ಬರುವನು. ಈತನ ಮೇಲೆ ನಮ್ಮ ಯಾವ ಆಶೆಯೂ ಇಲ್ಲ. ನೀವೇ ನಿಮ್ಮ ಹೊಟ್ಟೆಯ ಮಗನಂತೆ ಜೋಪಾನ ಮಾಡಿರಿ!!

ಈ ಮೇರೆಗೆ ಮಚ್ಛೇಂದ್ರನು ನುಡಿದು ಆ ಬ್ರಾಹ್ಮಣ ದಂಪತಿಗಳ ಮನೆಗೆ ಹೋಗಿ ಅವರನ್ನು ಆಶೀರ್ವದಿಸಿದನು. ಗಂಗಾಬಿಕೆಯು ಆ ಶಿಶುವನ್ನು

ಜೋಪಾನಮಾಡಲಾರಂಭಿಸಿದಳು. ಬಳಿಕ ನಾಥನು ಶಿಷ್ಯರೊಡನೆ ತೀರ್ಥ ಯಾತ್ರೆಗೆ ಹೊರಟನು. ದಾರಿಯಲ್ಲಿ ಗೋರಖನನ್ನು ಪರೀಕ್ಷಿಸಿ ಇನ್ನೂ ಈತನು ಅಪಕ್ವನಾಗಿರುವನು. ಇವನಲ್ಲಿ ತಪಸ್ಸಾಮರ್ಥ್ಯ ಉಂಟಾಗುವಂತೆ ಮಾಡಬೇಕೆಂದು ಯೋಚಿಸಿ ಅವನೊಡನೆ ಬದರಿಕಾಶ್ರಮಕ್ಕೆ ಹೊರಟು ಹೋದನು.

---

# ಅಧ್ಯಾಯ ೧೧

## ಜಾಲಂದರನ ಜನ್ಮವೃತ್ತ.

ಬದರಿಕಾಶ್ರಮದೊಳಗಿನ ಶಿವಮಂದಿರಕ್ಕೆ ಹೋದ ಬಳಿಕ ಆ ಗುರು-ಶಿಷ್ಯರು ಈಶ್ವರನಿಗೆ ನಮಸ್ಕಾರ ಗೈದರು. ಬಳಿಕ ಅವರು ಕೈಜೋಡಿಸಿ ಕೊಂಡು ಶಂಕರನನ್ನು ಸ್ತುತಿಸಲಾರಂಭಿಸಿದರು. "ಹೇ ಈಶ್ವರಾ, ಕೈಯಲ್ಲಿ ತ್ರಿಶೂಲವನ್ನು ಧಾರಣ ಮಾಡಿರುತ್ತೀ; ನೀನು ಪಂಚಾನನನಿದ್ದು ತ್ರಿಪುರಾಂತಕನಿರುತ್ತೀ; ರುಂಡಮಾಲೆ, ಚಿತಾಭಸ್ಮ, ಇವುಗಳ ಯೋಗದಿಂದ ನಿನ್ನ ಶರೀರವು ವಿರಾಜಮಾನವಾಗಿರುತ್ತದೆ. ನೀನು ಪಾರ್ವತಿಯ ಪತಿಯಿದ್ದು ತ್ರಿಪುರರಾಕ್ಷಸನ ವಧವನ್ನು ಮಾಡಿರುತ್ತೀ. ನೀನು ಮನ್ಮಥನನ್ನು ನಾಶ ಗೊಳಿಸಿದ್ದು ದಾನವರಿಗೆ ವರಪ್ರದಾನ ಮಾಡಿರುತ್ತೀ. ನೀನು ಕೈಲಾಸಪತಿ ಯಿದ್ದು ಭಕ್ತರಿಗೆ ಅಕ್ಷಯ ಕಲ್ಯಾಣಕಪ್ರದನಿರುತ್ತೀ; ನೀನು ಆದಿಮೂರ್ತಿ ಇದ್ದು ದಿಗಂಬರನಿದ್ದೀ. ಜಟಾಜೂಟ ಮತ್ತು ಗಂಗಾ ಇವುಗಳ ಯೋಗ ದಿಂದ ನಿನ್ನ ಮಸ್ತಕವು ಶೋಭಾಯಮಾನವಾಗಿರುತ್ತದೆ. ನಿನ್ನ ಕೈಯಲ್ಲಿ ನರಕಪಾಲವಿದ್ದು ನಿನ್ನ ಭಾಲಪ್ರದೇಶವು ಚಂದ್ರಪ್ರಕಾಶಮಾನವಾಗಿರು ತ್ತದೆ. ವ್ಯಾಘ್ರಾಂಬರ, ಗಜಚರ್ಮಗಳು ನಿನ್ನನ್ನು ಭೂಷಿಸುವ ವಸ್ತ್ರಗಳಾ ಗಿರುತ್ತವೆ. ನಿನ್ನ ವಾಸಸ್ಥಾನವು ಕೈಲಾಸವಿದ್ದು ನಿನ್ನ ಸತ್ತೆಯಿಂದಲೇ ಈ ಮಾಯಾ ಚಕ್ರವು ನಡೆದಿರುತ್ತದೆ. ನೀನು ನಮ್ಮಂಥ ದೀನ ಜನರ ಜನನಿ

ಯುಂತೆ ಇರುತ್ತೀ ದೇವತೆಗಳ ಸಂಕಟವನ್ನು ಹರಣ ಮಾಡುವದಕ್ಕಾಗಿ ನೀನು ಕಾಲಕೂಟ ವಿಷವನ್ನು ಪ್ರಾಶನ ಮಾಡಿದ್ದರಿಂದ ನಿನ್ನ ಕಂಠವು ಕಪ್ಪಾಗಿದೆ. ಹೇ, ವೃಷಭವಾಹನನೇ ನಿನ್ನ ಮೂರನೇ ಕಣ್ಣೊಳಗಿನ ಪ್ರಳಯಾಗ್ನಿಗೆ ಅಖಿಲ ಬ್ರಹ್ಮಾಂಡವೂ ನಡಗುತ್ತದೆ. ನೀನು ಶ್ವೇತವರ್ಣದವನಿದ್ದು ತಮೋಗುಣಿ ಆದರೆ ಸತ್ವಮೂರ್ತಿಯಾಗಿರುತ್ತೀ; ಹೇ, ಸರ್ವಾಧೀಶ, ವಿಶ್ವಪತೇ, ನಿನ್ನ ಮೂಲಕವಾಗಿಯೇ ದಾಸಜನರಿಗೆ ರಾಮನಾಮದ ನಿಜವಾದ ಮಹಿಮೆಯು ಗೊತ್ತಾಗುತ್ತದೆ ಎಲ್ಲ ವಿದ್ಯೆಗಳ ಮತ್ತು ಶಕ್ತಿಯ ಅಧೀಶನಾದಂಥ ಗಣಪತಿ ಮತ್ತು ಕಾರ್ತಿಕೇಯ ಇವರನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡ ನೀನು ಧನ್ಯನಿರುತ್ತೀ.

ಈ ಮೇರೆಗೆ ಆ ಗುರು ಶಿಷ್ಯರು ಸ್ತುತಿಯನ್ನು ಮಾಡಲು ಶ್ರೀಶಂಕರನು ಪ್ರಕಟನಾದನು. ಅವನು ನಾಥನಿಗೆ ಆಲಿಂಗನವನ್ನು ಕೊಟ್ಟನು. ಮತ್ತು ಅವನನ್ನು ತನ್ನ ಹತ್ತರ ಕುಳ್ಳಿರಿಸಿಕೊಂಡು ಎಲ್ಲ ಸಂಗತಿಯನ್ನು ವಿಚಾರಿಸಿದನು. ಶಂಕರನು ಗೋರಕ್ಷನನ್ನು ತನ್ನ ಹತ್ತರ ಕರೆದು ವರದ ಹಸ್ತದಿಂದ ಅವನ ಮೇಲೆ ಕೈಯಾಡಿಸಿ ಅಂದದ್ದೇನಂದರೆ—"ಸಾಕ್ಷಾತ್ ಹರಿನಾರಾಯಣನೇ ಈ ಗೋರಕ್ಷನ ರೂಪದಿಂದ ಉದಯನಾಗಿದ್ದಾನೆ. ಮಚ್ಛಿಂದ್ರನಾಥ! ತಾವು ಇವನಿಗೆ ಯೋಗದೀಕ್ಷೆಯನ್ನು ಕೊಟ್ಟದ್ದರಿಂದ ಇವನು ನಿಮ್ಮ ಪುತ್ರನಾಗಿದ್ದಾನೆ. ಇವನು ಎಲ್ಲ ಜಗತ್ತನ್ನು ಉದ್ಧಾರ ಮಾಡುವನು. ಕನಕಗಿರಿಯಲ್ಲಿ ನೀವು ಈ ಗೋರಕ್ಷನಿಗೆ ಅಭ್ಯಾಸ ಮಾಡಿಸಿ ದೇವತೆಗಳನ್ನು ಪ್ರಸನ್ನ ಮಾಡಿಕೊಟ್ಟದ್ದನ್ನು ನಾನು ನೋಡಿದ್ದೇನೆ. ಈ ಗೋರಕ್ಷನು ಎಲ್ಲ ವಿದ್ಯೆ, ಕಲಾ, ಶಾಸ್ತ್ರ, ಮಂತ್ರಗಳನ್ನು ಪಠಿಸಿದ್ದಾನೆ; ಆದರೂ ತಪಶ್ಚರ್ಯದ ಅಭಾವದಿಂದ ಇವನ ಎಲ್ಲ ಜ್ಞಾನವು ಅಪಕ್ವವಾಗಿರುತ್ತದೆ. ನೀರಿಲ್ಲದಿದ್ದರೆ ವೃಕ್ಷವು ಹೇಗೆ ನಿಸ್ತೇಜ ಕಾಣುವದೋ ವೃಕ್ಷಗಳ ಅಭಾವದಿಂದ ಊರು ಹೇಗೆ ಅಮಂಗಲವಾಗುವದೋ ಮೂಗಿಲ್ಲದಿದ್ದರೆ ಮುಖವು ಹ್ಯಾಗೆ ಅಮಂಗಲವಾಗುವದೋ ನೀರು ಅಲ್ಪವಾಗಿದ್ದರೆ ನದಿಯ ಪಾತ್ರೆಯು ಹೇಗೆ ಅಂದಹೀನವಾಗಿ ಕಾಣಿಸುವದೋ ನಕ್ಷತ್ರಗಳು ಇಲ್ಲದಿದ್ದರೆ ರಾತ್ರಿಯು ಹೇಗೆ ಉದಾಸೀನ ಕಾಣಿಸುವದೋ ಆ ಪ್ರಕಾರ ತಪಸ್ಸಿನ ಕೊರತೆಯಿಂದ ಇವನ ಎಲ್ಲ ವಿದ್ಯೆಯ ಭಾಂಡಾರವು ಮಲಿನವೂ,

ನಿಸ್ತೇಜವೂ ಆಗಿರುತ್ತದೆ. ಕ್ಷುಧೆಯಿಂದ ಪೀಡಿತನಾದ ಮನುಷ್ಯನಂತೆ ಈ ಗೋರಕ್ಷನ ಅವಸ್ಥೆಯಾಗಿದೆ. ಆದ್ದರಿಂದ ಹೇ ಮಚ್ಛಿಂದ್ರನಾಥ! ನೀನು ಇವನನ್ನು ತಪಸ್ಸಿಗೆ ಕೂಡ್ರಿಸು; ಅಂದರೆ ಇವನ ಎಲ್ಲ ವಿದ್ಯೆಯು ಪ್ರಜ್ವಲಿತವಾಗುವದು.''

ಶ್ರೀ ಶಂಕರನ ಈ ಸೂಚನೆಯನ್ನು ಮಚ್ಛಿಂದ್ರನು ಸ್ವಾಭಾವಿಕವಾಗಿ ಮಾನ್ಯಮಾಡಿದನು. ಗೋರಕ್ಷನು ವಯಸ್ಸಿನಿಂದ ಸಣ್ಣವನಿದ್ದದರಿಂದ ತಪಸ್ಸಿನಿಂದ ಕ್ಲೇಶವಾಗುವದೆಂದು ಶಂಕರನನ್ನು ಕುರಿತು ನಾಥನು—ಪ್ರಶ್ನೆ ಮಾಡಲು ಅದಕ್ಕೆ ಶಂಕರನು—''ಮಚ್ಛಿಂದ್ರಾ, ನೀನು ಇವನ ಬಗ್ಗೆ ಚಿಂತೆ ಮಾಡಬೇಡ. ಈ ಗೋರಕ್ಷನ ಮೇಲೆ ನಿನ್ನ ವರದ ಹಸ್ತವದೆ. ಆದ್ದರಿಂದ ಇವನಿಗೆ ತಪಸ್ಸಿನಿಂದ ಪೀಡೆಯಾಗುವದಿಲ್ಲ. ಇದರ ಹೊರತು ನಾನು ಸ್ವತಃ ಈ ಗೋರಕ್ಷನ ಯೋಗಕ್ಷೇಮವನ್ನು ವಹಿಸುತ್ತೇನೆ. ನೀನು ನಿಶ್ಚಿಂತನಾಗಿರು.''

ಶಂಕರನು ಈ ಮೇರೆಗೆ ಉದ್ಗಾರವನ್ನು ತೆಗೆಯಲು ಮಚ್ಛಿಂದ್ರನು ಆನಂದಭರಿತನಾದನು. ಜನ್ಮಾಂಧನಿಗೆ ದೃಷ್ಟಿಪ್ರಾಪ್ತವಾದಂತೆ ಅವನು ಹರ್ಷದಿಂದ ಕುಣಿದಾಡಹತ್ತಿದನು. ಗೋರಕ್ಷ ಮತ್ತು ಶಂಕರ ಇವರು ಒಂದೇಆಶ್ರಮದಲ್ಲಿ ಇರುವರೆಂದು ತಿಳಿದು ನಾಥನ ಎಲ್ಲ ಚಿಂತೆಯು ದೂರಾಯಿತು. ಅವನು ತನ್ನ ಮನಸ್ಸಿನಲ್ಲಿ ಯಾವ ಭಾವನೆಯನ್ನು ಧರಿಸಿ ಬಂದಿದ್ದನೋ ಆ ಭಾವನೆಯು ಶಂಕರನ ಕೃಪೆಯಿಂದ ಸಫಲವಾದ್ದರಿಂ ಅವನು ಗೋರಕ್ಷನನ್ನು ಶಂಕರನ ಸ್ವಾಧೀನ ಪಡಿಸಿದನು. ಶುಭವಾರ, ಶುಭತಿಥಿ, ಶುಭ ನಕ್ಷತ್ರ, ಶುಭಗ್ರಹಬಲ ಇವೆಲ್ಲವುಗಳ ಯೋಗವನ್ನು ಸಾಧಿಸಿ ನಾಥನು ಗೋರಕ್ಷನನ್ನು ತಪಸ್ಸಿಗೆ ಕೂಡ್ರಿಸಿದನು. ಉಕ್ಕಿನ ಮುಳ್ಳಿನ ಮೇಲೆ ಎಡಗಾಲಿನ ಅಂಗುಷ್ಠವನ್ನು ಊರಿ ಗೋರಕ್ಷನು ನಿಂತು ತಪಸ್ಸನ್ನಾರಂಭಿಸಿದನು. ಫಲಗಳಿಂದ, ಗಡ್ಡೆಗಳಿಂದ, ಎಲೆಗಳಿಂದ, ಒಮ್ಮೊಮ್ಮೆ ವಾಯುವಿನಿಂದ ಗೋರಕ್ಷನು ತನ್ನ ಹಸಿವೆಯನ್ನು ಹೋಗಲಾಡಿಸುತ್ತಿದ್ದನು. ಸೂರ್ಯಮಂಡಲದ ಕಡೆಗೆ ಅಕ್ಷಯವಾದ ದೃಷ್ಟಿಯನ್ನಿಟ್ಟು ಗೋರಕ್ಷನು ತಪಸ್ಸನ್ನಾಚರಿಸುವದನ್ನು ಕಂಡು ನಾಥನು ಶ್ರೀ ಶಂಕರನ ಅಜ್ಞೆಯನ್ನು ಪಡೆದು ತೀರ್ಥಾಟನಕ್ಕೆ ಹೊರಟು ಹೋದನು. ಹೋಗುವಾಗ ತಾನು ಒಂದು ತಪ

ದನಂತರ ತಿರುಗಿ ಬರುವೆನೆಂದು ಗೋರಕ್ಷನಿಗೆ ಹೇಳಿದನು. ಶ್ರೀ ಶಂಕರನು ಗೋರಕ್ಷನ ಯೋಗಕ್ಷೇಮವನ್ನು ತೆಗೆದುಕೊಳ್ಳಹತ್ತಿದನು. ಅವನ ತಪಸ್ಸು ಸಿದ್ಧಿಸಬೇಕೆಂದು ಶ್ರೀ ಆದಿನಾಥ ಶಂಕರನು ತಪಸ್ಸಿಗೆ ಬರುವ ವಿಘ್ನಗಳನ್ನು ನಾಶಗೊಳಿಸುವದರಲ್ಲಿ ಯಾವಾಗಲೂ ದಕ್ಷನಾಗಿದ್ದನು.

ಗಯಾ, ಪ್ರಯಾಗ, ಕಾಶಿ, ಅವಂತಿಕಾ, ಮಿಥಿಲಾ, ಮಥುರಾ, ಕಾಶ್ಮೀರ, ಅಯೋಧ್ಯಾ, ದ್ವಾರಕಾ, ಸೋಮನಾಥ, ಬ್ರಹ್ಮಗಿರಿ, ತ್ರ್ಯಂಬಕೇಶ್ವರ, ಘೃಷ್ಣೇಶ್ವರ ಭೀಮಾಶಂಕರ, ನಾಗನಾಥ, ಪಂಢರಪುರ, ಕಾರ್ತಿಕಸ್ವಾಮಿ, ಮಲ್ಲಿಕಾರ್ಜುನ, ಶೇಷಾದ್ರಿ, ಹೀಗೆ ಅನಂತ ತೀರ್ಥಗಳನ್ನೂ ಭಾಗೀರಥಿಯಂಥ ಪವಿತ್ರವಾದ ನದಿಗಳ ಸ್ನಾನವನ್ನೂ ಮಾಡಿಕೊಂಡು ಕೊನೆಗೆ ನಾಥನು ಸೇತುಬಂಧ ರಾಮೇಶ್ವರಕ್ಕೆ ಬಂದನು ಅಲ್ಲಿ ಅವನು ಮಾರುತಿಯ ದರ್ಶನವನ್ನು ಹೊಂದಿ ಸಾಷ್ಟಾಂಗಗೈದನು. ನಾಥನನ್ನು ಕಂಡು ವಾಯುತನಯನಾದ ಮಾರುತಿಗೆ ಬಹಳ ಆನಂದವೆನಿಸಿತು ಮಾರುತಿಯು ನಾಥನಿಗೆ ಗಾಢವಾದ ಆಲಿಂಗನವನ್ನು ಕೊಟ್ಟು ನಾಥನನ್ನುದ್ದೇಶಿಸಿ—ಹೇ, ಸಮರ್ಥ ನಾಥನೇ; ಇಂದಿಗೆ ೨೪ ವರ್ಷಗಳ ಮೊದಲು ನನ್ನ ನಿನ್ನ ಭೆಟ್ಟಿಯಾಗಿತ್ತು ನನ್ನಂಥ ಆಲಸ್ಯನ ಬಳಿಗೆ ಈ ಹೊತ್ತು ನಿನ್ನ ಚರಣರೂಪವಾದ ಗಂಗೆಯು ತನ್ನಿಂದ ತಾನೇ ನಡೆದು ಬಂದಳು ಇಂದು ದೊಡ್ಡ ಪರ್ವಣಿಯೆಂದು ನಾನು ತಿಳಿಯುತ್ತೇನೆ ಹೇ ಸದಯಾಂತಃಕರುಣೆಯಾದ ಮಿತ್ರಾ, ಈ ೨೪ ವರ್ಷಗಳಿಂದ ನನ್ನ ಕಣ್ಣುಗಳೆಲ್ಲ ನಿನ್ನ ಕಡೆಗೇ ನಟ್ಟಿದ್ದವು. ನನ್ನ ಮನಸ್ಸಿನಲ್ಲಿ ಚಿಂತಾರೂಪವಾದ ನದಿಯು ಉದ್ಭವಿಸಿ ಆ ಜಲದಲ್ಲಿ ನಾನು ಪೂರ್ಣವಾಗಿ ಮುಳುಗಿ ಹೋಗಿರಲು ನೀನು ಅದರಿಂದ ರಕ್ಷಿಸುವದಕ್ಕಾಗಿ ವಚನವನ್ನು ಕೊಟ್ಟಿರುವೆ? ಆದರೆ ಪ್ರತ್ಯಕ್ಷ ಕಾರ್ಯವಾಗುವ ವರೆಗೆ ವ್ಯರ್ಥ ಬರೇ ಮಾತಿನಿಂದ ನನ್ನ ಪೀಡೆಯು ಹೇಗೆ ದೂರವಾಗುವದು? ಇಲ್ಲಿಯವರೆಗೂ ನೀನು ನನ್ನನ್ನು ಕಡೆಗೆ ಮಾಡಲಿಲ್ಲ; ನನಗೆ ವಚನಕೊಟ್ಟು ೨೪ ವರ್ಷಗಳಾದವು. ಇಷ್ಟು ಅವಧಿಯಲ್ಲಿ ನೀನು ಸ್ತ್ರೀರಾಜ್ಯದ ದರ್ಶನವನ್ನು ಕೂಡ ತೆಗೆದುಕೊಂಡಿಲ್ಲ. ಈಗಾದರೂ ಸ್ತ್ರೀರಾಜ್ಯದಲ್ಲಿ ಹೋಗಿ ನೀನು ನನ್ನ ವಚನವನ್ನು ಪೂರ್ಣಗೊಳಿಸು.

ಸ್ತ್ರೀರಾಜ್ಯದ ಸ್ವಾಮಿನಿಯಾದ ಕೀಲೋತಳೆಯು ನನ್ನನ್ನು ವಚನ ಬದ್ಧನನ್ನಾಗಿ ಮಾಡಿದ್ದಾಳೆ. ಅದ್ದರಿಂದ ನೀನು ಸ್ತ್ರೀರಾಜ್ಯದಲ್ಲಿ ಹೋಗಿ ಅಲ್ಲಿ ರಾಜ್ಯಸುಖವನ್ನನುಭವಿಸ ಹತ್ತಿದರೆ ನೀನೂ ವಚನದಿಂದ ಮುಕ್ತನಾಗುವಿ. ನಾನೂ ಆಗುವೆನು, ಎಂದನು.

ಹನುಮಂತನ ಮಾತನ್ನು ಕೇಳಿ ಮಚ್ಛಿಂದ್ರನು ಹಾಗೆ ಮಾಡಲಿಕ್ಕೆ ಒಪ್ಪಿಗೆಯನ್ನು ಕೊಟ್ಟನು. ಮೂರು ದಿವಸಗಳ ವರೆಗೆ ಅಲ್ಲಿ ಇದ್ದು ಬಳಿಕ ಮಚ್ಛಿಂದ್ರ-ಮಾರುತಿಯರು ಸೇತುಬಂಧನದಿಂದ ಹೊರಟರು ಮಾರ್ಗಗಳಲ್ಲಿ ಅನೇಕ ತೀರ್ಥ-ಯಾತ್ರೆಗಳನ್ನು ಮಾಡುತ್ತ ಮಾಡುತ್ತ ಅವರು ಗೌಡ ಬಂಗಾಲದ ಮೇಲಿಂದ ಸ್ತ್ರೀರಾಜ್ಯಕ್ಕೆ ಹೋದರು.

ಆ ಸ್ತ್ರೀರಾಜ್ಯದಲ್ಲಿ ಕೀಲೋತಳೆ ಎಂಬ ಹೆಸರಿನ ರಾಣಿಯು ರಾಜ್ಯವಾಳುತ್ತಿದ್ದಳು. ಅವಳು ಬಹಳ ಪುಣ್ಯವಂತಳೂ ಜ್ಞಾನಸಂಪನ್ನಳೂ ಇದ್ದಳು. ಅವಳ ವೈಭವವು ಅಮಯೋದಿತವಾಗಿತ್ತು ಆನೆ, ಕುದುರೆ, ಒಂಟೆ ಇವು ಅವಳ ಹತ್ತಿರ ಅಪಾರವಿದ್ದವು ಅವಳ ಹತ್ತಿರ ಅನೇಕ ರಥಗಳಿದ್ದು ಅವುಗಳ ಸಾರಥಿಗಳು ರತ್ನ, ಮುತ್ತುಗಳಿಂಧ ಯುಕ್ತರಾಗಿದ್ದರು. ಚೋಪದಾರ ಜನರು ಅಲಂಕಾರ ಮಂಡಿತರಾಗಿದ್ದರು. ಅವಳ ಪ್ರಧಾನರು ಬಹು ಚತುರರಿದ್ದರು. ಶಾಸ್ತ್ರೀ, ಪಂಡಿತ, ಲೇಖಕ ಇವರೆಲ್ಲರನ್ನು ಆ ರಾಣಿಯು ಚನ್ನಾಗಿ ಪರಾಮರ್ಷಿಸುತ್ತಿದ್ದಳು. ಆಕೆಯು ಐದನರಿಲ್ಲಿ ಕುದುರೆಯಸ್ವಾರರೂ, ಕಾಲಾಳುಗಳೂ ಅಸಂಖ್ಯಾಕರಿದ್ದರು ಕಾರಭಾರಿಗಳು, ಗವಾಯಿಗಳು, ಪಹಿಲವಾನರು ಹೀಗೆ ಎಷ್ಟೋ ಜನರಿಗೆ ಅವಳು ಚನ್ನಾಗಿ ಆಶ್ರಯ ಕೊಡುತ್ತಿದ್ದಳು. ವಿಶೇಷವಾಗಿ ಹೇಳತಕ್ಕ ಸಂಗತಿಯಂದರೆ—ಆ ರಾಣಿಯ ರಾಜ್ಯದಲ್ಲಿ ಈ ಎಲ್ಲ ಕೆಲಸಗಳನ್ನೂ ಸ್ತ್ರೀಯರೇ ಮಾಡುತ್ತಿದ್ದರು.

ಮಚ್ಛಿಂದ್ರ-ಮಾರುತಿಯರು ಆ ರಾಜ್ಯದಲ್ಲಿ ಸೇರಿ ರಾಜಧಾನಿಗೆ ಹೋದರು. ರಾಣಿಗೆ ತಾವು ಬಂದ ಸಂಗತಿಯನ್ನು ತಿಳಿಸಿ ಅವರಿಬ್ಬರು ರಾಜದ್ವಾರದಲ್ಲಿ ಹೋಗಿ ನಿಂತುಕೊಂಡರು. ಕೀಲೋತಳೆಗೆ ಆ ವರ್ತಮಾನವು ತಿಳಿಯಲು ಅವರನ್ನು ಎದುರಗೊಂಡು ಬಹಳ ಆದರಪೂರ್ವಕವಾಗಿ ರಾಜವಾಡೆಯಲ್ಲಿ ಕರೆತಂದು ಕನಕಾಸನದ ಮೇಲೆ ಕುಳ್ಳಿರಿಸಿದಳು. ಅವಳು ಅವರಿಬ್ಬರಿಗೆ ಷೋಡಶೋಪಚಾರದಿಂದ ಪೂಜೆಯನ್ನು ಮಾಡಿದಳು. ಅವಳು

ಮಾರುತಿಯನ್ನು ಗುರುತಿಸಿದಳು. ಆದರೆ ಮಚ್ಛೇಂದ್ರನು ಯಾರೆಂಬದು ಮಾತ್ರ ಆಕೆಗೆ ಗೊತ್ತಾಗಲಿಲ್ಲ. ಆ ಬಗ್ಗೆ ಆಕೆಯು ಮಾರುತಿಗೆ ಪ್ರಶ್ನೆ ಮಾಡಿದಳು. ಆವಾಗ ಮಾರುತಿಯು ಹೇಳಿದ್ದೇನಂದರೆ—"ಹೇ ರಾಜ್ಞೀ; ನೀನು ಇಲ್ಲಿಯ ವರೆಗೆ ಮಾಡಿದ ತಪಸ್ಸಿನ ಫಲವು ನಿನಗೆ ಇಂದು ಪ್ರಾಪ್ತವಾಗಿದೆ. ನಾನು ನಿನಗೆ ಮಚ್ಛೇಂದ್ರನ ಭೆಟ್ಟೀ ಮಾಡಿಸಿ ಕೊಡುವದಾಗಿ ವರದಾನ ಮಾಡಿದ್ದೆನು. ಇವನೇ ಆ ಮಚ್ಛೇಂದ್ರನಾಥನು. ಪಾರ್ವತಿಗೆ ಹೇಗೆ ಶಂಕರನೋ ಹಾಗೆ ನಿನಗೆ ಈ ಮಚ್ಛೇಂದ್ರನಿರುವನು. ಶಚಿಯು ಯಾವ ಪ್ರಕಾರ ಇಂದ್ರನ ಸೇವೆ ಮಾಡುವಳೋ ಆದರಂತೆ ನೀನು ಇವನ ಸೇವೆಯನ್ನು ಮಾಡು."

ಹೀಗೆಂದು ಆ ವಜ್ರಶರೀರಿಯಾದ ಹನುಮಂತನು ಸುಮ್ಮನಾದನು. ಅವನ ಮಾತಿನೊಳಗಿನ ಎಲ್ಲ ಮರ್ಮವನ್ನು ಕೀಲೋತಳೆಯು ಅರಿತುಕೊಂಡಳು. ಮೂರು ದಿವಸಗಳನ್ನು ಅಲ್ಲಿ ಕಳೆದು ಮಾರುತಿಯು ಅಲ್ಲಿಂದ ಹೊರಟು ಪುನಃ ಸೇತುಬಂಧನಕ್ಕೆ ಬಂದು ರಾಮಚಿಂತನದಲ್ಲಿ ಇರಹತ್ತಿದನು. ಗೊತ್ತುಪಡಿಸಿದಂತೆ ಮಚ್ಛೇಂದ್ರನಾಥನು ಅಲ್ಲಿಯೇ ಉಳಿದನು.

ಮಚ್ಛೇಂದ್ರನಿಗೆ ಕೀಲೋತಳೆಯ ರಾಜಸಿಂಹಾಸನವು ಪ್ರಾಪ್ತವಾಯಿತು. ಅವನು ಕಂಠದಲ್ಲಿ ಮುತ್ತಿನ ಸರವನ್ನು ಧರಿಸಿದನು ಕೈಯಲ್ಲಿ ಕಡೆ ಬೆರಳುಗಳಲ್ಲಿ ಉಂಗರ, ಕಿವಿಯಲ್ಲಿ ಕುಂಡಲ ಮೊದಲಾದ ಎಲ್ಲ ಅಲಂಕಾರಗಳಿಂದ ಮಂಡಿತನಾಗಿ ನಾಥನು ರಾಜಭೋಗದಲ್ಲಿ ಮಗ್ನನಾದನು. ನೂರುಗಟ್ಲೆ ದಾಸೀಜನರು ನಾಥನನ್ನು ಸೇವಿಸುವದರಲ್ಲಿ ತತ್ಪರರಾಗಿದ್ದರು. ಆಕಾಶದಲ್ಲಿ ನಕ್ಷತ್ರಗಳಿಂದ ಸುತ್ತಲ್ಪಟ್ಟ ಚಂದ್ರನಂತೆ ಆ ಪರಿಜನರಿಂದ ಪರಿವೇಷ್ಟಿತನಾದ ನಾಥನು ಶೋಭಿಸುತ್ತಿದ್ದನು. ದೇವಗಣದಲ್ಲಿ ಹೇಗೆ ಇಂದ್ರನು ಶೋಭಿಸುವನೋ ಹಾಗೆ ಆ ಸ್ತ್ರೀ ಸಮುದಾಯದಲ್ಲಿ ನಾಥನು ಒಪ್ಪಹತ್ತಿದನು. ದ್ಯೂತ ಮೊದಲಾದ ಆಟಗಳಿಂದಲೂ, ಹೊತ್ತುಗಳೆಯುವ ಮಾತಿನಿಂದಲೂ, ವಿನೋದಪರವಾದ ಭಾಷಣಗಳಿಂದಲೂ ಎಲ್ಲ ದಾಸೀಜನರು ಅವನ ಮನರಂಜನ ಮಾಡುತ್ತಿದ್ದರು. ಕಾರಭಾರಿ ಜನರು ತಾವು ಮಾಡಿದಂಥ ಕೆಲಸವನ್ನು ನಾಥನಿಗೆ ನಿವೇದನ ಮಾಡುತ್ತಿದ್ದರು. ವೇದಜ್ಞರು, ರಸಜ್ಞರು, ಕವಿಗಳು, ಜೋತಿಷಿಗಳು, ಭವಿಷ್ಯವಾದಿಗಳು, ಗವಯಿಗಳು,

ವಾದ್ಯ ಬಾರಿಸುವವರು, ವೈದ್ಯರು, ಶಾಸ್ತ್ರಿಗಳು, ಈ ಎಲ್ಲ ಜನರು ತಮ್ಮ ತಮ್ಮ ಜ್ಞಾನವನ್ನು ಹೇಳಿ ನಾಥನನ್ನು ರಮಿಸುತ್ತಿದ್ದರು. ರಾಜ ಸಭೆಯಲ್ಲಿ ತನ್ನನ್ನು ಬಹಳವಾಗಿ ಮನ್ನಿಸುವದನ್ನು ಕಂಡು ನಾಥನು ಸಂತುಷ್ಟನಾದನು. ಕೀಲೋತಳೆಯು ರಾಜ್ಯವು ಅಗಾಧವಾದ ಸುಖಸಾಗರದಂತೆ ಇದ್ದು ತಾನು ಅದರಲ್ಲಿ ಯಥೇಷ್ಟ ಸಂಚಾರ ಮಾಡುವ ಮೀನದೋಪಾದಿಯಲ್ಲಿರುವೆನೆಂದು ನಾಥನಿಗೆ ಅನಿಸಿತು.

ಈ ಮೇರೆಗೆ ಕೀಲೋತಳೆಯ ಸಂಗಸುಖವನ್ನನುಭವಿಸುತ್ತ ನಾಥನು ಬಹಳ ದಿವಸಗಳನ್ನು ಕಳೆದನು. ಕೆಲವು ದಿವಸಗಳಲ್ಲಿ ರಾಣಿಯು ಗರ್ಭವತಿಯಾದಳು. ನವಮಾಸಗಳು ಪೂರ್ಣವಾಗಲು ಅವಳು ಪ್ರಸೂತಿಯಾದಳು. ಅವಳಿಗೆ ಸೂರ್ಯನಂತೆ ತೇಜಸ್ವಿಯಾದ ಬಾಲಕನು ಜನಿಸಿದನು. ಅವನಿಗೆ ಹನ್ನೆರಡು ದಿವಸವಾಗಲು ಅವರು ಬಹಳ ಸಂಭ್ರಮದಿಂದ ಉತ್ಸವ ಮಾಡಿ ಆ ಹುಡುಗನಿಗೆ ಮೀನನಾಥನೆಂಬ ನಾಮಕರಣ ಮಾಡಿದರು. ಪುತ್ರೋತ್ಸವದ ನಿಮಿತ್ಯವಾಗಿ ನಾಥನೂ ಕೀಲೋತಳೆಯೂ ಯಾಚಕರಿಗೆ ಸುವರ್ಣ, ಮುತ್ತು ಮೊದಲಾದ ದ್ರವ್ಯಗಳನ್ನು ದಾನ ಮಾಡಿದರು. ಮೀನನಾಥನೂ ತನ್ನ ಬಾಲ ಲೀಲೆಗಳಿಂದ ಮಚ್ಛಿಂದ್ರನಾಥ ಕೀಲೋತಳೆಯರ ಮನಸ್ಸನ್ನು ರಮಿಸುತ್ತಿದ್ದನು.

ಹೀಗೆ ಮಚ್ಛಿಂದ್ರನು ಐಹಿಕ ವಿಷಯೋಪಭೋಗಗಳಲ್ಲಿ ಮಗ್ನನಾಗಿರಲು, ಇತ್ತ ಹಸ್ತಿನಾಪುರದಲ್ಲಿ ಜನಮೇಜಯರಾಯನ ವಂಶದಲ್ಲಿ ಬೃಹದ್ರವನೆಂಬ ರಾಜನಿದ್ದನು. ಆ ಬೃಹದ್ರವನು ಜನಮೇಜಯನಿಂದ ಏಳನೆಯ ತಲೆಯವನು. ಕಲಿಯುಗದ ಎರಡುಸಾವಿರದ ಏಳುನೂರು ವರ್ಷಗಳು ಗತಿಸಿದಾಗ ಈ ಬೃಹದ್ರವನು ಹಸ್ತಿನಾಪುರದಲ್ಲಿ ರಾಜ್ಯವನ್ನಾಳುತ್ತಿದ್ದನು. ಒಂದುಕಾಲದಲ್ಲಿ ಈ ರಾಜನು ಅನೇಕ ಬ್ರಾಹ್ಮಣರಿಂದೊಡಗೂಡಿ ಸೋಮಯಾಗವನ್ನು ಆರಂಭಿಸಿದನು ಅವನು ಆ ಯಜ್ಞವನ್ನು ಒಂದುವರ್ಷದ ವರೆಗೆ ಸಾಗಿಸಿದನು. ಒಂದೇ ಸವನೆ ಹನ್ನೊಂದು ತಿಂಗಳವರೆಗೆ ಆಹುತಿ ಭಕ್ಷಣಮಾಡಿ ಅಗ್ನಿಯು ಬಹಳ ಪುಷ್ಟನಾಗಿದ್ದನು. ಒಂದು ವರ್ಷದ ನಂತರ ಪೂರ್ಣಾಹುತಿಯನ್ನು ಅರ್ಪಿಸಿ ಬೃಹದ್ರವನು ಯಜ್ಞವನ್ನು ಸಮಾರೋಪಿಸಿದನು. ಬಳಿಕ ಯಜ್ಞಕುಂಡದಲ್ಲಿ ಗುಡ್ಡದಂತೆ ಬಿದ್ದಿರುವ ಬೂದಿಯು

ಸಂಚಯವನ್ನು ಬ್ರಾಹ್ಮಣರ ಕಡೆಯಿಂದ ಕಡೆಗೆ ತೆಗೆಯುವದಕ್ಕೆ ಉಪಕ್ರಮಿಸಿದನು. ಬೂದಿಯನ್ನು ತೆಗೆಯುತ್ತಿರಲು ಅಲ್ಲಿ ಒಂದು ಶಿಶುವು ಹೊರಟಿತು. ಅವರು ಆ ಶಿಶುವನ್ನು ನೋಡಲು ಅದು ಮಂಜುಲವಾದ ಸ್ವರದಿಂದ ರೋದನ ಮಾಡುತ್ತಿತ್ತು. ರಾಜಪುರೋಹಿತನು ಜ್ಞಾನಿಯಿದ್ದನು. ಅವನು ಕೂಡಲೆ ಆ ಬಾಲಕನನ್ನು ರಾಜನ ಮುಂದೆ ಒಯ್ದು ನಡೆದ ಸಂಗತಿಯನ್ನು ಹೇಳಿದನು. ಆ ಕೂಸಿನ ತೇಜವನ್ನು ನೋಡಿ ರಾಜನಿಗೆ ಬಹಳ ಸಂತೋಷವಾಯಿತು. ಸಮುದ್ರಮಥನ ಮಾಡುವಾಗ ಅದರೊಳಗಿಂದ ಹೊರಟಂಥ ಹದಿನಾಲ್ಕು ರತ್ನಗಳನ್ನು ನೋಡಿ ಇಂದ್ರನಿಗೆ ಹೇಗೆ ಹರ್ಷವಾಯಿತೋ ಹಾಗೆ ಬೃಹದ್ರವನು ಹರ್ಷಮಾನನಾದನು. ಕೌಸಲ್ಯೆಯ ಉದರದಿಂದ ಜನಿಸಿದ ಶ್ರೀರಾಮನನ್ನು ಕಂಡು ದಶರಥರಾಜನು ಆನಂದಾತಿಶಯವನ್ನು ಹೊಂದಿದಂತೆ ಬೃಹದ್ರವನೂ ಹರ್ಷಭರಿತನಾದನು. ಅವನು ಆ ಬಾಲಕನನ್ನು ತೊಡೆಯ ಮೇಲೆ ತೆಗೆದುಕೊಂಡು ಚುಂಬಿಸಿದನು. ಪೂರ್ಣಕಲೆಗಳಿಂದ ತುಂಬಿದ ಚಂದ್ರನನ್ನು ಕಂಡು ಹೇಗೆ ಸಮುದ್ರವು ಉಕ್ಕೇರುವದೋ ಅದರಂತೆ ರಾಜನ ಮನಸ್ಸು ಪ್ರೇಮದಿಂದ ತುಂಬಿತು. ಆ ಬಾಲಕನು ಸಾಕ್ಷಾತ್ ಮನ್ಮಥನಂತೆ ಸೌಂದರ್ಯಯುಕ್ತನಾಗಿದ್ದದರಿಂದ ಬೃಹದ್ರವನು ಮೇಲಿಂದಮೇಲೆ ಅವನನ್ನು ಮುದ್ದಾಡುತ್ತಿದ್ದನು.

ಬೃಹದ್ರವನಿಗೆ ಸುಲೋಚನೆಯೆಂಬ ಸುಂದರಿಯಾದ ಪತ್ನಿಯಿದ್ದಳು. ಆಕೆಯ ಸೌಂದರ್ಯವನ್ನು ನೋಡಿದರೆ ಪ್ರತ್ಯಕ್ಷ ಸುಲೋಚನೆಯೆಂಬ ದೇವಾಂಗನೆಯೇ ಆಕೆಯ ರೂಪದಿಂದ ಪೃಥ್ವಿಯ ಮೇಲೆ ಅವತರಿಸಿದಂತೆ ಕಾಣುತ್ತಿತ್ತು. ರಾಜನು ತನ್ನ ಹೆಂಡತಿಗೆ ತೋರಿಸುವದಕ್ಕಾಗಿ ಹುಡುಗನನ್ನು ಅಂತಃಪುರಕ್ಕೆ ಕರದೊಯ್ದನು. ಸುಲೋಚನೆಯು ರಾಜನ ಕೈಯಲ್ಲಿರುವ ಕೂಸನ್ನು ಕಂಡು ವಿಚಾರಿಸಿದ್ದೇನೆಂದರೆ—ಮಹಾರಾಜ, ಸಾಕ್ಷಾತ್ ಸೂರ್ಯನಂತೆ ತೇಜಃಪುಂಜನಾದ ಈ ಹುಡುಗನನ್ನು ತಮಗೆ ಯಾರು ತಂದು ಕೊಟ್ಟರು?

ರಾಣಿಯ ಪ್ರಶ್ನವನ್ನು ಕೇಳಿ ರಾಜನು—ಪ್ರಿಯಕಾಂತೇ! ನಮಗೆ ಮೀನಕೇತುವಿನಂತೆ ಇವನಿರುವನೆಂದು ತಿಳಿ. ಈ ಹುಡುಗನು ಸಾಮಾನ್ಯನಲ್ಲ. ಇವನು ಅವತಾರೀಪುರುಷನಿರುವನು. ನಾವು ಮಾಡಿದ ಯಜ್ಞ

ದಿಂದ ಅಗ್ನಿದೇವನು ಪ್ರಸನ್ನನಾಗಿ ನಮಗ ಈ ಪುತ್ರರೂಪದಿಂದ ಅನುಗ್ರಹಿಸಿದ್ದಾನೆ. ಯಜ್ಞಕುಂಡದೊಳಗಿನ ಬೂದಿಯಲ್ಲಿ ಈ ಹುಡುಗನು ದೊರಕಿರುವನು. ಎಂದನು. ಆ ಬಾಲಕನ ದಿವ್ಯವಾದ ರೂಪವನ್ನು ನೋಡಿ ಸು-ಲೋಚನೆಯು ಮೊದಲೇ ಅತಿಶಯ ಸ್ನೇಹಪೂರ್ಣಳಾಗಿದ್ದಳು. ಅದರಲ್ಲಿ ರಾಜನ ಮುಖದಿಂದ ಈ ಸಂಗತಿಯನ್ನು ಕೇಳಿಯಂತೂ ಅವಳು ಅತಿಶಯವಾಗಿ ಪ್ರೇಮಭರಿತಳಾದಳು. ಅವಳು ರಾಜನ ಕೈಯೊಳಗಿಂದ ಆ ಬಾಲಕನನ್ನು ತೆಗೆದುಕೊಂಡು ದುಗ್ಧಾಮೃತವನ್ನು ಪಾನ ಮಾಡಿಸಿದಳು. ಮಾತೃವಾತ್ಸಲ್ಯದಿಂದ ಅವಳ ಅಂತಃಕರಣವು ತುಂಬಿತು. ಅವಳು ಆ ಹುಡುಗನಿಗೆ ಸ್ನಾನ ಮಾಡಿಸಿ ತೊಡೆಯ ಮೇಲೆ ಮಲಗಿಸಿಕೊಂಡಳು. ಹನ್ನೆರಡು ದಿವಸಗಳವರೆಗೆ ಅವನನ್ನು ಚನ್ನಾಗಿ ಜೋಪಾನ ಮಾಡಿದಳು. ಹನ್ನೆರಡನೆಯ ದಿವಸದ ಉತ್ಸವವನ್ನು ಅಪೂರ್ವವಾಗಿ ಜರಗಿಸಿದಳು. ಅಂದು ಅನೇಕ ಸುವಾಸಿನಿಯರಿಂದೊಡಗೂಡಿ ಅವಳು ಅವನಿಗೆ ನಾಮಕರಣದ ವಿಧಿಯನ್ನು ಮಾಡಿದಳು. ಅಗ್ನಿದೇವನು ಪ್ರಸನ್ನನಾಗಿ ಈ ಬಾಲಕನನ್ನು ಕೊಟ್ಟದ್ದರಿಂದ ದರಿಂದ ಆ ಹುಡುಗನಿಗೆ ಜಾಲಂದರನೆಂಬ ನಾಮವನ್ನಿಟ್ಟರು. ರಾಜನು ಹುಡುಗನ ನಾಮವನ್ನು ಪ್ರಸಿದ್ಧಮಾಡಿ ತನ್ನ ರಾಜ್ಯದಲ್ಲಿ ಸಕ್ಕರೆಯನ್ನು ಹಂಚಿಸಿದನು. ರಾಜನು ಬಡಬಗ್ಗರಿಗೆ ಅಪಾರ ಧನವನ್ನು ಕೊಟ್ಟನು. ರಾಜನ ಔದಾರ್ಯವು ಆ ಸಮಯದಲ್ಲಿ ಬಹಳ ವ್ಯಕ್ತವಾಯಿತು. ರಾಜನ ಆನಂದಕ್ಕೆ ಕಾರಣೀಭೂತನಾದ ಆ ಅಗ್ನಿಜನ್ಯ ಬಾಲಕನು ಸಾಮಾನ್ಯರಂತೆ ದೇಹಧಾರಿಯಾಗಿರಲಿಲ್ಲ; ಶ್ರೀ ಶಂಕರ, ಮತ್ತು ಅಗ್ನಿ ಇವರ ಪ್ರೇರಣೆಯಿಂದ ಅಂತರಿಕ್ಷನಾಮಕನಾದ ನಾರಾಯಣನೇ ಅವತಾರ ತಾಳಿದ್ದನು.

ಬೃಹದ್ರವನು ಜಾಲಂದರನ ಸಂರಕ್ಷಣಕ್ಕಾಗಿ ಅನೇಕ ದಾಸೀಜನರನ್ನು ನೇಮಿಸಿದನು. ಆ ಹುಡುಗನು ಬಿದಿಗೆಯ ಚಂದ್ರನೋಪಾದಿಯಲ್ಲಿ ಬೆಳೆಯುತ್ತಿದನು. ಅವನಿಗೆ ೭ ವರ್ಷತುಂಬಿ ೮ನೇ ವರ್ಷವು ಪ್ರಾಪ್ತವಾಗಲು ರಾಜನು ಮೌಂಜೀಬಂಧನವನ್ನು ಮಾಡಿ ಯಜ್ಞೋಪವೀತವನ್ನು ಹಾಕಿಸಿದನು. ಜಾಲಂದರನು ಕೆಲವು ದಿವಸ ಬ್ರಹ್ಮಚರ್ಯಾಶ್ರಮವನ್ನು ಪಾಲಿಸಲು ಅವನ ವಿವಾಹ ಮಾಡಬೇಕೆಂದು ರಾಜನು ವಿಚಾರ ಮಾಡಿದನು. ಅವನು ತನ್ನ ಉದ್ದೇಶವನ್ನು ಪುರೋಹಿತನ ಮುಂದೆ ತೆಗೆದು ಉತ್ತಮಳಾದ

ವಧುವನ್ನು ಶೋಧಿಸುವದಕ್ಕಾಗಿ ವಿಜ್ಞಾಪಿಸಿಕೊಂಡನು. ಆ ಪುರೋಹಿತನು ರಾಜನ ಇಚ್ಛೆಯಂತೆ ದಾಸದಾಸೀಜನರಿಂದ ಕೂಡಿಕೊಂಡು ದೂರ ದೇಶಕ್ಕೆ ಹೋದನು. ಅವನು ಅನೇಕ ಸ್ಥಳಗಳಲ್ಲಿ ಶೋಧಮಾಡಿ ಸರ್ವಾಂಗ ಸುಂದರಿಯಾದ ಓರ್ವ ಕನ್ನಿಕೆಯನ್ನು ಗೊತ್ತುಹಚ್ಚಿದನು.

ಇತ್ತ ಜಾಲಂದರನು ಕೆಲವು ಲೀಲೆಗಳನ್ನು ನಡಿಸಿದನು. ಅವನು ಒಮ್ಮೆ ತನ್ನ ಮಾತೆಯಾದ ಸುಲೋಚನೆಯೊಡನೆ ಪ್ರೇಮದಿಂದ ಮಾತಾಡುತ್ತಿರುವಾಗ "ಈಗ ನಮ್ಮ ಮಂತ್ರಿ, ಪುರೋಹಿತ ಮೊದಲಾದವರು ರಾಜವಾಡೆಯಲ್ಲಿ ತೋರುವದಿಲ್ಲ; ಎಲ್ಲಿಗೆ ಹೋಗಿರುವರು? ಎಂದು ಕೇಳಿದನು.

ಸುಲೋಚನೆಯು ಅವನಿಗೆ ನಿಜವಾದ ಸಂಗತಿಯನ್ನು ಹೇಳಿದಳು. ಪುರೋಹಿತ, ಮಂತ್ರಿ ಇವರೆಲ್ಲರು ರಾಜಾಜ್ಞೆಯ ಮೇರೆಗೆ ವಧುವನ್ನು ಶೋಧಿಸುವದಕ್ಕಾಗಿ ಹೋಗಿರುತ್ತಾರೆಂದು ತಿಳಿದುಕೊಂಡು ಜಾಲಂದರನು ಅಜ್ಞಾನಿಯಂತೆನಟಿಸಿ ತಾಯಿಯನ್ನು ಕುರಿತು—ಅವ್ವಾ, ಹೆಂಡತಿಯೆಂದರೆ ಯಾರು? ಅವಳು ಹೇಗೆ ಇರುತ್ತಾಳೆ! ಎಂಬದನ್ನು ನನಗೆ ಹೇಳು ಎಂದು ಕೇಳಿದನು.

ಜಾಲಂದರನ ಈ ಕೌತುಕದ ಪ್ರಶ್ನವನ್ನು ಕೇಳಿ ಅವನ ತಾಯಿಯು ನಕ್ಕು ಅವನಿಗೆ ಹೀಗೆ ಹೇಳಿದಳು—"ತಮ್ಮಾ ಹೆಂಡತಿಯು ನನ್ನ ಹಾಗೆ ಇರುತ್ತಾಳೆ. ಎಲ್ಲ ಹೆಂಗಸರೂ ನನ್ನಂತೆಯೇ ಇರುವರು."

ಅವನು ತಾಯಿಯ ಈ ಮಾತನ್ನು ಸ್ಮರಣದಲ್ಲಿಟ್ಟುಕೊಂಡನು. ಮುಂದೆ ತನ್ನ ಓರಿಗೆಯ ಗೆಳೆಯರೊಡನೆ ಆಡಹೋದನು. ಅಲ್ಲಿಯೂ ತನ್ನ ಮಿತ್ರರಿಗೆ ಇದೇ ಮೇರೆಗೆ ಪ್ರಶ್ನ ಮಾಡಿದನು. ಅವರು ಇವನ ಮೂರ್ಖತನದ ಪ್ರಶ್ನೆಯನ್ನು ಕೇಳಿ ನಕ್ಕು ಅವರೊಳಗಿನ ಕೆಲವರು—ಎಲೋ, ನೀನೆಂಥ ಅಜ್ಞಾನಿಯು! ಮೂರ್ಖಾ, ಜಗತ್ತಿನಲ್ಲಿ ನೀನು ಬೇರೆ ಸ್ತ್ರೀಯರನ್ನು ನೋಡುವಿಯಷ್ಟೇ? ಅದರಂತೆ ಪತ್ನಿಯರಿರುವರು. ಎಲೋ, ಪ್ರಪಂಚ ಮಾಡಲಿಕ್ಕೆ ಹೆಂಡರ ಅವಶ್ಯಕತೆಯು ಬಹಳಿರುವದು. ಸಂಸಾರಚಕ್ರವು ಸುವ್ಯವಸ್ಥೆಯಿಂದ ನಡೆಯಲಿಕ್ಕೆ ಹೆಂಡರು ಬೇಕೇ ಬೇಕು. ಅವರ ಹೊರತು ಸಂಸಾರ ಸಾಗಲಾರದು. ಎಂದರು.

ಮಿತ್ರರ ಈ ಮಾತನ್ನು ಕೇಳಿ ಜಾಲಂದರನು ಪ್ರಪಂಚದ ಮಾರ್ಗವನ್ನು ತಿರಸ್ಕರಿಸಿದನು. ಸಾಯಿಯು ಹೇಳಿದ ವಾಕ್ಯದಿಂದಂತೂ ಅವನು ಗುಂಗಾಗಿ ಹೋಗಿದ್ದನು. ಎಲ್ಲ ಸ್ತ್ರೀಯರು ತನ್ನಂತೆ ಇರುವರೆಂಬ ಮಾತಿನಿಂದ ಅವನು ಜಗತ್ತಿನೊಳಗಿನ ಎಲ್ಲ ಸ್ತ್ರೀಯರಲ್ಲಿ ಮಾತೃಬುದ್ಧಿಯನ್ನೇ ಧಾರಣ ಮಾಡಿದನು. ಕೂಡಲೆ ಅವನು ಅರಣ್ಯಕ್ಕೆ ಹೋಗುವದನ್ನು ನಿಶ್ಚಯಿಸಿದನು. ಆ ರಾಜಸುತನು ಒಬ್ಬನೇ ಅರಣ್ಯಕ್ಕೆ ಹೋಗುವದನ್ನು ಕಂಡು ರಾಜಸೇವಕರು ಅವನನ್ನು ಪ್ರತಿಬಂಧ ಮಾಡಿದರು. ಆದರೆ ಅವನ ನಿಶ್ಚಯಾತ್ಮಕವಾದ ಉತ್ತರವನ್ನು ಕೇಳಿ ಪ್ರತಿಬಂಧ ಮಾಡದೆ ಹೊರಗೆ ಹೋಗಗೊಟ್ಟರು. ಮತ್ತು ಆ ವೃತ್ತಾಂತವನ್ನು ಮಾತ್ರ ತ್ವರಿತದಿಂದ ರಾಜನ ಮುಂದೆ ಹೇಳಿದರು. ರಾಜನು ಅವನ ಬೆನ್ನ ಹಿಂದಿನಿಂದ ದೂತರನ್ನು ಕಳಿಸಿದನು. ಜಾಲಂದರನಿಗೂ ಹೆದರಿಕೆ ಇದ್ದೇ ಇತ್ತು. ಆ ಭೀತಿಯಿಂದ ಅವನು ಸರಳ ಮಾರ್ಗವನ್ನು ಬಿಟ್ಟು ಅಡ್ಡ ಹಾದಿಯನ್ನು ಹಿಡಿದನು. ಅರಣ್ಯವು ದಟ್ಟವೃಕ್ಷಗಳಿಂದಲೂ ಮುಳ್ಳು ಕಂಟಿಗಳಿಂದಲೂ ತುಂಬಿದ್ದರಿಂದ ಆ ರಾಜಸೇವಕರಿಗೆ ಜಾಲಂದರನು ಎಲ್ಲಿಯೂ ಕಾಣದಾದನು. ಜಾಲಂದರನು ಬಹಳ ಚಪಲತೆಯಿಂದ ಹೋಗುತ್ತ ಹೋಗುತ್ತ ಪರ್ವತದ ಒಂದು ಗುಹೆಯೊಳಗಿಂದ ಉತ್ತರದಿಕ್ಕಿಗೆ ಹೊರಟು ಹೋದನು. ದೂತರು ಬರಲಿಕ್ಕೆ ತಡವಾದ್ದರಿಂದ ಬೃಹದ್ರವನು ಸ್ವತಃ ಅರಣ್ಯದಲ್ಲಿ ಹೋಗಿ ಮಗನ ಶೋಧ ಮಾಡಹತ್ತಿದನು. ತಿರುಗುತ್ತ ಆ ರಾಜನಿಗೂ ದೂತರಿಗೂ ಭೆಟ್ಟಿಯಾಯಿತು. ಆದರೆ ಜಾಲಂದರನು ಮಾತ್ರ ಎಲ್ಲಿಯೂ ಸಿಗಲಿಲ್ಲ. ರಾಜನು ಸೇವಕರಿಂದೊಡಗೂಡಿ ಜಾಲಂದರನನ್ನು ಬಹಳವಾಗಿ ಹುಡುಕಿದನು. ಆದರೆ ಅದೆಲ್ಲ ವ್ಯರ್ಥವಾಯಿತು. ಅಮಾವಾಸ್ಯೆಯ ದಿವಸ ಚಂದ್ರನನ್ನು ಹುಡುಕಿದಂತೆ ಅವರ ಸ್ಥಿತಿಯಾಯಿತು. ಜಾಲಂದರನು ಸಿಗದ್ದನ್ನು ಕಂಡು ನಿರಾಶರಾಗಿ ಮನೆಗೆ ತಿರುಗಿ ಬಂದರು. ಈ ಸಂಗತಿಯು ಸುಲೋಚನೆಗೆ ತಿಳಿದಕೂಡಲೆ ಪುತ್ರನ ಬಾಲಲೀಲೆಗಳನ್ನು ನೆನಿಸಿ ರೋದನ ಮಾಡಹತ್ತಿದಳು. ಅವಳನ್ನು ಸಮಾಧಾನ ಮಾಡುವದನ್ನು ಬಿಟ್ಟು ಬೃಹದ್ರವನೂ ಅವಳ ಜೊತೆಗೆ ಶೋಕ ಮಾಡಹತ್ತಿದನು. ಆ ದಂಪತಿಗಳು ಅವನ ಸ್ವಭಾವ ಹಾಗು ಜನ್ಮವೃತ್ತಗಳನ್ನು ಸರ್ವರ ಮುಂದೆ ಹೇಳುತ್ತ ವಿಲಾಪಿಸಹತ್ತಿದರು. ರಾಜದಂಪತಿಗಳ

ದುಃಖವನ್ನು ನೋಡಿ ಪ್ರಧಾನವರ್ಗದವರು ಅವರಿಗೆ ಸಮಾಧಾನ ಹೇಳಲಾರಂಭಿಸಿದರು. 'ಜಾಲಂದರನು ಒಬ್ಬ ಅಸಾಮಾನ್ಯ ಪುರುಷನಿದ್ದದರಿಂದ ಅವನಿಗೆ ಅರಣ್ಯದಲ್ಲಿ ಅಪಾಯವಾಗಲಾರದು. ಅವನನ್ನು ನಾವೆಲ್ಲರು ಪೃಥ್ವಿಯು ತುಂಬ ಅಡ್ಡಾಡಿ ಹುಡುಕಿ ತಂದು ಕೊಡುವೆವು. ಒಂದು ವೇಳೆ ನಮಗೆ ಅವನು ದೊರೆಯದಿದ್ದರೂ ಒಂದಿಲ್ಲ ಒಂದು ದಿನ ಅವನು ತಾನಾಗಿಯೇ ಇಲ್ಲಿಗೆ ಬಂದೇ ಬರುವನು.'' ಎಂದು ಹೇಳಿ ಮಂತ್ರಿಗಳು ಯುಕ್ತಿ-ಪ್ರಯುಕ್ತಿಗಳಿಂದ ಆ ರಾಜದಂಪತಿಗಳನ್ನು ಸಮಾಧಾನ ಪಡಿಸಿದರು

ಇತ್ತ ಕಡೆಗೆ ಜಾಲಂದರನು ಕೊಳ್ಳ, ಗುಹೆ, ಗಿಡಗಳುಳ್ಳ ದಟ್ಟ ಅಡವಿ ಇವುಗಳೊಳಗಿಂದ ಸಂಚರಿಸುತ್ತ ನಡೆದನು. ನಡೆ ನಡೆಯುತ್ತ ರಾತ್ರಿಯಾಗಿ ಕಗ್ಗತ್ತಲೆಯು ಬಿದ್ದಿತು. ಕತ್ತಲೆಯಲ್ಲಿ ದಾರಿಯು ಕಾಣಿಸದಾಗಲು ಜಾಲಂದರನು ಒಂದು ಕೊಳ್ಳದಲ್ಲಿ ವಸತಿಯನ್ನು ಮಾಡಿದನು. ಆ ದರಿಯು ಬಹಳ ತೆಗ್ಗುಳ್ಳದ್ದಾಗಿತ್ತು. ಅದರಲ್ಲಿ ಜಾಲಂದರನು ಮಲಗಲು ಅವನಿಗೆ ಗಾಢ ನಿದ್ರೆಯು ಹತ್ತಿತು. ಅಷ್ಟರಲ್ಲಿ ಆ ವನದೊಳಗೆ ನಾಲ್ಕೂ ಕಡೆಗೆ ಬೆಂಕಿ ಹತ್ತಿತು. ಅರಣ್ಯವು ಸುಡು ಸುಡುತ್ತ ಜಾಲಂದರನು ಮಲಗಿರುವ ದರಿಯ ವರೆಗೆ ಬಂದಿತು. ಅಲ್ಲಿದ್ದ ಹುಲ್ಲನ್ನು ದಹನ ಮಾಡುತ್ತ ಆ ಅಗ್ನಿನಾರಾಯಣನು ಜಾಲಂದರನ ಬಳಿಗೆ ಬಂದನು. ಜಾಲಂದರನಂಥ ಸುಂದರ ರತ್ನವು ಅವನ ದೃಷ್ಟಿಗೆ ಬಿತ್ತು. ಆ ರತ್ನದ ಗುತರ್ನನ್ನು ಆ ಅಗ್ನಿನಾರಾಯಣನು ಹಿಡಿದನು. ಈ ಬಾಲಕನು ತನ್ನ ಉದರದಿಂದಲೇ ಜನಿಸಿರುವನೆಂದು ತಿಳಿದು ಅಗ್ನಿನಾರಾಯಣನು ಶಾಂತನಾದನು. ಈ ಹುಡುಗನು ಬೃಹದ್ರಥನ ಅರಮನೆಯಿಂದ ಈ ಅರಣ್ಯದಲ್ಲಿ ಹ್ಯಾಗೆ ಬಂದನೆಂಬದನ್ನು ತಿಳಿಯದೆ ಅಗ್ನಿಯು ಬಹಳ ಆಶ್ಚರ್ಯವನ್ನು ಹೊಂದಿದನು. ಅವನು ಕೂಡಲೆ ಜಾಲಂದರನನ್ನು ಎಬ್ಬಿಸಿ ಅವನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಅರಣ್ಯಕ್ಕೆ ಬಂದ ಕಾರಣವನ್ನು ವಿಚಾರಿಸಿದನು.

ತನ್ನನ್ನು ಒಬ್ಬ ಅಪರಿಚಿತ ಮನುಷ್ಯನು ತೊಡೆಯ ಮೇಲೆ ಧಾರಣ ಮಾಡಿದ್ದಾನೆಂದು ತಿಳಿದು ಜಾಲಂದರನು ಅವನ ವೃತ್ತಾಂತವನ್ನು ವಿಚಾರಿಸಿದನು. ಅಗ್ನಿಯು ಜಾಲಂದರನನ್ನು ಕುರಿತು—''ಬಾಳಾ, ನೀನು ನನ್ನ ಮಗನೇ ಇರುವಿ. ನಿನ್ನ ಜನಕನು ನಾನೇ ಆಗಿರುವೆನು'' ಎಂದನು.

ಕೀರ್ತಿಸೂರ್ಯನಿಂದ ಎಲ್ಲ ಪೃಥ್ವಿಯನ್ನು ಪ್ರಕಾಶಮಾನವಾಗಮಾಡುವನು. ಮೊದಲೇ ಚೊಕ್ಕ ಬಂಗಾರ; ಅದರಲ್ಲಿ ದೀಪ್ತಿಮಾನವಾದ ವಜ್ರವನ್ನು ಕೂಡ್ರಿಸಿ ಸುಂದರವಾದ ಅಲಂಕಾರವನ್ನು ಮಾಡಿದರೆ ಅದಕ್ಕೆ ಯಾರ ಮನಸ್ಸು ಮೋಹಿಸಲಿಕ್ಕಿಲ್ಲ!

ಅಗ್ನಿಯ ಈ ರಸಭರಿತವಾದ ಭಾಷಣದಿಂದ ದತ್ತಾತ್ರೇಯನು ಸಂತುಷ್ಟನಾದನು. ದತ್ತನ ಮನಸ್ಸೆಂಬ ಚಾತಕಪಕ್ಷಿಗೆ ಅಗ್ನಿಯ ಭಾಷಣವು ಅಮೃತೋಪಾದಿಯಲ್ಲಿ ಭಾಸವಾಯಿತು. ಆಗ ದತ್ತನು ಜಾಲಂದರನನ್ನು ಸ್ವೀಕಾರ ಮಾಡಿದನು. ಅವನು ಜಾಲಂದರನನ್ನು ಹನ್ನೆರಡು ವರ್ಷಗಳ ವರೆಗೆ ತಮ್ಮಲ್ಲಿ ಇಡಬೇಕಾಗುವದೆಂದು ಸ್ಪಷ್ಟವಾಗಿ ಹೇಳಿದನು. ಆ ಮಾತಿಗೆ ಅಗ್ನಿಯು ಒಪ್ಪಿಕೊಳ್ಳಲು ಅವನ ಇಚ್ಛೆಯಂತೆ ದತ್ತನು ಕೂಡಲೆ ಜಾಲಂದರನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡನು; ಮತ್ತು ಅವನ ತಲೆಯ ಮೇಲೆ ವರದ ಹಸ್ತವನ್ನು ಇಟ್ಟು ದಿವ್ಯವಾದ ಮಂತ್ರವನ್ನು ಉಪದೇಶಿಸಲು ಅವನ ಮನಸ್ಸು ವಿಕಲ್ಪರಹಿತವಾಯಿತು. ಆ ವರದ ಮಂತ್ರದ ಪ್ರಭಾವವನ್ನೇನು ಹೇಳಲಿ? ಆ ಮಂತ್ರಾಕ್ಷರ ರೂಪವಾದ ಧಾನ್ಯವನ್ನು ಜಾಲಂದರನ ಕರ್ಣರೂಪವಾದ ಭೂಮಿಯಲ್ಲಿ ಬಿತ್ತಲು ಭಾವನೆಯೆಂಬ ಮಳೆಯಿಂದ ಬ್ರಹ್ಮಜ್ಞಾನವೆಂಬ ವಿಚಿತ್ರವಾದ ಪೈರು ಭರದಿಂದ ಬೆಳೆಯಿತು. ಅವನಿಗೆ ಆತ್ಮರೂಪದ ದರ್ಶನವಾಗಿ ಬ್ರಹ್ಮಭಾವನೆಯ ಹೊರತು ಅವನ ಚಿತ್ತದಲ್ಲಿ ಏನೂ ಉಳಿಯಲಿಲ್ಲ. ಈ ರೀತಿ ಜಾಲಂದರನು ಅನುಗ್ರಹೀತನಾಗಲು, ಅಗ್ನಿನಾರಾಯಣನು ದತ್ತನಿಗೆ ನಮಸ್ಕಾರ ಮಾಡಿ ಅದೃಶ್ಯನಾದನು; ಬಳಿಕ ದತ್ತಾತ್ರೇಯನು ಜಾಲಂದರನೊಡನೆ ಪರ್ವತಕ್ಕೆ ಹೊರಟು ಹೋದನು.

ದತ್ತಾತ್ರೇಯನು ಜಾಲಂದರನ ಕಡೆಯಿಂದ ವಿಶೇಷವಾಗಿ ಅಭ್ಯಾಸ ಮಾಡಿಸಿದನು. ಅವರು ಆ ಪರ್ವತದ ಮೇಲಿಂದ ನಿತ್ಯ ಕೆಳಗೆ ಬರಬೇಕು; ಭಾಗೀರಥಿಯಲ್ಲಿ ಸ್ನಾನ ಮಾಡಬೇಕು, ವಿಶ್ವೇಶ್ವರನ ದರ್ಶನವನ್ನು ತೆಗೆದುಕೊಂಡು ಭೋಜನಕ್ಕಾಗಿ ಪಂಚಾಳೇಶ್ವರಕ್ಕೆ ಹೋಗಬೇಕು, ಕೊಲ್ಹಾಪುರದಲ್ಲಿ ಭಿಕ್ಷೆ ಬೇಡಬೇಕು, ಮಾತಾಪುರದಲ್ಲಿ ನಿದ್ರೆಯನ್ನು ಮಾಡಬೇಕು; ಮತ್ತು ಪುನಃ ಪರ್ವತಕ್ಕೆ ಹೋಗಬೇಕು. ಈ ಮೇರೆಗೆ ಒಂದು ತಪ

ದ ಪರ್ಯಂತರ ಕ್ರಮವನ್ನು ನಡಿಸಿದರು. ಈ ಅವಧಿಯಲ್ಲಿ ದತ್ತಾತ್ರಯನು ಜಾಲಂದರನನ್ನು ಎಲ್ಲ ವಿದ್ಯೆಯಲ್ಲಿ ಪ್ರಾವಿಣ್ಯನನ್ನಾಗ ಮಾಡಿದನು. ಜಾಲಂದರನ ಸೇವೆಯನ್ನು ಕಂಡು ದತ್ತಾತ್ರಯನು ಸಂತುಷ್ಟನಾಗಿ ಅವನಿಗೆ ತನ್ನ ಎಲ್ಲ ವಿದ್ಯೆಯ ಭಾಂಡಾರವನ್ನು ಅರ್ಪಣ ಮಾಡಿದನು. ವಾತ, ಮೇಘ, ಅಗ್ನಿ, ಪರ್ವತ, ವಜ್ರ, ಮೋಹನ, ರುದ್ರ, ವಾತಾಕರ್ಷಣ ಮೊದಲಾದ ಎಲ್ಲ ಅಸ್ತ್ರಗಳಲ್ಲಿ ಜಾಲಂದರನು ನಿಪುಣನಾದನು. ವೇದ, ಶಾಸ್ತ್ರ, ಕಾವ್ಯ, ನಾಟಕ, ಗಾಯನ, ವಾದನ, ಇತ್ಯಾದಿಗಳಲ್ಲಿಯೂ ಸರ್ವಜ್ಞಾನಕಲಾ, ವಿದ್ಯಾ ಇವುಗಳಲ್ಲಿಯೂ ಅವನು ನಿಪುಣನಾದನು. ಅದೇ ವಿದ್ಯೆಯ ಸಾಮರ್ಥ್ಯದಿಂದ ಅನೇಕ ದೈವತಗಳು ಅವನಿಗೆ ವರಪ್ರದಾನ ಮಾಡಲಿಕ್ಕೆ ಬಂದವು, ಅವನ ವಿದ್ಯೆಯನ್ನು ಕಂಡು ಅಗ್ನಿನಾರಾಯಣನು ಅವನನ್ನೂ ಅವನ ಗುರುಗಳನ್ನೂ ಧನ್ಯರೆಂದು ಭಾವಿಸಿದನು. ದತ್ತಾತ್ರಯನು ಅಗ್ನಿಗೆ ಆಜ್ಞೆಯನ್ನು ಮಾಡಲು ಅವನು ಜಾಲಂದರನನ್ನು ಅನೇಕ ಸ್ಥಳಗಳಲ್ಲಿ ಸಂಚಾರ ಮಾಡಿಸಿದನು. ಎಲ್ಲ ದೇವತೆಗಳ ಉಪದೇಶಕ್ಕನುಸರಿಸಿ ಅಗ್ನಿಯು ಜಾಲಂದರನನ್ನು ಬದರೀವನದಲ್ಲಿ ತಪಸ್ಸಿಗೆ ಕೂಡ್ರಿಸಿದನು. ಅವನು ಉಕ್ಕಿನ ಮುಳ್ಳಿನ ಮೇಲೆ ಅಂಗುಷ್ಠವನ್ನು ಇಟ್ಟು ನಿಂತುಕೊಂಡನು. ವಾಯು ಆಹಾರ ಮಾಡಿ ಬ್ರಹ್ಮರಂಧ್ರದಲ್ಲಿ ದೃಷ್ಟಿಯನ್ನಿಟ್ಟು ಬಾಯಿಂದ ರಾಮನಾಮದ ಜಪವನ್ನು ನಡಿಸಿದನು. ಅವನ ಅದ್ಭುತವಾದ ತಪಶ್ಚರ್ಯವನ್ನು ನೋಡಿ ಸರ್ವದೇವತೆಗಳು ಸ್ವರ್ಗದಿಂದ ಕೆಳಗೆ ಇಳಿದು ಜಾಲಂದರನಿಗೆ ತಪಶ್ಶಾಂತಿಯನ್ನು ಮಾಡಿ ಪುನಃ ಸ್ವರ್ಗಕ್ಕೆ ಹೋದರು.

ಬದರೀನಾಥನು ಜಾಲಂದರ ಹಾಗು ಅಗ್ನಿ ಇವರಿಬ್ಬರನ್ನು ತನ್ನ ಹತ್ತರ ಇರಿಸಿಕೊಂಡನು. ಅವನು ಅವರಿಗೆ ಒಂದು ಅದ್ಭುತವಾದ ಸಂಗತಿಯನ್ನು ಹೇಳಿದ್ದೇನಂದರೆ—ಹಿಮಾಲಯ ಪರ್ವತದೊಳಗಿನ ಅರಣ್ಯದಲ್ಲಿ ಬಲಿಷ್ಠವಾದ ಒಂದು ದಿಗ್ಗಜವು ಮಲಗಿರುವದು. ಅದರ ಕರ್ಣರಂಧ್ರದಲ್ಲಿ ಪ್ರಬುದ್ಧನೆಂಬ ನಾರಾಯಣನು ಬ್ರಹ್ಮದೇವರ ಕೃಪೆಯಿಂದ ಅವತಾರ ಧಾರಣಮಾಡಿದ್ದಾನೆ. ಈ ಮಾತಿಗೆ ಅನಂತ ಕಾಲಗಳು ಕಳೆದು ಹೋದವು. ಆ ದಿಗ್ಗಜಕ್ಕೆ ಮರಣವಿಲ್ಲದ್ದರಿಂದ ಅವನು ಅಮರ್ಯಾದ ಕಾಲಪರ್ಯಂತರ ಅಲ್ಲಿ ಹಾಗೇ ಗೊರಕೆ ಹೊಡೆಯುತ್ತಲಿದ್ದಾನೆ. ನೀವಿಬ್ಬರು ಅಲ್ಲಿಗೆ ಹೋಗಿ

ಆ ಪ್ರಬುದ್ಧನಾರಾಯಣನನ್ನು ಹೊರಗೆ ತೆಗೆಯಬೇಕು. ಮತ್ತು ಜಾಲಂದರನಿಂದ ಅವನಿಗೆ ದೀಕ್ಷೆಯನ್ನು ಕೊಡಿಸಿ ಅವನನ್ನು ಇವನ ಶಿಷ್ಯನನ್ನಾಗ ಮಾಡಿ ಪೃಥ್ವಿಯ ಮೇಲೆ ಸಂಚಾರ ಮಾಡಿಸಬೇಕು. ಅವನು ಕರ್ಣದಲ್ಲಿ ಜನಿಸಿದ್ದರಿಂದ ಅವನಿಗೆ ಕಾನೀಫನೆಂದು ಹೆಸರನ್ನಿಡಬೇಕು.''

ಇದನ್ನು ಕೇಳಿ ಅಗ್ನಿಯು ಆ ಸ್ಥಳವನ್ನು ತೋರಿಸುವದಕ್ಕಾಗಿ ಶಂಕರನಿಗೆ ಪ್ರಾರ್ಥನೆ ಮಾಡಿಕೊಂಡನು. ಶ್ರೀ ಶಂಕರನು ಆ ಇಬ್ಬರನ್ನು ಕರೆದುಕೊಂಡು ಹಿಮಾಲಯದ ಅರಣ್ಯದ ಕಡೆಗೆ ನಡೆದನು. ಆ ಮೂವರ ತೇಜಸ್ಸು ಅಪೂರ್ವವಾಗಿತ್ತು. ಅವರ ತೇಜದಿಂದ ಹತ್ತು ದಿಕ್ಕುಗಳು ಪ್ರದೀಪ್ತವಾಗಿದ್ದವು. ಆ ತ್ರಿವರ್ಗರೆಂದರೆ ಬ್ರಹ್ಮ-ವಿಷ್ಣು-ಮಹೇಶ್ವರರಂತೆಯೂ ಚಂದ್ರಾರ್ಕರು, [illegible], ಹಾಗು ಮಂದರಾಚಲರಂತೆಯೂ, ಭಾಸವಾಗುತ್ತಿದ್ದರು. ಅವರು ಹಿಮಾದ್ರಿ ವನದಲ್ಲಿ ಪ್ರವೇಶ ಮಾಡಿ ಅಲ್ಲಿ ಪ್ರಚಂಡವಾದ ಆನೆಯನ್ನು ಕಂಡರು. ಅದು ಪರಾಕ್ರಮವುಳ್ಳದಿದ್ದು [illegible] ಸಂಗ್ರಾಮ ಮಾಡಲಿಕ್ಕೆ ಸಮರ್ಥವಿರುವದೆಂದು ತಿಳಿದರು. ಅದನ್ನು ಶಾಂತಗೊಳಿಸುವ ವಿಷಯದಲ್ಲಿ ಶಂಕರನು ದೊಡ್ಡ ವಿಚಾರದಲ್ಲಿ ಬಿದ್ದನು. ಅವನ ಆ ಚಿಂತೆಯನ್ನು ತಿಳಿದು ಜಾಲಂದರನು—ನಾನು ಈಗ ಒಂದು ಚಮತ್ಕಾರವನ್ನು ತೋರಿಸಿ ತಮ್ಮ ಚಿಂತೆಯನ್ನು ದೂರ ಮಾಡುತ್ತೇನೆ. ಇಲ್ಲಿ ಬ್ರಹ್ಮಾಂಡವೆ ತಪ್ತವಾದರೂ ನಾನು ದತ್ತಕೃಪೆಯಿಂದ ಅದನ್ನು ಶಾಂತಗೊಳಿಸುವೆನು. ಅಂದಮೇಲೆ ಈ ಆನೆಯು ಪ್ರತಿಷ್ಠೆಯು ಎಷ್ಟರದು! ಪ್ರಳಯಕಾಲದ ಅಗ್ನಿಯನ್ನು ಸಹಜವಾಗಿ ನಾನು ಶಾಂತ ಮಾಡಬಲ್ಲೆನು. ಸೂರ್ಯಚಕ್ರದ ಗತಿಯನ್ನು ಕುಂಠಿತ ಮಾಡುವಷ್ಟು ನನ್ನಲ್ಲಿ ಸಾಮರ್ಥ್ಯವಿದೆ. ಮೂರುಭುವನದೊಳಗಿನ ವಾಯುವನ್ನು ನಾನು ಆಕರ್ಷಣ ಮಾಡುವೆನು! ಎಂದನು.

ಈ ಮೇರೆಗೆ ನುಡಿದು ಜಾಲಂದರನು ತನ್ನ ಜೋಳಿಗೆಯೊಳಗಿಂದ ಭಸ್ಮವನ್ನು ತೆಗೆದನು. ಮತ್ತು ಅದನ್ನು ಮೋಹನಾಸ್ತ್ರದಿಂದ ಅಭಿಮಂತ್ರಿಸಿದನು. ಅದರ ಆಶ್ರಯಕ್ಕೆ ಸಮೀರಾಸ್ತ್ರವನ್ನು ಜಪಿಸಿ ಅವನು ಆ ವಿಭೂತಿಯನ್ನು ತೂರಿದನು. ಆ ಅಸ್ತ್ರಗಳ ಪ್ರಯೋಗವಾಗಲು ಆನೆಯು ಭೂಮಿಯ ಮೇಲೆ ಕಾಲುಗಳನ್ನು ಊರಿ ಸ್ತಬ್ಧವಾಗಿ ನಿಂತುಕೊಂಡಿತು. ಅದನ್ನು

ನೋಡಿ ಜಾಲಂಧರನು ಶಂಕರನನ್ನೂ ಅಗ್ನಿಯನ್ನೂ ದೂರದಲ್ಲಿರಿಸಿ ತಾನೊಬ್ಬನೇ ಆ ಆನೆಯ ಹತ್ತಿರ ಹೋದನು. ಮೋಹನಾಸ್ತ್ರದ ಪ್ರಭಾವದಿಂದ ಆ ಪ್ರಬಲ ಆನೆಯು ಶಾಂತವಾಗಿ ನಿಂತುಕೊಂಡಿತು. ಜಾಲಂಧರನು ಆದರದಿಂದ ಅದಕ್ಕೆ ಅಂದದ್ದೇನೆಂದರೆ—ಹೇ ಗಜಶ್ರೇಷ್ಠನೇ ನೀನು ಮಹಾಬಲಿಷ್ಠನಿರುವಿ. ನಿನ್ನ ಕಿವಿಯಲ್ಲಿ ಒಬ್ಬ ಸಿದ್ಧ ಪುರುಷನು ಉದಯಿಸಿರುವನು. ನೀನು ದೈವಶಾಲಿಯೇ ಸರಿ. ಬಳಿಕ ಅವನು ಪ್ರಬುದ್ಧ ನಾರಾಯಣನೆಂದು ದೊಡ್ಡ ಧ್ವನಿಯಿಂದ ಒದರಿ ಹೊರಗೆ ಬರಲಿಕ್ಕೆ ಪ್ರಾರ್ಥಿಸಿದನು. ಜಾಲಂಧರನು ಅವನ ಜನ್ಮ ಚರಿತ್ರವನ್ನು ಹೊಗಳುತ್ತ ಅವನನ್ನು ಕಾನೀಫ ಎಂಬ ಹೆಸರಿನಿಂದ ಸಂಬೋಧಿಸಿದನು.

ಜಾಲಂಧರನ ಈ ಮಾತನ್ನು ಕೇಳಿ ಆ ಬ್ರಹ್ಮಪುತ್ರನು ಆನೆಯ ಕರ್ಣದ್ವಾರದಿಂದ ಹೊರಗೆ ಬಂದು ಅಲ್ಲಿಂದಲೇ ಜಾಲಂಧರನಿಗೆ ವಂದನ ಮಾಡಿದನು. ಆ ದೈದೀಪ್ಯಮಾನವಾದಂಥ ಹದಿನಾರು ವರ್ಷದ ಮೂರ್ತಿಯನ್ನು ಕಂಡು ಜಾಲಂಧರನು ಅವನನ್ನು ಅಲ್ಲಿಂದ ಎತ್ತಿ ತನ್ನ ಹೆಗಲಮೇಲೆ ಕುಳ್ಳಿರಿಸಿಕೊಂಡು ಶಂಕರನಲ್ಲಿಗೆ ಹೋದನು. ಅಲ್ಲಿ ಅವನನ್ನು ಕೆಳಗಿಳಿಸಿ ಶಂಕರ ಹಾಗು ಅಗ್ನಿ ಇವರಿಗೆ ನಮಸ್ಕಾರ ಮಾಡಹೇಳಿದನು. ಕಾನೀಫನು ಅವರಿಗೆ ನಮಸ್ಕಾರ ಮಾಡಿದನು. ಆಗ ಶಂಕರನು ಸ್ನೇಹಭರಿತನಾಗಿ ಕಾನೀಫನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಚುಂಬಿಸಿದನು. ನಂತರ ಅವನು ಜಾಲಂಧರನಿಗೆ ಹೇಳಿದ್ದೇನೆಂದರೆ — ಹೇ ನಾಥ, ನೀನು ಈಗ ಈ ಕಾನೀಫನನ್ನು ಅನುಗ್ರಹಿಸು. ನಿನ್ನ ಕೃಪೆಯಿಂದ ಇವನು ಜ್ಞಾನಸಂಪನ್ನನಾಗಿ ಸರ್ವ ಅರ್ಥವನ್ನು ಸಾಧ್ಯ ಮಾಡಿಕೊಳ್ಳುವನು. ಸೂರ್ಯೋದಯವಾದ ಕೂಡಲೇ ಕತ್ತಲೆಯು ನಾಶವಾಗಿ ಎಲ್ಲ ಜಗತ್ತಿನ ವ್ಯವಹಾರವು ಹ್ಯಾಗೆ ಪ್ರಾರಂಭವಾಗುವದೋ ಹಾಗೆ ನೀನು ಅನುಗ್ರಹ ಮಾಡುವದರಿಂದ ಈ ಕಾನೀಫನು ಸರ್ವ ವಿದ್ಯಾ ವಿಶಾರದನಾಗುತ್ತಾನೆ.

ಶ್ರೀಶಂಕರನ ಆಜ್ಞೆಯನ್ನು ಜಾಲಂಧರನು ಮಾನ್ಯ ಮಾಡಿದನು. ಅವನು ಕಾನೀಫನ ಮನಸ್ಸನ್ನು ನಿಸ್ಸಂಕಲ್ಪವನ್ನಾಗ ಮಾಡಲು ನಿಶ್ಚಯಿಸಿ ಒಮ್ಮೆ ನೋಡಿದನು. ಅವನ ಅಮೃತಪೂರ್ಣವಾದ ದೃಷ್ಟಿಯ ಪ್ರಭಾವದಿಂದಲೇ ಕಾನೀಫನ ಮನಸ್ಸು ಸ್ವಚ್ಛವಾಯಿತು. ಅವನು ಜಾಲಂಧರನಿಗೆ

ವಂದನ ಮಾಡಿದನು. ಜಾಲಂದರನು ಕಾನೀಫನ ತಲೆಯ ಮೇಲೆ ಕೈ ಇಟ್ಟು ಅವನಿಗೆ ಉಪದೇಶ ಮಾಡಿದನು. ಗುರೂಪದೇಶದಿಂದ ಸರ್ವ ಪಾತಕವು ನಾಶವಾಗಿ ಕಾನೀಫನ ಅಂತಃಕರಣವು ಸ್ವಚ್ಛವಾಯಿತು. ದೀವಿಗೆಯ ಯೋಗದಿಂದ ಮನೆಯೊಳಗಿನ ಕತ್ತಲೆಯು ಲಯವಾಗುವಂತೆ ಉಪದೇಶದಿಂದ ಕಾನೀಫನ ಹೃದಯದೊಳಗಿನ ಎಲ್ಲ ಹೊಲಸು ತೊಳೆದು ಹೋಯಿತು. ಚರಾಚರ ಸೃಷ್ಟಿಯ ನಿಜವಾದ ಜ್ಞಾನವಾಗಿ ಅವನು ಬ್ರಹ್ಮಸ್ವರೂಪದಲ್ಲಿ ತಲ್ಲೀನನಾದನು. ಹೀಗೆ ಕಾನೀಫನಿಗೆ ಬ್ರಹ್ಮಜ್ಞಾನವಾಗಲು ಆ ನಾಲ್ವರು ಅಲ್ಲಿಂದ ಬದರಿಕಾಶ್ರಮಕ್ಕೆ ಹೋದರು. ನಂತರ ಅಗ್ನಿಯು ಕಾನೀಫನನ್ನು ಎಲ್ಲ ವಿದ್ಯಾವಿಶಾರದನನ್ನಾಗಿ ಮಾಡುವ ವಿಷಯದಲ್ಲಿ ಜಾಲಂದರನಿಗೆ ಹೇಳಿ ಗುಪ್ತನಾದನು.

ಜಾಲಂದರ ಕಾನೀಫರು ಅಲ್ಲಿಯೇ ಉಳಿದರು. ಅವರು ಶಂಕರನ ಸಹವಾಸದಲ್ಲಿ ಆರು ತಿಂಗಳು ಕಳೆದರು. ಅಷ್ಟು ಅವಧಿಯಲ್ಲಿ ಜಾಲಂದರನು ಕಾನೀಫನಿಗೆ ಬಹುತರವಾಗಿ ಸರ್ವ ಅಸ್ತ್ರ ಮಂತ್ರವಿದ್ಯೆಯನ್ನು ಕಲಿಸಿದನು. ಕಾನೀಫನು ಆನೆಯ ಕಿವಿಯಲ್ಲಿ ಜನಿಸಿದ್ದರಿಂದ ಆ ಸ್ಥಾನದ ತಮೋಗುಣದಿಂದ ಇವನಲ್ಲಿ ದಂಭವು ಸೇರಬಹುದೆಂದು ಸಂಜೀವಿನೀ ಮತ್ತು ವಾತಾಕರ್ಷಣ ಈ ಎರಡು ಅಸ್ತ್ರಗಳನ್ನು ಮಾತ್ರ ಕಾನೀಫನಿಗೆ ಕಲಿಸಲಿಲ್ಲ.

ಕಾನೀಫನು ವಿದ್ಯಾಪಾರಂಗತನಾದದ್ದನ್ನು ನೋಡಿ ಶಂಕರನು ಜಾಲಂದರನಿಗೆ ಹೀಗೆ ಹೇಳಿದನು—"ಈಗ ಈ ಕಾನೀಫನಿಗೆ ಅಸ್ತ್ರದೇವತೆಯನ್ನು ಪ್ರಸನ್ನ ಮಾಡಿಕೊಡು." ಜಾಲಂದರನು ತತ್ಕಾಲಕ್ಕೆ ಸ್ತವನಾಸ್ತ್ರವನ್ನು ಜಪಿಸಿ ಎಲ್ಲ ದೇವತೆಗಳಿಗೆ ನಿಮಂತ್ರಣವನ್ನು ಕಳಿಸಿದನು. ಇಂದ್ರ, ವರುಣ, ಅಶ್ವಿನಿ, ದಾನವ, ನಾಗ, ಚಂದ್ರ, ಸೂರ್ಯ, ಯಕ್ಷ, ಮದನಚಾಪವಿಷ್ಣು, ಗಂಧರ್ವ, ಬೀರ, ಜಲದೇವತೆ, ಭೈರವ, ಗಜಾನನ, ಬ್ರಹ್ಮದೇವ, ರಾಮಚಂದ್ರ ಹೀಗೆ ಸರ್ವ ಸಣ್ಣ ದೊಡ್ಡ ದೈವತೆಗಳು ಪ್ರಕಟವಾಗಲು ಜಾಲಂದರನು ಅವರ ಮುಂದೆ ಕೈಮುಗಿದುಕೊಂಡು ಅಂದದ್ದೇನಂದರೆ—"ಹೇ ಕೃಪಾಮೂರ್ತಿಗಳಿರಾ, ಕಾನೀಫನು ಸರ್ವ ವಿದ್ಯೆಗಳನ್ನು ಮನನ ಮಾಡಿದ್ದಾನೆ. ನೀವೆಲ್ಲರು ಕೃಪಾಳುಗಳಾಗಿ ಈ ಸತ್‌ಶಿಷ್ಯನನ್ನು ಅನುಗ್ರಹಿಸಬೇಕು. ಮಂತ್ರ, ತಂತ್ರ, ಶಾಸ್ತ್ರೋಕ್ತ ಉಪಾಸನೆಯಿಂದ

ಪ್ರಾಪ್ತವಾಗುವಂಥ ಸರ್ವಸಿದ್ಧಿಗಳನ್ನು ನೀವು ಈ ಕಾನೀಫನಿಗೆ ಅರ್ಪಣ ಮಾಡಿರಿ.''

ಜಾಲಂಧರನ ಈ ಮಾತು ದೇವತೆಗಳಿಗೆ ಒಪ್ಪಿಗೆಯಾಗಲಿಲ್ಲ. ಅವರು ಜಾಲಂದರನನ್ನು ಕುರಿತು—ನಾವು ನಿನಗೆ ಯಾವ ಯಾವ ವರಪ್ರದಾನ ಮಾಡಿರುವೆವೋ ಅವೆಲ್ಲ ಶ್ರೀದತ್ತಾತ್ರೇಯರು ಅಗ್ನಿ ಇವರ ಅಗ್ರಹಕ್ಕಾಗಿ ಮಾಡಿದ್ದೇವೆ. ನೀವು ಮೇಲಿಂದ ಮೇಲೆ ಅಸಂಖ್ಯ ಶಿಷ್ಯರನ್ನು ಮಾಡಿಕೊಂಡು ಉತ್ತಮ ವರಪ್ರಾಪ್ತಿಯ ಸಲುವಾಗಿ ನಮ್ಮನ್ನು ಪ್ರಾರ್ಥಿಸಿದರೆ ನಾವು ನಮ್ಮ ಇಚ್ಛೆಗೆ ಬಂದ ವರವನ್ನು ಅರ್ಪಿಸುವೆವು. ಈ ನಮ್ಮ ವರಪ್ರದಾನದಿಂದ ನಿಮಗೆ ದುಃಖವಾದರೂ ನಮಗೆ ಅದರ ಲಕ್ಷ್ಯವಿಲ್ಲ.

ಹೀಗೆ ಹೇಳಿ ಸರ್ವದೇವತೆಗಳು ವಿಮಾನಗಳಲ್ಲಿ ಕುಳಿತು ತಮ್ಮ ತಮ್ಮ ಸ್ಥಳಕ್ಕೆ ಹೋದರು. ದೇವತೆಗಳು ತನ್ನನ್ನು ನಿರಾಕರಿಸಿದರೆಂದು ಜಾಲಂದರನು ಕ್ಷುಬ್ಧನಾದನು. ಅವನು ಕೂಡಲೇ ವಾತಾಸ್ತ್ರವನ್ನು ಜಪಿಸಿ ಎಲ್ಲ ನಭೋಮಂಡಲವನ್ನು ವಾಯುವಿನಿಂದ ಆಕ್ರಮಿಸಿ ಬಿಟ್ಟನು. ದೇವತೆಗಳ ವಿಮಾನಗಳು ವಾಯುವಿನಲ್ಲಿ ಭ್ರಮಣ ಮಾಡಹತ್ತಿದವು. ಅದನ್ನು ಕಂಡು ಗಂಧರ್ವರಾಜನೂ ಉಳಿದ ಸುರವರರೂ ತಮ್ಮ ತಮ್ಮ ಚಾಪಕ್ಕೆ ಬಾಣವನ್ನು ಹೂಡಿದರು. ಅವರು ನಾಥನ ಮೇಲೆ ಅನೇಕ ಅಸ್ತ್ರಗಳನ್ನು ಬಿಟ್ಟರು. ನಾಥನು ಅವರ ಎಲ್ಲ ಅಸ್ತ್ರಗಳನ್ನು ನಿವಾರಣ ಮಾಡಿದನು. ಗಂಧರ್ವ, ರುದ್ರ, ಯಕ್ಷ, ವರುಣ, ಅಶ್ವಿನಿ, ದಾನವ ಇವರು ಅನುಕ್ರಮವಾಗಿ ಪರ್ವತ, ವಜ್ರ, ಅಗ್ನಿ, ಮೇಘ, ಧೂಮ್ರ, ಸರ್ಪ ಹೀಗೆ ಅನೇಕ ಅಸ್ತ್ರಗಳನ್ನು ಪ್ರಯೋಗಿಸಿದರು. ಅವೆಲ್ಲವುಗಳನ್ನೂ ನಾಶ ಮಾಡಿ ನಾಥನು ಮೋಹನಾಸ್ತ್ರವನ್ನು ಜಪಿಸಿದನು. ಆ ಮೋಹನಾಸ್ತ್ರದ ಮಾಯೆಯಿಂದ ದೇವತೆಗಳ ಅಸ್ತ್ರಗಳು ಭ್ರಮಿಷ್ಠವಾಗಿ ಜಾಲಂದರನ ಮುಂದೆ ಲೀನವಾಗಿ ತಿರುಗಿ ಹೋದವು. ತಮ್ಮ ಸರ್ವ ಪ್ರಯತ್ನವು ವ್ಯರ್ಥವಾದದ್ದನ್ನು ಕಂಡು ಆ ದೇವತೆಗಳು ಪುನಃ ಭೂಮಿಯ ಮೇಲೆ ಇಳಿದರು. ದೇವತೆಗಳು ಕೂಡಲೇ ತ್ರಿಶೂಲ, ಖಡ್ಗ, ಭಾಲೆ, ಕಠಾರಿ, ಗದೆ, ಚಕ್ರ ಮೊದಲಾದ ಅಸ್ತ್ರಗಳನ್ನು ಧಾರಣ ಮಾಡಿ ನಾಥನ ಮೇಲೆ ಸಾಗಿ ಹೋದರು. ನಾಥನು ಕೂಡಲೆ ಕಾಮಿನೀಸಹಿತವಾಗಿ ಕಾಮಾಸ್ತ್ರವನ್ನು ಬಿಟ್ಟನು. ಆ ಅಸ್ತ್ರ

ದಿಂದ ಸರ್ವರು ಮೋಹಿತರಾಗಿ ತಿರುಗುತ್ತಿದ್ದರು. ಆ ಅಸ್ತ್ರದಿಂದ ಮೋಹಕ ಸ್ತ್ರೀಯರು ಉತ್ಪನ್ನರಾಗಿ ಬದರಿಕಾಶ್ರಮವನ್ನು ಸೇರಿ ಅಲ್ಲಿಯ ವೃಕ್ಷಗಳ ಮೇಲೆ ಏರಿದರು. ಎಲ್ಲ ದೇವತೆಗಳೂ ಅವರ ಹಿಂದೆ ಹಿಂದೆ ಆ ಗಿಡಗಳ ಮೇಲೆ ಹೋದರು. ಅದನ್ನು ಕಂಡು ಗಿಡಗಳ ಮೇಲಿನ ಸ್ತ್ರೀಯರು ಕೆಳಗೆ ಹಾರಿಕೊಂಡರು. ಅವರ ಹಿಂದೆ ದೇವತೆಗಳೂ ಹಾರಲಿಕ್ಕೆ ಯತ್ನ ಮಾಡ ಹತ್ತಿದರು. ಅವರು ತಲೆ ಕೆಳಗೆ ಮಾಡಿ ಹಾರುತ್ತಿರುವಷ್ಟರಲ್ಲಿ ನಾಥನು ಸ್ಪರ್ಶ ಅಸ್ತ್ರವನ್ನು ಜಪಿಸಿ ಅವರನ್ನು ಅಲ್ಲಿಯೇ ತಗಲಿಸಿ ಬಿಟ್ಟನು. ಎಲ್ಲ ದೇವಗಣವು ಕೆಳಗೆ ತಲೆ ಮೇಲೆ ಕಾಲುಗಳನ್ನು ಮಾಡಿಕೊಂಡು ನೇತಾ ಡಹತ್ತಿದರು. ಅವರ ಮುಕುಟವು ಕೆಳಗೆ ಬಿದ್ದು ಅವರ ತಲೆಯ ಮೇಲಿನ ಕೂದಲುಗಳು ಜೋತಾಡಹತ್ತಿದವು. ಸುಗ್ರೀವ ಪಕ್ಷಿಗಳ ಗೂಡಿನಂತೆ ಎಲ್ಲ ದೇವತೆಗಳು ತೂಗಾಡುವದನ್ನು ಕಂಡು ಭಗವಾನ್ ವಿಷ್ಣು, ಶಂಕರ ಇವರು ಹಾಸ್ಯ ಮಾಡ ಹತ್ತಿದರು; ಅವರಿಗೆ ಜಾಲಂಧರನ ಪರಾಕ್ರಮದ ಬಗ್ಗೆ ಬಹಳ ಕೌತುಕವಾಯಿತು. ಕಾಮಾಸ್ತ್ರದ ಪ್ರಭಾವದಿಂದ ಆ ದೇವಗ ಣವು ವಸ್ತ್ರ ರಹಿತವಾಯಿತು. ಜಾಲಂಧರನು ಕಾನೀಫನಿಗೆ ಅವರ ವಸ್ತ್ರ ವನ್ನು ಒಯ್ದು ಕೊಡಲಿಕ್ಕೆ ಹೇಳಿದನು. ಕಾನೀಫನು ಅವರಿಗೆ ವಸ್ತ್ರಗಳನ್ನು ಕೊಡಹೋಗಲು, ಆ ಎಲ್ಲ ಜನರು ಒಮ್ಮನಸಿನಿಂದ ಅಂದದ್ದೇನಂದರೆ— "ನಿಮ್ಮ ಗುರುವಿನ ಸಾಮರ್ಥ್ಯವು ಅಗಾಧವದೆ. ಯಾರ ಕೀರ್ತಿಯು ಈ ಬ್ರಹ್ಮಾಂಡದಲ್ಲಿ ವ್ಯಾಪಿಸಿರುವದೋ ಅಂಥ ದೇವಗಣಗಳಿಗೆ ನಿಮ್ಮ ಗುರುವು ಈ ಮೇರೆಗೆ ಅಪಮಾನ ಮಾಡುವದು ಉಚಿತವಲ್ಲ"

ಅವರ ಮಾತನ್ನು ಕೇಳಿಕೊಂಡು ಕಾನೀಫನು ವಸ್ತ್ರಗಳನ್ನು ಕೊಡುತ್ತ ಅಂದನೇನಂದರೆ—"ದೇವಗಣಗಳೇ! ನಾನು ನನ್ನ ಗುರುಗಳಿಗೆ ಅರಿಯ ದಂತೆ ನಿಮ್ಮ ಸಂರಕ್ಷಣ ಮಾಡುತ್ತಲಿದ್ದೇನೆ. ನೀವು ಈ ಮಾತನ್ನು ಗುರು ಗಳಿಗೆ ಹೇಳದೇಡಿರಿ."

ಹೀಗೆಂದು ಅವನು ಅಲ್ಲಿಂದೇ ಅವರ ಚರಣಕ್ಕೆ ನಮಸ್ಕಾರ ಮಾಡಿ ದನು. ಕಾನೀಫನ ಭಕ್ತಿಯನ್ನು ನೋಡಿ ದೇವತೆಗಳು ಪ್ರಸನ್ನರಾದರು. ಕಾನೀಫನಿಗೆ ವರವನ್ನು ಕೊಟ್ಟ ಹೊರತು ತಾವು ಮುಕ್ತರಾಗಲಾ ರೆವೆಂದು ತಿಳಿದು ಅವರು ಕಾನೀಫನಿಗೆ ಮಂತ್ರ-ಅಸ್ತ್ರ, ತಂತ್ರಗಳಾಧೀನವಾ

ಗಳಂತೆ ಒಪ್ಪಿಕೊಂಡರು. ಅವರು ತಮ್ಮ ತಮ್ಮ ಶಕ್ತಿಯಂತೆ ಕಾನೀಫನಿಗೆ ವರಕೊಟ್ಟರು. ಅದನ್ನು ತಿಳಿದು ಆ ಅಗ್ನಿಸುತನಾದ ಜಾಲಂದರನು ವಿಭಕ್ತಾಸ್ತ್ರದ ಪ್ರಯೋಗ ಮಾಡಿ ದೇವತೆಗಳನ್ನು ಮುಕ್ತಮಾಡಿದನು. ಎಲ್ಲ ದೇವತೆಗಳು ತಮ್ಮ ತಮ್ಮ ವಸ್ತ್ರಗಳನ್ನೂ ಭೂಷಣಗಳನ್ನೂ ಸಾವರಿಸಿಕೊಂಡು ಜಾಲಂದರನ ಕಡೆಗೆ ಹೋದರು. ಅವರ ತಮ್ಮ ಎಲ್ಲ ಸಂಗತಿಯನ್ನು ಜಾಲಂದರನಿಗೆ ಹೇಳಿದರು. ಜಾಲಂದರನು ವಿರಚಿಸಿದ ಶಾಂಬರೀ ವಿದ್ಯೆಗೆ ಅನಕೂಲವಾಗಲಿಕ್ಕೂ ಅವರು ಆ ಕಾಲಕ್ಕೆ ವಚನ ಕೊಟ್ಟರು. ನಂತರ ನಾಥನಿಗೆ ನಮಸ್ಕಾರ ಮಾಡಿ ಅವರು ತಮ್ಮ ಸ್ಥಳಕ್ಕೆ ಹೊರಟು ಹೋದರು. ಶ್ರೀವಿಷ್ಣು ಮತ್ತು ಶಂಕರರು ಜಾಲಂದರ-ಕಾನೀಫರೊಡನೆ ಬಧರಿಕಾಶ್ರಮದಲ್ಲಿ ಉಳಿದರು.

---

# ಅಧ್ಯಾಯ ೧೪

## ಮೈನಾವತಿ.

ದೇವತೆಗಳೊಡನೆ ಯುದ್ಧಮಾಡಿ ಜಾಲಂದರನು ಜಯಶಾಲಿಯಾಗಲು ಹರಿಹರರು ಅವನನ್ನು ಬಹಳವಾಗಿ ಗೌರವಿಸಿದರು. ಬಳಿಕ ಶಂಕರನು ನಾಥನನ್ನು ಕುರಿತು ನುಡಿದನೇನಂದರೆ—ಜಾಲಂದರನಾಥನೇ, ನೀನು ನಾಗಅಶ್ವತ್ಥಕ್ಕೆ ಹೋಗಿ ಒಂದು ದೊಡ್ಡ ಯಜ್ಞಮಾಡಿ ಉತ್ತಮವಾದ ವರವನ್ನು ಸಂಪಾದಿಸು. ಯಾಕಂದರೆ ಕಲಿಯುಗದಲ್ಲಿ ವೇದವಿದ್ಯೆ ವೈದಿಕ ಅಸ್ತ್ರಗಳ ಶಕ್ತಿಯು ಕುಗ್ಗುವದು. ಜನರ ಉಪಯೋಗಾರ್ಥವಾಗಿ ಹೊಸ ಮಂತ್ರವೇ ಬೇಕಾಗುವದು. ಇದನ್ನು ತಿಳಿದೇ ಪೂರ್ವದಲ್ಲಿ ಶಾಂಬರೀ ನಾಮಕ ಋಷಿಗಳು ಹೊಸ ಮಂತ್ರಗಳನ್ನು ಕಲ್ಪಿಸಿ ಬರೆದಿರುವರು. ಆದರೆ ಅವು ಅಪೂರ್ಣವಾಗಿರುವವು. ನೀವೆಲ್ಲ ನಾಥರು ಕೂಡಿ ಆ ಮಂತ್ರಗಳನ್ನು ಪೂರ್ಣಪಡಿಸಬೇಕು. ನೀವು ನೂರುಕೋಟಿ ಮಂತ್ರಗಳನ್ನು ರಚಿಸಬೇಕು.

ಇದಕ್ಕಾಗಿಯೇ ನಿಮಗೆ ಉತ್ತಮ ವರವು ಬೇಕು. ಈ ನೂರು ಕೋಟಿ ಮಂತ್ರಗಳಲ್ಲಿ ಮಚ್ಛಿಂದ್ರನು ೩೩ ಕೋಟಿ ೯೫ ಲಕ್ಷ ಮಂತ್ರಗಳನ್ನು ನಿರ್ಮಾಣ ಮಾಡಿರುವನು. ಗೋರಖನು ೧೨ ಕೋಟಿ ೯ ಲಕ್ಷ ಮಂತ್ರಗಳನ್ನು ರಚಿಸಿರುವನು. ೯ ಕೋಟಿ ೭ ಲಕ್ಷ ಮಂತ್ರಗಳನ್ನು ಚರ್ಪಟಿನಾಥನು ಮಾಡುವನು. ೭ ಕೋಟಿ ೪ ಲಕ್ಷ ಮಂತ್ರಗಳನ್ನು ಭರ್ತರಾಯನು ರಚಿಸುವನು. ೨ ಕೋಟಿ ೩ ಲಕ್ಷ ಮಂತ್ರಗಳನ್ನು ರೇವಣನಾಥನು ಮಾಡುವನು. ೧ ಕೋಟಿ ೧ ಲಕ್ಷ ಮಂತ್ರಗಳನ್ನು ಸಿದ್ಧನಾಥನು ಮಾಡುವನು. ೩೪ ಕೋಟಿ ೧೨ ಲಕ್ಷ ಮಂತ್ರಗಳನ್ನು ಜಾಲಂದರನು ಮಾಡುವನು. ೬ ಕೋಟ ೮ ಲಕ್ಷ ಮಂತ್ರಗಳನ್ನು ಕಾನೀಫನು ರಚಿಸುವನು. ೧ ಕೋಟಿ ೫ ಲಕ್ಷ ಮಂತ್ರಗಳನ್ನು ಮೀನನಾಥನು ರಚಿಸುವನು. ಈ ಪ್ರಕಾರ ನೀವೆಲ್ಲ ನಾಥರು ಕೂಡಿ ಶತಕೋಟಿಗಿಂತ ಹೆಚ್ಚಾಗಿ ಮಂತ್ರಗಳನ್ನು ರಚಿಸಿ ಪರೋಪಕಾರ ಮಾಡಬೇಕು. ನಿಮ್ಮ ಯೋಗ್ಯತೆಯು ಮಹತ್ತರವಿರುತ್ತದೆ.''

ಈ ಮೇರೆಗೆ ನುಡಿದು ಶಂಕರನು ಜಾಲಂದರನನ್ನು ಆಶೀರ್ವದಿಸಿದನು. ವಿಷ್ಣುವೂ ಆಶೀರ್ವದಿಸಿದ ಬಳಿಕ ಆ ಉಭಯತರು ತಮ್ಮ ಸ್ಥಳಗಳಿಗೆ ತೆರಳಿದರು. ಬಳಿಕ ಜಾಲಂದರನೂ-ಕಾನಿಫನೂ ಕೂಡಿ ತಮ್ಮ ಪಾಲಿಗೆ ಬಂದಷ್ಟು ಶಾಂಬರೀ ಮಂತ್ರಗಳನ್ನು ರಚಿಸಿ ನಾಗನಾಥ ಅಶ್ವತ್ಥದಲ್ಲಿ ಅದಕ್ಕೆ ಸಿದ್ಧಿಯನ್ನುಂಟು ಮಾಡಿದರು. ಬಳಿಕ ಜಾಲಂದರನು ಕಾನೀಫನನ್ನು ತಪಶ್ಚರ್ಯಕ್ಕೆ ಕುಳ್ಳಿರಿಸಿ ತಾನು ತೀರ್ಥ-ಯಾತ್ರೆಗಳಿಗಾಗಿ ನಡೆದನು.

ಜಾಲಂದರನು ತೀರ್ಥ-ಯಾತ್ರೆಗಳನ್ನು ಮಾಡುತ್ತ ನಡೆದನು. ಯಾವದೊಂದು ಕ್ಷೇತ್ರಕ್ಕೆ ಹೋದ ಕೂಡಲೆ ಅಡವಿಯಲ್ಲಿ ಒಂದು ಹೊರಿ ಹುಲ್ಲನ್ನು ಕೊಯ್ದು ಊರಲ್ಲಿ ಹೊತ್ತುಕೊಂಡು ಹೋಗಬೇಕು; ಮತ್ತು ಆ ಹೊರಿಯನ್ನು ಊರೊಳಗಿನ ಆಕಳ ಮುಂದೆ ಹಾಕಬೇಕು. ಈ ಕ್ರಮವನ್ನಿಟ್ಟನು. ಜಾಲಂದರನು ಅಗ್ನಿಯ ಮಗನಾದ್ದರಿಂದ ವಾಯುದೇವನ ಮೊಮ್ಮಗನೆಂಬದು ಸ್ವಾಭಾವಿಕವೇ ಸರಿ. ವಾಯುದೇವನು ಮೊಮ್ಮಗನಿಗೆ ಹುಲ್ಲುಹೊರೆಯು ಭಾರವಾಗಬಾರದೆಂದು ಆ ಹೊರೆಯನ್ನು ತಾನೇ ಹೊರುತ್ತಿದ್ದನು. ಇದರಿಂದ ಜಾಲಂದರನ ತಲೆಯ ಮೇಲಿನ ಹೊರೆಯು

ತನ್ನಷ್ಟಕ್ಕೆ ತಾನೇ ಅಂತರಿಕ್ಷದಲ್ಲಿ ನಡೆದು ಬರುತ್ತಿರುವಂತೆ ಜನರಿಗೆ ಭಾಸವಾಗುತ್ತಿತ್ತು. ಇದಕ್ಕಾಗಿ ಜನರು ಬಹಳ ಕೌತುಕಪಡುತ್ತಿದ್ದರು.

ಒಮ್ಮೆ ಜಾಲಂದರನು ಗೌಡಬಂಗಾಲದೊಳಗಿನ ಹೇಲಾಪಟ್ಟಣಕ್ಕೆ ಹೋದನು. ಅಲ್ಲಿಯ ಜನರು ಬಹಳ ಚತುರರಿದ್ದರು. ಜಾಲಂದರನ ನಿತ್ಯಕ್ರಮವನ್ನು ನೋಡಿ ಅವರಿಗೆ ಆಶ್ಚರ್ಯವಾಯಿತು. ಈತನು ಯಾವನೋ ಸಿದ್ಧಪುರುಷನಿರಬೇಕೆಂದು ತಿಳಿದರು. ಎಷ್ಟೋ ಜನರು ಜಾಲಂದರನಿದ್ದಲ್ಲಿಗೆ ಹೋಗಿ ಅವನನ್ನು ಬಹಳವಾಗಿ ಗೌರವಿಸುತ್ತಿದ್ದರು; ಆದರೆ ಈ ಗೌರವವು ಜಾಲಂದರನಿಗೆ ಸೇರುತ್ತಿದ್ದಿಲ್ಲ. ಪೂರ್ಣ ಪರಬ್ರಹ್ಮಸ್ವರೂಪರಿಗೆ ಗೌರವದಿಂದಾಗುವ ಪ್ರಯೋಜನವೇನು? ಜಾಲಂದರನು ಭಿಕ್ಷೆಯಿಂದ ಉಪಜೀವಿಸುತ್ತ ಎಲ್ಲಿಯಾದರೂ ಒಂದು ಕಶ್ಮಲ ಪ್ರದೇಶದಲ್ಲಿ ಕಾಲವನ್ನು ಕಳೆಯುತ್ತಿದ್ದನು.

ಆ ಕಾಲಕ್ಕೆ ಆ ಹೇಲಾಪಟ್ಟಣದಲ್ಲಿ ಗೋಪೀಚಂದನೆಂಬ ಹೆಸರಿನ ರಾಜನು ರಾಜ್ಯಭಾರ ಮಾಡುತ್ತಿದ್ದನು; ಅವನ ತಂದೆಯಾದ ತ್ರಿಲೋಚನನು ಮೃತಪಟ್ಟಿದ್ದನು. ಗೋಪೀಚಂದನ ತಾಯಿಯ ಹೆಸರು ಮೈನಾವತಿಯು. ಗೋಪೀಚಂದನು ಸುಂದರನಿದ್ದನು. ಅವನ ಸಂಪತ್ತಿಯನ್ನು ನೋಡಿ ಕುಬೇರನು ಕೂಡಾ ನಾಚುತ್ತಿದ್ದನು. ವಾಯುವಿನಂತೆ ಚಪಲವಾದ ಲಕ್ಷಗಣಿತ ಕುದುರೆಗಳು ಅವನ ಅಶ್ವಶಾಲೆಯಲ್ಲಿದ್ದವು. ಅವನ ಪದರಿನಲ್ಲಿ ಅನೇಕ ವೀರ್ಯಶಾಲಿ ಪುರುಷರು ಇದ್ದರು. ಅವನ ಸರದಾರರು, ಸ್ವಾರರು, ಸೇನಾಪತಿ ಈ ಎಲ್ಲರು ಸಮರ ದುರಂಧರರಿದ್ದು ರಾಜನ ಆಜ್ಞೆಯಂತೆ ನಡೆಯುತ್ತಿದ್ದರು. ಗೋಪೀಚಂದನೂ ಸ್ವತಃ ಪರಾಕ್ರಮಿಯಿದ್ದನು. ಸೌಂದರ್ಯದಲ್ಲಿ ಮನ್ಮಥನಂತೆಯೂ ಪರಾಕ್ರಮದಲ್ಲಿ ಯಮನಂತೆಯೂ ಇದ್ದನು. ಕೇವಲ ಅವನ ಭಯದಿಂದಲೇ ಪರರಾಜರು ಅವನಿಗೆ ಕಪ್ಪ-ಕಾಣಿಕೆಯನ್ನು ಅರ್ಪಿಸುತ್ತಿದ್ದರು. ಅವನು ಶರೀರದಿಂದ ಪುಷ್ಟನಿದ್ದು ಮಲ್ಲಯುದ್ಧದಲ್ಲಿಯೂ ಪ್ರವೀಣನಾಗಿದ್ದನು.

ಆ ಪರಾಕ್ರಮಿಯಾದ ಗೋಪೀಚಂದರಾಜನು ಅನೇಕ ಭಾರ್ಯೆಯರಿಂದಯುಕ್ತನಾಗಿದ್ದನು. ಅವನ ಅಂತಃಪುರವು ಹದಿನಾರು ನೂರು ಜನ ಸ್ತ್ರೀಯರಿಂದ ಸುಶೋಭಿತವಾಗಿತ್ತು.

ಒಂದು ದಿವಸ ಆ ಗೋಪೀಚಂದ ರಾಜನ ತಾಯಿಯಾದ ಮೈನಾವತಿಯು ತನ್ನ ಮಂದಿರದ ಕಿಡಿಕಿಯಲ್ಲಿ ಸ್ವಾಭಾವಿಕವಾಗಿ ನಾಲ್ಕು ಕಡೆಗೆ ನೋಡುತ್ತ ನಿಂತಿದ್ದಳು. ಆ ವೇಳೆಯಲ್ಲಿ ಜಾಲಂದರ ನಾಥನು ಮಾರ್ಗವಿಡಿದು ಹೊರೆಯನ್ನು ಹೊತ್ತುಕೊಂಡು ನಡೆದಿದ್ದನು. ಮೈನಾವತಿಯು ಜಾಲಂದರನನ್ನು ನೋಡಿ ಚಕಿತಳಾದಳು. ಸೂರ್ಯನಂತೆ ತೇಜಸ್ಸು, ಮನ್ಮಥನಂತೆ ರೂಪ, ಮುನಿಗಳನ್ನು ಹೋಲುವಂಥ ಸೌಮ್ಯವೃತ್ತಿ ಈ ಎಲ್ಲವನ್ನು ಕಂಡು ಅವಳಿಗೆ ಇವನು ಯಾವನೋ ಸ್ವರ್ಗೀಯ ಪುರುಷನಿರಬೇಕೆಂದು ಅನಿಸಿತು. ಗಣ, ಗಂಧರ್ವ, ಬ್ರಹ್ಮದೇವ, ವಿಷ್ಣು, ಶಂಕರ, ರುದ್ರ, ಗುರು, ಶುಕ್ರ' ಇವರಲ್ಲಿ ಯಾರಾದರೂ ಒಬ್ಬರಿರಬೇಕು, ಎಂದು ಭಾವಿಸಿ ತನ್ನ ದೇಹಸಾರ್ಥಕವನ್ನು ಮಾಡಿಕೊಳ್ಳುವದಕ್ಕಾಗಿ ಅವನಿಗೆ ಶರಣು ಹೋಗಬೇಕು ಎಂದು ಮನದಲ್ಲಿ ಯೋಚಿಸಿದಳು. ಕೂಡಲೆ ಅವಳು ತನ್ನ ಚಪಲೆಯಾದ ದಾಸಿಯನ್ನು ಬರಮಾಡಿಕೊಂಡು ನುಡಿದಳೇನಂದರೆ—"ನನ್ನ ಮನಸ್ಸಿನಲ್ಲಿ ಒಂದು ಇಚ್ಛೆಯುತ್ಪನ್ನವಾಗಿರುತ್ತದೆ. ನಾನು ನಿನಗೆ ಒಂದು ಕೆಲಸವನ್ನು ಹೇಳುತ್ತೇನೆ. ಆ ಕೆಲಸವನ್ನು ಬಹಳ ಗುಪ್ತವಾಗಿಯೇ ಮಾಡಲಿಕ್ಕೆ ಬೇಕು. ಅದು ಒಂದುವೇಳೆ ಹೊರಬಿದ್ದರೆ ನಿನ್ನಮೇಲೆ ಹಾಗು ನನ್ನ ಮೇಲೆ ಬಹಳ ದೊಡ್ಡ ಸಂಕಟ ಒದಗುವದು. ನೀನು ನನ್ನ ಈ ಕೆಲಸವನ್ನು ಕೊನೆಗಾಣಿಸಿದರೆ ನೀನೇ ನನಗೆ ಮೋಕ್ಷಸುಖದ ಲಾಭಮಾಡಿಕೊಟ್ಟಂತಾಗುವದು." ಹೀಗೆ ಹೇಳಿ ಅವಳು ದಾಸಿಯನ್ನು ಕಿಡಿಕೆಯಕಡೆಗೆ ಕರೆದೊಯ್ದಳು, ಮತ್ತು ತನ್ನ ಕೈಬೆರಳಿನಿಂದ ಜಾಲಂದರನನ್ನು ತೋರಿಸಿದಳು. ದಾಸಿಯು ಜಾಲಂದರನನ್ನು ಕಂಡು ವಿಸ್ಮಯಾನ್ವಿತಳಾದಳು. ಅವಳು ಮೈನಾವತಿಯನ್ನು ಕುರಿತು ಅಂದದ್ದೇನಂದರೆ—ಅವ್ವನವರೇ, ಇವನು ಶ್ರೀ ಶಂಕರನೇ ಇರಲಿಕ್ಕೆ ಬೇಕು. ಈ ಯೋಗಿಶ್ರೇಷ್ಠನು ಭೂತಲದ ಮೇಲೆ ಪ್ರಜ್ವಲಿಸುವ ಸೂರ್ಯನಂತೆ ಕಾಣಿಸುತ್ತಾನೆ. ಸತ್ಯಲೋಕ, ತಪೋಲೋಕ, ಸ್ವರ್ಗಲೋಕ ಇತ್ಯಾದಿ ಸ್ಥಳಗಳಿಂದಲೇ ಈ ಲೋಕಕ್ಕೆ ಈತನು ಅವತೀರ್ಣನಾಗಿರಲಿಕ್ಕೆ ಬೇಕು. ನಮ್ಮ ಶುದ್ಧಭಾವನಾಯುಕ್ತ ಭಕ್ತಿಯಿಂದ ಅವನ ಚಿತ್ತದೇವತೆಯು ಪ್ರಸನ್ನವಾದರೆ, ಕಲ್ಯಾಣವಾಗುವದು; ಇದರಲ್ಲಿ ಸಂಶಯವೇ ಇಲ್ಲ. ಧ್ರುವನು ಶ್ರೀ ವಿಷ್ಣುವಿನ ಪ್ರಸನ್ನತೆಯನ್ನು ಹೊಂದಿ ಸ್ಥಿರವಾದ

ಪದವಿಯನ್ನು ಹೊಂದಿದನು ಆದರಿಂದ ಇಂಥ ಈ ಯೋಗಿಶ್ರೇಷ್ಠನಿಗೆ ಶರಣು ಹೋಗಿ ಜನ್ಮಸಾರ್ಥಕ ಮಾಡಿಕೊಳ್ಳುವದು ಯೋಗ್ಯವು.''

ದಾಸಿಯು ಅಭಿಪ್ರಾಯವು ತನ್ನ ಇಚ್ಛೆಗೆ ಅನಕೂಲವಾಗಿರುವದೆಂದು ತಿಳಿದು ಮೈನಾವತಿಯು ನುಡಿದಳೇನಂದರೆ—''ಹಾಗಾದರೆ, ನೀನು ಈಗಲೇ ಅವನ ಹಿಂದಿನಿಂದ ಹೋಗಿ ಅವನು ಎಲ್ಲಿ ಇರುವನೆಂಬದನ್ನು ನೋಡಿ ಕೊಂಡು ಬಾ.''

ಮೈನಾವತಿಯ ಆಜ್ಞೆಯ ಪ್ರಕಾರ ದಾಸಿಯು ಜಾಲಂದರನ ಬೆನ್ನ ಹತ್ತಿ ಸಾಗಿದಳು, ಮತ್ತು ಅವನ ಸ್ಥಾನವನ್ನು ನೋಡಿ ಮೈನಾವತಿಯ ಕಡೆಗೆ ತಿರುಗಿ ಬಂದು ಎಲ್ಲ ಸಂಗತಿಯನ್ನು ಹೇಳಿದಳು. ರಾತ್ರಿಯಲ್ಲಿ ಮನುಷ್ಯನ ಸಂಚಾರ ಇಲ್ಲದಂತಾದನಂತರ ಆ ಯೋಗಿಯ ದರ್ಶನಕ್ಕೆ ಹೋಗಬೇಕೆಂದು ಅವರು ನಿರ್ಧರಿಸಿದರು. ಮಧ್ಯರಾತ್ರಿ ಆಗುವ ವರೆಗೆ ಅವರು ಹೇಗಾದರೂ ವೇಳೆ ಕಳೆದು ನಂತರ ಗೊತ್ತುಪಡಿಸಿದಂತೆ ಅವರಿಬ್ಬರು ತಮ್ಮ ದೇಹವನ್ನು ಕರೇ ಕಂಬಳಿಯಿಂದ ಮುಚ್ಚಿಕೊಂಡು ಅರಮನೆಯಿಂದ ಹೊರಬಿದ್ದರು. ಅವರು ಆ ಯೋಗಿಯ ದರ್ಶನಕ್ಕಾಗಿ ಕೆಲವು ಫಲಗಳನ್ನೂ ತೆಗೆದು ಕೊಂಡಿದ್ದರು.

ಆ ಸಮಯದಲ್ಲಿ ಆ ಪರಮಹಂಸನಾದ ಜಾಲಂದರನು ತನ್ನ ಆತ್ಮ ರೂಪವಾದ ಹಂಸದಲ್ಲಿ ತಾದಾತ್ಮ್ಯವಾಗಿ ಮೋಕ್ಷರೂಪೀ ಮುತ್ತಿನ ಖಣಿ ಯಲ್ಲಿ ನಿಮಗ್ನನಾಗಿದ್ದನು. ಮೈನಾವತಿಯೂ ಆಕೆಯ ದಾಸಿಯೂ ಬಂದು ಅವನಿಗೆ ನಮಸ್ಕಾರ ಮಾಡಿದರು. ಬಳಿಕ ಅವರು ವಿನಯಪೂರ್ವಕ ವಾಗಿ ಪ್ರಾರ್ಥಿಸಿದರು:—''ಹೇ, ಯೋಗಿರಾಜನೇ, ನೀನು ಸರ್ವಜ್ಞನೇ ಇದ್ದೀ; ಒಂದೇ ಒಂದು ಮೋಕ್ಷದ ಮೇಲೆ ಲಕ್ಷ್ಯವಿಟ್ಟು ನೀನು ನಿನ್ನ ಜೀವಿತ ವನ್ನು ಸಹ ತ್ರಿವಿಧತಾಪದಿಂದ ಹೋಮ ಮಾಡಿರುತ್ತೀ. ನಿನ್ನಂಥ ತಪಸ್ವಿಯ ಅಂತಃಕರಣವು ದಯೆಯಿಂದ ಕೂಡಿರುತ್ತದೆ. ನನ್ನ ಮನಸ್ಸಿನೊ ಳಗಿನ ಕಲ್ಪನೆಗಳು ನನ್ನ ಹೃದಯದಲ್ಲಿ ಹೊತ್ತಿದ ಬೆಂಕಿಯಂತೆ ಸುಡುತ್ತವೆ. ಅವನ್ನು ಶಾಂತಗೊಳಿಸುವ ಉದ್ದೇಶದಿಂದಲೇ ನಾನು ನಿಮ್ಮ ಕೃಪಾ ರೂಪವಾದ ಮಳೆಯ ಹಾದಿಯನ್ನು ನೋಡುತ್ತಲಿದ್ದೇನೆ. ದಯಾನಿಧಿ ಗಳೇ, ಈ ದೀನಳ ಬೇಡಿಕೆಯನ್ನು ಪೂರ್ಣಪಡಿಸಬೇಕು.''

ಈ ಪ್ರಕಾರ ಆಕೆಯ ಸ್ತುತಿರೂಪವಾದ ಪೂರ್ಣಚಂದ್ರಮನನ್ನು ನೋಡಿ ಜಾಲಂದರನ ಚಿತ್ತಸಮುದ್ರವು ಪ್ರೇಮದಿಂದ ಉಕ್ಕೇರಿತು; ಆದರೆ ಅವಳ ಪರೀಕ್ಷೆ ಮಾಡುವದಕ್ಕಾಗಿ ಅವನು ತನ್ನ ಚಿತ್ತಸಮುದ್ರವನ್ನು ಆ-ಕುಂಚನ ಮಾಡಿದನು; ಮತ್ತು ಪಿಶಾಚಿಯಂತೆ ಆಚರಿಸಹತ್ತಿದನು; ಅವನು ಉದ್ದಾಮತನವನ್ನು ಧಾರಣ ಮಾಡಿ ಮೈನಾವತಿಯ ಮೇಲೆ ಕಲ್ಲುಗಳನ್ನು ಒಗೆಯ ಹತ್ತಿದನು. ಅವನು ಮೈನಾವತಿಯನ್ನು ತ್ರಾಸಗೊಳಿಸಿ ಅವಳ ಭಕ್ತಿಭಾವನೆಯನ್ನು ಭಂಗಮಾಡಹತ್ತಿದನು. ಜಾಲಂದರನಾಥನು ಔದಾರ್ಯ ಮತ್ತು ದಯೆ ಇವುಗಳ ನಿಧಿಯಾಗಿದ್ದರೂ ಮೈನಾವತಿಯ ನಿಷ್ಠೆಯನ್ನು ನೋಡುವ ಸಲುವಾಗಿ ಅವನು ತನ್ನ ಎಲ್ಲ ಔದಾರ್ಯವನ್ನು ಬಚ್ಚಿಟ್ಟು ಕಲ್ಲುಗಳ ವೃಷ್ಟಿಯನ್ನು ನಡಿಸಿದನು; ಆದರೆ ಮೈನಾವತಿಯು ತಿಲ ಮಾತ್ರವೂ ಅಂಜಲಿಲ್ಲ. ಅವನ ಕೈಯಿಂದ ತನಗೆ ಮೃತ್ಯು ಒದಗಿದರೂ ಅದನ್ನು ಸ್ವೀಕರಿಸಲಿಕ್ಕೆ ಸಿದ್ಧಳಾದಳು. ಮೇಘವು ಎಷ್ಟೇ ಕಸುವಿನಿಂದ ಮಳೆಗರೆದರೂ ಪರ್ವತವು ಹೇಗೆ ತನ್ನ ಸ್ಥಾನವನ್ನು ಬಿಡುವದಿಲ್ಲವೋ ಅದರಂತೆ ಅವಳು ಸ್ಥಾನವನ್ನು ಬಿಡಲಿಲ್ಲ. ಆಗ ಜಾಲಂದರನ ಮನಸ್ಸು ಕಳವಳಗೊಂಡಿತು. ಅವನು ಶಾಂತವಾದ ಮನಸ್ಸಿನಿಂದ ಅವಳನ್ನು ಕುರಿತು— "ತಾಯಿ ನೀನು ಯಾರು? ನನ್ನ ಶೋಧವನ್ನು ಮಾಡಿ ಇಲ್ಲಿಗೆ ಯಾತಕ್ಕೆ ಬಂದಿರುವಿ?" ಯಾರ ಉಪಾಧಿಯೂ ನನಗೆ ತಗಲಬಾರದೆಂದು ನಾನು ಈ ಹೊಲಸಾದ ಸ್ಥಳದಲ್ಲಿ ಪಿಶಾಚಿಯಂತೆ ಇರುತ್ತಿರಲು, ನೀನು ಇಲ್ಲಿಗೆ ಯಾವ ಇಚ್ಛೆಯನ್ನು ಧರಿಸಿಬಂದಿರುವಿಯೋ ನನಗೆ ತಿಳಿಯದು. ನಾವು ತಪಸ್ವಿಗಳು. ಯೋಗಧ್ಯಾನದಲ್ಲಿ ನಿಮಗ್ನರಾಗಿರುವೆವು? ನೀನು ಇಲ್ಲಿಗೆ ಬಂದು ಮಾಡುವದೇನು?"

ನಾಥನ ಪ್ರಶ್ನೆಗೆ ಮೈನಾವತಿಯು ಉತ್ತರ ಕೊಟ್ಟಳೇನಂದರೆ— "ಮಹಾರಾಜ ಯೋಗಿನಾಥನೇ, ವಿಜಯಶಾಲಿಯೂ ಮಹಾಪರಾಕ್ರಮಿಯೂ ಆದಂಥ ಗೌಡಬಂಗಾಲದೇಶಾಧಿಪತಿಯಾದ ತ್ರಿಲೋಚನರಾಜನಿಗೆ ನಾನು ಹೆಂಡತಿಯಾಗಬೇಕು. ನನಗೆ ಮೈನಾವತಿ ಎಂದೆನ್ನುತ್ತಾರೆ. ಭಯಂಕರನಾದ ಕಾಲನು ನನ್ನ ಪತಿಯ ಆಹುತಿಯನ್ನು ತೆಗೆದುಕೊಂಡು ನನ್ನನ್ನು ಬಿಟ್ಟುಗೊಟ್ಟಿರುತ್ತಾನೆ! ಕಾಲಚಕ್ರದ ಗತಿಯನ್ನು ನೋಡಿ

ತ್ರಸ್ತಳಾಗಿದ್ದೇನೆ! ನನಗೆ ಬಹಳ ಪಶ್ಚಾತ್ತಾಪವೂ ಭಯವೂ ಉತ್ಪನ್ನವಾಗಿ ರುತ್ತದೆ! ಕಾಲಸರ್ಪನು ಸರ್ವದಾ ಜಾಗರೂಕನಾಗಿರುತ್ತಾನೆ. ಅವನಿಂದ ನನ್ನನ್ನು ಸಂರಕ್ಷಿಸಲು ನೀನೇ ಸಮರ್ಥನಿರುತ್ತೀ.''

ಮೈನಾವತಿಯು ಈ ವಿನಂತಿಯನ್ನು ಕೇಳಿದ ನಂತರ ಜಾಲಂದರನು ಅವಳ ಗೃಹಸ್ಥಿತಿಯ ಬಗ್ಗೆ ವಿಚಾರಿಸಿದನು. ಈ ಹೇಲಾ ಪಟ್ಟಣದ ಅಧಿಪತಿ ಯಾದ ಗೋಪೀಚಂದನು ನನ್ನ ಪುತ್ರನಿದ್ದಾನೆಂದು ಅವಳು ಹೇಳಿದಳು. ಬಳಿಕ ಆ ಯೋಗಿರಾಜನು ಗೋಪೀಚಂದನ ಆಚಾರಕ್ರಮವನ್ನು ವಿಚಾರಿಸಿ ದನು. ಅವಳು ಆ ಬಗ್ಗೆ ಸಂಕ್ಷೇಪವಾಗಿ ಹೇಳಿ ಪುನಃ ಅಂದದ್ದೇನಂದರೆ— "ಮಹಾರಾಜ, ಇಂಥ ವಿಚಾರದಿಂದ ನನಗೆ ಸಮಾಧಾನವೆನಿಸುವದಿಲ್ಲ. ನನ್ನ ತಲೆಯ ಮೇಲೆ ಯಮನ ದಂಡವು ಜೋತಾಡುತ್ತಿರುತ್ತದೆ! ಕಾಲನ ಪಾಶ ದಲ್ಲಿ ನನ್ನ ಕುತ್ತಿಗೆಯು ತೊಡಗಿಕೊಂಡಿದೆ! ತಾವು ಕೃಪೆ ಮಾಡಿ ಆ ಪಾಶ ದಿಂದ ನನ್ನನ್ನು ತ್ವರಿತವಾಗಿ ಮುಕ್ತಳನ್ನಾಗ ಮಾಡಬೇಕು.''

ಅದಕ್ಕೆ ಜಾಲಂದರನು ಹೇಳಿದ್ದೇನಂದರೆ—''ತಾಯೀ, ನೀನು ದಡ್ಡ ಳಿರುತ್ತೀ. ನನ್ನಂಥ ಪಿಶಾಚಿವೃತ್ತಿಯ ಮನುಷ್ಯನ ಕಡೆಯಿಂದ ಕಾಲನ ಬಂಧನವು ಹೇಗೆ ತಪ್ಪೀತು? ನನ್ನ ಕೈಯಲ್ಲಿ ಏನು ಅದೆ? ನಿನಗೆ ತಿಳಿವಳಿಕೆ ಇದ್ದಂತೆ ಕಾಣುವದಿಲ್ಲ. ನೀನು ಬಂದ ದಾರಿಯಿಂದ ತಿರುಗಿ ಹೋಗು. ನೀನು ರಾಜಮಾತೆಯಿರುವಿ. ನಮ್ಮಂಥ ಭೂತಾಟಿಕೆಯವರ ಸಹವಾಸವು ನಿಮಗೆ ಯೋಗ್ಯವಲ್ಲ. ಈ ಸಂಗತಿಯನ್ನು ರಾಜನು ಕೇಳಿದರೆ ಅವನು ನನಗೂ ತಮಗೂ ಕೂಡಿಯೇ ಶಾಸನ ಮಾಡುವನು.

ಈ ಮೇರೆಗೆ ಸಮಾಧಾನ ಹೇಳಿ ಜಾಲಂದರನು ಆ ರಾಜಮಾತೆಗೆ ಅಲ್ಲಿಂದ ಹೋಗ ಹೇಳಿದನು. ಮೈನಾವತಿಯು ಬಹಳ ಅಸಂತೋಷದಿಂದ ಮನೆಗೆ ಬಂದಳು; ಆದರೆ ಅವಳಿಗೆ ಸಮಾಧಾನವೆನಿಸಲಿಲ್ಲ. ಜಾಲಂದರನ ಭೆಟ್ಟಿಗಾಗಿ ಅವಳ ಚಿತ್ತವು ತಳಮಳಿಸುತ್ತಿತ್ತು. ಅವಳು ಸಾಯಂಕಾಲದ ವರೆಗೆ ಹೇಗಾದರೂ ದಿವಸವನ್ನು ನೂಕಿದಳು. ಕಗ್ಗತ್ತಲೆಯಾಗಿ ಮನುಷ್ಯರ ಸಂಚಾರವು ಇಲ್ಲದಂತಾಗಲು ಅವಳು ತನ್ನ ದಾಸಿಯರ ಸಹಿತವಾಗಿ ಪುನಃ ಜಾಲಂದರನ ಕಡೆಗೆ ಹೋದಳು. ಜಾಲಂದರನಿಗೆ ನಮಸ್ಕಾರ ಮಾಡಿ ಅವನ ಚರಣದ ಹತ್ತರ ಕುಳಿತಳು. ಅವಳು ಭಕ್ತಿಯ ಅತಿರೇಕದಿಂದ ಜಾಲಂದರನ

ಚರಣಕ್ಕೆ ಗಟ್ಟಿಯಾಗಿ ಅಪ್ಪಿಕೊಂಡಳು. ನಾಥನ ಚರಣಕಮಲಗಳನ್ನು ಕೈಯಲ್ಲಿ ತೆಗೆದುಕೊಂಡು ಎರಡು ಪ್ರಹರ ಪರ್ಯಂತರ ಅವನ ಪ್ರಸನ್ನತೆಯ ಮಾರ್ಗವನ್ನು ನೋಡುತ್ತ ಕುಳಿತುಕೊಂಡಳು. ಜಾಲಂದರನು ಅವಳ ಈ ಭಕ್ತಿಯ ಸೇವೆಯನ್ನು ಸ್ವೀಕಾರ ಮಾಡಿ ಮೌನವಾಗಿದ್ದನು. ಬೆಳಗು ಬರಲು ಅವನಿಗೆ ನಮಸ್ಕಾರ ಮಾಡಿ, ಅವಳು ತನ್ನ ವಾಡೆಗೆ ತಿರುಗಿ ಹೋದಳು. ಇದೇ ಕ್ರಮವನ್ನು ಅವಳು ಆರು ತಿಂಗಳ ವರಗೆ ಅಖಂಡವಾಗಿ ನಡಿಸಿದಳು.

ಆರುತಿಂಗಳವರೆಗೆ ಅವಳ ನಿಃಸೀಮ ಸೇವೆಯನ್ನು ಸ್ವೀಕಾರ ಮಾಡಿ ಜಾಲಂದರನು ಸಂತುಷ್ಟನಾದನು. ಆ ಮೇಲೆ ಒಂದುದಿವಸ ಅವನು ಒಂದು ಚಮತ್ಕಾರವನ್ನು ಪ್ರಕಟ ಮಾಡಿದನು. ನಿತ್ಯದಂತೆ ಮೈನಾವತಿಯು ಸೇವೆ ಮಾಡಲಿಕ್ಕೆ ಬರುವಷ್ಟರಲ್ಲಿ ಅವನು ನಿದ್ರೆಗೈಯುತ್ತಲಿದ್ದನು. ಯೋಗಿರಾಜನು ಭೂಮಿಯ ಮೇಲೆ ಮಸ್ತಕವನ್ನು ಇಟ್ಟು ನಿದ್ರಿತನಾದದ್ದನ್ನು ಕಂಡು ಮೈನಾವತಿಯು ತನ್ನ ತೊಡೆಯನ್ನು ತಲೆಗಿಂಬಿನಂತೆ ಅವನ ಮಸ್ತಕದ ಕೆಳಗಿರಿಸಿದಳು. ಜಾಲಂದರನು ಆ ಸಮಯದಲ್ಲಿ ಮಾಯೆಯಿಂದ ಭ್ರಮರವನ್ನು ನಿರ್ಮಾಣ ಮಾಡಿದನು; ಮತ್ತು ಅವನು ಅವಳ ತೊಡೆಯ ಮೇಲೆ ತಲೆಯನ್ನಿಟ್ಟು ಸ್ವಸ್ಥವಾಗಿ ಘೋರನಿದ್ರೆಯನ್ನು ಮಾಡಹತ್ತಿದನು. ಆ ಮಾಯೆಯ ಭ್ರಮರವು ಅವಳ ತೊಡೆಯ ಕೆಳಗೆ ಸೇರಿ ರಕ್ತವನ್ನು ಹೀರಹತ್ತಿತು. ತನ್ನ ತೊಡೆಗೆ ಬಲವಾದ ಬಾಧೆಯುಂಟಾಯಿತೆಂದು ತಿಳಿದಳು. ಆ ಬಾಧೆಯಿಂದ ಅವಳ ತೊಡೆಯೊಳಗಿನ ರಕ್ತವು ಕೆಳಗೆ ಧಾರೆಗಟ್ಟಿ ಇಳಿಯಹತ್ತಿತು. ಆದರೂ ಆ ಭಗವದ್ಭಕ್ತ ಸಾಧ್ವಿಯು ಹೆದರಲಿಲ್ಲ. ತನ್ನತೊಡೆಯ ಮೇಲೆ ಮಲಗಿರುವಂಥ ಭಗವತ್‌ಸ್ವರೂಪರಾದ ಗುರುಗಳ ನಿದ್ರೆಯು ನಾಶವಾಗಬಾರದೆಂದು ಆ ಧೈರ್ಯಶಾಲಿನಿಯು ತನ್ನ ತೊಡೆಯನ್ನು ಚಲಿಸಗೊಡಲಿಲ್ಲ. ಗುಂಗೀಹುಳವು ತೊಡೆಯನ್ನು ಸರಿದು ಪಾರಾಗಿ ಜಾಲಂದರನ ಕುತ್ತಿಗೆಯನ್ನು ಚುಚ್ಚಹತ್ತಿತು. ಆಗ ಜಾಲಂದರನು ಜಾಗರೂಕನಾದನು. ಅವನು ಮೈನಾವತಿಯ ತೊಡೆಯ ಕಡೆಗೆ ಲಕ್ಷ್ಯವನ್ನು ಕೊಟ್ಟನು. ಮೈನಾವತಿಯ ತೊಡೆಯೊಳಗಿಂದ ರಕ್ತಪ್ರವಾಹವು ಹರಿಯುತ್ತಿರುವದನ್ನು ಕಂಡು ಆತನ ಚಿತ್ತವು ಒಮ್ಮೆಲೆ ಕರಗಿತು. ಅವನು

ಕೃಪಾದೃಷ್ಟಿಯಿಂದ ನೋಡುತ್ತ ಮೈನಾವತಿಯ ಮುಖದ ಮೇಲೆ ಕೈಯಾಡಿಸಿದನು. ಅವಳ ಶುದ್ಧ ಮತ್ತು ಸತ್ವ ಸಂಪನ್ನವಾದ ನಿಷ್ಠೆಗೆ ಮೆಚ್ಚಿ ಅವನು ಕೂಡಲೆ ಅವಳಿಗೆ ತಾರಕಮಂತ್ರದ ಉಪದೇಶ ಮಾಡಿದನು. ಆ ದಿವ್ಯ ಮುಖದೊಳಗಿಂದ ಹೊರಟಂಥ ದಿವ್ಯವಾದ ಮಂತ್ರವು ಕಿವಿಯಲ್ಲಿ ಸೇರಿದ ಕೂಡಲೆ ಮೈನಾವತಿಗೆ ಸನಾತನ ಬ್ರಹ್ಮಸ್ವರೂಪದ ಜ್ಞಾನವಾಗಿ ಅವಳು ಬ್ರಹ್ಮಚಿಂತನದಲ್ಲಿಯೇ ಮಗ್ನಳಾದಳು. ಸ್ಥಾವರ-ಜಂಗಮಾತ್ಮಕ ಎಲ್ಲ ಪದಾರ್ಥಗಳು ನಾಶವಂತವಿದ್ದು ಪಾತಾಳಲೋಕದಿಂದ ಬ್ರಹ್ಮಲೋಕದ ವರೆಗೆ ಒಂದೇ ಬ್ರಹ್ಮಸ್ವರೂಪವು ತುಂಬಿಕೊಂಡಿರುತ್ತದೆಂಬ ನಿಶ್ಚಯವಾಯಿತು. ಈ ಚಮತ್ಕಾರವನ್ನು ಕಂಡು ಮೈನಾವತಿಯು ಗುರುಗಳ ಚರಣಗಳನ್ನು ಗಟ್ಟಿಯಾಗಿ ಅಪ್ಪಿಕೊಂಡಳು. ತಾನು ಕೃತಕೃತ್ಯಳಾದೆನೆಂದು ಆಕೆಗೆ ಸಮಾಧಾನವೆನಿಸಿತು. ಜಾಲಂದರನು ಅವಳ ಭಾವನೆಯನ್ನು ಅರಿತು ಅವಳ ಶರೀರದಲ್ಲಿ ಸಂಜೀವಿನಿಯು ಸಂಚಾರಮಾಡಿಸಿದನು. ಮೃತಶರೀರದಲ್ಲಿ ಸಹ ಸಂಜೀವಿನಿಯಿಂದ ಚೈತನ್ಯ ಉಂಟಾಗುತ್ತಿರಲು, ಸಜೀವಶರೀರಕ್ಕೆ ಆ ಸಂಜೀವಿನಿಯು ಅಜರಾಮರ ಸ್ಥಿತಿಯನ್ನುಂಟು ಮಾಡಿದ್ದು ಆಶ್ಚರ್ಯವಲ್ಲ. ಶ್ರೀರಾಮಚಂದ್ರನು ಭಕ್ತನಾದ ವಿಭೀಷಣನನ್ನು ಹೇಗೆ ಚಿರಂಜೀವನನ್ನಾಗಿ ಮಾಡಿದನೋ, ಹಾಗೆ ಜಾಲಂದರನು ಮೈನಾವತಿಯನ್ನು ಚಿರಂಜೀವಿಯನ್ನಾಗ ಮಾಡಿದನು.

ತನ್ನ ತೊಡೆಗೆ ಗುಂಗೀಹುಳವು ಬಾಧೆ ಮಾಡಿದರೂ ಆ ಗುಂಗೀಹುಳವೇ ನನ್ನ ಮೇಲೆ ಮಹದುಪಕಾರ ಮಾಡಿತೆಂದು ಮೈನಾವತಿಯು ಕೃತಜ್ಞತೆಯನ್ನು ತೋರಿಸಿದಳು. ಜಾಲಂದರನ ಭಕ್ತಿಯು ಹೊರತು ಅವಳಿಗೆ ಏನೂ ಸೂಚಿಸದಂತೆ ಆಯಿತು. ಅವಳು ಸ್ವಾನಂದದಲ್ಲಿ ರಮಿಸಹತ್ತಿದಳು.



# ಅಧ್ಯಾಯ ೧೪

## ಜಾಲಂದರನಿಗುಂಟಾದ ಸಮಾಧಿ.

ತನ್ನಂತೆ ಗೋಪೀಚಂದನಿಗೂ ಚಿರಂಜೀವಪದವು ಪ್ರಾಪ್ತವಾಗಬೇಕೆಂದು ಮೈನಾವತಿಯು ಇಚ್ಛಿಸಿದಳು. ಆಕೆಗೆ ಬ್ರಹ್ಮಜ್ಞಾನವುತ್ಪನ್ನವಾಗಿದ್ದರೂ ಆ ಸಾಧ್ವಿಯು ಸಾತ್ವಿಕ ಮೋಹದಿಂದ ವ್ಯಾಪ್ತಳಾಗಿ ಗೋಪೀಚಂದರಾಜನ ವಿಷಯದಲ್ಲಿ ವಿಚಾರಗ್ರಸ್ತಳಾದಳು. ಅವನ ಸುವರ್ಣದಂಥ ದೇಹವು ಸ್ಮಶಾನದಲ್ಲಿ ಭಸ್ಮವಾಗಿ ಹೋಗುವದೆಂಬ ಕಲ್ಪನೆಯಿಂದ ಆಕೆಯು ದುಃಖಿಸಹತ್ತಿದಳು. ಸುಂದರವಾದ ಈ ರಾಜವಾಡೆಯು ಕಡೆಗೆ ನಾಶವಾಗುವದಲ್ಲ? ಎಂದು ಹಂಬಲಿಸಿದಳು. ಎಲ್ಲ ಅವಯವಗಳಿಂದ ಪರಿಪೂರ್ಣಗವಾದ ವೃಕ್ಷವು ಬಿರುಗಾಳಿಯಿಂದ ಭೂಮಿಯ ಮೇಲೆ ಬೀಳುವಂತೆ ಮನುಷ್ಯದೇಹವು ಕಡೆಗೆ ನಿಶ್ಚಯವಾಗಿ ಕಾಲನ ಮುಖದಲ್ಲಿ ಬೀಳುವದೆಂದು ಆ ಸಾಧ್ವಿಯು ಅತ್ಯಂತ ಖಿನ್ನಳಾದಳು. ಗೋಪೀಚಂದನಿಗೆ ಸದ್ಬೋಧ ಮಾಡುವ ಯೋಗವು ಯಾವಾಗ ಸಾಧಿಸುವದೋ ಎಂದು ಆಕೆಯು ಕಾಲ ನಿರೀಕ್ಷಣೆ ಮಾಡಹತ್ತಿದಳು.

ಮುಂದೆ ಮಾಘಮಾಸದಲ್ಲಿ ಚಳಿಯು ಬಿದ್ದಿರಲು, ಮೈನಾವತಿಯು ದಾಸಿಯರಿಂದೊಡಗೂಡಿ ತನ್ನ ಮಂದಿರದಲ್ಲಿ ಕುಳಿತಿದ್ದಳು. ಆ ಸಮಯದಲ್ಲಿ ಗೋಪೀಚಂದನ ಸ್ನಾನವಿಧಿಯು ನಡೆದಿತ್ತು. ರಾಜಾಂಗಣದಲ್ಲಿ ಸುವರ್ಣರತ್ನಗಳಿಂದ ಭೂಷಿತವಾದ ಚಂದನದ ಚೌಕಿಯ ಮೇಲೆ ರಾಜನು ಕುಳಿತಿದ್ದನು. ಅವನು ತನ್ನ ಮೈ ಮೇಲಿನ ಆಭರಣಗಳನ್ನು ತೆಗೆದಿದ್ದನು. ಸುತ್ತು ಮುತ್ತು ರಾಜಸ್ತ್ರೀಯರು ನಿಂತುಕೊಂಡಿದ್ದರು. ದಾಸೀಜನರು ಅವನ ಮೈಯಲ್ಲಿ ಬಿಸನೀರಿನಿಂದ ತುಂಬಿದ ಪಾತ್ರೆಯನ್ನು ಕೊಡುತ್ತಿದ್ದರು. ನಕ್ಷತ್ರ ಸಮೂಹದಲ್ಲಿ ಹೊಳೆಯುವ ಚಂದ್ರನಂತೆ ತನ್ನ ಪುತ್ರನು ಒಪ್ಪುತ್ತ

ಸ್ನಾನ ಮಾಡುವದನ್ನು ಕಂಡು ಮೈನಾವತಿಯು ಮೋಹಮಯ ಅಂತಃಕರ ಣದಲ್ಲಿ ಪ್ರೇಮ ಮತ್ತು ಔದಾಸೀನ್ಯಗಳು ಏತಿವಿಾರಿ ಕಣ್ಣುಗಳೊಳಗಿಂದ ಅಶ್ರುಧಾರೆಗಳು ಇಳಿಯಹತ್ತಿದವು. ಅವಳ ಕಣ್ಣೊಳಗಿಂದ ಉದುರುವ ಅಶ್ರುಬಿಂದುಗಳು ಗೋಪೀಚಂದನ ಮೈಮೇಲೆ ಬೀಳಹತ್ತಿದವು. ಆ ಅಶ್ರು ಬಿಂದುಗಳೆಂದರೆ ಕೇವಲ ಚಿಂತಾಮಣಿಯೇ ಆಗಿದ್ದವು. ಸಂಸಾರ ವ್ಯಥೆ ಯನ್ನು ನಾಶಗೊಳಿಸಿ ಅಖಂಡ ಸುಖವನ್ನು ಕೊಡಲು ಅವು ಸಮರ್ಥವಿದ್ದವು. ಯಮನ ಪಾಶವನ್ನು ಗೆಲ್ಲುವ ಸಂಜೀವಿನಿಯೇ ಆ ಅಶ್ರುಬಿಂದುವಿನಲ್ಲಿ ಬೆರ ತಿತ್ತು. ಸಂಸಾರಸನ್ನಿಪಾತದಂಥ ಪ್ರಖರ ತಾಪವನ್ನು ಶಾಂತಗೊಳಿಸುವ ಆ ಹನಿಗಳು ರಾಜನ ದೇಹದ ಮೇಲೆ ಬೀಳುತ್ತಿದ್ದವು. ಹಸಿವೆಯಿಂದ ವ್ಯಾಕು ಲನಾಗಿ ಜಠರಾಗ್ನಿಯು ಪ್ರದೀಪ್ತವಾದಾಗ್ಗೆ ಕಾಮಧೇನುವಿನ ದರ್ಶನವಾ ದರೆ ಹ್ಯಾಗೆ ಆಗುವದೋ, ಹಾಗೆ ಆ ಅಶ್ರುಬಿಂದುಗಳು ಸುಖಕೊಡುತ್ತಿ ದ್ದವು. ದಾರಿದ್ರ್ಯದಿಂದ ಪೀಡಿತನಾದವನಿಗೆ ಕುಬೇರನ ದರ್ಶನವಾದಂತೆ ಆ ಅಶ್ರುಬಿಂದುಗಳು ಗೋಪೀಚಂದನಿಗೆ ಭೆಟ್ಟಿಯಾದವು. ಅವನು ಆಗ ಆಕಾಶದ ಕಡೆಗೆ ದೃಷ್ಟಿಯನ್ನಿಟ್ಟು ಆ ಘನವಾದ ಜಲಬಿಂದುಗಳು ಮಳೆಯ ರೂಪದಿಂದ ಬರುವದು ಅಸತ್ಯವೆಂದು ಅರಿತುಕೊಂಡನು. ಹಾಗಾದರೆ ಆ ಹನಿಗಳು ಎಲ್ಲಿಂದ ಬೀಳುತ್ತಿರಬಹುದು! ಎಂಬ ಬಗ್ಗೆ ಅವನು ವಿಚಾರಿಸು ತ್ತಿರಲು ಮತ್ತೆ ಹನಿಗಳು ಅವನ ಮೈಮೇಲೆ ಬಿದ್ದವು. ಅವನು ಅದೇ ವೇಳೆಗೆ ಮೇಲೆ ನೋಡಲು ಮೈನಾವತಿಯ ಅಶ್ರುಪೂರ್ಣವಾದ ಮುಖವು ಅವನ ದೃಷ್ಟಿಗೆ ಬಿತ್ತು. ತನ್ನ ಮೈಮೇಲೆ ಬೀಳುತ್ತಿರುವ ಜಲಬಿಂದು ಗಳು ಮೈನಾವತಿಯ ಕಣ್ಣೊಳಗಿಂದ ಬೀಳುತ್ತಲಿವೆಯೆಂದು ತಿಳಿಯಲು ಗೋಪೀಚಂದನು ಹಾಗೆಯೇ ಎದ್ದು ಅಂತಃಪುರಕ್ಕೆ ಹೋದನು; ಮತ್ತು ತಾಯಿಗೆ ನಮಸ್ಕಾರ ಮಾಡಿ ಕೈಗಳನ್ನು ಜೋಡಿಸಿ ನಿಂತುಕೊಂಡು ಹೀಗೆ ಮಾತನಾಡಹತ್ತಿದನು.:—

ತಾಯಿ, ಹೀಗೆ ದುಃಖಮಾಡುವ ಕಾರಣವೇನು? ನನ್ನಂಥ ರಾಜ್ಯಾ ಧಿಪತಿಯು ನಿನ್ನ ಪುತ್ರನಿರಲು ಇಷ್ಟು ದುಃಖವು ಯಾತರ ಸಲುವಾಗಿ ಉತ್ಪ ನ್ನವಾಗಿರುತ್ತದೆ? ಹೇ ತಾಯಿಯೇ—ನಿನ್ನ ಬಾಲಕನ ಪರಾಕ್ರಮವು ನಿನಗೆ ಗೊತ್ತಿಲ್ಲವೇ? ನಾ-ನಾ ಅನ್ನುವಂಥ ದೊಡ್ಡ ದೊಡ್ಡ ರಾಜರು ನನ್ನ

ಪರಾಕ್ರಮಕ್ಕೆ ಹೆದರಿ ನನಗೆ ಕಪ್ಪ ಕಾಣಿಕೆಯನ್ನು ಕೊಡುತ್ತಲಿದ್ದಾರೆ. ಇಂಥ ಅತುಲ ಪರಾಕ್ರಮಿಯಾದ ನಾನು ಇರುತ್ತಿರಲು ನಿನಗೆ ತ್ರಾಸಕೊಟ್ಟವರು ಯಾರು? ಇದನ್ನು ತೀವ್ರವಾಗಿ ಹೇಳು! ನನ್ನ ಕ್ರೋಧವನ್ನು ಪ್ರಜ್ವಲಿತ ಮಾಡಲಿಕ್ಕೆ ಯಾವ ಕ್ಷುದ್ರನು ಮುಂದುವರಿದನು? ಅದನ್ನು ನನಗೆ ಹೇಳಲಿಕ್ಕೆ ಬೇಕು. ತಾಯೀ—ಯಾವನಾದರೂ ನಿನ್ನನ್ನು ವಕ್ರದೃಷ್ಟಿಯಿಂದ ನೋಡಿದ್ದಾದರೆ ಅವನ ಕಣ್ಣುಗಳನ್ನು ಕಿತ್ತಿ ತಂದು ನಿನ್ನ ಕೈಯಲ್ಲಿಡುವ ಸಾಮರ್ಥ್ಯವು ಈ ಗೋಪೀಚಂದನಲ್ಲಿದೆ. ಗೋಪೀಚಂದನ ತಾಯಿಗೆ ದುಃಖವಾಗಬೇಕೆಂಬ ಉದ್ದೇಶದಿಂದ ಯಾವನಾದರು ನಿನ್ನ ಕಡೆಗೆ ಕೈಮಾಡಿ ತೋರಿಸಿದ್ದರೆ ಅವನ ಹಸ್ತವನ್ನು ಕತ್ತರಿಸಿ ತರುವೆನು. ನೀನು ಅಶ್ರುಬಿಂದುಗಳನ್ನು ಉದರಿಸುವ ಕಾರಣವು ಯಾವದು? ಅದನ್ನು ತ್ವರಿತವಾಗಿ ಹೇಳು. ನನ್ನ ಸ್ತ್ರೀಯರೊಳಗೆ ಯಾರಿಂದಲಾದರೂ ನಿನಗೆ ಅನಾದರ ಉಂಟಾಗಿದ್ದರೆ ಹೇಳು, ಅವಳನ್ನು ಕೂಡಲೆ ದಂಡಿಸುವೆನು. ಒಂದುವೇಳೆ ನನ್ನ ಕಡಿಯಿಂದಲೇ ನಿನ್ನ ಸೇವೆಯಲ್ಲಿ ಅಂತರವಾಗಿದ್ದರೆ ಸ್ಪಷ್ಟವಾಗಿ ಹೇಳು. ಅಂದರೆ ನಿನಗೆ ಕ್ಷಮೆ ಬೇಡಿಕೊಂಡು ನಿನ್ನ ಮನೋರಥವನ್ನು ಪೂರ್ಣ ಮಾಡುವೆನು. ನನ್ನ ಕೆಲಸವು ಬಹಳ ಮಹತ್ವದ್ದು ಅದೆ, ಆ ಕೆಲಸವು ನಿನ್ನಿಂದ ಆಗದೆಂದು ವಿಲಾಪ ಮಾಡುತ್ತಲಿದ್ದರೆ, ಆ ಕಲ್ಪನೆಯನ್ನು ಬಿಟ್ಟು ಈ ಶೋಕವನ್ನು ಬಂದ ಮಾಡು. ನಿನ್ನ ಇಚ್ಛೆಯನ್ನು ಪೂರ್ಣಗೊಳಿಸಲಿಕ್ಕೆ ನಾನು ನನ್ನ ಪ್ರಾಣವನ್ನಾದರೂ ಖರ್ಚು ಮಾಡುವೆನು. ತಾಯಿಯ ದುಃಖನಾಶಕ್ಕಾಗಿ ತನ್ನ ದೇಹವನ್ನು ಖರ್ಚು ಮಾಡದ ಪುತ್ರನಿಗೆ ಧಿಕ್ಕಾರವಿರಲಿ! ನನ್ನ ಜೀವಿತದ ಕಡೆಗೆ ಆಶೆಯಿಟ್ಟು ನಿನ್ನ ದುಃಖ ನಿವಾರಣೆಗೆ ತಪ್ಪಿದರೆ ನಾನು ನಿನ್ನ ಮಗನೇ ಅಲ್ಲ. ತಾಯಿ-ತಂದೆಗಳ ದುಃಖವನ್ನು ಕಂಡು ಮಗನ ಮನಸ್ಸು ತಳಮಳಗೊಳ್ಳದಿದ್ದರೆ ಅವನು ಭೂಮಿಯ ಮೇಲೆ ಜನ್ಮ ತಾಳಿದ್ದು ವ್ಯರ್ಥವೆಂದು ತಿಳಿಯಬೇಕು. ತಂದೆ-ತಾಯಿಗಳನ್ನು ದೈನ್ಯಾವಸ್ಥೆಯಲ್ಲಿಟ್ಟು ತಾನು ವಿಲಾಸವನ್ನು ಭೋಗಿಸುತ್ತಿರುವ ಪುತ್ರನು ಭೂಮಿಗೆ ಭಾರವೆನಿಸುವನು. ಹೆಂಡತಿಗೆ ಜರದ ಶೀರೆಯು; ತಾಯಿಗೆ ಹರಕ ಚಿಂದಿಯು! ಹೆಂಡತಿಗೆ ಇಚ್ಛಾ ಭೋಜನ; ತಾಯಿಗೆ ಉಪವಾಸ! ಹೆಂಡತಿಗೆ ರಂಭೆಯಷ್ಟು ಉಪಚಾರ! ತಾಯಿಗೆ ಪಿಶಾಚಿಯ ಉಪಚಾರ! ಹೆಂಡತಿಯ ಸಂತೋಷಕ್ಕಾಗಿ ತನ್ನ

ಜೀವವನ್ನಾದರೂ ಸೂರೆಗೊಳಿಸಬೇಕು. ಅದೇ ಜನ್ಮಕೊಟ್ಟಂಥ ತಾಯಿಯ ಹೊಟ್ಟೆಯಲ್ಲಿ ಮುಳ್ಳುಗಳನ್ನು ತುಂಬಬೇಕು. ಹೆಂಡತಿಯೊಡನೆ ಮಾತ್ರ ಮೃದು ಮತ್ತು ಏಕಾಂತ ಮಾತು; ಅದೇ ತಾಯಿಯೊಡನೆ ಕ್ರೋಧಯುಕ್ತವಾದ ಭಾಷಣವು. ತಾನು ರಾಜವಿಲಾಸವನ್ನು ಭೋಗಿಸಬೇಕು, ತಂದೆಯನ್ನು ನರಕಯಾತನೆಯಲ್ಲಿಡಬೇಕು. ತಾನು ಪಕ್ವಾನ್ನಗಳನ್ನು ಉಂಡು ತಂದೆಗೆ ಕದನ್ನವನ್ನು ಹಾಕುವದು. ಇವು ನೀಚಧರ್ಮವಲ್ಲದೆ ಮತ್ತೇನು? ಯಾವನು ತಾಯಿ-ತಂದೆಗಳಿಗೆ ತ್ರಾಸಕೊಟ್ಟು ಕಾಲ ಕಳೆಯುವನೋ ಅವನು ಇದ್ದೂ ಮೃತಪಟ್ಟಂತೆಯೇ ಸರಿ! ತಾಯೀ, ಇಂಥ ನಷ್ಟರಲ್ಲಿ ಈ ಗೋಪೀಚಂದನನ್ನು ಎಣಿಸಬೇಡ. ನಿನ್ನ ಮನಸ್ಸಿನಲ್ಲಿ ಯಾವ ಇಚ್ಛೆಯು ಉತ್ಪನ್ನವಾಗಿರುವದೋ ಅದನ್ನು ಪೂರ್ಣಗೊಳಿಸುವದಕ್ಕಾಗಿ ನನ್ನ ಪ್ರಾಣವನ್ನೂ ಸಹ ಅರ್ಪಿಸಲಿಕ್ಕೆ ಸಿದ್ಧನಿದ್ದೇನೆಂದು ತಿಳಿ.''

ಈ ಮೇರೆಗೆ ನುಡಿದ ಗೋಪೀಚಂದನ ಮಾತನ್ನು ಕೇಳಿ ಮೈನಾವತಿಯ ಅಂತಃಕರಣವು ತುಂಬಿ ಬಂದಿತು. ಆಗ ಅವಳು ಮಗನನ್ನು ಕುರಿತು ನುಡಿದಳೇನಂದರೆ—''ಗೋಪೀಚಂದನೇ, ನಿನ್ನಂಥ ಬಲಾಢ್ಯ ಪುತ್ರನಿರುತ್ತಿರಲು ನನಗೆ ದುಃಖಕೊಡುವ ಸಾಹಸವನ್ನು ಆದಾವನು ಮಾಡುವನು? ಯಾರೂ ನನಗೆ ದುಃಖಕೊಟ್ಟಿಲ್ಲ; ಆದರೆ ನನಗೆ ದುಃಖವುಂಟಾದ ಕಾರಣವು ಬೇರೆ ಇರುತ್ತದೆ. ಅದನ್ನು ಹೇಳುತ್ತೇನೆ ಕೇಳು; ಅಪ್ಪಾ ಮಗೂ, ಸರ್ವಭಕ್ಷಕನಾದ ಕಾಲನು ಬಾಯಿ ತೆರೆದುಕೊಂಡು ಕುಳಿತು ಮನುಷ್ಯಮಾತ್ರರ ಆಯುಷ್ಯವನ್ನು ಒಂದೊಂದೇ ದಿನವನ್ನಾಗಿ ಎಣಿಸುತ್ತ ಭಕ್ಷಿಸುವನು. ಅವನಿಗೆ ಯಾರೂ ಎದುರಿಲ್ಲ. ನಿನ್ನನ್ನು ಹಡೆದವರು ಎಷ್ಟು ಸುರೂಪಿಗಳೆಂಬದು ನಿನಗೆ ಗೊತ್ತಿದೆ. ಅವರ ಆ ಸುಂದರ ರೂಪವು ಕಾಲನ ಕೈಯಲ್ಲಿ ಸಿಕ್ಕು ಭಸ್ಮೀಭೂತವಾಯಿತಲ್ಲವೇ? ಅದರಂತೆ ನಮ್ಮೆಲ್ಲರ ಸ್ಥಿತಿಯೂ ಆಗುವದು. ಆದ್ದರಿಂದ ಮನುಷ್ಯನು ಜನ್ಮಕ್ಕೆ ಬಂದ ಬಳಿಕ ಕಾಲಪಾಶದಿಂದ ಮುಕ್ತನಾಗುವದಕ್ಕೆ ಪ್ರಯತ್ನ ಮಾಡಬೇಕು. ವಿಷಯವಿಲಾಸಗಳಲ್ಲಿ ಮಗ್ನನಾಗಿ ಕಾಲ ಕಳೆದರೆ ಮುಂದೆ ಮಹಾ ದುಃಖವುಂಟಾಗುವದು. ಮಹಾ ಭಗವದ್ಭಕ್ತನಾದ ವಿಭೀಷಣನು ಶ್ರೀರಾಮನಿಗೆ ಶರಣು ಹೋಗಿ ಅಕ್ಷಯ್ಯಸುಖ ಹೊಂದಿದಂತೆಯೂ, ಶ್ರೀವಿಷ್ಣುಭಕ್ತಿಯಿಂದ ನಾರದರು ಮಹತ್ವವನ್ನು

ಹೊಂದಿದಂತೆಯೂ ಶ್ರೀವ್ಯಾಸರ ಅನುಗ್ರಹದಿಂದ ಶುಕಾಚಾರ್ಯರು ಜೀವನ್ಮುಕ್ತರಾದಂತೆಯೂ ಮನುಷ್ಯನು ಸದ್ಗುರುವಿಗೆ ಶರಣು ಹೋಗಿ ಮುಕ್ತನಾಗಲಿಕ್ಕೆ ಬೇಕು. ಅಪ್ಪಾ ಮಗೂ, ಈ ಮಾರ್ಗವು ಅನಾದಿ ಸಿದ್ಧವಾಗಿರುವದು. ಶ್ರೀರಾಮಾನುಜರಿಂದ ಜೋಗಿಯು ಮುಕ್ತನಾದನು. ಅವನಿಂದ ಮುಕುಂದರಾಜನು ಮುಕ್ತನಾದನು. ಅಪ್ಪಾ ಮಗೂ ನೀನೂ ಸದ್ಗುರುವಿಗೆ ಶರಣು ಹೋಗಿ ಭವಬಂಧನವನ್ನು ತಪ್ಪಿಸಿಕೋ; ಈ ಊರಲ್ಲಿ ಜಾಲಂದರನಾಥನೆಂಬ ಮಹಾನ್ ಯೋಗಿಯು ಬಂದಿದ್ದಾನೆ. ಆತನ ಸೇವೆ ಮಾಡಿ ಧನ್ಯನಾಗು.''

ತಾಯಿಯ ಮಾತಿನಿಂದ ಗೋಪೀಚಂದನು ಗೊಂದಲದಲ್ಲಿ ಬಿದ್ದನು. ರಾಜ್ಯೈಶ್ವರ್ಯದ ಮೋಹದಿಂದ ವ್ಯಾಕ್ತನಾಗಿ ಇನ್ನು ಹನ್ನೆರಡು ವರುಷಗಳು ಕಳೆದ ಬಳಿಕ ಶರಣು ಹೋಗುವೆನು ಅಂದನು. ಮಗನ ಮಾತನ್ನು ಕೇಳಿ ಮೈನಾವತಿಯು—ಅಪ್ಪಾ ಬಾಲಕಾ, ಇನ್ನೂ ನಿನ್ನ ಬುದ್ಧಿಯು ಪ್ರಶಸ್ಥವಾಗಿಲ್ಲ. ಒಂದು ಘಳಿಗೆ—ಒಂದು ಪಳ ಸಹಿತವಾಗಿ ಈ ದೇಹದ ಭರವಸೆ ಹಿಡಿಯಲು ಬರುವಂತಿಲ್ಲ. ಹೀಗಿದ್ದು ನೀನು ಹನ್ನೆರಡು ವರುಷ ಶಾಶ್ವತವಾಗಿ ಇರುವೆನೆಂಬ ಮಾತು ಆಶ್ಚರ್ಯವಲ್ಲವೆ? ಚಿತ್ತ, ವಿತ್ತ, ಮತ್ತು ಆಯುಷ್ಯ ಇವು ಕ್ಷಣಭಂಗುರವೂ ಚಂಚಲವೂ ಇರುತ್ತವೆ. ನೀರಗುಳ್ಳಿಯಂತೆ ಈ ದೇಹದ ಸ್ಥಿತಿಯಿರುತ್ತದೆ. ಬಂಜೆಯ ಮಗನು ಮಾಡೆಯನ್ನು ಕಟ್ಟಬಲ್ಲನೇ? ಮೃಗಜಲವು ತೃಷಾಶಾಂತಿಯನ್ನು ಮಾಡಬಲ್ಲದೇ? ಸ್ವಪ್ನದೊಳಗಿನ ರಾಜಪದವು ಸತ್ಯವಾಗಬಲ್ಲದೆ? ಎಲೋ ಈ ಎಲ್ಲ ಚರಾಚರ ಸೃಷ್ಟಿಯು ನಶ್ವರವಾಗಿದೆ. ಜಾಣರು ಇದರ ವಿಶ್ವಾಸವನ್ನು ಹಿಡಿಯುವದಿಲ್ಲ.

ಈ ಸಂಸಾರವನ್ನು ತ್ಯಜಿಸಿ ವಿಜಯಶಾಲಿಗಳಾದಂಥ ಕಪಿಲ, ಶುಕ, ದತ್ತಾತ್ರಯ, ವ್ಯಾಸ ಇವರಂಥ ರಣಶೂರರ ಹೊರ್ತು ಉಳಿದ ಎಲ್ಲಜನರು ಯಮನ ಪಾಶಕ್ಕೆ ಒಳಗಾದವರಿರುತ್ತಾರೆ. ಕಾಲನ ಅಚಿಂತ್ಯವಾದ ಗತಿಯ ಮುಂದೆ ದೊಡ್ಡ ದೊಡ್ಡವರು ಸಹ ಗುಂಗಾಗಿ ಹೋಗುತ್ತಾರೆ. ಆದ್ದರಿಂದ ನೀನು ತೀವ್ರದಿಂದ ಜಾಲಂದರನ ಚರಣಗಳನ್ನು ಗಟ್ಟಿಯಾಗಿ ಅಪ್ಪಿಕೊಂಡು ಮುಕ್ತನಾಗು ಎಂದಳು.

ಮೈನಾವತಿಯು ಹೇಳಿದ ಎಲ್ಲ ಬೋಧವನ್ನು ರಾಜನ ಉಮಾವಂತಿ ನಾಮಕ ಪತ್ನಿಯು ಗುಪ್ತವಾಗಿ ಕೇಳಿಕೊಂಡಳು. ಗೋಪೀಚಂದನು ತಾಯಿಯ ಉಪದೇಶಕ್ಕೆ ಕಿವಿಗೊಟ್ಟರೆ ತಾನು ನಿರಾಧಾರಿಯಾಗುವೆನೆಂದು ಮನಸ್ಸಿನಲ್ಲಿ ತಳಮಳಿಸಹತ್ತಿದಳು. ಮತ್ತು ಮೈನಾವತಿಯನ್ನು ಇಂತು ದೂಷಿಸಹತ್ತಿದಳು. "ರಾಜಭೋಗಗಳನ್ನು ಉಪಭೋಗಿಸಿ ಸುಖಪಡುವ ತನ್ನ ಮಗನಿಗೆ ಜೋಗಿಯಾಗೆಂದು ಉಪದೇಶಿಸುವ ತಾಯಿಯು ಎಂಥ ಪಾಪಿಣಿಯಾಗಿರಬೇಕು? ರಾಮನನ್ನು ವನವಾಸಕ್ಕೆ ಕಳಿಸಿದಂಥ ಚಂಡಾಲಿನಿಯಾದ ಕೈಕೇಯಿಯು ಈ ಮೈನಾವತಿಯ ರೂಪದಿಂದ ಅವತರಿಸಿದಂತೆ ಕಾಣುತ್ತದೆ. ರಾಜನಿಗೆ ಮೈನಾವತಿಯು ಹಿತಶತ್ರುವಾಗಿರುತ್ತಾಳೆ. ಆಜ್ಞಾಧಾರಕ ಸೇವಕನಿಗೆ ಆಶಾಭಂಗ ಮಾಡುವದು; ಸಭೆಯಲ್ಲಿ ಸತ್ಯವನ್ನು ಪ್ರತಿಪಾದಿಸುವಂಥ ಸಂಗತಿಗೆ ಅಸತ್ಯದ ಆರೋಪಕೊಟ್ಟು ಜನರಿಂದ ಛಲನೆ ಮಾಡಿಸುವದು; ಆ ಜನ್ಮ ಪಠಿಸಿದಂಥ ವಿದ್ಯೆಯು ಪ್ರಸಂಗದಲ್ಲಿ ನಿಷ್ಫಲವಾಗುವದು; ನಿರಪರಾಧಿ ಮನುಷ್ಯನಿಗೆ ಆರೋಪ ಹೊರಿಸುವದು; ಈ ಎಲ್ಲ ಸಂಗತಿಗಳು ಈಶ್ವರೀಕ್ಷೋಭಕ್ಕೆ ಕಾರಣವಾಗಿರುತ್ತವೆ. ನನ್ನ ಮೇಲೆ ಈಶ್ವರೀಕ್ಷೋಭವಾದ್ದರಿಂದಲೇ ಮೈನಾವತಿಗೆ ರಾಜನ ಮನಸ್ಸನ್ನು ಭ್ರಷ್ಟ ಮಾಡುವ ಇಚ್ಛೆಯು ಉತ್ಪನ್ನವಾಗಿರುತ್ತದೆ. ಮೈನಾವತಿಯ ಉಪದೇಶವು ರಾಜನ ಮನಸ್ಸಿನಲ್ಲಿ ಬಿಂಬಿಸಿದರೆ ಆತನು ಪ್ರಪಂಚವನ್ನು ತ್ಯಾಗ ಮಾಡುವನು. ರಾಜವೈಭವವೆಂಬ ಸಮುದ್ರವನ್ನು ಶುಷ್ಕಮಾಡದೆ ಬಿಡುವದಿಲ್ಲ. ಆದ್ದರಿಂದ ಇದೇ ವೇಳೆಗೆ ಯಾವದಾದರೊಂದು ಉಪಾಯವನ್ನು ಯೋಚಿಸಲಿಕ್ಕೆ ಬೇಕು." ಹೀಗೆ ವಿಚಾರ ಮಾಡುತ್ತ ಆ ರಾಜಪತ್ನಿಯು ಖಿನ್ನಳಾಗಿ ತನ್ನ ಮಂದಿರಕ್ಕೆ ಹೊರಟು ಹೋದಳು.

ಇತ್ತ ರಾಜನು ಮೈನಾವತಿಯ ಉಪದೇಶವನ್ನು ಚನ್ನಾಗಿ ವಿಚಾರ ಮಾಡಿ ಅವಳಿಗೆ ಹೇಳಿದ್ದೇನಂದರೆ—ತಾಯಿಯೇ, ನಿನ್ನ ಮನಸ್ಸಿನಲ್ಲಿ ನಾನು ಯೋಗಿಯಾಗಬೇಕೆಂಬ ಇಚ್ಛೆಯು ಉತ್ಪನ್ನವಾಗಿದ್ದರೆ ಮೊದಲು ಆ ಜಾಲಂದರನನ್ನು ಪರೀಕ್ಷಿಸುವೆನು. ನನಗೆ ಹಿತವನ್ನು ಮಾಡಲಿಕ್ಕೆ ಆ ಜಾಲಂದರನು ಸಮರ್ಥನಿದ್ದರೆ ನಾನು ಅವನಿಗೆ ಶರಣು ಹೋಗುವೆನು. ನನಗೆ ಜಾಲಂದರನಲ್ಲಿ ವಿಶ್ವಾಸ ಹುಟ್ಟಿದರೆ ನಾನು ರಾಜವೈಭವವನ್ನು ತ್ಯಾಗ

ಮಾಡಿ ತನ-ಮನ-ಧನಗಳನ್ನು ಅವನ ಚರಣಾರವಿಂದಕ್ಕೆ ಅರ್ಪಿಸುವನು. ಈಗ ನೀನು ಸ್ವಸ್ಥವಾಗಿರು.''

ಈ ಮೇರೆಗೆ ತಾಯಿಯನ್ನು ಸಮಾಧಾನಗೊಳಿಸಿ ಗೋಪೀಚಂದನು ಸ್ನಾನಕ್ಕಾಗಿ ಕಳಗಿಳಿದನು. ಲುಮಾವತಿಯು ತನ್ನ ಮನಸ್ಸಿನಲ್ಲಿ ಬಹಳ ವಿಚಾರ ಮಾಡಿ ತನ್ನ ಏಳು ಮಂದಿ ಸವತಿಯರನ್ನು ಬರಮಾಡಿಕೊಂಡಳು. ಇವರೆಲ್ಲರೂ ಪಟ್ಟದರಸಿಯರು. ಈ ಎಂಟು ಜನರಲ್ಲಿ ಲುಮಾವತಿಯು ಮುಖ್ಯಳು. ಅವಳು ಉಳಿದ ರಾಣಿಯರನ್ನು ಕುರಿತು ನುಡಿದಳೇನಂದರೆ— ರಾಜಪತ್ನಿಯರೇ, ನಮ್ಮ ಅತ್ತೆಯ ಬುದ್ಧಿಯು ಭ್ರಷ್ಟವಾಗಹತ್ತಿದೆ. ಆಕೆಯು ರಾಜನಿಗೆ ರಾಜವೈಭವಗಳನ್ನು ತ್ಯಾಗ ಮಾಡಲಿಕ್ಕೆ ಹೇಳಯತ್ತಿದ್ದಾಳೆ. ಈ ನಗರದಲ್ಲಿ ಜಾಲಂದರನಾಥನೆಂಬ ಒಬ್ಬ ಯೋಗಿಯು ಬಂದಿದ್ದಾನೆ. ಅತ್ತೆಯವರು ಅವನ ಶಿಷ್ಯತ್ವವನ್ನೂ ಸ್ವೀಕರಿಸಿದ್ದಾರೆ. ರಾಜನಿಗೆ ಯೋಗದೀಕ್ಷೆಯನ್ನು ಕೊಟ್ಟು ಈ ಸಂಸಾರ ಮೋಹದಿಂದ ಬಿಡುಗಡೆ ಮಾಡಲಿಕ್ಕೆ ಯತ್ನಿಸುತ್ತಾರೆ. ಇದೇ ವ್ಯವಸಾಯದಲ್ಲಿ ಅವರು ವೇಳೆಯನ್ನು ಕಳೆಯ ಹತ್ತಿರುವರು. ಮನೆಗಳಿಗೆ ಆಶ್ರಯ ಭೂತವಾದ ಕಂಬಗಳು ಬಿದ್ದ ಮೇಲೆ ಮನೆಯು ಸಹಜವಾಗಿಯೇ ಬೀಳುವದು. ಸೂರ್ಯನಿಗೆ ಖಗ್ರಾಸ ಗ್ರಹಣವು ಹಿಡಿದರೆ ಸರ್ವತ್ರ ಅಂಧಕಾರವು ಬೀಳುವದು. ರಾಜನೇ ಬೈರಾಗಿ ಆದನೆಂದರೆ ನಾವಿದ್ದು ಉಪಯೋಗವೇನು? ನಮ್ಮ ಎಲ್ಲ ವೈಭವವು ಒಂದು ಕ್ಷಣದಲ್ಲಿ ನಷ್ಟವಾಗುವದು. ನೀವೆಲ್ಲರು ಕೂಡಿ ಮೊದಲು ಯಾವದೊಂದು ಯುಕ್ತಿಯನ್ನು ತೆಗೆಯಿರಿ. ರಾಜನು ತಾಯಿಯ ಉಪದೇಶಕ್ಕೆ ಕಿವಿಗೊಡದಂತೆ ಮಾಡಿರಿ. ನೀವು ಈ ಸಂಗತಿಯನ್ನು ಕ್ಷುಲ್ಲಕವೆಂದು ತಿಳಿಯಬೇಡಿರಿ. ಅಗ್ನಿಯ ಕಿಡಿಯು ಸಣ್ಣದು ಕಂಡರೂ ಅದೇ ಪ್ರಬಲವಾಗಿ ಕಡೆಗೆ ಮನೆಯನ್ನು ಸುಟ್ಟು ಸೂರೆಗೊಳ್ಳುವದು. ಆದ್ದರಿಂದ ಅದನ್ನು ಮೊದಲೇ ನಂದಿಸಲಿಕ್ಕೆ ಬೇಕು. ತಲೆಗಿಂಬಿನಲ್ಲಿ ಸರ್ಪವನ್ನಿಟ್ಟು ಸ್ವಸ್ಥವಾಗಿ ಮಲಗಬಹುದೇ? ವಿಷವನ್ನು ಹೊಟ್ಟೆಯಲ್ಲಿ ತೆಗೆದುಕೊಂಡರೆ ಬದುಕುವ ಬಗೆಹೇಗೆ? ಸಾರಾಸಾರ ವಿಚಾರ ಮಾಡಿ ರಾಜನ ಮನಸ್ಸನ್ನು ನಮ್ಮ ಕಡೆಗೆ ಆಕರ್ಷಿಸಿಕೊಂಡು ಮೈನಾವತಿಯ ಉಪದೇಶವನ್ನು ಅಲ್ಲಗಳೆ

ಲುವಾವಂತಿಯ ಅಭಿಪ್ರಾಯವು ಸರ್ವರಿಗೂ ನಿಜವೆನಿಸಿತು. ಅವರು ತಮ್ಮ ತಮ್ಮ ಬುದ್ಧಿಗನುಗುಣವಾಗಿ ಅನೇಕ ಉಪಾಯಗಳನ್ನು ಸೂಚಿಸಿದರು. ವೈನಾವತಿಯ ವಿರುದ್ಧವಾಗಿ ರಾಜನ ಮುಂದೆ ಕೆಲವು ಕಲ್ಪಿತ ಸಂಗತಿಗಳನ್ನು ಹೇಳಿ ಅವನಲ್ಲಿ ಕ್ರೋಧವನ್ನು ಹುಟ್ಟಿಸಿ ಜಾಲಂಧರಯೋಗಿಯನ್ನು ಸಹ ನಾಶಪಡಿಸಬೇಕೆಂದು ಅವರು ನಿಶ್ಚಯಿಸಿದರು.

ಇತ್ತ ರಾಜನು ದಿವಸದ ರಾಜಕಾರ್ಯಗಳನ್ನು ಮುಗಿಸಿ ವಿಶ್ರಾಂತಿಗಾಗಿ ಲುವಾವಂತಿಯ ಮಂದಿರಕ್ಕೆ ಹೋದನು. ಆಗ ಅವಳು ರಾಜನಿಗೆ ವಿನಯಪೂರ್ವಕವಾಗಿ ನಮಿಸಿ ಅವನನ್ನು ಮಂಚದ ಮೇಲೆ ಕುಳ್ಳಿರಿಸಿದಳು. ಲುವಾವಂತಿಯು ಪ್ರೇಮಾತಿಶಯದಿಂದ ಅವನ ಚಿತ್ತವನ್ನು ಪ್ರಸನ್ನಮಾಡಿಕೊಂಡಳು. ಅವರಿಬ್ಬರಲ್ಲಿ ಪ್ರೇಮದ ಭಾಷಣಗಳು ನಡೆದವು. ಲುವಾವಂತಿಯು ಮೆಲ್ಲಗೆ ರಾಜನನ್ನುದ್ದೇಶಿಸಿ—ಹೇ ಪ್ರತಾಪವಂತನೇ, ನನ್ನ ಕಿವಿವರೆಗೆ ಕೆಲವು ಸಂಗತಿಗಳು ಬಂದಿರುತ್ತವೆ. ಆದರೆ ಅವುಗಳನ್ನು ಉಚ್ಚಾರ ಮಾಡಲಿಕ್ಕೆ ನನಗೆ ಭೀತಿಯು ಉತ್ಪನ್ನವಾಗಿರುತ್ತದೆ. ಒಂದು ವೇಳೆ ಅದನ್ನು ಗುಪ್ತವಾಗಿಟ್ಟರೆ ಬಹಳ ಅನರ್ಥವಾಗುವ ಸಂಭವವದೆ. ಭೀತಿಯನ್ನು ತ್ಯಾಗ ಮಾಡಿ ತಮಗೆ ಆ ಸಂಗತಿಯನ್ನು ಹೇಳಿದರೂ ಕೂಡ ಅದರಿಂದ ತಮಗೆ ಸುಖ-ಸ್ವಸ್ಥತೆಗಳು ಸಿಗುವದಿಲ್ಲ. ಹೀಗಾಗಿ ನಾನು ಒಳ್ಳೇ ವಿಚಾರದಲ್ಲಿ ಬಿದ್ದಿದ್ದೇನೆ ಎಂದಳು.

ತನ್ನ ಪ್ರೀತಿಯ ಭಾರ್ಯೆಯ ಈ ಸಂದಿಗ್ಧ ಭಾಷಣವನ್ನು ಕೇಳಿ ಗೋಪೀಚಂದನು ಆ ಸಂಗತಿಯನ್ನು ಹೇಳಬೇಕೆಂದು ಆಗ್ರಹಪಟ್ಟನು. ಲುವಾವಂತಿಯು ರಾಜನಿಂದ ಅಭಯವನ್ನು ಹೊಂದಿ ಈ ರೀತಿ ಹೇಳಲು ಪ್ರಕ್ರಮಿಸಿದಳು. "ತಮ್ಮ ತಾಯಿಯು ತಮ್ಮ ಮುಂದೆ ಜಾಲಂಧರನಾಥನ ಬಗ್ಗೆ ಕೆಲವು ಸಂಗತಿಗಳನ್ನು ಹೇಳಿದಳಷ್ಟೇ? ಅದರಲ್ಲಿ ಕಪಟವಿದೆ. ನಿಮಗೆ ಯೋಗದೀಕ್ಷೆಯನ್ನು ಕೊಡಿಸಿ ತೀರ್ಥಾಟನಕ್ಕೆ ಕಳಿಸಿ ವೈನಾವತಿ ಮತ್ತು ಜಾಲಂಧರರೇ ರಾಜ-ರಾಣಿಯರಾಗಬೇಕೆಂದು ಮಾಡಿರುವರು. ಈ ಸಂಗತಿಯು ಸತ್ಯವಾದದ್ದು. ಇದರ ವಿಚಾರವನ್ನು ತಾವು ಮಾಡತಕ್ಕದ್ದು."

ಉಮಾವಂತಿಯ ಮಾತಿನೊಳಗಿನ ರಹಸ್ಯವನ್ನು ತಿಳಿದು ಗೋಪೀಚಂದನು ಕ್ರೋಧಿಷ್ಠನಾದನು. ಅವನ ಕಣ್ಣುಗಳು ಕೆಂಪಗೆ ಆದವು. ಆತನ ಹೃದಯದಲ್ಲಿ ವಡವಾಗ್ನಿಯು ಉತ್ಪನ್ನವಾಗಿ ಅದು ಆ ಜಾಲಂದರ ರೂಪವಾದ ಸಮುದ್ರದ ಶೋಷಣವನ್ನು ಮಾಡಲಿಕ್ಕೆ ಪ್ರವೃತ್ತವಾಯಿತು. ಅವನು ಕೂಡಲೆ ತನ್ನ ವಿಶ್ವಾಸುಕಮಂತ್ರಿಯನ್ನು ಕರೆಯಿಸಿಕೊಂಡನು. ಮತ್ತು ಅವನಿಗೆ ಎಲ್ಲ ಸಂಗತಿಯನ್ನು ತಿಳಿಸಿ ಜಾಲಂದರನನ್ನು ಕೊಲ್ಲುವ ಯೋಜನೆಯನ್ನು ಮಾಡಿದ ಬಳಿಕ ಗುಪ್ತ ಸೇವಕರನ್ನು ಕರೆಯಿಸಿ ಒಂದು ಬಾವಿಯನ್ನು ಅಗಿಸಿದನಂತರ ಮೋಸದಿಂದ ಜಾಲಂದರನನ್ನು ಕರೆಯಿಸಿಕೊಂಡು ಆ ಬಾವಿಯಲ್ಲಿ ದಬ್ಬಿಕೊಟ್ಟರು. ಆ ಬಾವಿಯ ಬಳಿಯಲ್ಲಿ ಪರ್ವತಪ್ರಾಯವಾಗಿ ಕುದರೀ ಲದ್ದಿಯು ಬಿದ್ದಿತ್ತು. ಅದನ್ನು ಆ ಭಾವಿಯಲ್ಲಿ ಹಾಕಿಸಿ ಜಾಲಂದರನನ್ನು ಹುಗಿದನು.

ಈ ಮೇರೆಗೆ ಗುಪ್ತವಾಗಿ ಕೃಷ್ಣಕಾರಸ್ಥಾನವನ್ನು ಮಾಡಿ ರಾಜನು ತನ್ನ ಮಂದಿರಕ್ಕೆ ಹೋದನು. ಪ್ರಧಾನನು ಈ ಸಂಗತಿಯನ್ನು ಸೇವಕರಿಗೆ ಗುಪ್ತವಾಗಿ ಇಡಲು ಅಪ್ಪಣೆ ಮಾಡಿದನು. ಒಂದು ವೇಳೆ ಈ ಸಂಗತಿಯು ಯಾರಿಂದಲಾದರೂ ಹೊರಬಿದ್ದರೆ ಅವರಿಗೆ ದೇಹಾಂತ ಶಿಕ್ಷೆಯನ್ನು ಕೊಡುವದರಲ್ಲಿ ಬರುವದೆಂಬ ಕಟ್ಟಪ್ಪಣೆ ಮಾಡಿದ್ದರಿಂದ ಸೇವಕರು ಹೆದರಿ ಮೌನವಾಗಿರಬೇಕೆಂದು ನಿರ್ಧರಿಸಿದರು.

ಈ ಎಲ್ಲ ಸಂಗತಿಯು ಮಧ್ಯರಾತ್ರಿಯಲ್ಲಿ ತೀರ ಗುಪ್ತವಾಗಿ ಒದಗಿತು. ಬೆಳಗಾದ ಮೇಲೆ ಜಾಲಂದರನು ಇಲ್ಲದಂತಾದ ಸಂಗತಿಯು ಬೈಲಿಗೆ ಬಿತ್ತು. ಅನೇಕ ಜನರು ಅನೇಕ ರೀತಿ ತರ್ಕ ಮಾಡತೊಡಗಿದರು. ಅವನು ಹುಚ್ಚನಿದ್ದದ್ದರಿಂದ ಅಕಸ್ಮಾತ್ ಎಲ್ಲಿಯಾದರೂ ಹೊರಟುಹೋಗಿರಬೇಕೆಂಬ ಸಂಗತಿಯು ಊರೆಲ್ಲ ಪಸರಿಸಿತು. ಮೈನಾವತಿಯೂ ಈ ಸಂಗತಿಯನ್ನು ತನ್ನ ದಾಸಿಯ ಮುಖಾಂತರ ಅರಿತುಕೊಂಡಳು. ಆ ದುಃಖದಾಯಕ ವಾರ್ತೆಯಿಂದ ಆಕೆಯು ಶೋಕಾಕುಲಳಾದಳು. ಅವಳ ಕಣ್ಣೊಳಗಿಂದ ಪುತ್ರಮೋಹ, ಗುರುವಿಯೋಗ ಇವುಗಳ ಯೋಗದಿಂದ ಅಶ್ರುಧಾರೆಗಳು ಇಳಿಯ ಹತ್ತಿದವು. ತನ್ನ ಪುತ್ರನು ದುರ್ದೈವಿಯಾದ್ದರಿಂದ ಅವ

ನಿಗೆ ನಾಥಕೃಪೆಯ ಲಾಭವು ಇಲ್ಲದಂತಾಯಿತೆಂದು ಅವಳು ಬಹಳ ದುಃಖಕ್ಕೀಡಾದಳು.

ಜಾಲಂದರನಿಗೆ ರಾಜನ ಕೃತಿಗೆ ಪ್ರತೀಕಾರ ಮಾಡುವ ಸಾಮರ್ಥ್ಯವಿದ್ದರೂ ಅವನು ಭವಿತವ್ಯವನ್ನು ತಿಳಿದು ಹಾಗೆ ಮಾಡಲಿಲ್ಲ. ಅವನು ದ್ವಂದ್ವಾತೀತನಾಗಿದ್ದನು, ಶತ್ರು-ಮಿತ್ರರಲ್ಲಿ ಸಮಭಾವದವನಿದ್ದನು. ಅವನಲ್ಲಿ ದಂಭವು ಲೇಶಮಾತ್ರವೂ ಇದ್ದಿಲ್ಲ. ಅವನು ಯಾವಾಗಲೂ ಆತ್ಮಸ್ವರೂಪದಲ್ಲಿ ತಲ್ಲೀನನಾಗಿದ್ದನು. ಆದ್ದರಿಂದ ಅವನು ರಾಜದಂಡನೆಯನ್ನು ಮೌನವಾಗಿ ಸಹಿಸಿದನು. ಬಾವಿಯಲ್ಲಿ ಬಿದ್ದಬಳಿಕ ನಾಥನು ವಜ್ರಾಸನವನ್ನು ಹಾಕಿ ನೆಲವನ್ನು ಬಿಟ್ಟು ಅಂತರಿಕ್ಷದಲ್ಲಿ ಕುಳಿತನು. ಅವನು ತನ್ನ ಶಿರಸ್ಸಿನಮೇಲೆ ವಜ್ರಾಸ್ತ್ರವನ್ನು ಸ್ಥಾಪಿಸಿಕೊಂಡನು. ಸುತ್ತುಮುತ್ತು ಆಕಾಶಾಸ್ತ್ರದ ಯೋಜನೆಯನ್ನು ಮಾಡಿದನು. ರಾಜನ ತ್ರಾಸದಿಂದ ಅವನಿಗೆ ತಿಲಮಾತ್ರವೂ ಕ್ಲೇಶವಾಗಲಿಲ್ಲ. ಇತ್ತ ಜಾಲಂದರನಾಥನು ಒಮ್ಮೆಂದೊಮ್ಮೆ ಇಲ್ಲದಂತಾದ ಸಂಗತಿಯನ್ನು ಕೇಳಿ ಉಮಾವಂತಿ ಮೊದಲಾದ ಎಲ್ಲ ರಾಜಸ್ತ್ರೀಯರು ಪರಮಾನಂದವನ್ನು ಹೊಂದಿ ನಿಶ್ಚಿಂತರಾದರು.

---

# ಅಧ್ಯಾಯ ೧೬

## ಕಾನೀಫ-ಮಾರುತಿಯರ ರಣಕಂದನ.

ಬದರಿಕಾಶ್ರಮದಲ್ಲಿ ಗೋರಕ್ಷನಾಥನು ತಪಸ್ಸು ಮಾಡುತ್ತಿದ್ದ ಸಂಗತಿಯನ್ನು ವಾಚಕರು ಬಲ್ಲರು; ಆದರಂತೆ ಕಾನೀಫನೂ ಜಾನ್ಹವಿಯ ತೀರದಲ್ಲಿ ತಪಶ್ಚರ್ಯೆ ಮಾಡುತ್ತಿದ್ದನು. ಅವರಿಬ್ಬರೂ ತಮ್ಮ ತಮ್ಮ ತಪಸ್ಸನ್ನು ಪೂರ್ಣಮಾಡಿ ಉದ್ಯಾಪನೆಯನ್ನು ಮಾಡಿದರು. ಅವರಿಬ್ಬರೂ ಕೇವಲ ನಾರಾಯಣ ಸ್ವರೂಪರೇ ಇದ್ದರು. ಆದರೆ ಅವರಿಗೆ ಒಬ್ಬರಿಗೊ

ಬ್ಬರ ಬಗ್ಗೆ ಅಜ್ಞಾನವಿತ್ತು. ಕಾನೀಫನು ಉತ್ತರ ದೇಶದ ಯಾತ್ರೆಗಳನ್ನು ಮಾಡುತ್ತ ಜಾಲಂದರನನ್ನು ಶೋಧಿಸಲಿಕ್ಕೆ ಹೊರಟನು. ಗೋರಕ್ಷನಾಥನೂ ಈಶಾನ್ಯದಿಕ್ಕಿಗೆ ಹೊರಟು ಮಚ್ಛೀಂದ್ರನನ್ನು ಶೋಧಿಸಹತ್ತಿದನು. ಕಾನೀಫನು ಗಯಾ, ಪ್ರಯಾಗ, ಕಾಶಿ ಮೊದಲಾದ ಯಾತ್ರೆಗಳನ್ನು ಮಾಡಿಕೊಂಡು ಗುರುಗಳ ಶೋಧಮಾಡುತ್ತಿರಲು ಗೋರಕ್ಷನಾಥನು ಪೂರ್ವ ದಕ್ಷಿಣಗಳ ಮಧ್ಯಪ್ರದೇಶದಲ್ಲಿ ಮಚ್ಛೀಂದ್ರನಾಥನ ಶೋಧ ನಡಿಸಿದನು. ಗುರುಗಳ ವಿರಹದಿಂದ ಗೋರಕ್ಷನ ಸ್ಥಿತಿಯು ವಿಲಕ್ಷಣವಾಗಿತ್ತು. ನೀರಿಲ್ಲದಿದ್ದರೆ ಮೀನವು ಹೇಗೆ ಚಡಪಡಿಸುವದೋ ತಾಯಿಯನ್ನು ಅಗಲಿದ ಕೂಸು ಹೇಗೆ ದುಃಖಪಡುವದೋ ಹಾಗೆ ಗೋರಕ್ಷನಾಥನು ಮಚ್ಛೀಂದ್ರನಾಥನ ದರ್ಶನಕ್ಕಾಗಿ ತಳಮಳಿಸುತ್ತಿದ್ದನು. ಅವನಿಗೆ ಊಟ-ಉಡಿಗೆ, ನಿದ್ರೆ, ವಿಶ್ರಾಂತಿ, ಇವು ಬೇಡಾದವು; ಅವನು ಉದ್ವೇಗಚಕ್ರದಲ್ಲಿ ಮುಳಗಿಕೊಂಡಿದ್ದನು. ಅವನು ಗುರುಗಳ ನಾಮಸ್ಮರಣೆಯನ್ನು ಮಾಡುತ್ತ ಒಂದೇಸವನೆ ಭ್ರಮಣ ಮಾಡುತ್ತಿದ್ದನು. ಗುರುಗಳ ಚರಣಾರವಿಂದವನ್ನು ಕಾಣುವದಕ್ಕಾಗಿ ಮಾತ್ರ ಅವನು ಕಣ್ಣಲ್ಲಿ ಜೀವಹಿಡಿದಿದ್ದನು. ಮಾರ್ಗದಲ್ಲಿ ಯಾರಾದರೂ ಪಾಂಥಸ್ಥರ ದರ್ಶನವಾದರೆ ಅವರನ್ನು ಕುರಿತು ತನ್ನ ಗುರುಗಳ ಬಗ್ಗೆ ವಿಚಾರಿಸುತ್ತಿದ್ದನು. ಈ ಮೇರೆಗೆ ಶೋಧಿಸುತ್ತ ಗೌಡ ಬಂಗಾಲದೊಳಗಿನ ಹೇಲಾಪಟ್ಟಣಕ್ಕೆ ತಲಪಿದನು. ತಪಸ್ಸಿನ ಯೋಗದಿಂದ ಅವನು ಮಾಂಸರಹಿತನಾಗಿದ್ದನು. ಅದರಲ್ಲಿ ಗುರುಗಳ ವಿಯೋಗದ ದುಃಖವು ಆವರಿಸಿದ್ದರಿಂದ ತೀರ ನಿಃಶಕ್ತನಾಗಿದ್ದನು. ಅವನು ವೇಳೆವೇಳೆಗೆ ಗುರುಗಳನ್ನು ಸ್ಮರಿಸುತ್ತ ಅಶ್ರುಧಾರೆ ಸುರಿಸುತ್ತಿದ್ದನು.

ಗೋರಕ್ಷನಾಥನು ಹೇಲಾಪಟ್ಟಣದಲ್ಲಿ ಬಹಳ ಕಾಲ ಇರಲಿಲ್ಲ. ಆದರೂ ಅಷ್ಟರಲ್ಲಿಯೇ ಅವನಿಗೂ ದ್ವಾರಪಾಲಕರಿಗೂ ದರ್ಶನವಾಯಿತು. ಅವರು ಇವನು ಯಾವನೊಬ್ಬ ಯತಿಯಿದ್ದಾನೆಂದು ತಿಳಿದು ನಮಸ್ಕಾರ ಮಾಡಿದರು. ಆಗ ಗೋರಕ್ಷನು ದ್ವಾರಪಾಲಕರಿಗೆ ಮಚ್ಛೀಂದ್ರನಾಥನ ಬಗ್ಗೆ ವಿಚಾರಿಸಿದನು. ಅವನ ಪ್ರಶ್ನವನ್ನು ಕೇಳಿ ದ್ವಾರಪಾಲಕರು— ನೀವು ವಿಚಾರಿಸುವಂಥ ಒಬ್ಬ ಯತಿಯು ನಮ್ಮ ಪಟ್ಟಣದಲ್ಲಿ ಒಂದಕ್ಕೆ ಬಂದಿದ್ದನು. ಅವನ ಹೆಸರು ಜಾಲಂದರನೆಂಬದಾಗಿತ್ತು. ಆ ನಾಥನು

ಸೂರ್ಯನಂತೆ ತೇಜಃಪುಂಜನಾಗಿದ್ದನು. ಅಡವಿಯೊಳಗಿನ ಹುಲ್ಲನ್ನು ಆಕಳುಗಳಿಗೆ ಕೊಯ್ಯುತ್ತಿರುವಾಗ ಅವನ ತಲೆಯ ಮೇಲಿನ ಹೊರೆಯು ಅಂತರಿಕ್ಷದಲ್ಲಿಯೇ ಜೋತಾಡುತ್ತಿತ್ತು.

ದ್ವಾರಪಾಲಕರ ವಚನವನ್ನು ಕೇಳಿ ಗೋರಕ್ಷನು ಕೆಲವುಟ್ಟಿಗೆ ಸಂಶಯಗ್ರಸ್ತನಾದನು. ಆತನು ದ್ವಾರಪಾಲಕರನ್ನು ಕುರಿತು—ಮತ್ತೆ ಕೆಲವು ಸಂಗತಿಗಳನ್ನು ವಿಚಾರಿಸಿದನು. ಆಗ ದ್ವಾರಪಾಲಕರು ಈ ಸಂಗತಿಯು ಒದಗಿ ಹತ್ತುವರ್ಷಗಳು ಕಳೆದವೆಂದು ಹೇಳಲು ಗೋರಕ್ಷನು "ನನ್ನ ಗುರುವಾದ ಮಚ್ಛೇಂದ್ರನು. ಬೇರೆ ಹೆಸರಿನಿಂದ ಈ ಪಟ್ಟಣದಲ್ಲಿ ಬಂದಿರ ಬಹುದು" ಹೀಗೆ ಮನಸ್ಸಿನಲ್ಲಿ ವಿಚಾರ ಮಾಡುತ್ತ ಗುರುಗಳ ಸಲುವಾಗಿ ಅಲ್ಲಿ ವಿಲಾಪಿಸಹತ್ತಿದನು. "ಹೇ ಮಹಾರಾಜ ಮಚ್ಛೇಂದ್ರನಾಥ, ನೀನು ನನ್ನನ್ನು ಅಡಿವೆಯಲ್ಲಿ ಬಿಟ್ಟು ಎಲ್ಲಿಗೆ ಹೋದೆ? ನಾನು ಅಜ್ಞಾನಬಾಲಕನೆಂಬುವದು ನಿನಗೆ ಗೊತ್ತು ಇದ್ದೂ ಇದ್ದು ಅರಣ್ಯದಲ್ಲಿ ನೂಕಿ ಎಲ್ಲಿಗೆ ಹೋಗಿರುವೆ? ಹೇ ನಾಥನೆ? ಪುತ್ರನ ಮೇಲೆ ಇಷ್ಟೊಂದು ಕೋಪವ್ಯಾಕೆ? ದಯಾಮಯನೇ, ನೀನೆಲ್ಲಿರುವಿಯೆಂದು ಶೋಧಿಸಲಿ?"

ಹೀಗೆ ಗೋರಕ್ಷನಾಥನು ವಿಲಾಪದಿಂದ ಹಂಬಲಿಸುತ್ತ ಓಡಹತ್ತಿದನು. ಓಡಓಡುತ್ತ ಶ್ರಮವಾಗಲು ನೆಲಕ್ಕೆ ಕುಸಿಬೀಳುತ್ತಿದ್ದನು. ಮತ್ತು ನಾಥನ ಹೆಸರಿನಿಂದ ಒದರಿ ಶ್ವಾಸವನ್ನು ಬಿಡುತ್ತಿದ್ದನು. ಅವನ ಈ ಶೋಚನೀಯ ಸ್ಥಿತಿಯನ್ನು ನೋಡಿ ಆ ದ್ವಾರಪಾಲಕರಿಗೆ ದಯೆಯು ಉತ್ಪನ್ನವಾಯಿತು. ಅವರು ಇವನ ದುಃಖವನ್ನು ಹಂಚಿಕೆಯಿಂದ ಶಾಂತಗೊಳಿಸಿ ಊರೊಳಗೆ ಭಿಕ್ಷೆ ಬೇಡುವದಕ್ಕಾಗಿ ಕಳಿಸಿಕೊಟ್ಟರು.

ಗೋರಕ್ಷನಾಥನು ಊರೊಳಗೆ "ಅಲ್ಲಖ"ವೆಂದು ಉಚ್ಚರಿಸಿ ಭಿಕ್ಷೆಯನ್ನು ಬೇಡಹತ್ತಿದನು. ಸಂಚರಿಸುತ್ತ ಅವನು ಜಾಲಂದರನಾಥನನ್ನು ಹೂಳಿಟ್ಟ ಭಾವಿಯ ಹತ್ತರ ಪ್ರಾಪ್ತನಾದನು. ಆ ಸ್ಥಳದಲ್ಲಿ ಒಂದು ಹಾಳು ಮನೆಯಿತ್ತು ಅದನ್ನು ಕಂಡು ಗೋರಕ್ಷನು ಅಲ್ಲಖವೆಂಬ ಗರ್ಜನೆಯನ್ನು ಮಾಡಿದನು. ಆ ಶಬ್ದವನ್ನು ಕೇಳಿದ ಕೂಡಲೆ ಜಾಲಂದರನು ಭೂಮಿಯೊಳಗಿಂದ ಅದೇಶ ಶಬ್ದದ ಉಚ್ಚಾರ ಮಾಡಿದನು. ಆ ಶಬ್ದೋಚ್ಚಾರವು ಗೋರಕ್ಷನಿಗೆ ಕೇಳಬಂತು. ಅವನ ಆದೇಶಶಬ್ದಕ್ಕೆ ಪ್ರತಿಯಾಗಿ

ಆದೇಶ ಶಬ್ದವನ್ನೇ ಉಚ್ಚರಿಸಿ ಗೋರಕ್ಷನು—"ಆದೇಶಶಬ್ದವನ್ನು ಉಚ್ಚರಿಸುವ ಯತಿಮಹಾರಾಜರು ಎಲ್ಲಿ ವಾಸ ಮಾಡಿಕೊಂಡಿರುವರು? ಎಂದು ಪ್ರಶ್ನ ಮಾಡಿದನು.

ಆತನ ಪ್ರಶ್ನಕ್ಕೆ ಜಾಲಂದರನು—"ಹೇ ಯತಿಮಹಾರಾಜ, ನಾವು ಈ ಸ್ಥಳದಲ್ಲಿ ಪೃಥ್ವಿಯ ಹೊಟ್ಟೆಯಲ್ಲಿ ಇದ್ದೇವೆ. ನಮಗೆ ಜಾಲಂದರನಾಥನೆಂಬ ಸಂಜ್ಞೆಯು ಉಂಟು. ಈಗ ತಾವು ತಮ್ಮ ಹೆಸರನ್ನೂ ತಮಗೆ ಉಪದೇಶ ಕೊಟ್ಟಿರುವಂಥ ಗುರುಗಳ ಹೆಸರನ್ನೂ ನನಗೆ ಹೇಳಬೇಕು.

ಗೋರಕ್ಷನು—ಈ ದೇಹಕ್ಕೆ ಗೋರಕ್ಷನೆಂಬ ಸಂಜ್ಞೆಯಿದ್ದು ಇದರ ಕೀರ್ತಿಯು ಎಲ್ಲ ಬ್ರಹ್ಮಾಂಡದಲ್ಲಿ ವ್ಯಾಪಿಸಿದೆ. ಮಚ್ಛಿಂದ್ರನಾಥನೇ, ಈ ದೇಹದ ಗುರುವು; ಈಗ ತಮಗೆ ವಿಚಾರಿಸುವದೇನಂದರೆ—ಜಗತ್ತಿನಲ್ಲಿ ಯಾವನು ಪಾಪಬುದ್ಧಿಯುಳ್ಳವನಿರುವನೋ ಅವನನ್ನು ಉದ್ಧಾರ ಮಾಡುವದೇ ತಮ್ಮ ಕೆಲಸವಿದ್ದು ತಾವು ಈ ಭಾವಿಯಲ್ಲಿ ಹೀಗೆ ವಾಸ ಮಾಡಿರುವ ಕಾರಣವೇನು?

ಈ ಪ್ರಶ್ನಕ್ಕೆ ಜಾಲಂದರನು ತನ್ನ ಎಲ್ಲ ಸಂಗತಿಯನ್ನು ಕಥನ ಮಾಡಿದನು. ಆ ಸಂಗತಿಯನ್ನು ಕೇಳಿ ಗೋರಕ್ಷನು ಕ್ಷುಬ್ಧನಾದನು. ಅವನು ಜಾಲಂದರನನ್ನು ಕುರಿತು—"ಮಹಾರಾಜ, ತಾವು ನನಗೆ ಆಜ್ಞೆಯನ್ನು ಕೊಟ್ಟರೆ ನಾನು ಒಂದು ಕ್ಷಣದಲ್ಲಿ ಎಲ್ಲ ಪೃಥ್ವಿಯನ್ನು ನಾಶಗೊಳಿಸುವೆನು. ಗೋಪೀಚಂದನ ಪ್ರತಿಷ್ಠೆ ಎಷ್ಟರದು! ಅಗ್ನಿಯು ಹೇಗೆ ಒಣಗಿದ ಹುಲ್ಲನ್ನು ನಾಶಗೊಳಿಸುವದೋ ಅದೇ ಮೇರೆಗೆ ನನ್ನ ಕ್ರೋಧಾಗ್ನಿಯಲ್ಲಿ ಈ ಗೋಪಿಚಂದನು ಬೆಂದು ಹೋಗುವನು. ದೇವ-ದಾನವರಿಗೆ ಸಹ ವರಪ್ರದಾನ ಮಾಡಲಿಕ್ಕೆ ಸಮರ್ಥನಾದಂಥ ಗುರುಮೂರ್ತಿಯನ್ನು ಕೂಪದಲ್ಲಿ ಹುಗಿದಂಥ ಗೋಪೀಚಂದನು ಅದ್ಯಾಪಿ ವಿಲಾಸದಲ್ಲಿರುವನೇ? ಮಹಾರಾಜ, ತಾವು ನನಗೆ ಅನುಜ್ಞೆಯನ್ನು ಕೊಡಿರಿ. ಅವನ ಸಮಾಚಾರವನ್ನು ತೆಗೆದುಕೊಳ್ಳುತ್ತೇನೆ ಎಂದನು.

ಗೋರಕ್ಷನ ಉತಾವಳಿತನವನ್ನು ನೋಡಿ ಜಾಲಂದರನು ಬಾವಿಯೊಳಗಿಂದ ನುಡಿದನೇನಂದರೆ—"ನೀನು ದೂರದೃಷ್ಟಿಯಿಂದ ವಿಚಾರಮಾಡು. ಭವಿಷ್ಯದ ಕಡೆಗೆ ಲಕ್ಷ್ಯಗೊಡು. ನೀನು ನಾಥಪಂಥವನ್ನು ಪ್ರಚಾರಮಾಡ

ತಕ್ಕವನಿರುತ್ತೀ; ಆದ್ದರಿಂದ ನೀ ಕಾಂಕ್ಷೆ, ಕೋಪವನ್ನು ಬಿಟ್ಟು ಕ್ಷಮೆಯ
ಅವಲಂಬನವನ್ನು ಮಾಡು. ಸೀಪ ಈ ಕೃತ್ಯವನ್ನು ಗುಪ್ತವಾಗಿಡು.
ಸಂಚಾರದಲ್ಲಿ ನನ್ನ ಶಿಷ್ಯನಾದ ಕಾಸೀಫನ ಭೆಟ್ಟಿಯಾದರೆ ಮಾತ್ರ ಅವನಿಗೆ
ಎಲ್ಲ ಸಂಗತಿಯನ್ನು ಹೇಳು; ಅವನು ಯುಕ್ತಿ-ಪ್ರಯುಕ್ತಿಗಳಿಂದ
ರಾಜನ ಕಲ್ಯಾಣ ಮಾಡಿ ನನ್ನನ್ನು ಬಂಧಿಯಿಂದ ಹೊರಗೆ ತೆಗೆಯುವನು.
ಮತ್ತು ಆ ಕಾಸೀಫನ ಕೌಶಲ್ಯದಿಂದ ನಂದಸಂಧವು ಬೈಲಿಗೆ ಬರುವದು."
ಎಂದನು. ಈ ಮೇರೆಗೆ ನುಡಿದು ಜಾಲಂದರನು ಗೋರಕ್ಷನನ್ನು ಅಲ್ಲಿಂದ
ತಿರುಗಿ ಕಳುಹಿಕೊಟ್ಟನು. ಗೋರಕ್ಷನ ಉದರಂಭರಣಕ್ಕೆ ತಕ್ಕಷ್ಟು
ಭಿಕ್ಷೆಯನ್ನು ದೊರಕಿಸಿ ಆ ಸ್ತ್ರೀ ಪರಿಸ್ಥಿತಿ ಹೇಳಿದನು. ಅವನು ಯಾತ್ರೆ
ಯನ್ನು ಮಾಡುತ್ತ ಜಗನ್ನಾಥಕ್ಕೆ ತಪ್ಪಿದನು.

ಇತ್ತ ಕಾನೀಫನು ತನ್ನ ಗುರುಗಳ ಬೋಧ ಮಾಡುತ್ತ ಹೋದ
ಹೋದಲ್ಲಿ ಜನರಿಗೆ ಸದುಪದೇಶ ಮಾಡುತ್ತಿದ್ದನು. ಅವನ ಉಪದೇಶಾ
ಮೃತಕ್ಕೆ ಮನಸೋತು ಎಷ್ಟೋ ಜನರು ಅವನ ಅನುಗ್ರಹವನ್ನು ತೆಗೆದು
ಕೊಳ್ಳುತ್ತಿದ್ದರು. ಕೆಲವು ಜನರು ವಿರಕ್ತರಾಗಿ ಸಂಸಾರವನ್ನು ತ್ಯಜಿಸಿ
ಅವನೊಡನೆ ಯಾತ್ರೆಗಾಗಿ ಹೊರಡುತ್ತಿದ್ದರು. ಹೀಗೆ ಕಾನೀಫನಿಗೆ (೭೦೦)
ಜನರು ಶಿಷ್ಯರಾಗಿದ್ದರು. ತನ್ನ ಶಿಷ್ಯಗಣ ಸಮೇತನಾಗಿ ಸಂಚರಿಸುತ್ತ
ಕಾನೀಫನು ಸ್ತ್ರೀ ರಾಜ್ಯದಲ್ಲಿ ಬಂದನು. ಸ್ತ್ರೀ ರಾಜ್ಯದಲ್ಲಿ ಪುರುಷರ ಸಂ-
ಚಾರವೇ ಆಗುವದಿಲ್ಲೆಂಬ ಸಂಗತಿಯು ಸರ್ವಶ್ರುತವಿದ್ದುದರಿಂದ ಕಾನೀಫನ
ಶಿಷ್ಯ ಸಮುದಾಯವು ಸ್ತ್ರೀ ರಾಜ್ಯದ ಹೊರಗೆ ವಸತಿಮಾಡಿತು. ಆ ಶಿಷ್ಯ
ವೃಂದವು ತಮ್ಮತಮ್ಮೊಳಗೆ ವಿಚಾರಿಸಿದ್ದೇನೆಂದರೆ.—ಈ ಸ್ತ್ರೀ ರಾಜ್ಯದಲ್ಲಿ
ಎಂಥ ಮನುಷ್ಯನ ಸಂಚಾರವೂ ಆಗಲಿಕ್ಕೆ ಶಕ್ಯವಿಲ್ಲ; ಒಂದುವೇಳೆ ಯಾವ
ನಾದರೂ ಅಲ್ಲಿ ಹೋದರೆ, ಜೀವದಿಂದ ಮುಕ್ತನಾಗುವನು. ಹೀಗಿದ್ದು,
ಈ ಕಾನೀಫ ಮಹಾರಾಜರು ನಮ್ಮನ್ನು ಅಲ್ಲಿಗೆ ಕರೆಸೊಯ್ದು ಆಹುತಿ
ಕೊಡುವದು ಎಲ್ಲಿಯ ನ್ಯಾಯವು? ಪ್ರದೀಪ್ತವಾದ ಅಗ್ನಿಯಲ್ಲಿ ಹಾರಿಕೊಂ
ಡರೆ, ಮೈ ಸುಡದೆ ಇರಲಾರದು. ನಾಲ್ಕೂಕಡೆಗೆ ಬೆಂಕಿಹತ್ತಿದ ಮನೆಯಲ್ಲಿ
ಸೇರಿಕೊಂಡು ಸುರಕ್ಷಿತವಾಗಿ ತಿರುಗಿ ಬರುವ ಇಚ್ಛೆಯನ್ನು ಮಾಡುವವರು
ಎಂಥ ಮೂರ್ಖರು! ನಾವು ಸ್ತ್ರೀ ರಾಜ್ಯವನ್ನು ಸೇರುವದು ಪತಂಗವು ದೀಪ

ಗೆಯು ಮೇಲೆ ಬೀಳುವಂತೆಯೇ ಸರಿ! ಹೀಗೆ ವಿಚಾರಮಾಡಿ ಕೆಲವು ಜನ ಶಿಷ್ಯರು ಕಾಲ್ದೆಗೆಯುವ ಹಂಚಿಕೆಯನ್ನು ಮಾಡಿದರು; ಕೆಲವರು ಕಾನೀಫ ನಿಗೆ ಹೇಳಿಕೊಂಡು, ಸ್ತ್ರೀ ರಾಜ್ಯದಲ್ಲಿ ಹೋಗದಂತೆ ಮಾಡಿಕೊಳ್ಳಬೇಕು, ಎಂದರು; ಕೆಲ ಜನ ಸಚ್ಛಿಷ್ಯರು ಈ ದೇಹವನ್ನೇ ಗುರುಗಳ ಚರಣದಲ್ಲಿ ಅರ್ಪಿಸಿದ ಬಳಿಕ, ಪ್ರಾಣಭಯದಿಂದ ಗುರುಗಳನ್ನು ತ್ಯಜಿಸಿಹೋಗುವದು ಸರಿಯಲ್ಲವೆಂದು ಅಂದುಕೊಂಡರು; ಮತ್ತೆ ಕೆಲವರು ಜೀವಿತವನ್ನು ಕಾಯು ಕೊಂಡು ವ್ರತವನ್ನು ಆಚರಿಸಬೇಕು ವ್ರತದ ಸಲುವಾಗಿ ಜೀವವನ್ನು ತ್ಯಜಿಸುವದು ಮೂರ್ಖತನವು, ಎಂದರು; ಗುರುತ್ವವನ್ನು ಸ್ವೀಕರಿಸಿದ ಈ ಕಾನೀಫನು ತೀರ ಮೂರ್ಖನಿದ್ದಾನೆ; ಅವನಿಗೆ ಲೇಶಮಾತ್ರವೂ ವಿಚಾರವಿಲ್ಲ, ಅವನು ತಾನಾಗಿ ಮೃತ್ಯುವಿನ ಬಾಯಿಯಲ್ಲಿ ಹಾರಿಕೊಳ್ಳುವ ಅಜ್ಞಾನತ ವನ್ನು ಮಾಡುತ್ತಾನೆ; ಇಂಥ ಮೂರ್ಖ ಗುರುಗಳ ಶಿಷ್ಯತ್ವವನ್ನು ಬಿಟ್ಟು ಗೊಡುವದು ಕಲ್ಯಾಣಕರವು, ಎಂದು ಕೆಲ ಜನ ಶಿಷ್ಯರು ಆಲೋ ಚಿಸಿದರು.

ಶಿಷ್ಯವರ್ಗವು ಈ ಮೇರೆಗೆ ಗುಣುಗುಟ್ಟುವದು ಕಾನೀಫನಿಗೆ ತಿಳಿ ಯಿತು. ತನ್ನ ಶಿಷ್ಯಸಮುದಾಯವು ಬುದ್ಧಿಹೀನವೂ, ದುರ್ಬಲವೂ ಇದ್ದ ಕಾರಣದಿಂದ ಹೀಗೆ ಭಯಗ್ರಸ್ತವಾಗಿರುತ್ತದೆ; ಎಂದು ತಿಳಿದು, ಅವರಿಗೆ ಹ್ಯಾಗೆ ಧೈರ್ಯವನ್ನು ಕೊಡಬೇಕೆಂದು ದೊಡ್ಡ ವಿಚಾರದಲ್ಲಿ ಬಿದ್ದನು. ಅವರಿಗೆ ತನ್ನ ಪ್ರತಾಪವನ್ನು ಹೇಳಿದರೆ, ವಿಶ್ವಾಸ ಉತ್ಪನ್ನವಾಗಲಿಕ್ಕಿ ಲ್ಲೆಂದು ತಿಳಿದು, ಅವರಲ್ಲಿ ವಿಶ್ವಾಸವು ಹುಟ್ಟುವದಕ್ಕೆ ಒಂದು ಚಮತ್ಕಾರ ವನ್ನು ತೋರಿಸಬೇಕೆಂದು ಯೋಚಿಸಿದನು. ಬಳಿಕ ಅವನು ಒಂದು ಚಿಮು ಟಗಿ ಭಸ್ಮವನ್ನು ಕೈಯಲ್ಲಿ ತೆಗೆದುಕೊಂಡು, ಸ್ಪರ್ಶಾಸ್ತ್ರವನ್ನು ಜಪಿಸಿ, ಆ ವಿಭೂತಿಯನ್ನು ತಾನು ಹೋಗುವ ದಿಕ್ಕು ಒಂದನ್ನು ಬಿಟ್ಟು ತೂರಿ ಉಳಿದ ದಿಕ್ಕುಗಳನ್ನು ಬಂಧನಮಾಡಿದನು. ತನ್ನ ಶಿಷ್ಯ ಸಮುದಾ ಯವು ಓಡಿಹೋಗಬಾರದೆಂದೂ, ಅವರು ನಿಂತುಕೊಳ್ಳುವ ಸ್ಥಳಕ್ಕೆ ಮಾರುತಿಯ ಭುಭುಃಕಾರವು ತಗಲಬಾರದೆಂದೂ ಯುಕ್ತಿಯನ್ನು ಸಾಧಿಸಿ, ಅಸ್ತ್ರವನ್ನು ಪ್ರಯೋಗಿಸಿದನು. ಈ ಮೇರೆಗೆ ಇಬ್ಬಗೆಯ ಸಾಮರ್ಥ್ಯವುಳ್ಳ ಅಸ್ತ್ರವನ್ನು ಸ್ಥಾಪಿಸಿ, ಕಾನೀಫನು ಶಾಂತಸ್ವರದಿಂದ ಶಿಷ್ಯರನ್ನು ಕುರಿತು—

ನಾವು ಸ್ತ್ರೀ ರಾಜ್ಯದಲ್ಲಿ ಹೋಗಲೇಬೇಕು; ಆ ದೇಶವು ಬಹಳ ಭಯಂಕರ ವಾದದ್ದು; ಅಲ್ಲಿ ಮಾರುತಿಯು ಬುಭುಃಕಾರವಾಗುತ್ತಿದ್ದದರಿಂದ ಆ ದೇಶ ದಲ್ಲಿ ಪ್ರವೇಶಮಾಡಿದ ಪುರುಷನು ಎಂದೂ ಉಳಿಯಲಾರನು. ಹೀಗಿದ್ದರೂ, ನಾವು ಆ ದೇಶದೊಳಗಿನ ತೀರ್ಥ-ಯಾತ್ರೆಗಳನ್ನು ಮಾಡಿಕೊಂಡು ಬರುವ ನಿರ್ಧಾರಮಾಡಿದ್ದೇವೆ. ನಮ್ಮ ಸಂರಕ್ಷಣೆಯ ಭಾರವು ಗುರು-ಚರಣಗಳ ಕಡೆಗೆ ಅದೆ. ಏನೇ ಆಗಲಿ, ನಾವು ಆ ರಾಜ್ಯದಲ್ಲಿ ಪ್ರವೇಶಮಾಡೇ ತೀರು ವೆವು. ಗುರುಗಳಲ್ಲಿ ನಿರ್ಮಲ ಭಕ್ತಿಯಿದ್ದವರು ನಮ್ಮ ಸಂಗತಿಯನ್ನು ಹಿಡಿಯಬೇಕು; ಜೀವದ ಅಂಜಿಕೆ ಇದ್ದವರು ತಿರುಗಿ ಹೋಗಬೇಕು,'' ಎಂದು ನುಡಿದನು.

ಕಾನೀಫನ ಈ ಮಾತನ್ನು ಕೇಳಿ ಬಹಳ ಜನ ಶಿಷ್ಯರಿಗೆ ಆನಂದವೆನಿ ಸಿತು. ಯಾಕಂದರೆ ನಾವೇ ಭೀತಿಯಿಂದ ಕಾನೀಫನನ್ನು ಬಿಟ್ಟು ಹೋಗಿ ದ್ದರೆ, ಗುರುಗಳನ್ನು ಬಿಟ್ಟುಹೋದ ಕಲಂಕಕ್ಕೆ ಗುರಿಯಾಗುತ್ತಿದ್ದೆವು; ಆದರೆ ಈಗ ತಾನಾಗಿಯೇ ಕಾನೀಫನು ಹೋಗಲಿಕ್ಕೆ ಅಪ್ಪಣೆ ಕೊಡುವನೆಂದ ಬಳಿಕ ಬಹಳ ಹಿತವಾಯಿತೆಂದು ತಿಳಿದರು. ಆಗ ಏಳು ಜನರು ಹೊರ್ತಾಗಿ ಉಳಿದವರೆಲ್ಲರು ಹೊರಟುಹೋದರು. ಆ ಓ೯೩ ಮಂದಿ ಶಿಷ್ಯರು ಬಹಳ ಆನಂದದಿಂದ ಒಂದು ಹರದಾರಿಯವರೆಗೆ ಹೋದರು. ಆಗ ಅವರಿಗೆ ಒಂದು ದಾರುಣ ಪ್ರಸಂಗವು ಒದಗಿತು. ಕಾನೀಫನು ಬಿಟ್ಟಂಥ ಸ್ಪರ್ಶ ಅಸ್ತ್ರವು ಆ ಸೀಮೆಯನ್ನು ವ್ಯಾಪಿಸಿಕೊಂಡು ಕುಳಿತಿತ್ತು. ಶಿಷ್ಯ ಸಮುದಾಯವು ಆ ಸೀಮೆಯಲ್ಲಿ ಹೆಜ್ಜೆಯನ್ನು ಇಡಲು, ಆ ಅಸ್ತ್ರಪ್ರಭಾವದಿಂದ ಆ ಎಲ್ಲ ಜನರ ಕಾಲುಗಳು ಪೃಥ್ವಿಗೆ ಅಂಟಿಕೊಂಡವು. ಕೆಸರಿನಲ್ಲಿ ಸಿಕ್ಕ ಪಶುವಿನಂತೆ ಅವರ ಅವಸ್ಥೆಯಾಯಿತು. ತಮ್ಮ ಕಾಲುಗಳನ್ನು ಭೂಮಿಯಿಂದ ಕಡೆಗೆ ಕಿತ್ತಿ ಕೊಳ್ಳಬೇಕೆಂದು ಅವರು ಕೈಗಳನ್ನು ಕಾಲುಗಳ ಹತ್ತರ ಒಯ್ದರು. ಕಾಲು ಗಳನ್ನು ಕಿತ್ತುವದಕ್ಕಾಗಿ ಕೈಗಳು ಭೂಮಿಯ ಸಮೀಪಕ್ಕೆ ಹೋದಕೂಡಲೆ ಅವೂ ನೆಲಕ್ಕೆ ಅಂಟಿಕೊಂಡು ಬಿಟ್ಟವು. ಆ ಶಿಷ್ಯರಿಗೆ ಒದಗಿದ ಸಂಗತಿ ಯನ್ನು ಕಾನೀಫನು ತನ್ನ ಬಳಿಯಲ್ಲಿದ್ದ ಏಳು ಜನ ಶಿಷ್ಯರಿಗೆ ಕಥನ ಮಾಡಿ ದನು; ಮತ್ತು ಅವರ ಹಣೆಗೆ ವಿಭೂತಿಯನ್ನು ಹಚ್ಚಿ, ನುಡಿದನೇನಂದರೆ— ನೀವು ನಿಮ್ಮ ಸ್ನೇಹಿತರ ಕಡೆಗೆ ಹೋಗಿರಿ; ಮತ್ತು ಅವರ ಬೆನ್ನ ಮೇಲೆ ಒಂದೊಂದು ಕಲ್ಲನ್ನು ಇಟ್ಟು ಬರ್ರಿ.

ಶ್ರೀಗುರುಗಳ ಆಜ್ಞೆಯಂತೆ ಆ ಏಳು ಜನ ಶಿಷ್ಯರು ಆ ಶೀಮೆಯ ಹತ್ತರ ಹೋದರು. ಇದರಿಂದ ಬಡು ಒಗ್ಗಿದ ಶಿಷ್ಯರಿಗೆ ಬಹಳ ಲಜ್ಜೆಯು ಉತ್ಪನ್ನವಾಯಿತು. ಆ ಏಳು ಜನರು ಅವರನ್ನು ಕುರಿತು—ಪಾತ್ರಾದ ಸ್ನೇಯದಿಂದ ಗುರುಗಳನ್ನು ಬಿಟ್ಟು ಬಂದು ಏನು ಸೌಖ್ಯವನ್ನು ಪಡೆದಿರಿ. ಗುರುಗಳ ತ್ಯಾಗದಿಂದ ಯಾರಿಗಾದರೂ ಕಲ್ಯಾಣವಾಗಿರುವದೋ? ನೀವು ಈ ಸಂಕಟದಿಂದ ಪಾರಾಗಬೇಕೆಂದು ಹಲವು ಹಂಚಿಕೆಗಳನ್ನು ಮಾಡಿದಿರಿ; ಆದರೆ ಗುರುಗಳನ್ನು ಅವಹೇಲನ ಮಾಡಿದ ದೋಷವು ನಿಮ್ಮನ್ನು ಅಂಟಿಕೊಂಡು ಈ ಸ್ಥಿತಿಗೆ ತಂದಿರುವದು. ಹೀಗೆಂದು ಅವರು ಸರ್ವರ ಬೆನ್ನಮೇಲೆ ಒಂದೊಂದು ಬಂಡೆಯನ್ನು ಇಟ್ಟರು. ಬಂಡೆಯು ಬೆನ್ನಿಗೆ ಸ್ಪರ್ಶವಾದ ಕೂಡಲೆ ಅಲ್ಲಿಯೇ ಅಂಟಿಕೊಂಡಿತು. ಅದನ್ನು ಕೆಳಗೆ ಕೆಡವಬೇಕೆಂದು ಎಷ್ಟು ಯತ್ನಮಾಡಿದರೂ ಅದು ಬೀಳಲಿಲ್ಲ. ಅದರ ಭಾರದಿಂದ ಅವರು ಹಣ್ಣಾಗಿ ಬಂದು ಅಪರಾಧವಾಯಿತು ಎಂದು ಗಟ್ಟಿಯಾಗಿ ಒದರಿ ಕ್ಷಮೆಯನ್ನು ಬೇಡಹತ್ತಿದರು. ತಮ್ಮನ್ನು ಜೀವದಿಂದ ಮುಕ್ತರನ್ನಾಗ ಮಾಡುವದಕ್ಕಾಗಿ ಆ ಎಲ್ಲ ಶಿಷ್ಯರು ಆ ಏಳೂ ಜನರನ್ನು ಪ್ರಾರ್ಥಿಸಿಕೊಂಡರು. ಅದನ್ನು ಕೇಳಿ ಅವರು—ನಿಮ್ಮ ಜೀವವನ್ನು ರಕ್ಷಿಸಿಕೊಂಡು ಇಲ್ಲಿಯೇ ಇರಬೇಕು. ಅಜ್ಞಾನಿಗಳೇ ಬಹಳ ಅಟ್ಟಹಾಸದಿಂದ ಗುರುಗಳನ್ನು ತಿರಸ್ಕರಿಸಿದಿರಿ ಸಂಕಟಕಾಲವು ಪ್ರಾಪ್ತವಾಗಲು ಗುರುಗಳನ್ನು ಯಾಚಿಸುವದು ಅಘಟಿತವು. ನಿಮಗೆ ಈಗ ಒದಗಿದ ಫಲವು ನಿಮ್ಮ ಕೃತಿಯದಾಗಿರುವದು. ನೀವು ಈ ಫಲವನ್ನು ಭೋಗಿಸುತ್ತ ಸ್ವಸ್ಥವಾಗಿರಬೇಕು. ನಾವು ಗುರುಗಳೊಡನೆ ಸ್ತ್ರೀರಾಜ್ಯದಲ್ಲಿ ಹೋಗುತ್ತೇವೆ. ಅಲ್ಲಿಂದ ತಿರುಗಿ ಬಂದನಂತರ ನಿಮ್ಮನ್ನು ಬಿಡಿಸುವೆವು. ಹೀಗೆಂದು ಅವರು ಕಾನೀಫನ ಕಡೆಗೆ ಹೊರಟರು. ಆಗ ಆ ಶಿಷ್ಯರು ಒಮ್ಮೆಲೆ ಚೀರಿ ನುಡಿದರೇನಂದರೆ—"ನಾವು ಈಗ ಕಾನೀಫಗುರುಗಳ ಕಡೆಗೆ ತಿರುಗಿ ಬರಲಿಕ್ಕೆ ಸಿದ್ಧರಿದ್ದೇವೆ. ದಯಮಾಡಿ ನಮ್ಮನ್ನು ಈ ಕಷ್ಟದಿಂದ ಬಿಡುಗಡೆ ಮಾಡಬೇಕು." ಅದಕ್ಕೆ ಆ ಏಳು ಜನರು—ಗುರುಗಳ ಕಡೆಗೆ ಹೋದಬಳಿಕ ಅವರ ಅನುಜ್ಞೆಯಂತೆ ಮಾಡುವೆವು. ಎಂದು ಹೇಳಿ ಅವರು ಅಲ್ಲಿಂದ ಮುಂದೆ ನಡೆದರು. ಅವರು ಕಾನೀಫನ ಬಳಿಗೆ ಹೋಗಿ—ಮಹಾ

ರಾಜ, ತಮ್ಮ ಶಿಷ್ಯವೃಂದವು ಬಹಳ ಕಷ್ಟಪಡುತ್ತದೆ. ಅವರ ಭ್ರಮವು ದೂರಾಗಿದೆ. ಬೆನ್ನಮೇಲಿನ ಭಾರದಿಂದ ಅವರು ತೀರಾ ಹಣ್ಣಾಗಿರುತ್ತಾರೆ. ಇನ್ನು ಮೇಲೆ ಅವರು ನಿಮ್ಮ ಚರಣಬಿಟ್ಟು ಚಲಿಸುವದಿಲ್ಲ. ಆದ್ದರಿಂದ ಕೃಪೆ ಮಾಡಿ ಅವರನ್ನು ಮುಕ್ತರನ್ನಾಗಮಾಡಬೇಕು ಎಂದರು.

ಈ ಪ್ರಕಾರ ಅನೇಕ ರೀತಿಯಿಂದ ಹೇಳಿ ಗುರುಗಳ ಮನಸ್ಸನ್ನು ಕರಗಿಸಿದರು. ಕಾನೀಫನು ಅಂತಃಕರಣದಿಂದ ವಿಭಕ್ತಅಸ್ತ್ರದ ಜಪವನ್ನುಮಾಡಿ ವಿಭೂತಿಯನ್ನು ಅಭಿಮಂತ್ರಿಸಿ ಅದನ್ನು ಒಬ್ಬ ಶಿಷ್ಯನ ಕೈಯಲ್ಲಿ ಕೊಟ್ಟು ಅವರ ಕಡೆಗೆ ಕಳಿಸಿದನು. ಅವನು ಅಲ್ಲಿ ಹೋಗಿ ಎಲ್ಲರ ಹಣೆಗೆ ಆ ವಿಭೂತಿಯನ್ನು ಹಚ್ಚಲು ಕೂಡಲೆ ಅವರು ಮುಕ್ತರಾದರು. ಆಗ್ಗೆ ಕಾನೀಫನಲ್ಲಿ ಅಪಾರ ಪ್ರೇಮಉತ್ಪನ್ನವಾಗಿ ಅವರು ತಿರುಗಿ ಬಂದು ಕಾನೀಫನ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡರು. ಕಾನೀಫನು ಪಶ್ಚಾತ್ತಾಪಬುದ್ಧಿಯಿಂದ ಬಂದ ಆ ಶಿಷ್ಯರನ್ನು ಬಹಳ ಸತ್ಕರಿಸಿದನು. ನಂತರ ಕಾನೀಫನು ಎಲ್ಲ ಶಿಷ್ಯರಿಂದೊಡಗೂಡಿ ಸ್ತ್ರೀರಾಜ್ಯದ ಸೀಮಾಂತದಲ್ಲಿ ಬಂದು ತಳ ಊರಿದನು. ಆ ಕಾಲಕ್ಕೆ ಅಸ್ತಮಾನವಾದ್ದರಿಂದ ಅವರು ಅಲ್ಲಿಯೇ ಇರಬೇಕಾಯಿತು

ರಾತ್ರಿಯಾಗಲು ಮಾರುತಿಯು ಉಭೂಃಕಾರಕ್ಕಾಗಿ ಸೇತುಬಂಧನದಿಂದ ಸ್ತ್ರೀರಾಜ್ಯದಲ್ಲಿ ಹೋಗಹತ್ತಿದನು. ಆ ಸ್ತ್ರೀರಾಜ್ಯದ ಗಡಿಗೆಹೋದ ಕೂಡಲೆ ಕಾನೀಫನು ಬಿಟ್ಟ ಸ್ಪರ್ಶಅಸ್ತ್ರವು ಅವನನ್ನು ಸುತ್ತುಗಟ್ಟಿತು. ಅವನ ದೇಹವು ವಜ್ರಮಯವಿದ್ದದ್ದರಿಂದ ಅಸ್ತ್ರವನ್ನು ಅವನು ಲೆಕ್ಕಿಸಲಿಲ್ಲ. ಅವನೂ ಆ ಅಸ್ತ್ರವು ಸ್ಪರ್ಶಅಸ್ತ್ರವೆಂದು ಅರಿತುಕೊಂಡನು. ಆ ಅಸ್ತ್ರದ ಮೇಲಿಂದ ಆ ಪ್ರದೇಶದ ಬಳಿ ನಾಥಪಂಥದ ಮನುಷ್ಯನು ಬಂದಿರಬಹುದೆಂದು ತರ್ಕಮಾಡಿದನು. ಅವನ ತರ್ಕದಂತೆ ಅವನಿಗೆ ಕಾನೀಫನ ಸರ್ವಸೈನ್ಯವು ಕಾಣಿಸಿತು. ಅದನ್ನು ಕಂಡು ಮಾರುತಿಯು ಯೋಚಿಸಿದ್ದೇನಂದರೆ—ಈ ನಾಥನು ಸ್ತ್ರೀರಾಜ್ಯದಲ್ಲಿ ಹೋದರೆ ಅಲ್ಲಿ ಇದ್ದಂಥ ಮಚ್ಛಿಂದ್ರನಾಥನನ್ನು ಎಚ್ಚರಗೊಳಿಸುವನು. ಇದರಿಂದ ಕೀಲೋತಳೆರಾಣಿಗೆ ಬಹಳ ದುಃಖವು ಆಗಿ ಅವಳು ನನ್ನ ಮೇಲೆ ಪುನಃ ಸಂಕಟ ತರುವಳು. ಆದ್ದರಿಂದ ಈ ನಾಥನನ್ನು ಇಲ್ಲಿಯೇ ನಿರ್ಮೂಲನನ್ನಾಗ ಮಾಡಿ ಇವನು ಸ್ತ್ರೀರಾಜ್ಯದಲ್ಲಿ ಹೋಗದಂತೆ ಮಾಡಬೇಕು.''

ಹೀಗೆ ಮನಸ್ಸಿನಲ್ಲಿ ವಿಚಾರ ಮಾಡಿ ಮಾರುತಿಯು ಭಯಂಕರ ರೂಪವನ್ನು ಧಾರಣ ಮಾಡಿದನು. ತನ್ನ ಬಾಲವನ್ನು ಭೂಮಿಯ ಮೇಲೆ ಅಪ್ಪಳಿಸಿ ಬುಭುಃಕಾರ ಮಾಡಹತ್ತಿದನು. ಅವನ ಭಯಂಕರವಾದ ರೂಪವನ್ನೂ ಗಂಭೀರವಾದ ಗರ್ಜನೆಯನ್ನೂ ತಿಳಿದು ಕಾನೀಫನ ಶಿಷ್ಯಸಮುದಾಯವು ಗುರುಗಳ ಹತ್ತರ ಓಡಿತು. ಪ್ರಲಯಕಾಲದ ಅಗ್ನಿಯಂತೆ ಕ್ರುದ್ಧನಾದ ಬಲಭೀಮನು ತಮ್ಮನ್ನು ನುಂಗುವನೆಂಬ ಭೀತಿಯಿಂದ ಎಲ್ಲ ಜನರು ಥರಥರ ನಡುಗಹತ್ತಿದರು. ಕಾನೀಫನು ಕಾಲಿಕಾ, ವಾಸವೀ, ಅಗ್ನಿ ಮತ್ತು ವಾಯು ಹೀಗೆ ನಾಲ್ಕು ಅಸ್ತ್ರಗಳನ್ನು ಒಂದರ ಹಿಂದೆ ಒಂದರಂ ಬಿಟ್ಟನು. ಅಗ್ನಿ ಮತ್ತು ವಾಯು ಅಸ್ತ್ರಗಳ ಸಂಯೋಗದಿಂದ ದೊಡ್ಡ ದೊಡ್ಡ ಪರ್ವತಗಳೂ ಸುಟ್ಟು ಬೂದಿಯಾಗಹತ್ತಿದವು. ಎಲ್ಲ ಜನರನ್ನೂ ನುಂಗಿಬಿಡುವ ಯಮನಂತಿರುವ ವಾಸವೀಶಕ್ತಿಯು ಭಯಂಕರವಾದ ಮುಖವನ್ನು ಪಸರಿಸಿ ಹನುಮಂತನ ಮೇಲೆ ಧುಮುಕಿತು. ಆ ವಾಸವಿಯ ವಿದ್ಯುಲ್ಲತೆಯಂತಿರುವ ತೇಜವನ್ನು ನೋಡಿ ಹನುಮಂತನಿಗೆ ಪ್ರಲಯಕಾಲದಂತೆ ಭಾಸವಾಯಿತು. ವಾತ-ಅಗ್ನಿ ಈ ಅಸ್ತ್ರಗಳನ್ನು ಮಾರುತಿಯು ಜರ್ಜರ ಮಾಡಿದನು. ಅಷ್ಟರಲ್ಲಿ ವಾಸವಿ ಮತ್ತು ಕಾಲಿಕಾ ಈ ಎರಡೂ ಅಸ್ತ್ರಗಳು ಮಾರುತಿಯನ್ನು ಭಯಪಡಿಸಿದವು. ಅಷ್ಟರಲ್ಲಿ ಮಾರುತಿಯು ಚಪಲತನದಿಂದ ಎರಡೂ ಕೈಗಳಿಂದ ಆ ಎರಡೂ ಅಸ್ತ್ರಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು. ಆದರೂ ಆ ಚಪಲ ಅಸ್ತ್ರಗಳು ಸ್ಥಿರವಾಗಲೊಲ್ಲವು. ಅವನು ಅಗ್ನಿಯ ಮೇಲೆ ತನ್ನ ಬಾಲವನ್ನು ಚಪ್ಪರಿಕೊಟ್ಟನು. ಮತ್ತು ವಾತಾಸ್ತ್ರವನ್ನು ಕುರಿತು ಹನುಮಂತನು—ಹೇ ವಾಯುರಾಜಾ, ನಾನು ನಿನ್ನ ಪುತ್ರನಿದ್ದೇನೆ. ನನ್ನ ರಕ್ಷಣೆ ಮಾಡುವದು ನಿನ್ನ ಕರ್ತವ್ಯವೇ ಆಗಿದೆ, ಎಂದು ಅಂದನು. ಆಗ ಆ ವಾತಾಸ್ತ್ರವು ಕ್ಷೀಣವಾಯಿತು.

ಇಷ್ಟಾದ ಬಳಿಕ ಕಾನೀಫನು ಮೋಹನಾಸ್ತ್ರವನ್ನು ಹೂಡಿದನು. ಆ ಅಸ್ತ್ರವು ಗುಪ್ತರೂಪದಿಂದ ಮಾರುತಿಯ ಹೃದಯದಲ್ಲಿ ಸೇರಿಕೊಂಡಿತು. ಮಾರುತಿಯ ದೇಹವು ವಜ್ರಪ್ರಾಯವಾದ್ದರಿಂದ ಮೋಹನಾಸ್ತ್ರವು ಅವನನ್ನು ಬಾಧಿಸಲಿಕ್ಕೆ ಶಕ್ತವಾಗಲಿಲ್ಲ; ಆದರೆ ಅದರ ಪ್ರಭಾವದಿಂದ ಮಾರುತಿಯು ಭ್ರಮಿಷ್ಟನಾಗುವಷ್ಟರಲ್ಲಿ ಅಗ್ನಿಅಸ್ತ್ರವು ಅವನ ಬಾಲವನ್ನು ಹಿಡಿಯಿತು. ಮಾರು-

ತಿಯು ಕೂಡಲೆ ಅಗ್ನಿಯನ್ನು ಕಟ್ಟಿಕೊಂಡು ಸಮುದ್ರತೀರಕ್ಕೆ ಹಾರಿದನು. ಅಗ್ನಿಯ ಉಷ್ಣದಿಂದ ಸಮುದ್ರವು ಕುದಿಯ ಹತ್ತಿತು. ಜಲಚರಗಳಿಗೆ ಪೀಡೆಯಾಗಹತ್ತಿತು. ಸಮುದ್ರನಾಥನು ಪ್ರತ್ಯಕ್ಷ ಪ್ರಕಟನಾಗಿ ಅಗ್ನಿಯು ಹೀಗೆ ಮಾಡಲಿಕ್ಕೆ ಕಾರಣವೇನೆಂದು ಶೋಧಿಸಹತ್ತಿದನು. ಕಾನೀಫ ಮತ್ತು ಮಾರುತಿ ಇವರ ಸಂಗ್ರಾಮವು ನಡೆದಿರುವದನ್ನು ಕಂಡು ಸಮುದ್ರನಾಥನು ಜಲಾಸ್ತ್ರವನ್ನು ಜಪಿಸಿ ಅಗ್ನಿ ಅಸ್ತ್ರವನ್ನು ಶಾಂತಗೊಳಿಸಿದನು. ಇಷ್ಟರಲ್ಲಿ ಮಾರತಿಯು ಒಂದು ಪ್ರಚಂಡವಾದ ಪರ್ವತವನ್ನು ಕಿತ್ತಿದನು. ಆ ಪರ್ವತಕ್ಕೆ ತನ್ನ ಬಾಲವನ್ನು ಸುತ್ತಿ ಆ ಬಲಭೀಮನು ಕಾನೀಫನಮೇಲೆ ತೂರತಕ್ಕವನು, ಇಷ್ಟರಲ್ಲಿ ಕಾನೀಫನು ಪುನಃ ವಾಸವಿ ಮತ್ತು ಕಾಲಿಕೆ ಎಂಬ ಎರಡು ಶಕ್ತಿಗಳನ್ನು ಬಿಟ್ಟನು. ಅವು ಮಾರುತಿಯ ಮೇಲೆ ಹೋದವು. ಆ ಅ ಗಳ ಪ್ರಭಾವದಿಂದ ಮಾರುತಿಯು ಮೂರ್ಛಿತನಾಗಿ ಭೂಮಿಯ ಮೇಲೆ ಬಿದ್ದನು. ತನ್ನ ಮಗನು ಬಿದ್ದದ್ದನ್ನು ಕಂಡು ವಾಯುದೇವನು ಅಲ್ಲಿ ಪ್ರಕಟನಾದನು. ವಾಯುದೇವನು ಮಾರುತಿಯನ್ನು ಸಾವಧಾನ ಮಾಡುವಷ್ಟರಲ್ಲಿ ಆ ಅಂಜನೇಯನು ಒಮ್ಮೆಲೆ ಎದ್ದು ಹಾಳಿತನು. ಮತ್ತು ಬಾಲವನ್ನು ಸಾವರಿಸಿಕೊಂಡು ಕಾನೀಫನ ಮೇಲೆ ಏರಿಹೋದನು. ಆಗ ವಾಯುದೇವನು ಕೂಡಲೆ ಅವನ ಕೈಗಳನ್ನು ಹಿಡಿದು ನುಡಿದದ್ದೇನಂದರೆ—ಪುತ್ರಾ, ಈ ಕಾಲಕ್ಕೆ ನೀನು ನನ್ನ ಮಾತನ್ನು ಪಾಲಿಸು. ಕಾನೀಫನು ನಾಥಪಂಥೀಯನಿದ್ದು, ಮಹಾ ಸಾಮರ್ಥ್ಯ ಸಂಪನ್ನ ಯತಿಯು ಇದ್ದಾನೆ. ಆದ್ದರಿಂದ ನೀನು ಅವನೊಡನೆ ಯುದ್ಧ ಮಾಡದಿರುವದು ವಿಹಿತವು! ಪೂರ್ವಕಾಲದಲ್ಲಿ ನಿನಗೂ ಮಚ್ಛಿಂದ್ರನಾಥನಿಗೂ ಯುದ್ಧವಾದಾಗ್ಗೆ ನಿನ್ನ ತಲೆಯ ಮೇಲೆ ಪರ್ವತವನ್ನು ನಿಲ್ಲಿಸಿದ್ದನ್ನು ಸ್ಮರಣದಲ್ಲಿ ತಂದುಕೋ; ಆ ನಾಥನಿಗೆ ವಾತಾಕರ್ಷಣವೆಂಬ ಅಜಿಂಕ್ಯವಾದ ಅಸ್ತ್ರವು ಶ್ರೀ ದತ್ತಾತ್ರೇಯನಿಂದ ದೊರಕಿದೆ. ನೀನು ಈ ಕಾಲಕ್ಕೆ ನಾಥನೊಡನೆ ಸಖ್ಯವನ್ನು ಮಾಡಿಕೊಳ್ಳುವದೇ ಲೇಸು.''

ವಾಯುದೇವನ ಮಾತು ಸಮುದ್ರನಾಥನಿಗೂ ಸಮ್ಮತವಾಯಿತು. ಅವರಿಬ್ಬರು ಮಾರುತಿಯನ್ನು ಕರಕೊಂಡು ಕಾನೀಫನ ಹತ್ತರ ಹೋದರು. ಕಾನೀಫನು ಆ ಮೂವರಿಗೆ ನಮಸ್ಕಾರಗೈದನು; ಮತ್ತು ಮಾರುತಿಯು

ಯುದ್ಧಪರಾಙ್ಮುಖನಾದ ಬಗ್ಗೆ ವಿಚಾರಿಸಿದನು. ವಾಯುದೇವನು ನಿಮ್ಮಿಬ್ಬರಲ್ಲಿ ಯುದ್ಧ ಒದಗಲಿಕ್ಕೆ ಕಾರಣವೇನೆಂದು ವಿಚಾರಿಸಿದನು. ಮೊದಲು ಮಾರುತಿಯು ಇಂತು ಹೇಳಿದನು. "ನಾನು ಬಹಳ ಪ್ರಯಾಸದಿಂದ ಮಚ್ಛೇಂದ್ರನಾಥನನ್ನು ಸ್ತ್ರೀ ರಾಜ್ಯದಲ್ಲಿ ಕಳಿಸಿದ್ದೇನೆ. ನಾಥಯತಿಗಳು ಮಚ್ಛಿಂದ್ರನಾಥನ ಬಂಧುಗಳಿರುತ್ತಾರೆ. ಈ ಕಾನೀಫನು ಮಚ್ಛಿಂದ್ರನ ಬಳಿಗೆ ಹೋಗಿ ಅವನಿಗೆ ಉಪದೇಶಮಾಡಿ ಅವನು ರಾಜ್ಯವನ್ನು ತ್ಯಜಿಸುವಂತೆ ಮಾಡುವನು. ಹೀಗೆ ಆಗಬಾರದೆಂದು ನಾನು ಈ ಕಾನೀಫನೊಡನೆ ಯುದ್ಧವನ್ನು ಹೂಡಿದೆನು. ಮಚ್ಛಿಂದ್ರನ ಮನವನ್ನು ತಿರುಗಿಸದಿದ್ದರೆ, ಈತನು ಸ್ತ್ರೀ ರಾಜ್ಯದಲ್ಲಿ ಹೋಗಬಹುದು."

ಮಾರುತಿಯ ಅಭಿಪ್ರಾಯಕ್ಕೆ ವಾಯು ಹಾಗು ಸಮುದ್ರನಾಥರಿಬ್ಬರೂ ಸಮ್ಮತಿ ಕೊಟ್ಟರು. ಬಳಿಕ ಕಾನೀಫನು ಇಂತು ನುಡಿದನು. "ಈ ಮಾತಿನ ಬಗ್ಗೆ ಹನುಮಂತನಿಗೆ ಸಂಶಯ ಬಂದಿರಬಹುದು; ಆದರೆ ಮಚ್ಛೇಂದ್ರನಿಗೂ, ನನಗೂ ಏನೂ ಸಂಬಂಧವಿಲ್ಲ. ಅವನೊಡನೆ ಮಾತಾಡುವ ಪ್ರಸಂಗ ಬಂದಲ್ಲಿ ಅವನು ಸ್ತ್ರೀ ರಾಜ್ಯದಲ್ಲಿಯೇ ಇರುವಂತೆ ಅಭಿಪ್ರಾಯ ಪಡುವೆನು."

ಬಳಿಕ ಕಾನೀಫ ಮಾರುತಿಯರ ಸಖ್ಯವು ಕೂಡಿತು. ಅನಂತರ ವಾಯು, ಸಮುದ್ರನಾಥ, ಮಾರುತಿಯರು ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು. ಬೆಳಗಾದ ಮೇಲೆ ಕಾನೀಫನು ತನ್ನ ಶಿಷ್ಯರೊಡನೆ ಸ್ತ್ರೀ ರಾಜ್ಯದ ಮಾರ್ಗವನ್ನು ಹಿಡಿದನು. ಸ್ತ್ರೀ ರಾಜ್ಯವನ್ನು ಸುರಕ್ಷಿತವಾಗಿ ಮುಟ್ಟಿದನಂತರ ಕಾನೀಫನು ಅಲ್ಲಿಯ ಅನೇಕ ತೀರ್ಥ-ಕ್ಷೇತ್ರಗಳನ್ನು ನೋಡಿದನು. ಕೆಲವು ದಿವಸಗಳ ನಂತರ ಆ ದೇಶದ ರಾಜಧಾನಿಯನ್ನು ಮುಟ್ಟಿದನು. ಕಾನೀಫನು ರಾಜದ್ವಾರದಲ್ಲಿ ಸೇರಿ ದ್ವಾರರಕ್ಷಕರನ್ನು ಕಂಡುಕೊಂಡನು. ಅವರು ಈ ಸಂಗತಿಯನ್ನು ಮಚ್ಛೇಂದ್ರನಿಗೆ ತಿಳಿಸಿದರು. ಅವನ ವರ್ಣನೆಯನ್ನೂ ಮತ್ತು ಹೆಸರನ್ನೂ ಕೇಳಿ ಮಚ್ಛಿಂದ್ರನು ಹೆದರಿದನು. ತನ್ನ ಹೆಸರನ್ನು ಬದಲಿಸಿ ನನ್ನ ಶಿಷ್ಯನಾದ ಗೋರಕ್ಷನು ನನ್ನನ್ನು ಒಯ್ದೊಯ್ಯುವದಕ್ಕೆ ಬಂದಿರಲಿಕ್ಕೆ ಬೇಕೆಂದು ಮನಸ್ಸಿನಲ್ಲಿ ತಳಮಳಿಸಹತ್ತಿದನು. ಹಾಲು ತುಂಬಿದ ಕೊಡದಲ್ಲಿ ಉಪ್ಪು ಬೆರಸಿದಂತೆ ಮಚ್ಛಿಂದ್ರನ ಸ್ಥಿತಿಯಾಯಿತು.

ಅವನು ತನ್ನ ಪ್ರಾರಬ್ಧಕ್ಕೆ ದೋಷ ಕೊಡಹತ್ತಿದನು. ಹೇಗಾದರೂ ಆ ಸದಾಚಾರಿಯೂ, ಭಾವಿಕನೂ ಆದ ಗೋರಕ್ಷನ ದರ್ಶನವನ್ನು ತೆಗೆದು ಕೊಳ್ಳಬೇಕೆಂದು ಸ್ವಾಗತದ ಸಿದ್ಧತೆಯನ್ನು ಮಾಡಿದನು. ಅವನು ಸಿಂಹಾಸನದಿಂದೆದ್ದು ರಾಜದ್ವಾರಕ್ಕೆ ಬರಲು, ಕಾನೀಫನು ಅವನ ದೃಷ್ಟಿಗೆ ಬಿದ್ದನು. ಅವನು ನಾಥ ಪಂಥದವನಾಗಿದ್ದರೂ, ಗೋರಕ್ಷನಲ್ಲೆಂದು ಅವನಿಗೆ ಸಮಾಧಾನವೆನಿಸಿತು. ಜೀವದ ಮೇಲೆ ಬಂದ ಕುತ್ತವು ನಾಶವಾಯಿತೆಂದು ಅವನು ಚಿಂತಾರಹಿತನಾದನು. ಬಳಿಕ ಮಚ್ಛಿಂದ್ರನು ನಿರ್ಭಯದಿಂದ ಕಾನೀಫನನ್ನು ಕಂಡುಕೊಂಡನು. ಒಬ್ಬರಿಗೊಬ್ಬರ ದರ್ಶನವಾದನಂತರ ಮಚ್ಛಿಂದ್ರನಾಥನು ಅವನನ್ನು ದಿವಾಣಖಾನೆಗೆ ಕರೆದೊಯ್ದನು. ಅಲ್ಲಿ ಕಾನೀಫನನ್ನು ಸುವರ್ಣದ ಆಸನದ ಮೇಲೆ ಕುಳ್ಳಿರಿಸಿ, ಕ್ಷೇಮವಾರ್ತೆಯನ್ನು ವಿಚಾರಿಸಿದನು. ಕಾನೀಫನು ತನ್ನ ಜಾಲಂದರ ಗುರುಗಳಿಂದ ಪ್ರಾರಂಭಿಸಿ ಎಲ್ಲ ಸಂಗತಿಯನ್ನು ಶ್ರುತಪಡಿಸಿದನು ತನ್ನ ಗುರು ಬಂಧುವಿನ ಪುತ್ರನು ಈ ಕಾನೀಫನಿರುವನೆಂದು ಮಚ್ಛಿಂದ್ರನ ಮನಸ್ಸಿನಲ್ಲಿ ಪ್ರೇಮವು ಉತ್ಪನ್ನವಾಯಿತು ಮಚ್ಛಿಂದ್ರನು ಕಾನೀಫನನ್ನೂ, ಮತ್ತು ಅವನ ಶಿಷ್ಯ ಸಮುದಾಯವನ್ನೂ ಒಂದು ತಿಂಗಳವರೆಗೆ ತನ್ನಲ್ಲಿ ಇಟ್ಟುಕೊಂಡನು ಕಾನೀಫನಿಗೂ ಮಚ್ಛಿಂದ್ರನ ಸಹವಾಸವು ಹಿತವೆನಿಸಿತು. ಮಚ್ಛಿಂದ್ರನು ತನ್ನ ಗುರುಗಳ ಬಂಧುವಿರುವನೆಂದು ಅವನಲ್ಲಿ ಪೂಜ್ಯಭಾವವು ಉತ್ಪನ್ನವಾಯಿತು. ಮಚ್ಛಿಂದ್ರನ ಆಗ್ರಹಕ್ಕೆ ಮಯಾರ್ದೆ ಕೊಟ್ಟು ಕೆಲವು ಕಾಲವನ್ನು ಅಲ್ಲಿಯೇ ಕಳೆಯುವದಕ್ಕಾಗಿ ಕಾನೀಫನು ಸಮ್ಮತಿಯನ್ನು ಕೊಟ್ಟನು.



# ಅಧ್ಯಾಯ ೧೬

## ಗೋಪೀಚಂದ-ಕಾನೀಫರ ಸಮಾಗಮ.

ಕಾನೀಫನ ಮಾತು-ಕಥೆಗಳು ಮಚ್ಛಿಂದ್ರನಿಗೆ ಆನಂದ ಕೊಡಹತ್ತಿದವು. ಅವನು ಕಾನೀಫನನ್ನು ಒಳ್ಳೇ ರೀತಿಯಿಂದ ಉಪಚರಿಸಿದನು. ಕಾನೀಫನು ಹೊರಡುವ ದಿವಸಗಳು ಸಮೀಪಿಸಲು, ಮಚ್ಛಿಂದ್ರನಿಗೆ ಸಮಾಧಾನವೆನಿಸಲಿಲ್ಲ. ಕಾನೀಫನು ಸ್ತ್ರೀ ರಾಜ್ಯದಿಂದ ಹೊರಟ ಬಳಿಕ ತೀರ್ಥ-ಯಾತ್ರೆ ಮಾಡುವಾಗ ಒಂದಾನೊಂದು ಕಾಲದಲ್ಲಿಯಾದರೂ ಗೋರಕ್ಷನ ಭೆಟ್ಟಿಯಾಗಲು, ತನ್ನ ವೃತ್ತಾಂತವನ್ನು ತಿಳಿಸುವನು. ಆಗ ಗೋರಕ್ಷನು ನನ್ನನ್ನು ಕರೆದೊಯ್ಯುವದಕ್ಕಾಗಿ ಸ್ತ್ರೀ ರಾಜ್ಯದಲ್ಲಿ ಬರುವನು. ಎಂಬ ವಿಚಾರಗಳು ಬರಲು, ಕಾನೀಫನನ್ನು ಸ್ಥಿರವಾಗಿ ಇಲ್ಲಿಯೇ ಇಟ್ಟುಕೊಳ್ಳಬೇಕೆಂದು ಮಚ್ಛಿಂದ್ರನು ಯೋಚಿಸಿದನು. ಅವನ ಚಿತ್ತವು ಇಲ್ಲಿಯೇ ರಮಿಸುವಂತೆ ಮಾಡಬೇಕೆಂದು ಕಾನೀಫನಿಗೆ ಅನೇಕ ಪರಿಯಾಗಿ ಮೋಹನನ್ನುಂಟುಮಾಡಹೋದನು. ಮಚ್ಛಿಂದ್ರನ ಯಾವ ಉಪಾಯಕ್ಕೂ ಕಾನೀಫನು ಒಳಗಾಗಲಿಲ್ಲ. ಒಂದು ತಿಂಗಳ ಅವಧಿಯು ಮುಗಿಯಲು, ಕಾನೀಫನು ಹೊರಡುವ ಬಗ್ಗೆ ವಿಚಾರಿಸಿದನು. ಆಗ ಮಚ್ಛಿಂದ್ರನು ಕಾನೀಫನಿಗೂ, ಅವನ ಶಿಷ್ಯರಿಗೂ ದ್ರವ್ಯ ಹಾಗು ಅಂದವಾದ ವಸ್ತ್ರ-ಒಡವೆಗಳನ್ನು ಕೊಟ್ಟು, ಒಳ್ಳೇ ಆದರದಿಂದ ಸತ್ಕರಿಸಿದನು.

ಬಳಿಕ ಸ್ತ್ರೀ ರಾಜ್ಯವನ್ನು ತ್ಯಜಿಸಿ ಕಾನೀಫನು ಗೌಡಬಂಗಾಲದೇಶಕ್ಕೆ ಹೋದನು. ಆ ದೇಶದಲ್ಲಿ ಅವನು ಅನೇಕ ಪುಣ್ಯ ಸ್ಥಳಗಳನ್ನು ಸಂಚರಿಸಿದನು. ಅವನು ಯಾವ ಗ್ರಾಮಕ್ಕೆ ಹೋಗುವನೋ, ಆ ಗ್ರಾಮದಲ್ಲಿ ಅವನಿಗೆ ಒಳ್ಳೇ ಆದರಾತಿಥ್ಯವು ಆಗುತ್ತಿತ್ತು. ಅವನ ಆಡಂಬರಕ್ಕೆ ಮೆಚ್ಚಿ ಹೋದಹೋದಲ್ಲಿ ಎಷ್ಟೋ ಜನರು ಅವನ ಶಿಷ್ಯತ್ವವನ್ನು ಸ್ವೀಕರಿಸುತ್ತಿದ್ದರು.

ಸ್ವಲ್ಪಾವಕಾಶದಲ್ಲಿಯೇ ಅವನ ಲೌಕಿಕಪ್ರತಿಷ್ಠೆಯು ಬಂಗಾಲದಲ್ಲಿ ಸುತ್ತಲೂ ಪಸರಿಸಿತು. ಅವನನ್ನು ಪೂಜಿಸುವದಕ್ಕಾಗಿ ಎಷ್ಟೋ ಭಾವಿಕ ಜನರು ಆಗ್ರಹದಿಂದ ಮನೆಗೆ ಕರೆದೊಯ್ಯುತ್ತಿದ್ದರು. ಹೀಗೆ ಪ್ರತಿಷ್ಠೆಯು ಹೆಚ್ಚುತ್ತ ಹೆಚ್ಚುತ್ತ ಕೆಲವು ದಿವಸಗಳನಂತರ ಗೋಪೀಚಂದನ ಕಿವಿಯವರೆಗೆ ಹೋ-ಯಿತು. ಗೋಪೀಚಂದನು ಅವನ ನಿಜಸ್ಥಿತಿಯನ್ನು ಅರಿತುಕೊಳ್ಳುವದಕ್ಕಾಗಿ ತನ್ನ ದೂತನನ್ನು ಅವನಿದ್ದಲ್ಲಿಗೆ ಕಳಿಸಿಕೊಟ್ಟನು.

ಈ ಕಾಲಕ್ಕೆ ಗೋರಕ್ಷನಾಥನು ಬಂಗಾಲದಲ್ಲಿ ಸಂಚರಿಸುತ್ತಿದ್ದನು. ಊರು-ಕೇರಿಗಳಲ್ಲಿ ಅರಣ್ಯದಲ್ಲಿ ಅವನು ತನ್ನ ಪ್ರೀತಿಯ ಗುರುಗಳನ್ನು ಹುಡುಕುತ್ತಿರಲು, ಒಂದು ದಿನ ಸಹಜವಾಗಿ ಕಾನೀಫನಿಗೂ, ಗೋರಕ್ಷನಿಗೂ ಭೆಟ್ಟಿಯಾಯಿತು. ಪರಸ್ಪರರ ದರ್ಶನವಾಗಲು, ನಾಥ ಪಂಥಕ್ಕನುಸರಿಸಿ ಅವರು ಆದೇಶ ಶಬ್ದವನ್ನು ಉಚ್ಚರಿಸಿದರು. ಕಾನೀಫನು ತನ್ನ ಹತ್ತಿರ ಇರುವ ಜರದ ಪೀತಾಂಬರವನ್ನು ಹಾಸಿ ಗೋರಕ್ಷನನ್ನು ಕುಳ್ಳಿರಿಸಿದನು. ಮತ್ತು ತಾನಾದರೂ ಅವನ ಸಮೀಪದಲ್ಲಿಯೇ ಕುಳಿತುಕೊಂಡನು. ಬಳಿಕ ಅವರು ಒಬ್ಬರಿಗೊಬ್ಬರನ್ನು ಪ್ರಶ್ನೆ ಮಾಡಿ ಪರಸ್ಪರರ ಗುರುಗಳನ್ನು ಚರಿತ್ರವನ್ನೂ ಕೇಳಿಕೊಂಡರು. ಕಾನೀಫನು ಡಾಂಭಿಕನಿದ್ದದರಿಂದ ಅವನ ಮನಸ್ಸಿನಲ್ಲಿ ಗೋರಕ್ಷನನ್ನು ಪರೀಕ್ಷಿಸಬೇಕೆಂದು ವಿಚಾರಹುಟ್ಟಲು ಏನಾದರೂ ಹಂಚಿಕೆಮಾಡಿ ಗೋರಕ್ಷನನ್ನು ಪ್ರತಿಬಂಧಿಸಬೇಕು; ಮತ್ತು ತನ್ನ ಸಾಮರ್ಥ್ಯವನ್ನು ತೋರಿಸಿ ಅವನನ್ನು ಚಕಿತನನ್ನಾಗ ಮಾಡಬೇಕೆಂದು ಯೋಚಿಸಿದನು. ಹೀಗೆ ವಿಚಾರಿಸುತ್ತ ಅವನು ಸ್ವಾಭಾವಿಕವಾಗಿ ಒಳಿಯಲ್ಲಿರುವ ಮಾವಿನ ಗಿಡಗಳನ್ನು ನೋಡಿದನು. ಆ ವೃಕ್ಷಗಳು ಫಲಗಳಿಂದ ಪರಿಪೂರ್ಣವಾಗಿದ್ದು ಅವರಲ್ಲಿ ಕೆಲವು ಹಣ್ಣುಗಳು ಅದಂತೆ ಕಾಣಿಸಿತು. ಅದರ ಲಕ್ಷಣವನ್ನು ಅರಿತು ಕಾನೀಫನು ಗೋರಕ್ಷನನ್ನು ಕುರಿತು—ಆಹಹ! ಈ ಆಮ್ರಫಲಗಳು ಹೇಗೆ ಚಂದಕಾಣಿಸುತ್ತವೆ ನೋಡಿರಿ? ಈ ಗಿಡಗಳು ಫಲಭಾರದಿಂದ ಬಾಗಿರುವವು. ಕೆಲವು ಫಲಗಳಿಗೆ ಪೂರ್ಣದೆಸೆಬಂದಿರುವದು. ನನ್ನ ಮನಸ್ಸಿನಲ್ಲಿ ಆ ಹಣ್ಣುಗಳನ್ನು ತಿನ್ನುವ ಇಚ್ಛೆಯಾಗಿದೆ. ತಮ್ಮ ಅಜ್ಞೆಯೂ ಇದ್ದರೆ ನಾಲ್ಕಾರು ಜನ ಶಿಷ್ಯರನ್ನು ಕಳಿಸಿ ಹಣ್ಣುಗಳನ್ನು ತರಿಸುತ್ತೇನೆ ಎಂದನು.

ಈ ಮಾತನ್ನು ಕೇಳಿ ಗೋರಕ್ಷನು ಮೊದಲು ಹಣ್ಣುಗಳ ವಿಷಯವಾಗಿ ನಿರೀಚ್ಛೆಯನ್ನು ವ್ಯಕ್ತಗೊಳಿಸಿದನು. ಆದರೆ ಆಗ್ರಹವು ವಿಶೇಷವಾದ್ದರಿಂದ ಅವನ ಅಭಿಪ್ರಾಯಕ್ಕೆ ಸಮ್ಮತಿಸಿದನು. ಕಾನೀಫನು ಶಿಷ್ಯರಿಗೆ ಹಣ್ಣುತರಲು ಅಪ್ಪಣೆ ಕೊಡತಕ್ಕವನು, ಅಷ್ಟರಲ್ಲಿ ಗೋರಕ್ಷನು ಕಾನೀಫನನ್ನು ಕುರಿತು—"ಹಣ್ಣುಗಳ ಸಲುವಾಗಿ ಇಷ್ಟು ಯಾತನೆಯೇಕೆ? ಈ ಕಾಲದಲ್ಲಿ ಹತ್ತರ ಶಿಷ್ಯರಿದ್ದದರಿಂದ ಕಳಿಸಲಿಕ್ಕೆ ಬರುವದು. ಆದರೆ ಶಿಷ್ಯರು ಹತ್ತರ ಇಲ್ಲದಾಗ ತಾವು ಹೇಗೆ ಮಾಡುವಿರಿ? ಹಣ್ಣುಗಳನ್ನು ತಿನ್ನುವ ಇಚ್ಛೆಯು ಇದ್ದರೆ ಯಾರನ್ನೂ ಕಳಿಸದೆ ಹಣ್ಣು ತರಿಸುವ ಚಮತ್ಕಾರವನ್ನು ತೋರಿಸಿರಿ ಎಂದನು.

ಗೋರಕ್ಷನ ಮಾತನ್ನು ಕೇಳಿ ಕಾನೀಫನು ತನ್ನ ಪರಾಕ್ರಮವನ್ನು ತೋರಿಸಬೇಕೆಂದು ನಿಶ್ಚಯಿಸಿದನು. ಅವನು ಕೈಯಲ್ಲಿ ವಿಭೂತಿಯನ್ನು ತೆಗೆದುಕೊಂಡು ವಿಭಕ್ತ ಅಸ್ತ್ರದ ಜಪವನ್ನು ಮಾಡಿದನು. ಅದರಲ್ಲಿಯೇ ಆಕರ್ಷಣಅಸ್ತ್ರದ ಯೋಜನೆಯನ್ನು ಮಾಡಿ ಆ ವಿಭೂತಿಯನ್ನು ಅರಣ್ಯದಲ್ಲಿ ತೂರಿದನು. ಆ ಅಸ್ತ್ರದ ಪ್ರಭಾವದಿಂದ ಹಣ್ಣುಗಳು ತನ್ನಿಂದತಾನೇ ಕತ್ತರಿಸಿ ಅವನ ಮುಂದೆ ಬಂದು ಬಿದ್ದವು. ನಂತರ ಎಲ್ಲ ಶಿಷ್ಯಸಮುದಾಯವು ಆ ಹಣ್ಣುಗಳನ್ನು ಭಕ್ಷಣ ಮಾಡಿತು ಆ ಚಮತ್ಕಾರವನ್ನು ನೋಡಿ ಗೋರಕ್ಷನು ಕಾನೀಫನನ್ನು ಕುರಿತು—ತಾವು ನನ್ನ ಅಪೇಕ್ಷೆಯನ್ನು ಪೂರ್ಣ ಮಾಡಿದಿರಿ. ಈಗ ನಾನೂ ತಮಗೆ ಗುರುಕೃಪೆಯಿಂದ ಸತ್ಕಾರ ಮಾಡುವೆನು ಅದನ್ನು ಸ್ವೀಕರಿಸಬೇಕು, ಎಂದು ನುಡಿದನು. ಕಾನೀಫನಿಗೆ ಈ ಮಾತು ಯೋಗ್ಯವೆನಿಸಿತು. ಗೋರಕ್ಷನು ಕೂಡಲೆ ವಿಭಕ್ತ ಹಾಗು ಆಕರ್ಷಣಗಳೆಂಬ ಅಸ್ತ್ರಗಳನ್ನು ಪ್ರಯೋಗಿಸಿ ವಿಭೂತಿಯನ್ನು ತೂರಲು ಲವಂಗವನದೊಳಗಿನ ಹಣ್ಣುಗಳು ಅಲ್ಲಿಗೆ ಬಂಧು ಬಿದ್ದವು. ಪೂರ್ವದಂತೆ ಸರ್ವರೂ ಆ ಹಣ್ಣುಗಳನ್ನು ಭಕ್ಷಣ ಮಾಡಿದರು. ಎಲ್ಲ ಜನರು ತಮ್ಮ ತಮ್ಮ ಆಸನದ ಮೇಲೆ ಕುಳಿತನಂತರ ಗೋರಕ್ಷನು—"ತಾವೆಲ್ಲರು ಹಣ್ಣುಗಳನ್ನು ತಿಂದು ಬೀಜವನ್ನು ಚೆಲ್ಲಿಕೊಟ್ಟಿರಿ ಇದರಲ್ಲಿ ಯಾವ ಪೌರುಷವನ್ನು ವ್ಯಕ್ತಪಡಿಸಿದಂತಾಯಿತು? ಪುನಃ ಈ ಸಿಪ್ಪಿಗಳಿಂದ ಹಣ್ಣುಗಳನ್ನು ರಚಿಸಿ ಮೊದಲಿನಂತೆ ಗಿಡಗಳಿಗೆ ಅಂಟಿಸಿದರೆ ತಾವು ತೋರಿಸಿದ ಪರಾಕ್ರಮಕ್ಕೆ ಭೂಷಣವೆನಿಸುವದು" ಎಂದನು.

"ಗೋರಕ್ಷನ ಮಾತನ್ನು ತಿರಸ್ಕರಿಸಿ ಕಾನೀಫನು—ನಾಶವಾದಂಥ ವಸ್ತುಗಳನ್ನು ಪುನಃ ಮೊದಲಿನಂತೆ ಮಾಡುವ ಮನುಷ್ಯನು ಸದ್ಯಕ್ಕೆ ಭೂಮಿಯಲ್ಲಿ ಯಾರೂ ಇಲ್ಲ. ಆ ಕೆಲಸವು ಒಬ್ಬ ಬ್ರಹ್ಮದೇವನಿಂದಲೇ ಆಗತಕ್ಕದ್ದು. ಒಂದುವೇಳೆ ನಿಮ್ಮಲ್ಲಿ ಶಕ್ತಿಯಿದ್ದರೆ ಮಾಡಿತೋರಿಸಬೇಕು" ಎಂದನು.

ಕಾನೀಫನ ಈ ಮಾತನ್ನು ಕೇಳಿ ಗೋರಕ್ಷನು ಹೇಳಿದ್ದೇನಂದರೆ—ಯಾವನು ಗುರುಗಳ ನಿಜಶಿಷ್ಯನಿದ್ದು ತನ್ನ ಗುರುಗಳಲ್ಲಿ ನಿಸ್ಸೀಮಭಕ್ತಿಯನ್ನಿಟ್ಟಿರುವನೋ ಅವನಿಗೆ ಈ ಕೃತ್ಯವು ಎಷ್ಟು ಮಾತ್ರಕ್ಕೂ ಅಸಾಧ್ಯವೆನಿಸದು. ಇಷ್ಟೇಅಲ್ಲ ಅವನು ಎರಡನೆಯ ಬ್ರಹ್ಮದೇವನನ್ನೂ ನಿರ್ಮಾಣ ಮಾಡುವನು!

ಅಖಿಲ ಪೃಥ್ವಿಯನ್ನು ತನ್ನ ಮೇಲೆ ಹೂವಿನಂತೆ ಧರಿಸಿದವನು ಅದರೊಳಗಿನ ಯಾವದೊಂದು ಪರ್ವತದ ಭಾರಕ್ಕೆ ಬೇಸರಿಯುವನೇ? ಸೂರ್ಯನನ್ನು ಸಹ ನುಂಗಿ ಬಿಡುವ ಸಾಮರ್ಥ್ಯವು ಯಾವನಲ್ಲಿರುವದೋ ಅವನಿಗೆ ಅಗ್ನಿಯ ಒಂದು ಕಿಡಿಯ ಲಕ್ಷ್ಯವೇನು? ಯಾವನ ಹೃದಯದಲ್ಲಿ ಸಪ್ತಸಮುದ್ರಗಳನ್ನು ಧರಿಸುವ ಸಾಮರ್ಥ್ಯವಿದೆಯೋ ಅವನಿಗೆ ಒಂದು ಸಣ್ಣ ಜಲಾಶಯದ ಪಾಡೇನು? ವಾಕ್‌ಪಾಂಡಿತ್ಯದಲ್ಲಿ ಬೃಹಸ್ಪತಿಯನ್ನೂ ಸಹ ಗೆಲ್ಲುವ ಸಾಮರ್ಥ್ಯವು ಯಾವನಲ್ಲಿರುವದೋ ಅವನು ವಿಚಾರರಹಿತನಾದ ಒಬ್ಬ ಕುರುಬನಿಗೆ ಹೆದರುವನೇ? ಯಾವನ ಮನೆಯಲ್ಲಿ ಕ್ಷೀರಾಬ್ಧಿಯೇ ಇರುವದೋ ಅವನು ಮನೆಮನೆಗೆ ಮಜ್ಜಿಗೆಗಾಗಿ ಸಂಚರಿಸುವನೇ? ಯಾವನದೃಷ್ಟಿಮಾತ್ರದಿಂದಲೇ ಕಲ್ಲು ಬಂಗಾರವಾಗುವದೋ ಅಂಥವನು ಭಿಕ್ಷೆಗಾಗಿ ಶ್ರೀಮಂತರ ಬೆನ್ನಹತ್ತಿ ತಿರುಗುವನೇ? ಸರ್ವಸೌಭಾಗ್ಯದ ದೇವತೆಯು ಯಾವನ ವಚನಾಧೀನವಾಗಿರುವದೋ ಅವನು ಆತ್ಮಕಲ್ಯಾಣದ ಸಲುವಾಗಿ ಬಲಿಷ್ಠನನ್ನು ಹಿಂಬಾಲಿಸುವನೇ? ಪವಿತ್ರವಾದ ಗುರುಭಕ್ತಿಯ ಮುಂದೆ ಬ್ರಹ್ಮದೇವನ ಪ್ರತಿಷ್ಠೆ ಎಷ್ಟರದು! ಯಾವನ ಮೇಲೆ ಸದ್ಗುರುವಿನ ಪೂರ್ಣ ಅನುಗ್ರಹವಿರುವದೋ ಅವನು ಅನಂತವಾದ ಬ್ರಹ್ಮಾಂಡವನ್ನೂ ಕೂಡ ನಿರ್ಮಾಣ ಮಾಡಿ ತೋರಿಸುವನು. ಅಂದಮೇಲೆ ಈ ಆಮ್ರಫಲಗಳನ್ನು ಪುನಃ ಮೊದಲಿನಂತೆ ಗಿಡಗಳಿಗೆ ಅಂಟಿಸುವದರಲ್ಲಿ ಏನು ಆಶ್ಚರ್ಯವಿರುವದು? ವ್ಯರ್ಥವಾಗಿ ಆತ್ಮಪೌರುಷ ಹಾಗು ಲೌಕಿಕಪ್ರತಿಷ್ಠೆ ಇವುಗಳಿಗಾಗಿಯೇ ಯಾವನು ಸದ್ಗುರುವನ್ನು ಆಶ್ರಯಿಸಿರುವನೋ ಅವನಿಗೆ ಮಾತ್ರ ಎಲ್ಲ ಸಂಕಟಗಳು ಒದಗುತ್ತವೆ.

ಗೋರಕ್ಷನ ಬಾಯಿಂದ ಈ ಮರ್ಮಭೇದಕವಾದ ಮಾತನ್ನು ಕೇಳಿ ಕಾನೀಫನು ಕ್ಷುಬ್ಧನಾದನು. ಬೆಂಕಿಯ ಮೇಲೆ ತುಪ್ಪವನ್ನು ಹಾಕಲು ಅದು ಹೇಗೆ ಪ್ರಜ್ವಲಿತವಾಗುವದೋ ಹಾಗೆ ಕಾನೀಫನು ಕ್ರೋಧದಿಂದ ಸಂತಪ್ತನಾಗಿ—"ಗೋರಕ್ಷನಾಥ ಹೀಗೆ ಬಡಿವಾರದ ಮಾತುಗಳನ್ನು ಉಚ್ಚರಿಸಬೇಡ. ನಾನು ನಿನ್ನನ್ನೂ ನಿನ್ನ ಗುರುಗಳನ್ನೂ ಅರಿತವನಿದ್ದೇನೆ. ನಿಮ್ಮಷ್ಟಕ್ಕೆ ನೀವೇ ದೊಡ್ಡ ಪ್ರತಾಪಶಾಲಿಗಳೆಂದು ತಿಳಿಯುತ್ತೀರಿ; ಇದರಿಂದ ನೀನು ನಿನ್ನ ಗುರುಸಹಿತವಾಗಿ ನರಕದಲ್ಲಿ ಬೀಳುವಿ. ನೀವು ನಿಮ್ಮ ಬಾಯಿಂದ ಯೋಗಿಗಳೆಂದು ತಿಳಿಯುತ್ತೀರಿ; ಆದರೆ ನಿಮ್ಮ ಆಚಾರಕ್ರಮವು ಭಯಂಕರವಾದ ಪಾಪದಿಂದ ತುಂಬಿರುತ್ತದೆ. ನೀನು ಯಾವ ಮಚ್ಛೇಂದ್ರನನ್ನು ಉಬ್ಬುಬ್ಬಿ ಹೊಗಳುವಿಯೋ ಆ ಮಚ್ಛೇಂದ್ರನು ಸ್ತ್ರೀರಾಜ್ಯದಲ್ಲಿ ಲೋಲಾಡುತ್ತಲಿದ್ದಾನೆ. ಕ್ರಿಯಾಸಿದ್ಧನೂ ಜಿತೇಂದ್ರಿಯನೂ ಎಂದು ಹೇಳುತ್ತ ಕೀಲೋತಳೆರಾಣಿಯ ಅಧೀನನಾಗಿರುತ್ತಾನೆ. ಅವಳ ಸ್ವರೂಪಕ್ಕೆ ಮೋಹಿಸಿ ನಿನ್ನ ವಿರಕ್ತನಾದ ಮಚ್ಛೇಂದ್ರನು ವಿಕಾರವಶನಾಗಿ ವಿಲಾಸದಲ್ಲಿ ಮಗ್ನನಾಗಿದ್ದಾನೆ. ಗುರುವಿನಂತೆ ಶಿಷ್ಯ! ಆತ್ಮಪ್ರಶಂಸೆ ಮಾಡಿಕೊಳ್ಳುವ ಭರದಲ್ಲಿ ಪ್ರತ್ಯಕ್ಷ ಬ್ರಹ್ಮದೇವನನ್ನೂ ನಿಂದಿಸುತ್ತೀ; ಅಂದಮೇಲೆ ನಿನಗೂ ನಿನ್ನ ಗುರುಗಳಿಗೂ ಒಂದು ನಮಸ್ಕಾರವು. ನಿನ್ನ ಮಾತನ್ನು ಸಾಕು ಮಾಡು. ನಿನ್ನ ಬಡಿವಾರವನ್ನು ಯಾರು ಕೇಳುವರು? ಯಾವನಿಗೆ ನಿನ್ನ ಹಾಗು ನಿನ್ನ ಗುರುಗಳ ಪರಿಚಯವಿಲ್ಲವೋ ಅಂಥವನ ಮುಂದೆ ನಿನ್ನ ಡಾಂಭಿಕತನವನ್ನು ಹರಡು."

ಕಾನೀಫನ ಈ ಮಾತಿನಿಂದ ಗೋರಕ್ಷನು ರೊಚ್ಚಿಗೆದ್ದನು. ಗುರುನಿಂದೆಯ ಸಂತಾಪದಿಂದ ಅವನು ಕಾನೀಫನನ್ನು ಕುರಿತು:—ನೀನು ಪೂರ್ಣ ಭ್ರಷ್ಟನಿರುವಿ. ಎಲೋ! ನನ್ನ ಗುರುಗಳ ನಿಂದೆಯನ್ನು ಮಾಡುವ ನೀನು ನಿನ್ನ ಗುರುಗಳ ಅವಸ್ಥೆ ಏನಾಗಿದೆ ಎಂಬದನ್ನು ಬಲ್ಲೆಯಾ? ನಿನ್ನ ಗುರುವಾದ ಜಾಲಂದರನಾಥನು ಇಂದಿಗೆ ಹನ್ನೆರಡು ವರುಷಗಳಿಂದ ನರಕವನ್ನು ಅನುಭೋಗಿಸುತ್ತಾನೆ. ಅವನ ಎಲ್ಲ ಶಕ್ತಿಯು ಹೋಗಿ ನಿರಾಧಾರಿಯಾಗಿದ್ದಾನೆ. ಗೌಡಬಂಗಾಲದೊಳಗಿನ ಹೇಲಾ ಪಟ್ಟಣದಲ್ಲಿ ಪ್ರತಾಪಿಯಾದ

ಗೋಪೀಚಂದನು ನಿನ್ನ ಗುರುವನ್ನು ಬಾವಿಯೊಳಗೆ ಹುಗಿದಿಟ್ಟಿರುವನು. ಗೋಪೀಚಂದನಂಥ ಕ್ಷುದ್ರಮನುಷ್ಯನ ಕೈಯಲ್ಲಿ ಸಿಕ್ಕು, ಪೇಚಾಡುವ ನಿನ್ನ ಗುರುವಿನಂತೆ ನನ್ನ ಗುರುವಿರುವದಿಲ್ಲ. ಮಚ್ಛೇಂದ್ರನಲ್ಲಿ ಸರ್ವ ಬ್ರಹ್ಮಾಂಡವನ್ನೂ ನಡುಗಿಸುವ ಶಕ್ತಿಯುಂಟು. ಶಂಕರನ ಕೈಯೊಳಗಿನ ಕಾಲಿಕಾ ಅಸ್ತ್ರವು ನನ್ನ ಗುರುಗಳ ಅಧೀನವಿದೆ. ದೇವ-ದಾನವರಿಗೆ ಅಜಿಂಕ್ಯರಾದ ಅಷ್ಟಭೈರವರು ನನ್ನ ಗುರುಗಳ ದಾಸರಾಗಿದ್ದಾರೆ. ಯಾವನ ಸಹಾಯದಿಂದ ಶ್ರೀ ರಾಮಚಂದ್ರನು ವಿಜಯಶಾಲಿಯಾದನೋ ಆ ಬಲಭೀಮನು ಸೋತು ಹೋಗಿರುವನು. ಬಲಾಢ್ಯನಾದ ವೀರಭದ್ರನೂ ನಮ್ಮ ಗುರುಗಳ ಮುಂದೆ ಲೀನನಾದನು. ಹನ್ನೆರಡು ಕಲೆಗಳಿಂದ ತಪ್ತನಾದ ಸೂರ್ಯನ ರಥವನ್ನು ಕೂಡ ನಮ್ಮ ಗುರುಗಳು ಬುಡಮೇಲು ಮಾಡಿದರು. ಎಲೋ, ಬಹಳ ಹೇಳುವದೇನು? ನನ್ನ ಮಚ್ಛೇಂದ್ರನು ಭಕ್ತರನ್ನು ಉದ್ಧರಿಸಲು ಸಮರ್ಥನಿರುವನು. ಆತನ ಕೃಪೆಯಿಂದ ನನ್ನ ಮೈಯಲ್ಲಿ ಯಾವ ಸಾಮರ್ಥ್ಯವು ಉಂಟಾಗಿರುವದೆಂಬದನ್ನು ಈಗಲೇ ನಿದರ್ಶನಕ್ಕೆ ತಂದುಕೊಡುವೆನು, ಎಂದು ನುಡಿದು ಗೋರಕ್ಷನು ಸಂಜೀವಿನೀ ಮಂತ್ರವನ್ನು ಜಪಿಸಿ, ಭಸ್ಮವನ್ನು ಮಾವಿನಗಿಡದ ಮೇಲೆ ತೂರಿದನು. ಆ ಮಂತ್ರದ ಪ್ರಭಾವದಿಂದ ಆ ಎಲ್ಲ ಸಿಪ್ಪಿಗಳು ಹಣ್ಣುಗಳಾಗಿ ಮೊದಲಿನಂತೆ ಗಿಡಗಳಿಗೆ ಅಂಟಿಕೊಂಡವು.

ಕಾನೀಫನು ಈ ಅದ್ಭುತ ಪ್ರತಾಪವನ್ನು ಕಂಡು ವಿಸ್ಮಿತನಾದನು. ಅವನು ತನ್ನ ಮನಸ್ಸಿನೊಳಗಿನ ಎಲ್ಲ ದ್ವೇಷವನ್ನೂ ನಾಶಗೊಳಿಸಿ ಮಚ್ಛೇಂದ್ರನ ಶಿಷ್ಯನಾದ ಗೋರಕ್ಷನನ್ನು ಅಪ್ಪಿಕೊಂಡನು. ಆತನ ಬಗ್ಗೆ ಶುದ್ಧ ಪ್ರೇಮವು ಉತ್ಪನ್ನವಾಗಿ ಅವನನ್ನು ಹಲವು ಬಗೆಯಿಂದ ಕೊಂಡಾಡಿದನು. ಇವನು ನಿಜಗುರುಗಳ ನಿಜಶಿಷ್ಯನಿರುವನೆಂಬದು ಅವನಿಗೆ ನಂಬುಗೆಯಾಯಿತು. ಅವನ ಮಂತ್ರ ನೈಪುಣ್ಯವನ್ನು ಕಂಡು ಕಾನೀಫನು ಗೋರಕ್ಷನನ್ನು ಕುರಿತು:—ಮಿತ್ರ ಗೋರಕ್ಷಾ, ನಮ್ಮ ಕದನದ ಫಲವು ಕಡೆಗೆ ಹಿತವೆನಿಸಿತು; ನನ್ನನ್ನು ನಿಂದಿಸುವದಕ್ಕಾಗಿ ನನ್ನ ಗುರುಗಳನ್ನೂ ನಿಂದಿಸಿದಿ. ಈ ಯೋಗದಿಂದ ನನಗೆ ನನ್ನ ಗುರುಗಳ ಗೊತ್ತು ಹತ್ತಿದ್ದಕ್ಕಾಗಿ ನಿನಗೆ ಉಪಕೃತನಾಗಿದ್ದೇನೆ.'' ಎಂದನು.

ಗೋರಕ್ಷನು:—" ನಿನ್ನ ಹಾಗೆ ನನಗೂ ಅಪೂರ್ವ ಲಾಭವು ಒದಗಿದೆ. ನಿನ್ನ ಯೋಗದಿಂದ ನನ್ನ ಗುರುಗಳ ಶೋಧವಾಯಿತು." ಬಳಿಕ ಅವರು ಒಬ್ಬರನ್ನೊಬ್ಬರು ಆಲಿಂಗಿಸಿ ತಮ್ಮ ತಮ್ಮ ಮಾರ್ಗವನ್ನು ಹಿಡಿದರು.

ಕಾನೀಫನಿಗೆ ಗೋರಕ್ಷನ ಮುಖದಿಂದ ತಿಳಿದ ಸಂಗತಿಯಿಂದ ಅವನು ಗೋಪೀಚಂದನ ಬಗ್ಗೆ ಬಹಳ ಸಂತಪ್ತನಾದನು. ತನ್ನ ಗುರುಗಳನ್ನು ದುಃಖ ಸಾಗರದಲ್ಲಿ ನೂಕಿದ್ದಕ್ಕಾಗಿ ಅವನನ್ನು ಭಸ್ಮಮಾಡದೆ ಬಿಡಲಿಕ್ಕಿಲ್ಲೆಂದು ನಿರ್ಧರಿಸಿಕೊಂಡನು. ಬಳಿಕ ಕಾನೀಫನು ಶಿಷ್ಯಸಮೇತನಾಗಿ ಹೇಳಾ ಪಟ್ಟಣಕ್ಕೆ ತಲ್ಪಿದನು. ಅವನು ಒಮ್ಮೆಲೆ ಊರೊಳಗೆ ಹೋಗದೆ, ಊರ ಹೊರಗೆ ಒಂದು ಅರಣ್ಯದಲ್ಲಿ ವಸತಿಯನ್ನು ಮಾಡಿದನು.

ಗೋಪೀಚಂದನು ತನ್ನ ಸೇವಕರಿಂದ ಕಾನೀಫನ ಕೀರ್ತಿಯನ್ನು ಅರಿತುಕೊಂಡಿದ್ದನು. ಕಾನೀಫನು ತನ್ನ ಗ್ರಾಮದ ಹೊರಗೆ ಇಳಿದದ್ದನ್ನು ಕಂಡು ಅವನ ದರ್ಶನೇಚ್ಛೆಯಿಂದ ಪರಿವಾರ ಸಹಿತನಾಗಿ ನಡೆದನು. ಮಾರ್ಗದಲ್ಲಿ ಗೋಪೀಚಂದನು ಮಂತ್ರಿಯನ್ನು ಕುರಿತು:—ಈ ಕಾನೀಫನ ವೈಭವ ಸಾಮರ್ಥ್ಯಗಳು ನನ್ನ ಸಮಾನವಾಗಿವೆ. ನನ್ನಂಥ ವೈಭವಶಾಲಿಗೆ ಇಂಥ ಭಾಗ್ಯ ಸಂಪನ್ನನಾದ ಗುರುವೇ ಯೋಗ್ಯನಿದ್ದಾನೆ. ಮೈನಾವತಿಯು ಪೂರ್ವದಲ್ಲಿ ನನಗೆ ಜಾಲಂದರನೆಂಬ ಗುರುವನ್ನು ಯೋಚಿಸಿದಳು. ನನ್ನಂಥ ಭಾಗ್ಯ ಶಾಲಿಗೆ ಆ ಬಿಕ್ಕೆ ಬೇಡುವ ಗುರುವು ಹ್ಯಾಗೆ ಯೋಗ್ಯನಾದಾನು?

ಈ ಮೇರೆಗೆ ಮಾತನಾಡುತ್ತ ಗೋಪೀಚಂದನು ಪರಿವಾರ ಸಹಿತವಾಗಿ ಕಾನೀಫನು ಇದ್ದ ಅರಣ್ಯವನ್ನು ಹೊಕ್ಕನು. ಗೋಪೀಚಂದನು ತನ್ನ ಕಡೆಗೆ ಬರುವದನ್ನು ಕಂಡು ಕಾನೀಫನ ಮನಸ್ಸಿನಲ್ಲಿ ಕ್ರೋಧವು ಉಕ್ಕೇರಹತ್ತಿತು; ಅವನ ಕಣ್ಣುಗಳು ಕೆಂಪಗಾದವು; ಆದರೆ ವಿಚಾರಶೀಲನಾದ ಕಾನೀಫನು ವಿವೇಕದಿಂದ ಕ್ರೋಧವನ್ನು ಶಾಂತಗೊಳಿಸಿದನು. ಗೋಪೀಚಂದನನ್ನು ನಾಶಗೊಳಿಸಲಿಕ್ಕೆ ಕಾನೀಫನು ಸಮರ್ಥನಾಗಿದ್ದನು; ಆದರೆ ಹಾಗೆ ಮಾಡಿದಲ್ಲಿ ತನ್ನ ಗುರುಗಳ ಸಮಾಧಿಯ ಸ್ಥಾನವು ಸಿಗುವದು ಕಠಿಣವಾಗಿ ಗುರುಗಳ ಚರಣ ದರ್ಶನದ ಯೋಗವು ಶೀವ್ರವಾಗಿ ಆಗಲಿಕ್ಕಿಲ್ಲೆಂದು ಆ ಯತಿಯು ಶಾಂತಚಿತ್ತನಾದನು. ಗೋಪೀಚಂದನ ಕಡೆಯಿಂದಲೇ ಜಾಲಂ

ದರನನ್ನು ಹೊರಗೆ ತೆಗೆಸಿ ನಂತರ ಅವನಿಗೆ ಶಾಸನ ಮಾಡಬೇಕೆಂದು ಯೋಚಿಸಿದನು.

ಗೋಪೀಚಂದನು ಕಾನೀಫನ ಸನ್ನಿಧಿಯಲ್ಲಿ ಬಂದು ಅವನ ಚರಣಗಳಿಗೆ ವಂದಿಸಿದನು. ಅವನು ಕಾನೀಫನ ಮುಂದೆ ಕೈಗಳನ್ನು ಜೋಡಿಸಿ ನಿಂತುಕೊಂಡು ಬಹಳ ಲೀನತೆಯಿಂದ ಅವನನ್ನು ಕುರಿತು:— ಹೇ ನಾಥ ಮಹಾರಾಜ, ಈ ಹೊತ್ತು ನನ್ನ ಭಾಗ್ಯೋದಯವಾಯಿತು. ನನ್ನಂಥ ದೀನನ ಬಳಿಗೆ ಪವಿತ್ರಳಾದ ಗಂಗೆಯು ಬಂದಳೆಂದು ಅನ್ನಬೇಕಾಗಿದೆ; ನನ್ನಂಥ ಅನಾಥನನ್ನು ಉದ್ಧರಿಸಲಿಕ್ಕೆ ತಾವು ಈ ಸ್ಥಳಕ್ಕೆ ಧಾವಿಸಿಬಂದಂತೆ ತೋರುತ್ತದೆ. ಸಂತರು ಯಾವಾಗಲೂ ದಯಾವಂತರಿರುತ್ತಾರೆ; ನಿಮ್ಮ ಯೋಗದಿಂದಲೇ ನಮ್ಮಂಥ ಸಾಂಸಾರಿಕರಿಗೆ ಸದ್ಗತಿಯು ಲಭಿಸುತ್ತದೆ. ಎಂದನು.

ಈ ಮೇರೆಗೆ ರಾಜನು ನುಡಿಯಲು ಕಾನೀಫನು ಸಂತಸಬಟ್ಟು ನುಡಿದನೇನಂದರೆ—ರಾಜಾ, ನೀನು ವಿವೇಕಿಯಾಗಿದ್ದರೂ ನಿನ್ನಿಂದ ಒಂದು ಅಪರಾಧವು ಸಂಭವಿಸಿರುತ್ತದೆ. ಆ ಅಪರಾಧಕ್ಕಾಗಿ ನಿನ್ನನ್ನು ಈ ಕ್ಷಣದಲ್ಲಿಯೇ ಸುಟ್ಟುಬಿಡಬೇಕೆಂಬ ಸಿಟ್ಟು ನನಗುಂಟಾಗಿತ್ತು; ಆದರೆ ನಿನ್ನ ಪೂರ್ವದ ಪುಣ್ಯದಿಂದ ನನ್ನ ಸಿಟ್ಟು ಶಾಂತವಾಗಿದೆ. ಯಾವ ನನ್ನ ಅನುಗ್ರಹವನ್ನು ಬಯಸಿ ನೀನು ನನ್ನೆಡೆಗೆ ಬಂದೆಯೋ ಅಂಥ ನನಗೆ ಅನುಗ್ರಹ ಮಾಡಿದ ಮಹಾತ್ಮನಾದ ಜಾಲಂದರನಾಥನನ್ನು ನೀನು ಭಾವಿಯಲ್ಲಿ ಹುಗಿಸಿಬಿಟ್ಟಿರುತ್ತೀ; ಜಾಲಂದರಗುರುನಾಥನು ಮಹಾಸಮರ್ಥನಿದ್ದು ನಿನಗೆ ಶಾಸನ ಮಾಡದೆ ಬಿಟ್ಟಿರುತ್ತಾನೆ. ಇದು ನಿನ್ನ ಸುದೈವವೇ ಸರಿ! ಇಲ್ಲದಿದ್ದರೆ ನೀನು ಎಂದೋ ಈ ವೈಭವಕ್ಕೆ ಹೊರತಾಗಿ ಹೋಗುತ್ತಿದ್ದೆ; ಇರಲಿ ಈಗ ಬೇಗ ರಾಜಧಾನಿಗೆ ನಡೆ ತನಂತರಕ್ಕೆ ನಿನಗೆ ಎಲ್ಲ ಹೇಳುತ್ತೇನೆ.''

ಈ ಮಾತನ್ನು ಕೇಳಿ ಗೋಪೀಚಂದನಲ್ಲಿ ಕಂಪನವುಂಟಾಯಿತು. ಅವನು ಪುನಃ ಪುನಃ ಕಾನೀಫನಿಗೆ ನಮಸ್ಕರಿಸಿ ಅವನ ಕ್ಷಮೆಯನ್ನು ಬೇಡಿಕೊಂಡು ರಾಜಧಾನಿಗೆ ನಡೆದನು. ಅವನು ಕಾನೀಫನ ವ್ಯವಸ್ಥೆಯನ್ನು ಬಹಳ ಚನ್ನಾಗಿರಿಸಿ ಸದಾ ಆತನ ಸೇವೆಯಲ್ಲಿ ತತ್ಪರನಾದನು. ಜಾಲಂದರನು ಭಾವಿಯಲ್ಲಿ ಜೀವಂತನಿದ್ದ ಸಂಗತಿಯನ್ನು ಕೇಳಿಯೆಂತೂ ರಾಜನ ಹಲ್ಲು ಉವೇ ಹಾರಿತು. ಅವನು ತನ್ನ ಕೃತಿಗೆ ಬಹಳವಾಗಿ ಪಶ್ಚಾತ್ತಾಪಹೊಂದಿ

ಕಾನೀಫನ ಪ್ರಸನ್ನತೆಯನ್ನು ಪಡೆದು ಆತನಿಂದ ಅಭಯವನ್ನು ಸಂಪಾದಿಸಿದನು. ಈ ಸಂಗತಿಯು ಮೈನಾವತಿಗೆ ತಿಳಿಯಲು ದುಃಖದಿಂದ ಬೆಂದು ಬೆಂಡಾದಳು. ಅವಳು ಗೋಪೀಚಂದನ ಬಳಿಗೆ ಹೋಗಿ ದೊಡ್ಡ ದನಿಯಿಂದ ಅತ್ತಳು. ಆತನಾದರೂ ತಾಯಿಯ ಚರಣಕ್ಕೆರಗಿ ಕೃತಾಪರಾಧಕ್ಕಾಗಿ ಪಶ್ಚಾತ್ತಾಪವನ್ನು ವ್ಯಕ್ತಗೊಳಿಸಿ ಕಾನೀಫನಿಗೆ ಹೇಳಿಕೊಳ್ಳುವಂತೆ ತಾಯಿಗೆ ಪ್ರಾರ್ಥಿಸಿದನು. ಎಷ್ಟು ಮಾಡಿದರೂ ಮಗನೆಂಬ ಮೋಹವಿದ್ದುದರಿಂದ ಆತನ ಕಲ್ಯಾಣಕ್ಕಾಗಿ ಮೈನಾವತಿಯು ಕಾನೀಫನ ಬಳಿಗೆ ಹೋಗಿ ಆತನ ಮುಂದೆ ತನಗೆ ಜಾಲಂಧರನಾಥನಿಂದ ಆದ ಉಪದೇಶ ಮೊದಲುಮಾಡಿಕೊಂಡು ಎಲ್ಲ ಸಂಗತಿಯನ್ನು ಹೇಳಿದಳು. ಜಾಲಂದರನನ್ನು ಹೀಗೆ ಸಮಾಧಿಸ್ಥನನ್ನಾಗ ಮಾಡಿದ ಸಂಗತಿಯು ಇಂದೇ ತಿಳಿಯಿತೆಂಬದನ್ನಾದರೂ ಹೇಳಿ ಅವಳು ಗುರುಮಹಾರಾಜರನ್ನು ಹೊರಗೆ ತೆಗೆದು ಗೋಪೀಚಂದನಿಗೆ ಕ್ಷೇಮವನ್ನುಂಟುಮಾಡಬೇಕೆಂದು ಬೇಡಿಕೊಂಡಳು. ಮೈನಾವತಿಯ ಭಕ್ತಿಯುಕ್ತವಾದ ಮಾತಿಗೆ ಕಾನೀಫನು ಸಂತುಷ್ಟನಾಗಿ ಆಕೆಗೆ ಅಭಯವನ್ನು ಕೊಟ್ಟನು. ಮೈನಾವತಿಯೂ ಗೋಪೀಚಂದನೂ ಕಾನೀಫನ ಸೇವೆಯಲ್ಲಿ ಆಸಕ್ತರಾದರು.

---

# ಅಧ್ಯಾಯ ೧೭

## ಜಾಲಂದರನ ಬಹಿರಾಗಮನ ಹಾಗು ರಾಜನಿಗೆ ನಾಥದೀಕ್ಷೆ.

ಮರುದಿನ ರಾಜನು ಜಾಲಂದರನನ್ನು ಕಡೆಗೆ ತೆಗೆಯುವ ಉಪಾಯವೇನೆಂದು ಕಾನೀಫನನ್ನು ಕುರಿತು ವಿಚಾರಿಸಿದನು. ಆಗ ಕಾನೀಫನು ಈ ರೀತಿಯಾಗಿ ಹೇಳಿದನು:—

“ ಜಾಲಂದರನನ್ನು ಕಡೆಗೆ ತೆಗೆಯುವದೊಂದೇ ನಮ್ಮ ಕೆಲಸವಲ್ಲ; ನಿನ್ನ ಸಂರಕ್ಷಣೆಯನ್ನೂ ಮಾಡಬೇಕಾಗಿದೆ. ಈ ವಿಷಯದಲ್ಲಿ ನಾನು ಎಲ್ಲ ರೀತಿಯಿಂದ ವಿಚಾರಿಸಬೇಕಾಗಿದೆ. ಬಂಗಾಳ, ದಿಳ್ಳಿ, ತಾಮ್ರ, ಸಿತ್ತಾಳಿ,

ಕಬ್ಬಿಣ ಈ ಧಾತುಗಳಿಂದ ಬೇರೆ ಬೇರೆ ಐದು ಮೂರ್ತಿಗಳನ್ನು ಮಾಡಿಸಿ ಕೊಂಡು ಬಾ; ಅನಂತರ ಮುಂದಿನ ವಿಚಾರ ಮಾಡೋಣ.''

ಕಾನೀಫನ ಮಾತಿನಂತೆ ರಾಜನು ಐದು ಮೂರ್ತಿಗಳನ್ನು ಸಿದ್ಧಪಡಿಸಿದನು. ಒಂದು ಶುಭ ಮುಹೂರ್ತವನ್ನು ನೋಡಿ ಕಾನೀಫನಾಥನು ಆ ಮೂರ್ತಿಗಳನ್ನು ತೆಗೆದುಕೊಂಡು ಜಾಲಂದರನನ್ನು ಹುಗಿದ ಬಾವಿಗೆ ಹೋದನು. ನಂತರ ಕಾನೀಫನು ರಾಜನ ಕೈಯಲ್ಲಿ ಗುದ್ದಲಿಯನ್ನು ಕೊಟ್ಟು, ಹೇಳಿದ್ದೇನಂದರೆ:—''ನಾನು ಒಂದೊಂದು ಮೂರ್ತಿಯನ್ನು ಈ ಸ್ಥಳದಲ್ಲಿ ನಿಲ್ಲಿಸುತ್ತೇನೆ; ನೀನು ಈ ಗುದ್ದಲಿಯಿಂದ ತಗ್ಗನ್ನು ತೆಗೆಯಲಿಕ್ಕೆ ಆರಂಭಿಸು; ನಿನ್ನ ಒಂದು ಪೆಟ್ಟು ಬೀಳಲು, ಆ ತೆಗ್ಗಿನೊಳಗಿಂದ ಜಾಲಂದರನಾಥನು ನಿನ್ನ ಹೆಸರನ್ನು ವಿಚಾರಿಸುವನು. ಒಳಿಕ ನೀನು ನಿನ್ನ ಹೆಸರನ್ನು ಉಚ್ಚರಿಸಿದಕೂಡಲೆ ಒಂದು ಕ್ಷಣ ಸಹ ವಿಲಂಬಮಾಡದೆ ಮೂರ್ತಿಯ ಹಿಂದುಗಡೆ ಹೋಗಿ ಕುಳಿತುಕೋ. ಈ ಪ್ರಕಾರ ಐದೂ ಗೊಂಬೆಗಳು ಆಗುವ ಪರ್ಯಂತರ ಸಾವಧಾನ ರೀತಿಯಿಂದ ಆಚರಿಸು. ಹೀಗೆ ಹೇಳಿ ಕಾನೀಫನು ಚಿರಂಜೀವವೆಂಬ ಅಸ್ತ್ರವನ್ನು ಜಪಿಸಿ, ವಿಭೂತಿಯನ್ನು ಗೋಪೀಚಂದನ ಹಣೆಗೆ ಹಚ್ಚಿದನು.

ರಾಜನು ಗುದ್ದಲಿಯಿಂದ ಅಗಿಯಹತ್ತಲು, ಆ ತಗ್ಗಿನೊಳಗಿನ ಜಾಲಂದರನು ಒಮ್ಮೆಲೆ ಗದ್ದರಿಸಿ:—ಪೆಟ್ಟನ್ನು ಹಾಕುವವನ ಹೆಸರನ್ನು ವಿಚಾರಿಸಿದನು. ಗೋಪೀಚಂದನು ತನ್ನ ಹೆಸರನ್ನು ಹೇಳಿ, ಕೂಡಲೆ ಮೂರ್ತಿಯ ಹಿಂದೆ ನಿಂತನು. ಪೆಟ್ಟನ್ನು ಹಾಕುವವನು ಗೋಪೀಚಂದನೆಂದು ತಿಳಿದ ಕೂಡಲೆ ಜಾಲಂದರನು:—''ಭಸ್ಮೀಭೂತನಾಗು'' ಎಂದು ಶಾಪವನ್ನು ಕೊಟ್ಟನು. ಆ ಶಾಪದಿಂದ ಬಂಗಾರದ ಮೂರ್ತಿಯು ಭಸ್ಮವಾಯಿತು. ಈ ಮೇರೆಗೆ ಆ ಐದೂ ಗೊಂಬೆಗಳು ಸುಟ್ಟು ಬೂದಿಯಾದವು. ಐದೂ ಗೊಂಬೆಗಳು ಹೋದಕೂಡಲೆ ಗೋಪೀಚಂದನು ಪೆಟ್ಟು ಹಾಕುವದನ್ನು ಬಿಟ್ಟುಗೊಟ್ಟನು. ಅದನ್ನು ಕಂಡು ಕಾನೀಫನು ಅವನಿಗೆ ಹೇಳಿದ್ದೇನಂದರೆ:—ಇನ್ನು ನೀನು ತೋಡುವದಕ್ಕೆ ಅಂಜಬೇಡ; ಈಗ ನೀನು ಅವರ ಪ್ರಶ್ನೆಗೆ ನನ್ನ ಹೆಸರನ್ನು ಹೇಳಿ ಸುಮ್ಮನಾಗು; ಮತ್ತು ಮೊದಲು ನನ್ನ ಹೆಸರನ್ನು ಹೇಳಿ, ನಂತರ ನಿನ್ನ ಹೆಸರನ್ನು ಹೇಳು.

ಕಾನೀಫನ ಸೂಚನೆಯನ್ನು ಧ್ಯಾನದಲ್ಲಿ ತಂದು ಗೋಪೀಚಂದನು ಪುನಃ ಕೆದರಹತ್ತಿದನು. ಗುದ್ದಲಿಯು ಪೆಟ್ಟಿನ ಶಬ್ದವನ್ನು ಕೇಳಿ ಜಾಲಂದರನು ತನ್ನ ಮನಸ್ಸಿನಲ್ಲಿ ಅಂದದ್ದೇನಂದರೆ:—ನನ್ನ ಕ್ರೋಧಾಗ್ನಿಯಿಂದ ತ್ರಿಲೋಕಗಳು ಬೂದಿಯಾಗುತ್ತಿರಲು, ಈ ಗೋಪೀಚಂದನು ಇದುವರೆಗೆ ಜೀವಿಸಿದ್ದು ಆಶ್ಚರ್ಯವು. ಹೀಗೆ ಯೋಚಿಸಿ ಪುನಃ ಹೆಸರನ್ನು ಕೇಳಿದನು. ಆಗ ರಾಜನು:—"ಕಾನೀಫನೆಂಬ ತಮ್ಮ ಶಿಷ್ಯನು ಈ ಭೂತಲದ ಮೇಲೆ ವಾಸವಾಗಿದ್ದಾನೆ. ತಮ್ಮ ಚರಣಗಳ ದರ್ಶನದ ಸಲುವಾಗಿ ಅತನ ನೇತ್ರಗಳು ಉತ್ಸುಕವಾಗಿರುತ್ತವೆ. ಕಾನೀಫನ ಮನಸ್ಸು ಶಾಂತವಾಗುವ ದಕ್ಕಾಗಿ ಗೋಪೀಚಂದನೆಂಬ ನಾನು ತಗ್ಗನ್ನು ತೋಡುತ್ತೇನೆ" ಎಂದನು.

ತನ್ನ ಶಿಷ್ಯನ ಹೆಸರನ್ನು ಕೇಳಿದ ಕೂಡಲೆ ಜಾಲಂದರನು ಗೋಪೀಚಂದನನ್ನು ಚಿರಂಜೀವಿಯನ್ನಾಗಿ ಮಾಡಬೇಕೆಂದು ನಿಶ್ಚಯಿಸಿ ಆ ತಗ್ಗನ್ನು ಅಗಿಯಲಿಕ್ಕೆ ಅಪ್ಪಣೆ ಕೊಟ್ಟನು. ರಾಜನು ಕೂಡಲೆ ಅನೇಕ ಜನ ಸೇವಕರನ್ನು ಹಚ್ಚಿ ಆ ತಗ್ಗನ್ನು ತೋಡಿಸಹತ್ತಿದನು. ಕೂಲಿಕಾರರು ಬಹಳ ಕಷ್ಟದಿಂದ ಅದರೊಳಗಿನ ಲದ್ದಿಯನ್ನು ತೆಗೆದರು. ಸ್ವಲ್ಪ ಲದ್ದಿ ಉಳಿದಿರುವಾಗ ಗುದ್ದಲಿಯು ಕಲ್ಲಿನ ಮೇಲೆ ಬಿದ್ದಂತೆ ಶಬ್ದವಾಗಹತ್ತಿತು. ಹೀಗಾಗಲಿಕ್ಕೆ ನಾಥನ ವಜ್ರಾಸ್ತ್ರವೇ ಕಾರಣವು. ಆ ಶಬ್ದವನ್ನು ಕೇಳಿ ಜಾಲಂದರನು ಕೂಲಿಕಾರರಿಗೆ ತಡೆಯಲಿಕ್ಕೆ ಹೇಳಿದನು. ಆ ವಜ್ರಾಸ್ತ್ರವನ್ನು ನಾಶಪಡಿಸಲು ಜಾಲಂದರನು ಶಕ್ರಾಸ್ತ್ರವನ್ನು ಜಪಿಸಿದನು. ವಜ್ರದ ಸಂಹಾರವಾಗಲು ಭಾವಿಯು ಬರಿದಾಯಿತು. ಜಾಲಂದರ ಮತ್ತು ಕಾನೀಫ ಇವರ ಭೆಟ್ಟಿಯಾಯಿತು. ಮನಸ್ಸಿನಲ್ಲಿ ಪ್ರೇಮ ಉತ್ಪನ್ನವಾಗಿ ಒಬ್ಬರಿಗೊಬ್ಬರ ಕುತ್ತಿಗೆಯ ಶಿರಗಳು ಉಬ್ಬಿದವು. ಅವರಿಬ್ಬರ ಕಣ್ಣುಗಳೊಳಗಿಂದ ಆನಂದಾಶ್ರುಗಳು ಹೋಗಹತ್ತಿದವು. ಜಾಲಂದರನು ಒಮ್ಮೆಲೆ ತಗ್ಗಿನೊಳಗಿಂದ ಹೊರಗೆ ಬಂದು ಕಾನೀಫನನ್ನು ಅಪ್ಪಿಕೊಂಡು—ಈ ಪ್ರಸಂಗದಲ್ಲಿ ನೀನು ಇಲ್ಲಿಗೆ ಬಂದದ್ದರಿಂದಲೇ ಗೋಪೀಚಂದನು ಜೀವದಿಂದ ಪಾರಾದನು ಎಂದನು.

ಜಾಲಂದರನ ಉದ್ಗಾರವನ್ನು ಕೇಳಿ ಗೋಪೀಚಂದನು ಅವನ ಚರಣಗಳಲ್ಲಿ ಉರುಳಾಡಿದನು. ನಂತರ ಗೋಪೀಚಂದನನ್ನು ಹಿಡಿದೆತ್ತಿ ಅವನ

ತಲೆಯ ಮೇಲೆ ವರದಹಸ್ತವನ್ನಿಟ್ಟು ಸೂರ್ಯ-ಚಂದ್ರರಿರುವವರೆಗೆ ಚಿರಂಜೀವಿಯಾಗೆಂದು ಆಶೀರ್ವಾದವನ್ನು ಕೊಟ್ಟನು. ತನ್ನ ಪುತ್ರನನ್ನು ಅನುಗ್ರಹಿಸಿದ್ದಕ್ಕಾಗಿ ಮೈನಾವತಿಯು ಗುರುಗಳ ಚರಣಗಳನ್ನು ಗಟ್ಟಿಯಾಗಿ ಅಪ್ಪಿಕೊಂಡಳು. ಕಣ್ಣೊಳಗಿಂದ ಪ್ರೇಮಾಶ್ರುಗಳು ಸುರಿಯುತ್ತಿರಲು ಜಾಲಂದರನನ್ನು ಕುರಿತು—ಮಹಾರಾಜ, ಇವೊತ್ತಿನವರೆಗೆ ಕಳೆದ ಕಾಲವು ಕಗ್ಗತ್ತಲೆಯಂತೆ ಭಾಸವಾಯಿತು. ಈ ಹತ್ತುವರ್ಷಗಳ ವರೆಗೆ ಜಾಲಂದರನೆಂಬ ಸೂರ್ಯನು ಮುಳುಗಿದ್ದನು. ಸೂರ್ಯಾಸ್ತವಾದ ಕೂಡಲೆ ಹೇಗೆ ಕಮಲಗಳು ಬಾಡುವವೋ ಹಾಗೆ ನನ್ನ ಸ್ಥಿತಿಯಾಗಿತ್ತು. ಇಂದಿಗೆ ನನ್ನ ದುರ್ಭಾಗ್ಯದ ದಿವಸವು ಕಳೆದುಹೋಯಿತು ಎಂದಳು.

ಹೀಗೆಂದು ಮೈನಾವತಿಯು ಕಣ್ಣೀರು ಹಾಕಹತ್ತಿದಳು. ಜಾಲಂದರನು ತನ್ನ ಹಸ್ತದಿಂದ ಆಕೆಯ ಅಶ್ರುಧಾರೆಗಳನ್ನು ಒರೆಸಿ ಸಮಾಧಾನಗೊಳಿಸಿದನು. ಕಾನೀಫ, ಗೋಪೀಚಂದ, ಮೈನಾವತಿ ಈ ಮೂವರ ಮುಖದ ಮೇಲೆ ಕೈಯಾಡಿಸಿ ಜಾಲಂದರನು ಗೋಪೀಚಂದನನ್ನು ಕುರಿತು ಬಾಲಕಾ, ನಿನ್ನ ಮನೋಬಯಕೆಯನ್ನು ಅರುಹು! ನಿನಗೆ ರಾಜವೈಭವದ ಇಚ್ಛೆಯು ಅದೆಯೋ ಅಥವಾ ಯೋಗದೀಕ್ಷೆಯನ್ನು ಹೊಂದುವ ಇಚ್ಛೆಯುದೆಯೋ? ರಾಜವೈಭವ ಹಾಗು ವೈರಾಗ್ಯಗಳಲ್ಲಿ ರಾಜವೈಭವವು ಅಶಾಶ್ವತವೂ ವೈರಾಗ್ಯಮಾರ್ಗವು ಶಾಶ್ವತವೂ ಆಗಿರುವದು. ನಿನಗೆ ಬೇಕಾದದ್ದನ್ನು ಸ್ವೀಕರಿಸು. ವಿಚಾರ ಮಾಡಿ ನೋಡಿದರೆ ವೈರಾಗ್ಯಪಂಥವು ಶ್ರೇಷ್ಠವೆನಿಸುತ್ತದೆ. ಇಂದ್ರನಷ್ಟು ವೈಭವ ಇದ್ದರೂ ಅದು ನಾಶವಾಗುವದರಿಂದ ಅದನ್ನು ತ್ಯಾಜ್ಯಮಾಡುವದೇ ಯೋಗ್ಯವು. ಐಹಿಕವಾದ ವೈಭವವು ಮಾವಿನ ಗಿಡದ ನೆರಳಿನಂತೆ ಅಥವಾ ಮೃಗಜಲದಂತೆ ಅಶಾಶ್ವತವಾದದ್ದು. ಅನೇಕ ವೈಭವಗಳನ್ನು ಅನುಭೋಗಿಸುವ ಮನುಷ್ಯನು ಅವುಗಳನ್ನು ತ್ಯಜಿಸಿ ಯೋಗಮಾರ್ಗವನ್ನು ಅವಲಂಬಿಸುವದುಂಟು. ಆದರೆ ಯೋಗಮಾರ್ಗವನ್ನು ನಿರಾಕರಿಸಿ ವೈಭವವನ್ನು ಸ್ವೀಕರಿಸಿದವರನ್ನು ನಾನು ನೋಡಿಲ್ಲ. ಗಾಧಿಸುತನಾದ ವಿಶ್ವಾಮಿತ್ರನು ಅಷ್ಟು ವೈಭವಶಾಲಿಯಾಗಿದ್ದರೂ ಅದನ್ನು ಬಿಟ್ಟುಗೊಟ್ಟು ತಪಸ್ಸನ್ನು ಆಚರಿಸಹತ್ತಿದನು. ಉತ್ತಾನಪಾದರಾಜನ ಲಕ್ಷ್ಮಿಯು ಅಪಾರವಿತ್ತು; ಆದರೆ ಆತನ ಪುತ್ರನಾದ

ಧ್ರುವನು ರಾಜ್ಯಸಂಪತ್ತಿನ ಮೇಲೆ ತುಳಸೀಪತ್ರವನ್ನಿಟ್ಟು ಯೋಗಮಾರ್ಗ ವನ್ನು ಅವಲಂಬಿಸಿದನು. ಎಲ್ಲ ದೃಶ್ಯಪದಾರ್ಥವು ನಾಶವಂತವೆಂದು ತಿಳಿದು ಸುವಿಚಾರಿಗಳು ಯೋಗಮಾರ್ಗವೇ ಶ್ರೇಷ್ಠವೆಂದು ತಿಳಿದುಕೊಳ್ಳು ತ್ತಾರೆ ಈಗ ನಿನ್ನ ಮನಸ್ಸಿಗೆ ಯಾವದು ವಿಹಿತವಾಗುತ್ತದೆಂಬದನ್ನು ಸ್ಪಷ್ಟ ವಾಗಿ ಹೇಳು'' ಎಂದನು.

ಜಾಲಂದರನ ಮಾತನ್ನು ಕೇಳಿ ಗೋಪೀಚಂದನು ತನ್ನ ಮನಸಿನಲ್ಲಿ ವಿಚಾರಿಸಹತ್ತಿದನು. ಧನಧಾನ್ಯ-ಬೆಳ್ಳಿಬಂಗಾರ-ವಸ್ತ್ರಪಾತ್ರ ಇತ್ಯಾದಿ ಉಪಭೋಗ್ಯವಸ್ತುಗಳು ಕ್ಷಣಭಂಗುರವಿರುವವೆಂಬ ತತ್ವವು ಅವನ ಮನಸ್ಸಿ ನಲ್ಲಿ ಬಂತು. ಜಾಲಂದರನಾಥನ ಯೋಗ್ಯತೆಯು ದೊಡ್ಡದಿರುವದೆಂಬದು ಅವನಿಗೆ ತಿಳಿಯಿತು. ಆಗ ಅವನು ನುಡಿದನೇನಂದರೆ—''ಮಹಾರಾಜ, ಇಂಧನದಲ್ಲಿ ಅಗ್ನಿಯು ವಾಸಮಾಡಿರುತ್ತದೆ. ಘರ್ಷಣದಿಂದ ಅದು ದೃಶ್ಯ ಮಾನವಾಗುವದು. ತಾವು ಕೃಪೆಮಾಡಿ ನನ್ನ ಸಾತ್ವಿಕ ಸಂಪತ್ತನ್ನು ಬೆಳಿಸಿ ನನ್ನ ದೇಹವೆಂಬ ಕಾಷ್ಠದೊಳಗಿನ ಅಗ್ನಿಯನ್ನು ಪ್ರದೀಪ್ತ ಮಾಡ ಬೇಕು ಕುರಡೀಕುಂಬಾರದಂತೆ ತಾವು ನನ್ನನ್ನು ತಮ್ಮಂತೆ ಮಾಡಿಕೊಳ್ಳ ಬೇಕು, ಇದೇ ನನ್ನ ಇಚ್ಛೆಯು.

ಗೋಪೀಚಂದನ ಶುಭಕರವಾದ ಇಚ್ಛೆಯನ್ನು ತಿಳಿದು ಜಾಲಂದರನು ಅವನ ಬೆನ್ನ ಮೇಲೆ ಚಪ್ಪರಿಸಿ ಧನ್ಯವಾದವನ್ನು ಮಾಡಿದನು. ಅವನ ತಲೆಯ ಮೇಲೆ ವರದಹಸ್ತವನ್ನಿಟ್ಟು ಅನುಗ್ರಹಿಸಿದನು. ನಂತರ ಅವನ ಕಿವಿಯಲ್ಲಿ ದಿವ್ಯವಾದ ಮಂತ್ರವನ್ನು ಹೇಳಿ ಅವನಿಗೆ ನಾಥ ದೀಕ್ಷೆಯನ್ನು ಕೊಟ್ಟನು. ಮಂತ್ರಪ್ರಭಾವದಿಂದ ಅವನಿಗೆ ದೃಶ್ಯಪದಾರ್ಥವು ಮಾಯಾ ಮಯವೆಂದು ಭಾಸವಾಯಿತು. ಗೋಪೀಚಂದನು ಶೈಲಿ, ಕಂಥಾ, ಮುದ್ರಾ, ಜೋಳಿಗೆ ಮೊದಲಾದ ನಾಥಪಂಥೀಯ ಲಕ್ಷಣಗಳನ್ನು ಸ್ವೀಕ ರಿಸಿ ವೈರಾಗ್ಯ ಸಂಪನ್ನನಾದನು.

ಗೋಪೀಚಂದನು ನಾಥಪಂಥವನ್ನು ಸ್ವೀಕರಿಸಿದ್ದು ಗ್ರಾಮದಲ್ಲಿ ಪಸ ರಿಸಿತು. ಈ ವೃತ್ತಾಂತವು ರಾಜನ ಅಂತಃಪುರದಲ್ಲಿ ತಿಳಿಯಲು ಅಂತಃಪುರ ದೊಳಗಿನ ಎಲ್ಲರು ಶೋಕಸಮುದ್ರದಲ್ಲಿ ನಿಮಗ್ನರಾದರು. ಒಮ್ಮಿಂ ದೊಮ್ಮೆ ಅಲ್ಲಿ ಹಾಹಾಕಾರವೆದ್ದಿತು. ರಾಣಿಯರ ಕಣ್ಣೊಳಗಿಂದ ಅಶ್ರು

ಧಾರೆಗಳು ಹೊರಟವು. ಅವರು ಭೂಮಿಯ ಮೇಲೆ ಉರುಳಾಡಹತ್ತಿ ತಮ್ಮ ಬಾಯೊಳಗೆ ಮಣ್ಣು ಹಾಕಿಕೊಳ್ಳಹತ್ತಿದರು. ಮೈನಾವತಿಯ ಉಪದೇಶದಿಂದಲೇ ರಾಜನು ಯೋಗದೀಕ್ಷೆಯನ್ನು ತೆಗೆದುಕೊಂಡನೆಂಬ ಕಲ್ಪನೆಯಿಂದ ಆ ಎಲ್ಲ ರಾಣಿಯರು ಆಕೆಯನ್ನು ಮನಬಂದಂತೆ ಶಪಿಸ ಹತ್ತಿದರು. ರಾಜನ ಗುಣಗಳನ್ನು ಕೊಂಡಾಡುತ್ತ ಉರುಳಾಡುತ್ತಿರು ವಷ್ಟರಲ್ಲಿ ಅವರಿಗೆ ಮೂರ್ಛೆಯು ಬಂದಿತು. ಕೆಲವರು ಪ್ರಾಣವನ್ನು ಬಿಡುವಷ್ಟು ಬಲಹೀನರಾದರು; ಕೆಲವರು ತಮ್ಮತಮ್ಮೊಳಗೆ ಈ ಮೇರೆಗೆ ಮಾತಾಡಹತ್ತಿದರು. ನಮ್ಮ ಈ ರಾಜವೈಭವಗಳನ್ನು ಗ್ರಾಸಮಾಡಲಿಕ್ಕೆ ಮೈನಾವತಿಯು ರೂಪದಿಂದ ರಾಕ್ಷಸಿಯು ಪ್ರಾಪ್ತಳಾಗಿದ್ದಾಳೆ ನಮ್ಮ ಸುಖ ಸಮುದ್ರವು ವಡವಾಗ್ನಿಯಿಂದ ಆಟ್ಟಿಸಿ ಹೋಯಿತು. ಗೋಪೀಚಂದ ರಾಜನು ಎಂದೂ ಮಾತಿನಿಂದ ನಮ್ಮನ್ನು ನೋಯಿಸಲಿಲ್ಲ. ನಮ್ಮ ಯಾವದೊಂದು ಇಚ್ಛೆಯನ್ನು ಪೂರ್ಣಮಾಡಲಿಕ್ಕೆ ತತ್ಪರನಾಗಿದ್ದನು.''

ಹೀಗೆ ಆ ರಾಣಿಯರು ಪ್ರಲಾಪಿಸುತ್ತ ಭೂಮಿಯ ಮೇಲೆ ಬಿದ್ದು ಹೊರಳಾಡಹತ್ತಿದರು. ಕೆಲವರು ಹಣೆ ಹಣೆ ಬಡಕೊಳ್ಳ ಹತ್ತಿದರು; ಕೆಲವರು ಬ್ರಹ್ಮದೇವರಿಗೆ ದೋಷಕೊಡಹತ್ತಿದರು; ಕೆಲವರು ಕೂದಲನ್ನು ತೆಗೆಯಹತ್ತಿದರು. ಈ ಮೇರೆಗೆ ರಾಜನ ಯೋಗವೃತ್ತಿಯನ್ನು ಕಂಡು ಅವರೆಲ್ಲರು ಒಂದೇ ಬಗೆಯಾಗಿ ವ್ಯಾಕುಲ ಮನಸ್ಸಿನಿಂದ ಮತ್ತೆ ಶೋಕಿಸಹತ್ತಿದರು. ಅವರು ರಾಜನ ಹೆಸರಿನಿಂದ ಒದರಿ:—ಹೇ ಗೋಪೀಚಂದರಾಜನೇ! ನೀನು ಅತ್ಯಂತ ದಯಾಳುವೂ, ನಿರ್ಮಲಮನಸ್ಸಿನವನೂ ಇದ್ದು, ನಮ್ಮನ್ನು ಬಿಟ್ಟು ಹೇಗೆ ಹೋಗುವಿ? ಎಂದು ಹಂಬಲಿಸಿದರು.

ಈ ಮೇರೆಗೆ ದುಃಖದಿಂದ ಅವರು ಚಡಪಡಿಸಹತ್ತಿದರು. ರಾಜನ ವಿರಹದ ವ್ಯಥೆಯಿಂದ ಚಡಪಡಿಸುತ್ತ ಹಣ್ಣಾಗಿ ಭೂಮಿಯ ಮೇಲೆ ಬಿದ್ದುಕೊಂಡರು.

ಇತ್ತ ಜಾಲಂದರನಾಥನು ಗೋಪೀಚಂದನಿಗೆ ತಪಸ್ಸಿಗೆ ಹೊರಡಲು ಆಜ್ಞೆಯನ್ನು ಕೊಟ್ಟನು. ಗೋಪೀಚಂದನು ತಪಸ್ಸನ್ನಾಚರಿಸಲಿಕ್ಕೆ ಸಿದ್ಧ

ನಾಗಲು, ಜಾಲಂದರನು ಅವನ ವೈರಾಗ್ಯವನ್ನು ಪರೀಕ್ಷಿಸಬೇಕೆಂದು ಯೋಚಿಸಿದನು. ಅವನು ಗೋಪೀಚಂದನಿಗೆ ತನ್ನ ಅಂತಃಪುರದಲ್ಲಿಯೇ ಭಿಕ್ಷೆಯನ್ನು ಪ್ರಾರಂಭಿಸಬೇಕೆಂದು ಹೇಳಿದನು. ಆ ಮಾತನ್ನು ರಾಜನು ಮಾನ್ಯಮಾಡಿದನು. ರಾಜನು ತನ್ನ ಮಂದಿರಕ್ಕೆ ಹೋಗಿ ಅಲಖ, ನಿರಂಜನ ಎಂಬ ಭಿಕ್ಷೆಯನ್ನು ಬೇಡಹತ್ತಿದನು. ತಮ್ಮ ಪತಿಯ ಈ ಯತಿವೇಷವನ್ನು ಪ್ರತ್ಯಕ್ಷವಾಗಿ ಕಂಡು ಅವನ ಎಲ್ಲ ಭಾರ್ಯೆಯರು ಶೋಕಸಾಗರದಲ್ಲಿ ಮುಣುಗಿದರು. ಅವರೆಲ್ಲರು ದೊಡ್ಡ ಧ್ವನಿಯಿಂದ ಅಳಹತ್ತಲು, ಬ್ರಹ್ಮಾಂಡವು ನಾದಮಯವಾಯಿತು. ರಾಜನ ವೈಭವ ರೂಪವಾದ ಮೇರು ಪಂದಾಕವು ಒಂದು ದೋವೆಯ ರೂಪವನ್ನು ಧರಿಸಿದಂತೆ ಭಾಸವಾಯಿತು. ಯಾವ ರಾಜನು ತನ್ನ ಕೈಯಿಂದ ಅಪಾರವಾದ ಸಂಪತ್ತನ್ನು ಹಂಚಿ, ಯಾಚಕರನ್ನು ತೃಪ್ತಿಪಡಿಸಿರುವನೋ, ಅದೇ ಗೋಪೀಚಂದ ರಾಜನು ಬಗಲ್ಲಿ ಜೋಳಿಗೆಯನ್ನು ಧರಿಸಿ, ಭಿಕ್ಷೆ ಬೇಡಲಿಕ್ಕೆ ಹತ್ತಿರುವದನ್ನು ಕಂಡು ಮುಖ್ಯ ರಾಣಿಯಾದ ಲುಮಾವಂತಿಯು ರಾಜನ ಸನ್ನಿಧಿಯಲ್ಲಿ ಹೋಗಿ ಕುಳಿತಳು. ಒಂದು ಪಕ್ಷಿಯು ಹಾರಿಹೋಗಲು ಉಳಿದ ಪಕ್ಷಿಗಳು ಅದರ ಹಿಂದೆ ಹೇಗೆ ಹಾರಿ ಹೋಗುತ್ತವೆಯೋ, ಅದರಂತೆ ಎಲ್ಲ ರಾಣಿಯರು ಲುಮಾವಂತಿಯ ಹಿಂದೆ ಧಾವಿಸುತ್ತ ಬಂದರು. ಆ ಎಲ್ಲ ರಾಣಿಯರು ರಾಜನ ಸುತ್ತುಗಟ್ಟಿ ಕಣ್ಣು ತುಂಬ ನೀರನ್ನು ತಂದು ರಾಜನನ್ನು ಕುರಿತು— ಹೇ ನಾಥ, ಈಶ್ವರೀಸತ್ತೆಯಿಂದ ಆದದ್ದಾಯಿತು; ಈಗ ತಾವು ಇಲ್ಲಿಯೇ ಇದ್ದು, ಯೋಗವನ್ನು ಮಾಡಬೇಕು. ನಮ್ಮಂಥ ದರಿದ್ರ ಜನರ ಸೌಭಾಗ್ಯವನ್ನು ಈ ರೀತಿಯಿಂದ ನಾಶಗೊಳಿಸುವದು ಇಷ್ಟವಲ್ಲ. ತಾವು ನಮ್ಮ ಸರ್ವಸ್ವವಾಗಿರುವಿರಿ. ತಾವು ಇಲ್ಲಿಯೇ ಇದ್ದು ಯೋಗಾಚರಣ ನಡಿಸಿದರೆ, ತಮ್ಮ ದರ್ಶನದಿಂದಾದರೂ ವೇಳೆ ಕಳೆಯುವೆವು. ರಾಜನಿಂದ ಜೀರ್ಣವಾದ ಛತ್ರವು ಹೇಗೆ ಶೋಭಿಸುತ್ತದೆಯೋ, ಅದೇ ಮೇರೆಗೆ ತಾವು ಈ ಯೋಗಿ ವೇಷದಿಂದ ಇಲ್ಲಿ ವಾಸ ಮಾಡಿದರೆ, ತಮ್ಮ ಆಶ್ರಯದಿಂದ ನಾವು ಸುಶೋಭಿತರಾಗುವೆವು. ತಾವೇ ನಮ್ಮ ಭಾಗ್ಯದ ಛತ್ರರಿದ್ದೀರಿ; ತಮ್ಮ ಇಚ್ಛೆಯಿದ್ದರೆ ಇಲ್ಲಿ ತಮಗೆ ಬಂಗಾರದ ಪರ್ಣಕುಟೀರವನ್ನು ಕಟ್ಟಿಸಿ ಕೊಡುವೆವು. ಮತ್ತು ನಾವೆಲ್ಲರೂ ತಮ್ಮ ಸೇವೆಯನ್ನು ಮಾಡುವೆವು.

ತಾವು ಧರಿಸಿದ ಜೋಡುಗಳಿಗೆ ಬಂಗಾರ ರತ್ನಗಳನ್ನು ಹಚ್ಚಿಸಿ ಕೊಡುವೆವು. ತಾವು ಜರತಾರೀ ವಸ್ತ್ರಗಳನ್ನು ಧಾರಣಮಾಡಬೇಕು. ತಾವು ಈ ಕೃಷ್ಣಾಜಿನವನ್ನು ಬಿಟ್ಟುಬಿಡಬೇಕು; ವಜ್ರ, ಮುತ್ತು, ಮಾಣಿಕ ಇವುಗಳ ಸ್ವೀಕಾರ ಮಾಡಬೇಕು; ಭಿಕ್ಷೆಯ ಕದನ್ನವನ್ನು ತ್ಯಜಿಸಿ, ತುಪ್ಪ ಹಾಲು ಮೊಸರು ಇವುಗಳಿಂದ ಯುಕ್ತವಾದ ಬಹುರಸ ಅನ್ನವನ್ನು ಭಕ್ಷಿಸಬೇಕು. ಇವುಗಳನ್ನು ಉಪಭೋಗಿಸುತ್ತ ತಾವು ಇಲ್ಲಿಯೇ ತಪಸ್ಸನ್ನಾಚರಿಸಬೇಕು. ಅರಣ್ಯದಲ್ಲಿ ಹೇಗೆ ಸಂಚರಿಸುವಿರಿ? ಅರಣ್ಯದೊಳಗಿನ ಪರ್ಣಕುಟೀರವನ್ನು ತ್ಯಜಿಸಿ, ಇಲ್ಲಿ ದಾಸೀ ಜನರಿಂದ ಸೇವೆ ತೆಗೆದುಕೊಳ್ಳುತ್ತ ಇಲ್ಲೇ ವಾಸ ಮಾಡಿರಿ ಎಂದರು.

ತನ್ನ ಸ್ತ್ರೀಯರ ಈ ಮೋಹಯುಕ್ತ ಮಾತಿಗೆ ಆ ವೈರಾಗ್ಯಸಂಪನ್ನನಾದ ಗೋಪೀಚಂದನು ಸೊಪ್ಪುಹಾಕಲಿಲ್ಲ. ಅವನಿಗೆ ಕ್ರೋಧ ಉತ್ಪನ್ನವಾಯಿತು. ಅವನು ಅವರನ್ನು ಧಿಃಕರಿಸಿ ದೂರ ಸರಿಸಿದನು; ಮತ್ತು ಅವರನ್ನು ಕುರಿತು ನುಡಿದನೇನಂದರೆ:—'' ಈಗ ನೀವು ನನಗೆ ಹೆಂಡರಲ್ಲ; ಮಾತೃ ಸಮಾನರು. ನಾನು ಮೊದಲಿನ ಗೋಪೀಚಂದನಲ್ಲ; ಜಾಲಂದರ ಗುರುಗಳ ಶಿಷ್ಯನಾದ ಗೋಪೀಚಂದನೆಂಬ ಜೋಗಿಯಿರುತ್ತೇನೆ. ನನಗೆ ಅರಣ್ಯವೇ ರಾಜಮಂದಿರವು; ಕಂದ-ಮೂಲಗಳೇ ಮಿಗಿಲಾದ ಪಕ್ವಾನ್ನಗಳು. ಯಾವ ಮೋಹಗಳೂ ನನ್ನನ್ನು ಪ್ರತಿಬಂಧಿಸಲಾರವು.''

ಈ ಮೇರೆಗೆ ನುಡಿದು ಗೋಪೀಚಂದನು ಅವರಿಂದ ಭಿಕ್ಷೆಯನ್ನು ಹಾಕಿಸಿಕೊಂಡನು. ಅಷ್ಟರಲ್ಲಿ ಮೈನಾವತಿಯೂ ಬಂದು ಭಿಕ್ಷೆಯನ್ನು ಹಾಕಿದಳು. ಆಗ ಗೋಪೀಚಂದನು ಮೈನಾವತಿಗೆ ದಂಡವತ್ ನಮಸ್ಕಾರ ಮಾಡಿ ದೊರಕಿದ ಭಿಕ್ಷೆಯನ್ನು ತಕ್ಕೊಂಡು ಗುರುಗಳ ಬಳಿಗೆ ಹೋದನು. ಗುರುಗಳು ಗೋಪೀಚಂದನ ಅಚಲ ವೈರಾಗ್ಯವನ್ನು ನೋಡಿ ಸಂತೋಷಬಟ್ಟು ಅವನ ಮಗನಾದ ಮುಕ್ತಚಂದನಿಗೆ ರಾಜ್ಯವನ್ನೊಪ್ಪಿಸಿ ಗೋಪೀಚಂದನಿಗೆ ತಪಶ್ಚರ್ಯಕ್ಕಾಗಿ ಬದರಿಕಾಶ್ರಮಕ್ಕೆ ಹೋಗ ಹೇಳಿದರು. ಹೋಗಲು ಆತನೂ ಸಿದ್ಧನಾದನು. ಸಮಸ್ತ ಪ್ರಜೆಗಳು ಗೋಳಿಟ್ಟರು. ಆಗ ಜಾಲಂದರನು ಎಲ್ಲರಿಗೂ ಸಮಾಧಾನ ಹೇಳಿದನು. ಗೋಪೀಚಂದನು ಬದರೀಕಾಶ್ರಮಕ್ಕೆ ಹೊರಟು ಹೋದನು. ಬಳಿಕ ಜಾಲಂದರನು ಕಾನೀಫ

ನೊಡನೆ ಅಲ್ಲಿ ಆರುತಿಂಗಳು ಇದ್ದನು. ಮೈನಾವತಿಯು ಮೊಮ್ಮಗನಾದ ಮುಕ್ತಚಂದನನ್ನು ಜೋಪಾನ ಮಾಡತೊಡಗಿದಳು. ಅಂತಃಪುರದ ಎಲ್ಲ ರಾಣಿಯರೂ ಜಾಲಂದರನ ಮಾತಿನಿಂದ ಸಮಾಧಾನ ಹೊಂದಿ ಇರತೊಡಗಿದರು. ಜಾಲಂದರನ ಕೃಪೆಯಿಂದ ಮುಕ್ತಚಂದನು ರಾಜ್ಯಸೂತ್ರಗಳನ್ನು ಯಥಾಸ್ಥಿತವಾಗಿ ನಡಿಸಲು ಸಮರ್ಥನಾದನು.

---

# ಅಧ್ಯಾಯ ೧೮

## ಭಗಿನೀ ಸಂಜೀವನ.



ಜಾಲಂದರನಿಂದ ಯೋಗದೀಕ್ಷೆಯನ್ನು ತೆಗೆದುಕೊಂಡು ಗೋಪೀಚಂದನು ಯತಿವೇಷದಿಂದ ಊರೂರುಗಳಲ್ಲಿ ಸಂಚರಿಸಹತ್ತಿದನು. ಭಿಕ್ಷೆಯಿಂದ ಉದರನಿರ್ವಾಹವನ್ನು ಮಾಡಿಕೊಂಡು ಅವನು ಯಾವಾಗಲೂ ತನ್ನ ಮಂತ್ರದ ಜಪವನ್ನು ಮಾಡುವದರಲ್ಲಿ ತೊಡಗುತ್ತಿದ್ದನು. ಗೌಡ ಬಂಗಾಲದ ಗೋಪೀಚಂದನು ಯೋಗದೀಕ್ಷೆಯನ್ನು ತೆಗೆದುಕೊಂಡ ಸಂಗತಿಯು ಪ್ರತಿಯೊಂದು ಊರ ಜನರ ಕಿವಿಯವರೆಗೆ ಹೋಯಿತು. ಎಷ್ಟೋ ಸ್ಥಳಗಳಲ್ಲಿಯ ಜನರು ಅವನ ಗುಣಗಳನ್ನು ವರ್ಣಿಸುತ್ತ, ದುಃಖಮಿಶ್ರಿತ ಸ್ತುತಿಗಳಿಂದ ಕೊಂಡಾಡುತ್ತಿದ್ದರು. ಅವನು ಯಾವ ಯಾವ ಊರಿಗೆ ಹೋಗುವನೋ, ಆ ಆ ಊರುಗಳ ಜನರು ಅವನಿಗೆ ಬಹಳ ಆದರಾತಿಥ್ಯವನ್ನು ಮಾಡುತ್ತಿದ್ದರು; ನಮ್ಮ ಗ್ರಾಮದಲ್ಲಿಯೇ ವಾಸಿಸಬೇಕೆಂದು ಅವನ ಮುಂದೆ ಅನೇಕ ಪದಾರ್ಥಗಳನ್ನು ತಂದು ಇಡುತ್ತಿದ್ದರು. ಆ ಎಲ್ಲರ ಆದರಾತಿಥ್ಯವನ್ನು ಸ್ವೀಕರಿಸಿ, ಅವನು ಮುಂದಿನ ಗ್ರಾಮಕ್ಕೆ ಹೋಗುತ್ತಿದ್ದನು. ಕೆಲವು ಗ್ರಾಮದವರು ತಮ್ಮ ತಮ್ಮ ಸೀಮೆಗಳವರೆಗೆ ಕಳಿಸಿ, ದುಃಖದಿಂದ ಹಿಂದಿರುಗುತ್ತಿದ್ದರು. ಈ ಮೇರೆಗೆ ಸಂಚರಿಸುತ್ತ ಗೋಪೀ

ಚಂದನು ಗೌಡಬಂಗಾಲದ ಸೀಮೆಯನ್ನು ದಾಟಿ ಕೌಲಬಂಗಾಲದಲ್ಲಿ ಪ್ರವೇಶಿಸಿದನು. ಅಲ್ಲಿಯೂ ಅವನ ಯೋಗದೀಕ್ಷೆಯ ಸುದ್ದಿಯು ಪಸರಿಸಿತ್ತು. ಅಲ್ಲಿಯ ಜನರೂ ಈತನು ಪ್ರಪಂಚ ತ್ಯಾಗಮಾಡಿದ್ದಕ್ಕೆ ದುಃಖಿಸುತ್ತಿದ್ದರು.

ಈ ಕೌಲಬಂಗಾಲದ ರಾಜಧಾನಿಯ ಹೆಸರು ಪೌಲಾ ಎಂಬ ಪಟ್ಟಣವಾಗಿತ್ತು. ಆ ಪಟ್ಟಣದಲ್ಲಿ ತಿಲೋಕಚಂದನೆಂಬ ಹೆಸರಿನ ರಾಜನು ರಾಜ್ಯವನ್ನು ಪಾಲಿಸುತ್ತಿದ್ದನು. ಆ ರಾಜನು ಬಹಳ ಪ್ರತಾಪಿಯಿದ್ದು, ಗೋಪೀಚಂದನಂತೆ ವೈಭವಸಂಪನ್ನನಾಗಿದ್ದನು. ಅವನ ಹತ್ತರ ಕುದುರೆ, ಆನೆ, ರಥ, ಧನ, ಧಾನ್ಯ, ಇವುಗಳು ಸಮೃದ್ಧಿಯಾಗಿದ್ದವು. ಮಹಾಕಾಲನನ್ನೂ ಶಾಸನ ಮಾಡುವಷ್ಟು ಸಾಮರ್ಥ್ಯವುಳ್ಳ ಸೈನ್ಯವು ಆ ರಾಜನಲ್ಲಿ ಯಾವಾಗಲೂ ಸಿದ್ಧವಾಗಿತ್ತು. ಈ ತಿಲೋಕಚಂದನು ಗೋಪೀಚಂದನಿಗೆ ಆಪ್ತನಾಗಿದ್ದನು. ಗೋಪೀಚಂದನ ತಂಗಿಯಾದ ಚಂಪಾವತಿಯನ್ನು ಈ ತಿಲೋಕಚಂದನ ಮಗನಿಗೆ ಕೊಟ್ಟಿತ್ತು. ಚಂಪಾವತಿಯು ತರುಣಿಯೂ, ರೂಪಸಂಪನ್ನಳೂ ಆಗಿದ್ದು, ತನ್ನ ಅತ್ತೆ-ಮಾವಂದಿರೊಡನೆಯೂ, ಅತ್ತಿಗೆ-ನಾದಿನಿಯರೊಡನೆಯೂ ಪ್ರೀತಿಯಿಂದಲೂ ಸರಳಮನಸ್ಸಿನಿಂದಲೂ ವರ್ತಿಸುತ್ತಿದ್ದಳು.

ಗೋಪೀಚಂದನು ವಿರಕ್ತನಾದ ಸಂಗತಿಯು ತಿಲೋಕಚಂದನಿಗೆ ಗೊತ್ತಾಗಿತ್ತು. ಆತನಿಗೆ ಗೋಪೀಚಂದನ ಈ ವೃತ್ತಿಯು ಸರಿದೋರಲಿಲ್ಲ. ಆದ್ದರಿಂದ ತಿಲೋಕಚಂದನೂ, ಅವನ ಕುಟುಂಬದ ಜನರೂ ತಮ್ಮ ತಮ್ಮೊಳಗೆ ಈ ಮೇರೆಗೆ ಮಾತಾಡುತ್ತಿದ್ದರು:—“ಭಳಿರೇ! ಗೋಪೀಚಂದ!! ರಾಜ್ಯವನ್ನು ತ್ಯಜಿಸಿ, ಪರಟೆಯನ್ನು ತೆಗೆದುಕೊಂಡ ನಿನ್ನಂಥ ಮೂರ್ಖನಿಗೆ ಏನೆನ್ನಬೇಕು? ಮೃತ್ಯುವಿನ ಮುಖದಲ್ಲಿ ಬೀಳುವ ಸಮಯವು ಬಂದರೂ, ಶ್ರೇಷ್ಠ ಜನರಿಗೆ ಭಿಕ್ಷೆಯನ್ನು ಬೇಡಲಿಕ್ಕೆ ನಾಚಿಕೆ ಬರುತ್ತದೆ. ಕೈಯಲ್ಲಿ ಜೋಳಿಗೆಯನ್ನು ಸ್ವೀಕರಿಸಿ ಮನೆ ಮನೆಗೆ ತಿರುಗುವದು ಹ್ಯಾಗೆ ನಿನ್ನ ಮನಸ್ಸಿನಲ್ಲಿ ಉದ್ಭವಿಸಿತು? ಈ ಗೋಪೀಚಂದನು ರಾಜಕುಲಕ್ಕೆ ಕಲಂಕ ಹಚ್ಚಿದನು. ಈ ಮೂರ್ಖನು ಯಾವ ದೇಶಕ್ಕಾದರೂ ಹೊರಟು ಹೋಗಲಿಲ್ಲ. ನಮ್ಮ ಗ್ರಾಮಕ್ಕೆ ಯಾತಕ್ಕೆ ಬಂದಿರುವನೋ ಯಾರಿಗೆ ಗೊತ್ತಾಗಬೇಕು? ಮೈನಾವತಿಯಾದರೂ ಮಗನನ್ನು ಈ ಯೋಗಮಾರ್ಗದಿಂದ ಪರಾಙ್ಮುಖನನ್ನಾಗಮಾಡಬಾರದೇ? ಮಗನನ್ನು ಭಿಕ್ಷೆಗೆ ಕಳಿಸಿ ತಾನು ರಾಜ್ಯಪದವಿಯು

ಮೇಲೆ ಕುಳಿತಳು. ಹೀಗೆ ಮಾಡಲಿಕ್ಕೆ ಆಕೆಗೆ ಹೇಗೆ ನಾಚಿಕೆ ಬರಲಿಲ್ಲವೋ ತಿಳಿಯದು! ಎಲ್ಲಿಯ ಜಾಲಂದರನೋ ಏನೋ? ಆತನ ಭಜನೆ ಮಾಡಹತ್ತಿ ಮೈನಾವತಿಯು ತನ್ನ ಕೈಯಿಂದಲೇ ತನ್ನ ಮನೆಯನ್ನು ಸುಟ್ಟುಕೊಂಡಳು. ಈಕೆಯು ಎಂಥ ತಾಯಿಯು ನೋಡಿದಿರಾ! ಬಂಗಾಲೀ ಬೈರಾಗಿಯಾದ ಜಾಲಂದರನ ಮಾತುಗಳನ್ನು ಕೇಳಿ ತನ್ನ ಮಗನನ್ನು ಭಿಕ್ಷೆ ಬೇಡಲಿಕ್ಕೆ ಅಟ್ಟಿದಳು. ಈಕೆಯು ಚಾಂಡಾಲಳು! ಮಹಾಪಾಪಿಣಿಯು!! ''

ಈ ಮೇರೆಗೆ ಮಾಡುವ ನಿಂದೆಯು ಚಂಪಾವತಿಯ ಕಿವಿಯವರೆಗೆ ತಲ್ಪಿತು. ಆವಳು ತನ್ನ ಮನಸ್ಸಿನಲ್ಲಿ ಬಹಳ ಖಿನ್ನಳಾದಳು. ಗೋಪೀಚಂದನ ಗುಣಗಳನ್ನು ವರ್ಣಿಸುತ್ತ ತನ್ನಷ್ಟಕ್ಕೆ ತಾನೇ ದುಃಖಿಸಹತ್ತಿದಳು. ಅವಳು ಅತ್ತಿಗೆ- ನಾದಿನಿಯರ ಮಾತಿನಿಂದ ಜರ್ಜರಿತಳಾದಳು. ಅವಳಿಗೆ ಜನರಲ್ಲಿ ಮೋರೆಯೆತ್ತಿ ಆಡ್ಡಾಡುವದೇ ಕಷ್ಟವಾಯಿತು. ಇಂಥ ಸ್ಥಿತಿಯಲ್ಲಿ ಬದುಕಿರುವದಕ್ಕಿಂತ ಮರಣಹೊಂದುವದೇ ಲೇಸೆಂದು ಅವಳಿಗೆ ತೋರ ಹತ್ತಿತು.

ಹೀಗಿರಲು ಗೋಪೀಚಂದನು ಗೌಲ ಪಟ್ಟಣದಲ್ಲಿ ಸಂಚರಿಸುತ್ತ ಒಂದು ಜಲಾಶಯದ ಬಳಿಗೆ ಹೋಗಿ ಕುಳಿತನು; ಮತ್ತು ಕೊಂಬನ್ನು ಊದಿ ಹರಿಭಜನೆಯನ್ನು ಪ್ರಾರಂಭಿಸಿದನು. ಸ್ವಲ್ಪ ವೇಳೆಯಲ್ಲಿ ಆ ಜಲಾಶಯಕ್ಕೆ ಚಂಪಾವತಿಯ ದಾಸಿಯರು ಬಂದರು. ಗೋಪೀಚಂದನು ವೇಷವನ್ನು ಬದಲಿಸಿದ್ದರೂ, ಆತನ ರಾಜತೇಜವು ಹೋಗಿದ್ದಿಲ್ಲ. ಮೋಡಮುಸುಕಿದರೂ ಸೂರ್ಯನ ತೇಜವು ಕಳೆಗುಂದುವದಿಲ್ಲ; ಕಸ್ತೂರಿಯನ್ನು ವಸ್ತ್ರದಲ್ಲಿ ಮುಚ್ಚಿಟ್ಟರೂ ಆದರ ಸುವಾಸನೆಯು ಅಡಗುವದಿಲ್ಲ. ಅದರಂತೆಯೇ ಗೋಪೀಚಂದನ ತೇಜಸ್ಸು ಕಳೆಗುಂದಿದ್ದಿಲ್ಲ. ಅವನು ಯತಿ ವೇಷವನ್ನು ಧರಿಸಿದ್ದರೂ ದಾಸಿಯರು ಅವನ ಗುರುತನ್ನು ಹಿಡಿಯದೆ ಬಿಡಲಿಲ್ಲ. ಗೋಪೀಚಂದನ ಗುರುತು ಹಿಡಿದು ಅವರು ರಾಜಮಂದಿರಕ್ಕೆ ಹೋದರು; ಮತ್ತು ರಾಜನಿಗೂ, ರಾಜಸೇವಕರಿಗೂ, ಸಮಸ್ತ ದಾಸಿಯರಿಗೂ ಗೋಪೀಚಂದನ ವೃತ್ತಾಂತವನ್ನು ಹೇಳಿದರು. ಅದನ್ನು ಕೇಳಿ ರಾಜನು ಬಹಳ ಉದಾಸೀನನಾದನು. ಅವನು ತನ್ನ ಮನಸ್ಸಿನಲ್ಲಿ—ಈ ಹುಚ್ಚನು ನಮ್ಮ ಗ್ರಾಮಕ್ಕೆ ಏಕೆ ಬಂದಿರುವನು? ಈಗ ಈ ಊರಲ್ಲಿ ಬಿಕ್ಕೆ ಬೇಡಹತ್ತಿದರೆ, ನಮಗೆಷ್ಟು

ಗೌರವವು! ಈ ಪಟ್ಟಣದ ಹೊರತು ಅನ್ಯ ಪಟ್ಟಣವು ಇವನಿಗೆ ದೊರಕ ಲಿಲ್ಲವೇ? ಎಂದು ವಿಚಾರ ಮಾಡಿ ಅವನು ತನ್ನ ಜನರಿಗೆ ಹೇಳಿದ್ದೇನಂದರೆ, "ನೀವು ಯಾರಾದರೂ ಹೋಗಿ ಆ ಗೋಪೀಚಂದನನ್ನು ಕರೆತಂದು ಈ ಅಶ್ವಶಾಲೆಯಲ್ಲಿ ಕೂಡಿಸಿರಿ; ಆ ಸ್ಥಳದಲ್ಲಿ ಅವನಿಗೆ ಗುಪ್ತರೀತಿಯಿಂದ ಉಣ್ಣಲಿಕ್ಕೆ ಹಾಕಿರಿ; ಮತ್ತು ಯುಕ್ತಿ ಪ್ರಯುಕ್ತಿಗಳಿಂದ ಅವನನ್ನು ದೂರ ದೇಶಕ್ಕೆ ಕಳಿಸಿ ಬಿಡಿರಿ."

ಹೀಗೆಂದು ನುಡಿದು ರಾಜನು ಸಭೆಗೆ ದಯಮಾಡಿಸಿದನು. ರಾಜಾಜ್ಞೆ ಯಂತೆ ಕೆಲವು ದಾಸಿಯರು ಜಲಾಶಯಕ್ಕೆ ಹೋಗಿ, ಗೋಪೀಚಂದನನ್ನು ಉದ್ದೇಶಿಸಿ:—"ಹೇ ಗೋಪೀಚಂದರಾಜನೇ, ನಿನ್ನನ್ನು ಚಂಪಾವತಿಯು ಭೆಟ್ಟಿಯ ಸಲುವಾಗಿ ಕರೆದಿರುವಳು" ಎಂದು ನುಡಿದರು.

ತಾನು ಸರ್ವಸಂಗ ಪರಿತ್ಯಾಗ ಮಾಡಿ ಗೋಸಾವಿಯಾದ್ದರಿಂದ ತನಗೆ ಯಾರ ಸಂಬಂಧವೂ ಉಳಿದಿಲ್ಲೆಂಬದನ್ನು ಗೋಪೀಚಂದನು ಅರಿತು ಕೊಂಡಿದ್ದನು. ಆದರೂ ಲೌಕಿಕಾರ್ಥವಾಗಿ ತಂಗಿಯ ಭೆಟ್ಟಿಗೆ ಆ ದಾಸಿ ಯರ ಹಿಂದಿನಿಂದ ನಡೆದನು. ದಾಸೀಜನರು ಅವನನ್ನು ಅಶ್ವಶಾಲೆಗೆ ಕರದೊಯ್ದು ಕೂಡ್ರಿಸಿದರು. ಚಂಪಾವತಿಯನ್ನು ಇಲ್ಲಿಗೆ ಕಳಿಸಿಕೊಡು ವೆವು. ಎಂದು ಹೇಳಿ ಅಲ್ಲಿಂದ ಹೊರಟು ಹೋದರು.

ದಾಸೀಜನರು ಆ ಸಂಗತಿಯನ್ನು ರಾಣಿಗೆ ತಿಳಿಸಿದರು. ಆಕೆಯು ತನ್ನ ಸೊಸೆಯ ಅಣ್ಣನು ಬಂದಿರುವನೆಂದು ತಿಳಿದು ತನ್ನ ದಾಸಿಯ ಜನರಿಂದ ಒಂದು ಪಾತ್ರೆಯಲ್ಲಿ ಸಾಕಷ್ಟು ಆಹಾರವನ್ನು ಬಡಿಸಿ ಗೋಪೀಚಂದನ ಕಡೆಗೆ ಕಳಿಸಿಕೊಟ್ಟಳು. ಅವಳು ಅಶ್ವಶಾಲೆಗೆ ತೆಗೆದುಕೊಂಡು ಹೋಗಿ ಅದನ್ನು ಆ ರಾಜಪುತ್ರನ ಮುಂದೆ ಇರಿಸಿದಳು. ಅವನ ಭೋಜನವು ಮುಗಿಯುವಷ್ಟರಲ್ಲಿ ಚಂಪಾವತಿಯು ದರ್ಶನಕ್ಕೆ ಬರುವಳೆಂದು ಹೇಳಿ ಆ ದಾಸಿಯು ಹೊರಟು ಹೋದಳು.

ಆ ಅನ್ನವನ್ನು ನೋಡಿ ಗೋಪೀಚಂದನು ತನ್ನ ಮನಸ್ಸಿನಲ್ಲಿ-ಅನುಕೂಲ ಸ್ಥಿತಿಯಲ್ಲಿಯೂ ಪ್ರತಿಕೂಲಸ್ಥಿತಿಯಲ್ಲಿಯೂ ಎಷ್ಟು ಅಂತರವದೆ ನೋಡಿರಿ! ಜಗತ್ತಿನವರು ಸಂಪತ್ತಿಗಾಗಿಯೇ ಪ್ರೀತಿಸುವರು! ಹೇಗೇ ಇರಲಿ, ಈಗ ನಾನು ಸನ್ಯಾಸವನ್ನು ಸ್ವೀಕರಿಸಿದ್ದೇನೆ. ಸುಖದುಃಖ, ಶತ್ರುಮಿತ್ರ, ಮಾನಾಪಮಾನ

ಇವುಗಳಲ್ಲಿ ಭೇದ ಉಳಿದಿಲ್ಲ. ಈ ಮಾನಾಪಮಾನದ ಗೊಂದಲದಲ್ಲಿ ಬಿದ್ದು ಪ್ರಾಪಂಚಿಕ ಮನುಷ್ಯನಂತೆ ಕಷ್ಟಪಡುವದು ನನ್ನ ಕೆಲಸವಲ್ಲ. ಯೋಗಿಗಳು ಮಾನಾಪಮಾನಗಳನ್ನು ಸರಿಯಾಗಿ ಭಾವಿಸುತ್ತಾರೆ. ಅನ್ನವು ಚೈತನ್ಯ ಬ್ರಹ್ಮದ ಜೀವನವಿದ್ದದರಿಂದ ಅದು ಬ್ರಹ್ಮರೂಪವೇ ಹೌದು! ಅನ್ನಬ್ರಹ್ಮ ಸ್ವರೂಪವನ್ನು ಧಿಃಕರಿಸುವದರಲ್ಲಿ ಸುಖವು ಒದಗುವದು ಶಕ್ಯವಿಲ್ಲ, ಹೀಗೆಂದು ಗೋಪೀಚಂದನು ಭೋಜನ ಮಾಡಹತ್ತಿದನು.

ಆತನ ಭೋಜನ ನಡೆದಿರಲು ಅಂತಃಪುರದೊಳಗಿನ ರಾಜಸ್ತ್ರೀಯರು ಕಿಡಿಕೆಯೊಳಗಿಂದ ಅವನನ್ನು ನೋಡಹತ್ತಿದ್ದರು. ಅವರೊಳಗಿನ ಕೆಲವರು ತನ್ನ ಆಪ್ತರ ಮನೆಗೆ ಬಂದು ಅಶ್ವಶಾಲೆಯಲ್ಲಿ ಸಿಭ್ಭಯದಿಂದ ಭೋಜನವನ್ನು ಮಾಡುತ್ತಾನೆ ಇದು ಎಂಥ ನಿರ್ಲಜ್ಜತನವು! ಈತನ ತಂಗಿಯನ್ನು ಕರೆತಂದು ಅಣ್ಣನ ಡೌಲನ್ನು ತೋರಿಸೋಣ ಎಂದರು.

ಚಂಪಾವತಿಯನ್ನು ಅಲ್ಲಿಗೆ ಕರೆತಂದು ಆಕೆಯ ನಾದಿನಿಯರು ಚೇಷ್ಟೆ ಮಾಡಹತ್ತಿದರು ಗೋಪೀಚಂದನ ಕಡೆಗೆ ಕೈ ಮಾಡಿ—ನೋಡಿದೆಯಾ ನಿಮ್ಮ ಅಣ್ಣನನ್ನು? ಮಾನಾಪಮಾನವನ್ನು ಒದಿಗಿಟ್ಟು ಈ ಅಶ್ವಶಾಲೆಯಲ್ಲಿ ಉಣ್ಣುತ್ತಲಿದ್ದಾನೆ ನೋಡಿರಿ! ರಾಜಸಂಪತ್ತಿಯನ್ನು ತ್ಯಾಗಮಾಡಿ ನಾಯಿಯಂತೆ ಹಳ್ಳ ಕೊಳ್ಳಗಳನ್ನು ತಿರುಗುವ ಈ ಗೋಪೀಚಂದನಿಗೆ ಧಿಃಕಾರವಿರಲಿ! ರಾಜಪದವಿಯನ್ನು ಬಿಟ್ಟು ವೈರಾಗಿಯಾಗಿ ಏನು ಸಾಧಿಸಿಕೊಳುತ್ತಿರಬಹುದು! ಪ್ರಾರಬ್ಧದ ಯೋಗದಿಂಗ ಇವನ ಕೈಯಲ್ಲಿ ಜೋಳಿಗೆಯು ಪ್ರಾಪ್ತವಾಗಿದೆ, ಇರಲಿ, ಇವನು ಬೀಗರುಬಿಜ್ಜರ ಮನೆಗೆ ಯಾಕೆ ಬಂದಿರಬಹುದು! ಕುದುರೆಯ ಲಾಗಾದಲ್ಲಿ ಕುಳಿತು ಉಣ್ಣಲಿಕ್ಕೆ ಇವನಿಗೆ ನಾಚಿಕೆ ಒರಲಿಲ್ಲವೆ?

ಚಂಪಾವತಿಯು ಸ್ತ್ರೀಯರ ಈ ನಿಂದೆಯನ್ನು ಕೇಳಿ ಬಹಳ ದುಃಖಿಸಹತ್ತಿದಳು ಆಕೆಯು ಸ್ವಭಾವತಃ ಕೋಮಲ ಮನಸ್ಸಿನವಳು. ತನ್ನ ಅಣ್ಣನ ಹೀನ ಸ್ಥಿತಿಯನ್ನು ಕಂಡು ಅವಳ ಹೃದಯಕ್ಕೆ ಸಹಸ್ರಚೇಳುಗಳು ಕಚ್ಚಿದಹಾಗಾಯಿತು. ಅವಳು ಅಲ್ಲಿ ಒಂದು ಕ್ಷಣ ಸಹ ನಿಲ್ಲಲಿಲ್ಲ. ಅವಳು ತನ್ನ ಪ್ರಾಣದ ಮೇಲಿನ ಮಮತೆಯನ್ನು ತೆಗೆದುಹಾಕಿದಳು. ದುಃಖದ ಆವೇಶದಲ್ಲಿ ವಿಚಾರಶೂನ್ಯಳಾಗಿ ವಿಷಪಾನದಿಂದ ತನ್ನ ಜೀವನಯಾತ್ರೆಯನ್ನು ಮುಗಿಸಿದಳು!

ಇತ್ತ ಅಶ್ವಶಾಲೆಯಲ್ಲಿ ಗೋಪೀಚಂದನು ತನ್ನ ಭೋಜನವನ್ನು ಮುಗಿಸಿದನು. ಅವನು ತಂಗಿಯ ಮಾರ್ಗವನ್ನು ನೋಡುತ್ತ ಕುಳಿತನು. ಅಷ್ಟು ವೇಳೆಯಲ್ಲಿ ಒಬ್ಬ ದಾಸಿಯು ಅಲ್ಲಿಗೆ ಬಂದು ಹೇಳಿದಳೇನಂದರೆ—ಚಂಪಾವತಿಯ ಮನಸ್ಸಿನಲ್ಲಿ ತಮ್ಮ ಭೆಟ್ಟಿಯನ್ನು ತೆಗೆದುಕೊಳ್ಳುವದು ಅದೆ; ಆಕೆಯು ಅತ್ತೆಯ ಸ್ವಾಧೀನಳು. ಆದ್ದರಿಂದ ಆಕೆಯೇ ಈ ಅಶ್ವಶಾಲೆಗೆ ಬರುವದು ಯೋಗ್ಯವೆನಿಸುವದಿಲ್ಲ. ಆದ್ದರಿಂದ ನೀವು ಇಲ್ಲಿ ಸ್ವಸ್ಥವಾಗಿ ರಾತ್ರಿಯನ್ನು ಕಳೆಯಿರಿ. ಆಕೆಯು ಗುಪ್ತರೀತಿಯಿಂದ ಇಲ್ಲಿಗೆ ಬರುವಳು. ದಾಸಿಯು ಅಂದೋಣದಂತೆ ತನ್ನ ತಂಗಿಯ ಮಾರ್ಗವನ್ನು ನಿರೀಕ್ಷಿಸುತ್ತ ಅವನು ಅಲ್ಲಿಯೇ ಕುಳಿತುಕೊಂಡನು.

ಗೋಪೀಚಂದನಿಗೆ ಹೇಳಿದ ಸಂಗತಿಯನ್ನು ಚಂಪಾವತಿಗೆ ತಿಳಿಸಬೇಕೆಂದು ಆ ದಾಸಿಯು ಚಂಪಾವತಿಯ ಅಂತಃಪುರಕ್ಕೆ ಹೋದಳು. ಆಗ ಚಂಪಾವತಿಯು ವಿಷ ಕೊಂಡಿದ ವಿಷಯವು ಗೊತ್ತಾಯಿತು. ಆಕೆಯು ಒಮ್ಮೆಲೆ ದೊಡ್ಡ ಧ್ವನಿಯಿಂದ ಶೋಕಿಸಲಿಕ್ಕೆ ಪ್ರಾರಂಭಿಸಿದಳು. ಚಂಪಾವತಿಯ ಅತ್ತೆ, ಮಾವ, ನಾದಿನಿ ಅತ್ತಿಗೆ ಮೊದಲಾದವರು ಅಲ್ಲಿಗೆ ಧಾವಿಸಿ ಬಂದರು. ಆವಳ ಸ್ಥಿತಿಯನ್ನು ನೋಡಿ ಎಲ್ಲರೂ ರೋದಿಸಹತ್ತಿದರು. ಈ ಸ್ಥಿತಿಯನ್ನು ಹೊಂದಲಿಕ್ಕೆ ಚಂಪಾವತಿಗೆ ಯಾವ ಕಾರಣವಿರಬಹುದೆಂದು ತರ್ಕಿಸಿದರು. ತನ್ನ ಬಂಧುವಿನ ಸ್ಥಿತಿಗಾಗಿ ಚಂಪಾವತಿಯು ಹೀಗೆ ಮಾಡಿಕೊಂಡಿರಬಹುದೆಂದು ಎಲ್ಲರೂ ತರ್ಕಿಸಿದರು. ಎಲ್ಲ ಜನರೂ ಗೋಪೀಚಂದನನ್ನು ಬಯ್ಯಹತ್ತಿದರು. ಈ ಗೋಪೀಚಂದನು ಯಾಕೆ ಬಂದಿರಬಹುದು. ಈ ದುಷ್ಟನು ತನ್ನ ಮನೆಯನ್ನು ಸುಟ್ಟುಕೊಂಡು ಇಲ್ಲಿಯೂ ಅಗ್ನಿಪ್ರಲಯ ಮಾಡಿದನು. ಹೀಗೆ ಅವನಿಗೆ ದೋಷವನ್ನು ಕೊಟ್ಟು ಅವನನ್ನು ಹೊರಗ ಹಾಕಬೇಕೆಂಬ ಉದ್ಗಾರ ತೆಗೆದರು. ಆ ದುಷ್ಟ ನಷ್ಟ ಗೋಪೀಚಂದನ ಸಲುವಾಗಿ ಚಂಪಾವತಿಯು ಮರಣಹೊಂದಿದಳು. ಆದ್ದರಿಂದ ಅವನನ್ನು ಕೊಲ್ಲಬೇಕೆಂದು ಕೆಲವರು ಅನ್ನತೊಡಗಿದರು. ಚಂಪಾವತಿಯ ಕಡೆಗೆ ನೋಡಿ ಅವಳ ಪ್ರೇಮದ ಸ್ತ್ರೀಯರು ಶೋಕಮಾಡಹತ್ತಿದರು. ಕೆಲವರು ಹಣೆಯನ್ನು ಬಡಕೊಳ್ಳಹತ್ತಿದರು; ಕೆಲವರು ಎದೆ ಎದೆ ಬಡಕೊಳ್ಳಹತ್ತಿದರು. ಕೆಲವರು ಆಕೆಯ ಸದ್ಗುಣಗಳನ್ನು ಹೊಗಳಹತ್ತಿ

ದರು. ಕೆಲವರು ಆಕೆಯ ಗಂಡನ ದುರ್ದೈವಕ್ಕಾಗಿ ಖೇದವನ್ನು ವ್ಯಕ್ತ ಗೊಳಿಸಿದರು. ಕೆಲವರು ಆಕೆಯ ಸೌಂದರ್ಯ, ಸ್ವಭಾವ, ಶೀಲ, ಪಾವಿತ್ರತೆಯನ್ನು ಕೊಂಡಾಡಹತ್ತಿದರು. ಕೆಲವರು ಆಕೆಯ ಪತಿಭಕ್ತಿಯನ್ನು ಹೊಗಳಿದರು. ಈ ಮೇರೆಗೆ ವಿಲಾಪಯುಕ್ತ ಕೋಲಾಹಲದಿಂದ ಚಂಪಾವತಿಯ ಮಂದಿರವು ತುಂಬಿಬಿಟ್ಟಿತು.

ಈ ಹಾಹಾಕಾರವು ಅಶ್ವಶಾಲೆಯೊಳಗಿನ ಗೋಪೀಚಂದನ ಕಿವಿಯವರೆಗೆ ಹೋಯಿತು. ಒಮ್ಮಿಂದೊಮ್ಮೆ ಹೀಗಾಗಲಿಕ್ಕೆ ಕಾರಣವೇನೆಂದು ಜನರನ್ನು ವಿಚಾರಿಸಿದನು. ಅವರು ಚಂಪಾವತಿಯ ಎಲ್ಲ ಸಂಗತಿಯನ್ನು ತಿಳಿಸಿದರು. ತನ್ನ ಸಲುವಾಗಿಯೇ ತನ್ನ ತಂಗಿಯು ನಾಶಹೊಂದಿದಳೆಂದು ಮೋಹದಿಂದ ಅಳಹತ್ತಿದನು. ನನ್ನಿಂದಲೇ ನನ್ನ ತಂಗಿಯು ಪ್ರಾಣದಿಂದ ಮುಕ್ತಳಾದಳೆಂದು ಜನರು ನನಗೆ ದೋಷವನ್ನು ಕೊಡುವರು: ಮತ್ತು ಅಪಕೀರ್ತಿಯು ಬರುವದು; ಆಕೆಯ ಆಪ್ತ ಇಷ್ಟರು ನನಗೆ ಶಪಿಸುವರು. ಹೀಗೆ ವಿಚಾರಮಾಡಿ ಗೋಪೀಚಂದನು ಉದಾಸೀನನಾದನು. ಅವನ ಕಣ್ಣೊಳಗಿಂದ ಒಂದೇಸವನೆ ಅಶ್ರುಧಾರೆಗಳು ಸುರಿಯಹತ್ತಿದವು. ಇಷ್ಟರಲ್ಲಿ ಪರಿವಾರದವರು ಚಂಪಾವತಿಯ ಪ್ರೇತಯಾತ್ರೆಯನ್ನು ತೆಗೆದರು. ಭಗಿನಿಯ ಪ್ರೇತವನ್ನು ನೋಡಿ ಗೋಪೀಚಂದನು ಎಲ್ಲರೊಡನೆ ಸ್ಮಶಾನದ ಕಡೆಗೆ ಸಾಗಯಹತ್ತಿದನು. ಮಾರ್ಗದಲ್ಲಿ ಹೋಗುವಾಗ ಅವನು ಶೋಕಿಸುವದನ್ನು ನಿಲ್ಲಿಸಿದನು. ಆತನ ಮನಸ್ಸಿನಲ್ಲಿ ಬೇರೆ ವಿಚಾರವು ಉದ್ಭವಿಸಿತು. ನಾನು ಯೋಗ ದೀಕ್ಷೆಯನ್ನು ತೆಗೆದುಕೊಂಡದ್ದರಿಂದ ಎಲ್ಲರೂ ನನ್ನ ಛಲನೆಯನ್ನು ಮಾಡುವರು; ಆದರೆ ಈಗ ಎಲ್ಲ ಜನರಿಗೆ ನನ್ನ ನಾಥಪಂಥದವರ ಸಾಮರ್ಥ್ಯವನ್ನು ತೋರಿಸಿ ಚಕಿತರನ್ನಾಗಮಾಡಬೇಕೆಂಬ ವಿಚಾರವು ಅವನ ಮನಸ್ಸಿನಲ್ಲಿ ಬರಹತ್ತಿತು. ಪಾರ್ವತಿಯ ಪತಿಯಾದ ಶಂಕರನನ್ನು ಬೈರಾಗಿಯೆಂದು ದಕ್ಷಪ್ರಜಾಪತಿಯು ನಿಂದಿಸಲು, ಶಂಕರನು ದಕ್ಷಪ್ರಜಾಪತಿಯ ಶಿರಸ್ಸನ್ನು ಹಾರಿಸಿ ತನ್ನ ಪರಾಕ್ರಮವನ್ನು ವ್ಯಕ್ತಗೊಳಿಸಿದನು. ಅಷ್ಟಾವಕ್ರನ ಅಮಂಗಲ ದೇಹದ ಬಗ್ಗೆ ನಿಂದೆ ಮಾಡಲು ಅವನು ತನ್ನ ಸಾಮರ್ಥ್ಯದಿಂದ ಶತಪುತ್ರನನ್ನು ಗೆದ್ದು, ಬ್ರಾಹ್ಮಣರನ್ನು ಮುಕ್ತಮಾಡಿ ಪುರುಷಾರ್ಥವನ್ನು ಸಾಧಿಸಿಕೊಂಡನು. ವಾಮನನನ್ನು ಬಲಿರಾಜನು ದೂಷಿಸಲು, ಅವ

ನನ್ನು ಬಲಿಯು ಪಾತಾಳದಲ್ಲಿ ತುಳಿದು ತನ್ನ ಕೀರ್ತಿಯನ್ನು ಪಸರಿಸಿದನು. ಅದರಂತೆ ನನ್ನನ್ನು ಕ್ಷುದ್ರ ಪ್ರಾಣಿಯೆಂದು ತಿಳಿಯುವ ಈ ಜನರಿಗೆ ಅಲೌಕಿಕ ಸಾಮರ್ಥ್ಯವನ್ನು ತೋರಿಸಿಯೇ ತೀರಬೇಕೆಂದು ಗೋಪೀಚಂದನು ನಿಶ್ಚಯಿಸಿ ಕೊಂಡನು.

ಪ್ರೇತಯಾತ್ರೆಯು ಸ್ಮಶಾನಕ್ಕೆ ಮುಟ್ಟಿತು. ಜನರು ಇನ್ನು ಚಂಪಾವತಿಯ ಚಿತೆಗೆ ಅಗ್ನಿಯನ್ನು ಹಚ್ಚತಕ್ಕವರು; ಆದರೆ ಅಷ್ಟರಲ್ಲಿ ಗೋಪೀಚಂದನು ಚಿತೆಯ ಹತ್ತರ ನಿಂತುಕೊಂಡು ಜನರನ್ನು ಕುರಿತು:—"ಹೇ ಜನರುಗಳಿರಾ! ನೀವು ಈ ಪ್ರೇತವನ್ನು ದಹನ ಮಾಡಬೇಡಿರಿ. ನಾನು ನನ್ನ ಸದ್ಗುರುವಾದ ಜಾಲಂಧರನನ್ನು ಇಲ್ಲಿಗೆ ಕರೆತಂದು ಈ ಪ್ರೇತವನ್ನು ಎಬ್ಬಿಸುವೆನು, ನೀವು ನನ್ನ ಮಾತನ್ನು ಸತ್ಯವೆಂದು ತಿಳಿಯಿರಿ. ನಾನು ಸನ್ನಿಧಿಯಲ್ಲಿರಲು, ನನ್ನ ತಂಗಿಯು ಮರಣ ಹೊಂದಿದರೆ ನಾನು ನಾಥಪಂಥವನ್ನು ಸ್ವೀಕರಿಸಿದ್ದರ ಫಲವೇನು? ಆಸ್ತಿಕ ಋಷಿಗಳು ತನ್ನ ಮಾತುಲ ಕುಲವನ್ನು ಸಂರಕ್ಷಿಸಿದರು. ಅದರಂತೆ ನಾನು ಈ ಚಂಪಾವತಿಯನ್ನು ರಕ್ಷಿಸುವೆನು ಎಂದನು. ಗೋಪೀಚಂದನ ಈ ಮಾತಿನಿಂದ ಯಾರಿಗೂ ವಿಶ್ವಾಸವು ಹುಟ್ಟಲಿಲ್ಲ. ಶುಷ್ಕವಾದಂಥ ಗಿಡಗಳಿಗೆ ಎಂದಾದರೂ ನವ ಪಲ್ಲವಗಳು ಒಡೆಯುವದುಂಟೇ? ಅದರಂತೆ ಸತ್ತವರು ಬದುಕುವದು ಶಕ್ಯವೇ? ಎಂದು ಯೋಚಿಸಿ ಗೋಪೀಚಂದನನ್ನು ಧಿಕ್ಕರಿಸಿ ಚಿತೆಗೆ ಬೆಂಕಿಯನ್ನು ಹಚ್ಚಹೋದರು. ಆದರೆ ತಾನು ಎಷ್ಟು ಪರಿಯಿಂದ ಹೇಳಿದರೂ ಈ ಜನರು ಕೇಳುವದಿಲ್ಲೆಂದು ತಿಳಿದು ಗೋಪೀಚಂದನು ತಾನೇ ಚಿತೆಯ ಮೇಲೇರಿ ಕುಳಿತು ನುಡಿದನೇನಂದರೆ:— ಜನರುಗಳಿರಾ! ನಾನು ಎಷ್ಟು ಬಗೆಯಿಂದ ಹೇಳಿದರೂ ನಿಮಗೆ ನನ್ನ ಮಾತಿನಲ್ಲಿ ವಿಶ್ವಾಸ ಹುಟ್ಟಲಿಲ್ಲ. ಚಂಪಾವತಿಯ ದೇಹವನ್ನು ಸುಡುವದಾದರೆ, ನನ್ನನ್ನು ಸಹಿತವಾಗಿ ಸುಟ್ಟುಬಿಡಿರಿ. ನನ್ನ ಮರಣವಾರ್ತೆಯನ್ನು ನನ್ನ ಸಮರ್ಥ ಗುರುಗಳು ತಿಳಿದು, ನಿಮ್ಮ ಗ್ರಾಮವನ್ನು ಸುಟ್ಟು ಸೂರೆಗೊಳ್ಳುವರು. ಆಗ ನನ್ನ ಗುರುಗಳ ಯೋಗ್ಯತೆಯು ನಿಮಗೆ ಗೊತ್ತಾಗುವದು."

ಈ ಮೇರೆಗೆ ಗೋಪೀಚಂದನು ಹಟ ಹಿಡಿಯಲು, ಚಂಪಾವತಿಯ ಮಾವನಾದ ತಿಲೋಕಚಂದನು ಸಂತಾಪಗೊಂಡನು. ಆದರೂ ಅವನು ಉಪಾಯಾಂತರದಿಂದ ಕೆಲಸ ಮಾಡಿಕೊಳ್ಳಬೇಕೆಂದು ಗೋಪೀಚಂದನನ್ನು ಕುರಿತು

ನುಡಿದನೇನಂದರೆ:—" ಎಲೋ ಗೋಪೀಚಂದ, ನೀನು ನಿನ್ನ ಗುರುಗಳ ಪೌರುಷವನ್ನು ಬಹಳವಾಗಿ ಹೇಳುತ್ತೀ; ಆದ್ದರಿಂದ ಅವಶ್ಯವಾಗಿ ಅವರನ್ನು ಕರೆತಂದು ಅವರ ಬೆಳಕನ್ನು ಇಲ್ಲಿ ಕೆಡಹು. ಈಗ ನಿನಗೆ ನಿನ್ನ ತಂಗಿಯ ಎಡಗೈಯನ್ನು ಕಡಿದುಕೊಡುತ್ತೇನೆ; ಇದನ್ನು ನಿನ್ನ ಗುರುಗಳಿಗೆ ತೋರಿಸಿ ಅವರಲ್ಲಿ ಪ್ರೇಮವನ್ನುಂಟುಮಾಡು; ನೀನು ಬರುವವರೆಗೆ ಈ ಪ್ರೇತವನ್ನು ದಹಿಸುವದಿಲ್ಲ. "

ತಿಲೋಕಚಂದನ ಮಾತು ಗೋಪೀಚಂದನಿಗೆ ಒಪ್ಪಿಗೆಯಾಯಿತು. ಅವನು ಚಿತೆಯಿಂದ ಕೆಳಗಿಳಿದು ಬಂದು ತಂಗಿಯ ಎಡಗೈಯನ್ನುತಕ್ಕೊಂಡು ಗುರುಗಳ ಹತ್ತಿರಕ್ಕೆ ನಡೆದನು. ಗೋಪೀಚಂದನು ಹೊರಟು ಹೋಗಲು, ಪೀಡೆಯು ತಪ್ಪಿತೆಂದು ತಿಲೋಕಚಂದನು ಚಂಪಾವತಿಯ ಪ್ರೇತವನ್ನು ದಹನ ಮಾಡಿ ಮನೆಗೆ ತೆರಳಿದನು.

ಇತ್ತ ಗೋಪೀಚಂದನು ಗುರುಸ್ಮರಣೆ ಮಾಡುತ್ತ ದಾರೀ ನಡೆಯ ಹತ್ತಿದನು. ಜಾಲಂದರ ಗುರುಗಳು ಹೇಲಾ ಪಟ್ಟಣದಲ್ಲಿದ್ದದರಿಂದ ಅಲ್ಲಿಗೇ ಹೋಗಬೇಕೆಂದು ಅವನು ಹೊರಟಿದ್ದನು. ಈ ಸಂಗತಿಯು ತ್ರಿಕಾಲಜ್ಞ ರಾದ ಜಾಲಂದರ ನಾಥರಿಗೆ ಗೊತ್ತಾಯಿತು. ಕೂಡಲೆ ಅವರು ಪ್ರಯಾ ಣಾಸ್ತ್ರವನ್ನು ಜಪಿಸಿ, ತತ್‌ಕ್ಷಣದಲ್ಲಿ ಗೋಪೀಚಂದನ ಎದುರಿಗೆ ಬಂದು ನಿಂತುಕೊಂಡರು. ಗುರುಗಳ ಆಗಮನವನ್ನು ಕಂಡು ಗೋಪೀಚಂದನಿಗೆ ತುಂಬಾ ಆನಂದವಾಗಿ ತಾನು ಹೊರಟ ಕಾರಣವನ್ನು ಹೇಳಿದನು. ಅದನ್ನು ಕೇಳಿ ಜಾಲಂದರನು ಗೋಪೀಚಂದನಿಗೆ ಅಭಯವನ್ನು ಕೊಟ್ಟು, ಅವನೊ ಡನೆ ಪಾಲ ಪಟ್ಟಣಕ್ಕೆ ಹೋದನು.

ಅಷ್ಟು ಹೊತ್ತಿಗೆ ಚಂಪಾವತಿಯ ದೇಹವು ಭಸ್ಮೀಭೂತವಾಗಿ ಹೋ-ಗಿತ್ತು. ತಿಲೋಕಚಂದನು ಸಭೆಯಲ್ಲಿ ಕುಳಿತುಕೊಂಡಿದ್ದನು. ಆಗ ಅಲ್ಲಿ ಗೋಪೀ ಚಂದನ ನಿಂದೆಯ ವಿಷಯವೇ ಹೊರಟಿತ್ತು. ಅಷ್ಟರಲ್ಲಿ ಗೋಪೀಚಂದನು ಗುರುಗಳೊಡನೆ ಅಲ್ಲಿಗೆ ಬರಲು, ಎಲ್ಲ ಜನರೂ ಸುಮ್ಮನಾದರು. ತಿಲೋಕ ಚಂದನು ಲೌಕಿಕಾರ್ಥವಾಗಿ ಜಾಲಂದರನಿಗೆ ಮನ್ನಣೆ ಮಾಡಿ ಒಂದು ಆಸ ನದ ಮೇಲೆ ಕುಳ್ಳಿರಿಸಿದನು. ಮನಸ್ಸಿನಲ್ಲಿ ಆತನಿಗೆ ಪೂರ್ಣ ತಿರಸ್ಕಾರವಿತ್ತು. ಸರ್ವಾಂತರ್ಯಾಮಿಗಳಾದ ಜಾಲಂದರ ಗುರುಗಳು ಮೌನವನ್ನು ತ್ಯಜಿಸಿ

ಚಂಪಾವತಿಯು ಪ್ರೇತವೆಲ್ಲಿ? ಎಂದು ಕೇಳಿದರು. ಆಗ ತಿಲೋಕಚಂದನು ಅಗ್ನಿನಾರಾಯಣನ ಹೊಟ್ಟೆಯಲ್ಲಿ ಎಂದು ಉತ್ತರ ಕೊಟ್ಟನು. ಬಳಿಕ ಜಾಲಂದರನು ಗೋಪೀಚಂದನ ಬಳಿಯಲ್ಲಿರುವ ಮೃತದೇಹದ ಕೈಯನ್ನಿಸ ಕೊಂಡು ಅದಕ್ಕೆ ಸಂಜೀವಿನೀ ಮಂತ್ರದಿಂದ ಅಭಿಮಂತ್ರಿಸಿ ಚಂಪಾವತಿಯ ಹೆಸರುಗೊಂಡು ಕೂಗಿದನು. ಕೂಡಲೆ ಮೂರ್ತಿಮಂತಳಾದ ಚಂಪಾವತಿಯು ಎದುರಿಗೆ ಬಂದು ನಿಂತುಕೊಂಡಳು. ಈ ಅದ್ಭುತವನ್ನು ಕಂಡು ಸಮಸ್ತರೂ ದಂಗುಬಡಿದುಹೋದರು. ತಿಲೋಕಚಂದನಂತೂ ತತ್ತರಿಸಿ ಜಾಲಂದರನ ಚರಣ ಗಳನ್ನು ಗಟ್ಟಿಯಾಗಿ ಹಿಡಿದು, ಸರ್ವ ಅಪರಾಧಗಳನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ಕ್ಷುದ್ರ ಜನರ ಹೃದಯವನ್ನು ಬಲ್ಲ ಆ ದಯಾವಂತ ನಾದ ನಾಥನು ಅವನ ಸರ್ವಾಪರಾಧಗಳನ್ನು ಕ್ಷಮಿಸಿದನು. ನಾಥನೆಂದರೆ ಪ್ರತ್ಯಕ್ಷ ಶುಕ್ರಾಚಾರ್ಯರೇ ಎಂದು ಎಲ್ಲ ಜನರು ಅವನನ್ನು ಕೊಂಡಾಡಿದರು.

ಬಳಿಕ ನಾಥನು ತಿಲೋಕಚಂದನನ್ನು ಕುರಿತು:—ನೀನು ಈ ಗೋಪೀ ಚಂದನ ಮಗನಾದ ಮುಕ್ತಚಂದನಿಗೆ ಸಹಾಯ ಮಾಡುತ್ತಿರು. ಆರು ತಿಂಗಳವರೆಗೆ ನಾನು ಅವನನ್ನು ರಕ್ಷಿಸುವೆನು. ಆ ಬಳಿಕ ನೀನು ಅವನ ಯೋಗಕ್ಷೇಮವನ್ನು ವಿಚಾರಿಸು, ಎಂದು ಅಪ್ಪಣೆ ಮಾಡಿದನು; ಮತ್ತು ಚಂಪಾವತಿಗೆ ನಾಥಪಂಥದ ಉಪದೇಶವನ್ನು ಮಾಡಿದನು. ಗೌಲಪಟ್ಟಣ ವಾಸಿಗಳೂ, ರಾಜಮಂದಿರ ವಾಸಿಗಳೂ ಯಾವ ನಾಥಪಂಥವನ್ನು ಹಳಿಯು ತ್ತಿದ್ದರೋ, ಅವರೇ ಈಗ ಆ ನಾಥಪಂಥವನ್ನು ಗೌರವಿಸಹತ್ತಿದರು.

ಬಳಿಕ ಗೋಪೀಚಂದನು ಬದರಿಕಾಶ್ರಮಕ್ಕೆ ನಡೆದನು. ಜಾಲಂ ದರನು ಹೇಲಾ ಪಟ್ಟಣಕ್ಕೆ ಹೋದನು. ಅವನು ಅಲ್ಲಿ ಆರು ತಿಂಗಳು ಇದ್ದು ತೀರ್ಥಾಟನಕ್ಕೆ ಹೊರಟು, ಹನ್ನೆರಡು ವರ್ಷಗಳ ಮೇಲೆ ಬದರಿಕಾಶ್ರಮಕ್ಕೆ ಹೋದನು. ಅಷ್ಟರಲ್ಲಿ ಗೋಪೀಚಂದನ ತಪಶ್ಚರ್ಯವು ಪೂರ್ಣವಾಗಿತ್ತು. ಆಗ ಜಾಲಂದರನು ಗೋಪೀಚಂದನಿಂದ ತಪಶ್ಚರ್ಯದ ಉದ್ಯಾಪನೆಯನ್ನು ಮಾಡಿಸಿ ಅವನಿಗೆ ಸರ್ವ ಮಂತ್ರ ಅಸ್ತ್ರಗಳನ್ನು ಉಪದೇಶಿಸಿದನು; ಮತ್ತು ಎಲ್ಲ ದೇವತೆಗಳ ಕಡೆಯಿಂದ ಅವನಿಗೆ ಅನುಗ್ರಹವನ್ನು ಮಾಡಿಸಿದನು. ಈ ಮೇರೆಗೆ ಗುರುಕೃಪೆಯಿಂದ ಗೋಪೀಚಂದನು ಪ್ರತಿ ನಾಥನಾದನು.

---

# ಅಧ್ಯಾಯ ೧೯

## ಶ್ರೀರಾಮ-ಮಾರುತಿ-ಗೋರಕ್ಷ ಇವರ ಪ್ರೇಮಾಲಿಂಗನ.

ಗೋರಕ್ಷನಿಂದ ಕಾನೀಫನಿಗೆ ಜಾಲಂದರನಾಥನ ಸುದ್ದಿಯು ಹತ್ತಿದಂತೆ ಗೋರಕ್ಷನಿಗೆ ಕಾನೀಫನಿಂದ ಮಚ್ಛಿಂದ್ರನಾಥನ ಸುದ್ದಿಯು ಹತ್ತಲು, ಆ ಗುರುಭಕ್ತ ಗೋರಕ್ಷನು ನೆಟ್ಟಗೆ ಸ್ತ್ರೀರಾಜ್ಯಕ್ಕೆ ಹೋದನು. ಅವನು ವಸತಿಯ ಮೇಲೆ ವಸತಿಯನ್ನು ಮಾಡುತ್ತ ಸ್ತ್ರೀರಾಜ್ಯದ ಗಡಿಗೆ ಹೋದನು ಆಗ ಅವನ ಮನಸ್ಸಿನಲ್ಲಿ ಒಂದು ವಿಚಾರವು ಬಂದಿತು. ಏನೆಂದರೆ:—ಗುರುವಾದ ಮಚ್ಛಿಂದ್ರನಾಥನು ಈಗ ಕೀಲೋತಳೆಯ ಸಹವಾಸದಿಂದ ವೈಭವಶಾಲಿಯಾಗಿರುವನು. ಆತನಿಗೆ ವಿಷಯೋಪಭೋಗದ ಸವಿಯು ಹತ್ತಿರುವದು. ಇಂಥ ಸ್ಥಿತಿಯಲ್ಲಿ ಆತನು ಕೇವಲ ಭಿಕಾರಿಯಾದ ನನ್ನನ್ನು ಮಾತಾಡಿಸಬಹುದೇ? ಮೊದಲಿನ ಸಂಬಂಧವನ್ನು ಆತನು ಕಡಿದೊಗೆದರೆ, ಹ್ಯಾಗೆ ಮಾಡಬೇಕು? ಗುರುಗಳೊಡನೆ ಯುದ್ಧಮಾಡುವ ಪ್ರಸಂಗ ಬಂದೀತು. ಯಾವ ಚರಣಗಳನ್ನು ನಾನು ಭಜಿಸುತ್ತಿರುವೆನೋ, ಮತ್ತು ಯಾರ ಚರಣಗಳ ಆಶ್ರಯದ ಬಲದಿಂದ ಇಷ್ಟೊಂದು ಶಕ್ತಿ ಸಂಪನ್ನನಾಗಿರುವೆನೋ ಅಂಥ ಗುರುಮಹಾರಾಜರ ಮೇಲೆ ಶಸ್ತ್ರವನ್ನು ಬಿಡುವ ಪ್ರಸಂಗ ಬಂದರೆ, ನನ್ನ ದುರ್ದೈವಕ್ಕೆ ಸೀಮೆಯೇ ಉಳಿಯುವದಿಲ್ಲ. ನಾನು ಗುರುದ್ರೋಹಿಯಾಗುವೆನು; ನಾನು ಕೇವಲ ಪತಿತನಾಗುವೆನು. ನನ್ನ ಅಪಖ್ಯಾತಿಯು ಲೋಕದಲ್ಲಿ ಹಬ್ಬುವದು ಆದ್ದರಿಂದ ಈ ಕಾಲದಲ್ಲಿ ಹ್ಯಾಗೆ ಮಾಡಬೇಕು? ಗುರುಗಳನ್ನು ಹ್ಯಾಗೆ ಎಚ್ಚರಗೊಳಿಸಬೇಕು? ''

ಈ ಮೇರೆಗೆ ಗೋರಖನು ಯೋಚಿಸಿ ಯಾವ ನಿರ್ಧಾರವೂ ಆಗದೆ ಬಹಳ ಗೊಂದಲದಲ್ಲಿ ಬಿದ್ದನು. ಕಡೆಗೆ ಅವನು ಏನೇ ಆಗಲಿ, ಗುರುಗಳಿಗೆ ಭೆಟ್ಟಿಯಾಗಲೇಬೇಕೆಂಬ ನಿರ್ಧಾರವನ್ನು ಮಾಡಿದನು. ಬಳಿಕ ಅವನು ಸ್ತ್ರೀ

ರಾಜ್ಯದಲ್ಲಿ ಸೇರಲು ಹವಣಿಸಿ ಕೆಲ ದಾರಿಯನ್ನು ಕ್ರಮಿಸಿದನು. ಅಷ್ಟರಲ್ಲಿ ಅವನಿಗೆ ದಾರಿಯಲ್ಲಿ ಕಲಿಂಗ ನಾಮಕಳಾದ ಓರ್ವ ವೇಶ್ಯೆಯು ಭೆಟ್ಟಿಯಾದಳು. ಆಕೆಯು ತನ್ನ ಗಾನ-ವಾದನ ನಿಪುಣತೆಯನ್ನು ಸ್ತ್ರೀರಾಜ್ಯದ ರಾಣಿಗೆ ತೋರಿಸಿ, ಹೇರಳ ದ್ರವ್ಯ ಸಂಪಾದಿಸಬೇಕೆಂದು ತನ್ನ ಪರಿವಾರ ಸಮೇತಳಾಗಿ ಹೊರಟಿದ್ದಳು. ಗಾಯನ-ವಾದನ-ನೃತ್ಯ ಮೊದಲಾದವುಗಳಲ್ಲಿ ಆಕೆಯ ಯೋಗ್ಯತೆಯು ಅಸಾಮಾನ್ಯವಿತ್ತು. ಗೋರಕ್ಷನು ಆಕೆಯನ್ನು ಕುರಿತು ಎಲ್ಲಿಗೆ ಪ್ರಯಾಣ ಮಾಡುತ್ತೀರೆಂದು ಕೇಳಿದನು. ಅದನ್ನು ಕೇಳಿ ವೇಶ್ಯೆಯು ತನ್ನ ಉದ್ದೇಶವನ್ನು ಅರುಹಿದಳು. ಈ ವೇಶ್ಯೆಯು ಸ್ತ್ರೀರಾಜ್ಯದ ರಾಣಿಯ ಬಳಿಗೆ ಹೋಗುತ್ತಾಳೆಂಬದನ್ನು ತಿಳಿದು ಗೋರಕ್ಷನಿಗೆ ಸಮಾಧಾನವಾಯಿತು. ತಾನೂ ಇವಳ ಜೊತೆಗೆ ಹೋದರೆ ಅನಾಯಾಸವಾಗಿ ವೇಷಾಂತರದಿಂದ ಗುರುಗಳನ್ನು ಎಚ್ಚರಗೊಳಿಸಲಿಕ್ಕೆ ಸಹಾಯವಾಗುವದೆಂದು ಭಾವಿಸಿದನು. ಬಳಿಕ ಅವನು ಆ ವೇಶ್ಯೆಯನ್ನು ಕುರಿತು ತಾನೂ ಸ್ತ್ರೀರಾಜ್ಯದ ರಾಣಿಯ ಸಭೆಗೆ ಬರುವ ಇಚ್ಛೆಯನ್ನು ತಿಳಿಸಿದನು. ಗೋರಕ್ಷನ ಈ ಹಂಬಲವನ್ನು ತಿಳಿದು ಆ ವೇಶ್ಯೆಯು:—ನಿನಗೆ ಯಾವ ವಿದ್ಯೆಯು ಬರುವದು? ಎಂದು ಕೇಳಿದಳು. ಗೋರಕ್ಷನು ತನಗೆ ಗಾಯನ ವಾದನಗಳಲ್ಲಿರುವ ಅಸಾಮಾನ್ಯ ಬುದ್ಧಿವಂತಿಕೆಯನ್ನು ಹೇಳಿಕೊಂಡನು. ಪರೀಕ್ಷಿಸಿದ ಹೊರತು ಈತನ ಮಾತನ್ನು ನಂಬಲಿಕ್ಕಾಗದೆಂದು ತಿಳಿದು ಅದರಂತೆ ಆಡಿ ತೋರಿಸಿದಳು. ಅದನ್ನು ಕೇಳಿ ಗೋರಕ್ಷನು ನುಡಿದನೇನಂದರೆ, "ಕಲಿಂಗವೇಶ್ಯಳೇ, ನೀನನ್ನುವದು ನಿಜವು; ಆದರೆ ಅಂಗೈ ಹುಣ್ಣಿಗೆ ಕನ್ನಡಿ ಯಾಕೆ? ಪ್ರತ್ಯಕ್ಷ ನಾನು ಎದುರಿಗೆ ಇರಲು, ಈಗಲೇ ನನ್ನ ವಿದ್ಯೆಯ ಪ್ರಭಾವವನ್ನು ತೋರಿಸುವೆನು."

ಗೋರಕ್ಷನ ಈ ಮಾತುಗಳನ್ನು ಕೇಳಿ ಕಲಿಂಗ ವೇಶ್ಯೆಯು ರಥದಿಂದಿಳಿದು ಒಂದು ವೃಕ್ಷದ ಬುಡದಲ್ಲಿ ಹಾಸಗೆಯನ್ನು ಹಾಸಿ ಕುಳಿತುಕೊಂಡಳು. ಅವಳ ದಾಸಿಯರು ವೀಣಾಮೃದಂಗ ಮೊದಲಾದ ಸಾಹಿತ್ಯಗಳನ್ನು ತಂದಿರಿಸಿದರು. ಬಳಿಕ ಅವಳು ಗೋರಕ್ಷನಿಗೆ ತನ್ನ ವಿದ್ಯೆಯನ್ನು ತೋರಿಸಲು ಸೂಚಿಸಿದಳು. ವೇಶ್ಯೆಯ ಮುಖದಿಂದ ಸೂಚನೆಯು ಹೊರಟ ಕೂಡಲೆ ಗೋರಖನು ಗಂಧರ್ವ ಮಂತ್ರವನ್ನು ಜಪಿಸಿ ಹಣೆಗೆ ವಿಭೂತಿ

ಯನ್ನು ಹಚ್ಚಿಕೊಂಡನು; ಮತ್ತು ಬಳಿಯಲ್ಲಿರುವ ಮೃದಂಗ ಮೊದಲಾದ ವುಗಳಿಗೂ ಹಚ್ಚಿ ಉಳಿದ ವಿಭೂತಿಯನ್ನು ದಶದಿಕ್ಕುಗಳಿಗೂ ತೂರಿದನು. ವಿಭೂತಿ ತೂರಿದ್ದೊಂದೇ ತಡ, ಮೃಂದಂಗ ವೀಣೆಗಳು ತಮ್ಮಷ್ಟಕ್ಕೆ ತಾವೇ ಬಾರಿಸಲುಪಕ್ರಮಿಸಿದವು. ವೃಕ್ಷಗಳು ಸುಸ್ವರದಿಂದ ಗಂಧರ್ವಗಾಯನ ಮಾಡಲಾರಂಭಿಸಿದವು. ಈ ಅದ್ಭುತ ಚಮತ್ಕಾರವನ್ನು ಕಂಡು ಕಲಿಂಗ ವೇಶ್ಯಯೂ ಆಕೆಯ ಹಸ್ತಕರಾದ ಉಳಿದ ಯುವತಿಯರೂ ಆಶ್ಚರ್ಯಮಗ್ನ ರಾದರು. ಈತನು ಸಾಮಾನ್ಯ ಮನುಷ್ಯನಲ್ಲೆಂದು ಅವಳು ಭಾವಿಸಿದರು. ಬಳಿಕ ಕಲಿಂಗವೇಶ್ಯೆಯು ಗೋರಖನನ್ನು ನಮಿಸಿ—ಮಹಾರಾಜ, ನೀವು ಮನುಷ್ಯರಲ್ಲ ನಿರ್ಜೀವವಸ್ತುಗಳಿಂದ ಗಂಧರ್ವವಿದ್ಯೆಯನ್ನು ಸೂರೆಗೊಳಿಸಿದ ಬಳಿಕ ನಿಮ್ಮ ಸಾಮರ್ಥ್ಯವನ್ನೇನು ಬಣ್ಣಿಸಲಿ? ನೀವು ನನ್ನೊಡನೆ ಸ್ತ್ರೀ ರಾಜ್ಯದ ರಾಣಿಯ ಸಭೆಗೆ ಅತ್ಯವಶ್ಯವಾಗಿ ಬರಬೇಕು ಎಂದು ಪ್ರಾರ್ಥಿಸಿ ದಳು. ಅಷ್ಟರಲ್ಲಿ ಆಕೆಗೆ ಇನ್ನೊಂದು ಸಂಗತಿಯು ನೆನಪಿಗೆ ಬರಲು ಮತ್ತೆ ನುಡಿದಳೇನಂದರೆ—"ಮಹಾರಾಜ, ಸ್ತ್ರೀರಾಜ್ಯದಲ್ಲಿ ಪುರುಷರಿಗೆ ಕ್ಷೇಮ ವಿಲ್ಲ. ಸ್ತ್ರೀರಾಜ್ಯದಲ್ಲಿ ಸೇರಿದ ಪುರುಷನು ಮಾರುತಿಯ ಬುಭುಃಕಾರದಿಂದ ತಾತ್ಕಾಲದಲ್ಲಿ ಮರಣಹೊಂದುವನು. ವಸ್ತುಸ್ಥಿತಿಯು ಹೀಗಿರಲು ನೀವು ಪಾರಾಗುವ ಬಗೆಯೆಂತು?"

ವೇಶ್ಯಯ ಈ ಮಾತಿಗೆ ನಕ್ಕು ಗೋರಕ್ಷನು ನುಡಿದನೇನಂದರೆ— "ಈ ಬಗ್ಗೆ ನೀನು ಚಿಂತೆ ಮಾಡಬೇಡ; ಪ್ರತ್ಯಕ್ಷ ಕಾಲನನ್ನು ಕೂಡಾ ಬಿಗಿದು ಕಟ್ಟುವಷ್ಟು ಸಾಮರ್ಥ್ಯವು ನನ್ನಲ್ಲುಂಟು. ಸೂರ್ಯನನ್ನು ನುಂಗುವ ಸಾಮರ್ಥ್ಯವಿದ್ದವನು ದೀಪಕ್ಕೆ ಅಂಜುವನೇ?" ಗೋರಕ್ಷನ ಈ ಮಾತಿನಿಂದ ಕಲಿಂಗವೇಶ್ಯೆಯು ಸಮಾಧಾನಹೊಂದಿ ತನ್ನ ರಥದಲ್ಲಿ ಕುಳಿತುಕೊಂಡಳು. ಕೂಡಲೆ ಅವಳ ಪರಿವಾರವೂ ಕುಳಿತುಕೊಂಡಿತು. ಗೋರಕ್ಷನಾಥನು ಸಾರಥ್ಯಕರ್ಮವನ್ನು ವಹಿಸಿದನು. ಅವನು ರಥವನ್ನು ಮುಂದಕ್ಕೆ ಸಾಗಿಸುವ ಮೊದಲು, ವಜ್ರ-ಸ್ಪರ್ಶ, ಮೋಹನ ಮೊದಲಾದ ಅಸ್ತ್ರಗಳನ್ನು ಜಪಿಸಿ ಸ್ತ್ರೀರಾಜ್ಯದ ಗಡಿಯ ಮೇಲೆ ಅವುಗಳಿಂದ ದಿಗ್ಬಂಧ ನ ಮಾಡಿದನು. ಬಳಿಕ ಅವನು ರಥವನ್ನು ಸಾಗಿಸಿ ಸೂರ್ಯಾಸ್ತಸಮ ಯಕ್ಕೆ ಸ್ತ್ರೀರಾಜ್ಯದಲ್ಲಿರುವ ಚೀನಾ ಎಂಬ ಪಟ್ಟಣಕ್ಕೆ ಮುಟ್ಟಿದನು. ಆ

ರಾತ್ರಿಯನ್ನು ಅವರು ಅಲ್ಲಿಯೇ ಕಳೆದರು. ರಾತ್ರಿಯಲ್ಲಿ ಮಾರುತಿಯು ಸ್ತ್ರೀ ರಾಜ್ಯವನ್ನು ಪ್ರವೇಶಿಸುವದಕ್ಕೆಂದು ರಾಮೇಶ್ವರದಿಂದ ಉಡ್ಡಾಣ ಮಾಡಿದನು. ಆದರೆ ಸ್ತ್ರೀರಾಜ್ಯದ ಗಡಿಯ ಮೇಲೆ ಗೋರಕ್ಷನಿಂದ ಸ್ಥಾಪಿತವಾದ ವಜ್ರಾಸ್ತ್ರವು ಆವನ ಎದೆಗೆ ಬಡೆಯಿತು. ಮಾರುತಿಯ ದೇಹವೂ ವಜ್ರಮಯ ವಿದ್ದದರಿಂದ ಅದರ ಪೆಟ್ಟಿಗೆ ಅವನಿಗೆ ಅಪಾಯವಾಗದಿದ್ದರೂ ಒಮ್ಮೆಲೆ ಶಕ್ತಿಕುಂದಿ ನೆಲಕ್ಕೆ ಬಿದ್ದನು. ಕೂಡಲೆ ಸ್ಪರ್ಶಾಸ್ತ್ರದ ಪ್ರಭಾವದಿಂದ ಅವನು ಮೇಲಕ್ಕೇಳದಾದನು. ಮೋಹನಾಸ್ತ್ರದ ಪ್ರಭಾವದಿಂದ ಅವನಿಗೆ ವಿಲಕ್ಷಣ ಭ್ರಮೆಯುಂಟಾಯಿತು. ತಾನು ಯಾರು, ಎಲ್ಲಿಗೆ ಹೋಗುತ್ತಿದ್ದೆನು, ಈಗೆಲ್ಲಿರುವೆನು ಎಂಬದೇ ಮೊದಲು ಅವನಿಗೆ ತಿಳಿಯದಾಯಿತು. ಬರ ಬರುತ್ತ ಅವನಿಗೆ ಅಸಹ್ಯವಾದ ವೇದನೆಯುಂಟಾಗತೊಡಗಿತು. ಈ ಗುಂಟಾದ ಪರಿಸ್ಥಿತಿಯಲ್ಲಿ ತನ್ನ ಅವಸ್ಥೆಯು ಏನಾಗುವದೋ ಎಂಬದು ಅವನಿಗೆ ತಿಳಿಯದಾಯಿತು. ಅವನು ಆ ಸ್ಥಳದಿಂದ ಬಿಡುಗಡೆ ಹೊಂದುವದಕ್ಕೆ ತನ್ನ ಶಕ್ತಿ ಮೀರಿ ಹೆಣಗಿದನು; ಆದರೆ ಅದರಿಂದ ಪ್ರಯೋಜನವಾಗಲಿಲ್ಲ. ಕಡೆಗೆ ಅವನಿಗೆ ಆ ವೇದನೆಯನ್ನು ಸಹಿಸದಂತಾಯಿತು. ಆಗಆತನು ಶ್ರೀರಾಮಚಂದ್ರನ ಸ್ಮರಣೆಯನ್ನು ಮಾಡಿ ಸಂಕಟನಿವಾರಣಕ್ಕಾಗಿಆತನನ್ನು ಪ್ರಾರ್ಥಿಸಿದನು. ಭಕ್ತವತ್ಸಲನಾದ ಶ್ರೀ ರಾಮನು ಭಕ್ತನ ದೀನವಾಣಿಯನ್ನು ಕೇಳಿ ಆ ಕೂಡಲೆ ಅಲ್ಲಿಗೆ ಪ್ರಾಪ್ತನಾದನು ಮಾರುತಿಯ ದೈನ್ಯಾವಸ್ಥೆಯನ್ನು ನೋಡಿ ಶ್ರೀರಾಮನು ಕಳವಳಗೊಂಡನು. ಆಗ ಆತನು ಮಾರುತಿಯನ್ನು ಕುರಿತು:—"ಭಕ್ತ ಶ್ರೇಷ್ಠನೇ, ನಿನಗೆ ಇಂಥ ಅವಸ್ಥೆಯನ್ನು ಉಂಟು ಮಾಡಿದವರು ಯಾರು?" ಎಂದನು ಈ ಪ್ರಶ್ನೆಗೆ ಉತ್ತರವನ್ನು ಮಾರುತಿಯು ಹ್ಯಾಗೆ ಕೊಡುವನು? ಆತನ ಎದುರಿನಲ್ಲಿ ಯಾವ ಶತ್ರುಗಳೂ ಇರಲಿಲ್ಲ. ಆಗ ಆತನು ತರ್ಕದಿಂದ ನಾಥಪಂಥೀಯ ಜನರು ಬಹು ಪರಾಕ್ರಮಿಗಳಿರುತ್ತಾರೆ. ಅವರಲ್ಲಿ ಯಾರಾದರೂ ಈ ಸ್ತ್ರೀರಾಜ್ಯದ ಗಡಿಯ ಮೇಲೆ ಕೆಲವು ಅಸ್ತ್ರಗಳನ್ನು ಸ್ಥಾಪಿಸಿರಬೇಕು, ಎಂದನು. ಬಳಿಕ ಶ್ರೀ ರಾಮನು ಅಂತರ್ಜ್ಞಾನದಿಂದ ತಿಳಿದು ನೋಡಿ ಇದು ಗೋರಕ್ಷನೆಂಬ ನಾಥ ಪಂಥೀಯನ ಕೃತಿಯೆಂಬದನ್ನು ಕಂಡು ಹಿಡಿದನು. ನಾಥಪಂಥೀಯರೆಲ್ಲರು ಶ್ರೀ ರಾಮನ ಭಕ್ತರಿದ್ದು, ಗೋರಕ್ಷನು ಹರಿನಾರಾಯಣನ ಅವತಾ

ರಿಕನಾದ್ದರಿಂದ ಅವನನ್ನು ಕಾಣಬೇಕೆಂಬ ಇಚ್ಛೆಯು ಶ್ರೀರಾಮನಲ್ಲುಂಟಾಯಿತು. ಶ್ರೀರಾಮನ ದರ್ಶನಮಾತ್ರದಿಂದ ಮಾರುತಿಯ ಸಂಕಟವೆಲ್ಲ ಪರಿಹಾರವಾಯಿತು. ಸ್ಪರ್ಶಾಸ್ತ್ರ ಮೋಹನಾಸ್ತ್ರಗಳ ಆಟವು ನಡೆಯದಾಯಿತು. ಬಳಿಕ ಶ್ರೀರಾಮನು ಮಾರುತಿಯೊಡನೆ ಗೋರಖನಿದ್ದ ಚೀನಾಪಟ್ಟಣಕ್ಕೆ ಹೋದನು. ಆಗ ಮಧ್ಯರಾತ್ರಿಯ ಸಮಯವಾಗಿತ್ತು. ಕಲಿಂಗ ವೇಶ್ಯೆಯೂ, ಆಕೆಯ ಪರಿವಾರವೂ ನಿದ್ರಾಸಕ್ತರಾಗಿದ್ದರು; ಆದರೆ ಗೋರಕ್ಷನು ಮಾತ್ರ ಗುರುಧ್ಯಾನದಲ್ಲಿ ತತ್ಪರನಾಗಿ ಕುಳಿತುಕೊಂಡಿದ್ದನು

ಶ್ರೀರಾಮ ಮಾರುತಿಯರು ಬ್ರಾಹ್ಮಣ ವೇಷವನ್ನು ಧಾರಣ ಮಾಡಿದ್ದರಿಂದ ಗೋರಕ್ಷನಿಗೆ ತನ್ನ ಬಳಿಗೆ ಬಂದವರು ಯಾರೆಂಬದು ತಿಳಿಯದೆ ಹೋಯಿತು. ಆಗ ಶ್ರೀರಾಮನು ಆತನನ್ನು ಕುರಿತು:—ನಾಥನೇ ನೀನು ಬಹು ಸಾಮರ್ಥ್ಯವಂತನಿರುತ್ತೀ; ಮತ್ತು ಯೋಗಿಗಳ ಮುಕುಟಮಣಿಯಾಗಿರುತ್ತೀ; ಸರ್ವಶಾಸ್ತ್ರಗಳು ನಿನಗೆ ಅವಗತವಿರುತ್ತವೆ. ನಾವು ಬ್ರಾಹ್ಮಣರು. ಒಂದು ಮಾತಿನ ಯಾಚನೆಗಾಗಿ ನಿನ್ನ ಬಳಿಗೆ ಬಂದಿರುತ್ತೇವೆ. ನಿನ್ನ ಔದಾರ್ಯದಿಂದ ಅದು ಪೂರ್ಣವಾಗುವದೆಂದು ಅಪೇಕ್ಷಿಸುತ್ತೇವೆ, ಎಂದು ನುಡಿದನು.

ಶ್ರೀರಾಮನು ಮಾರುತಿಯ ಇಚ್ಛೆಯನ್ನು ತಿಳಿದುಕೊಂಡಿದ್ದನು. ನಾಥಪಂಥೀಯ ಜನರು ಸ್ತ್ರೀರಾಜ್ಯಕ್ಕೆ ಹೋಗಿ ಮಚ್ಛೇಂದ್ರನನ್ನು ಕರೆದುಕೊಂಡು ಹೋಗುವರು. ಅದರಿಂದ ಪುನಃ ನನಗೆ ತ್ರಾಸವಾಗುವದೆಂದು ಮಾರುತಿಯು ಶ್ರೀರಾಮನಿಗೆ ಹೇಳಿದ್ದನು. ಭಕ್ತನ ಸಂಕಟ ನಿವಾರಣೆಗಾಗಿ ಶ್ರೀರಾಮನು ಗೋರಕ್ಷನಿಂದ ಮಚ್ಛೇಂದ್ರನನ್ನು ಕರೆದುಕೊಂಡು ಹೋಗದಂತೆ ವಚನ ತಕ್ಕೊಳ್ಳಬೇಕೆಂದು ಮಾಡಿದ್ದನು. ಆದ್ದರಿಂದ ಆತನು ಗೋರಕ್ಷನನ್ನು ಹೀಗೆ ಗೌರವಿಸಿ ಮಾತನಾಡಿದನು.

ಶ್ರೀರಾಮನ ಮಾತಿನಿಂದ ಗೋರಕ್ಷನಿಗೆ ಬಲವಾದ ಸಂಶಯವುಂಟಾಯಿತು. ಇವರು ಮನುಷ್ಯರಾಗಿರದೆ ದೇವಲೋಕದವರಾಗಿರಬೇಕೆಂದು ಭಾವಿಸಿದನು. ಯಾಕೆಂದರೆ ಸ್ತ್ರೀರಾಜ್ಯದ ಗಡಿಯ ಮೇಲೆ ತಾನು ಬಲವಾದ ಅಸ್ತ್ರಗಳನ್ನು ಸ್ಥಾಪಿಸಿರಲು, ಅವನ್ನು ದಾಟಿ ಬರುವದು ಮನುಷ್ಯರಿಂದಾಗದು. ಈ ಮೇರೆಗೆ ಯೋಚಿಸಿ ಆತನು ನುಡಿದನೇನಂದರೆ:—ಮಹಾರಾಜ,

ತಾವು ಯಾರೆಂಬದನ್ನು ಹೇಳುವ ಕೃಪೆಮಾಡಬೇಕು. ತಾವು ಮನುಷ್ಯರಿರುವದಿಲ್ಲೆಂಬದನ್ನು ನಾನು ಕಂಡು ಹಿಡಿದಿರುತ್ತೇನೆ.''

ಗೋರಕ್ಷನ ಈ ಮಾತಿಗೆ ಶ್ರೀರಾಮನು ನಕ್ಕು ತನ್ನ ನಿಜರೂಪವನ್ನು ತಾಳಿದನು. ಮತ್ತು ಆತನನ್ನು ಕುರಿತು--ಮಾರುತಿಯ ಇಚ್ಛೆಯೇನಿರುವದೆಂಬದನ್ನು ಹೇಳಿದನು. ಅದನ್ನು ಕೇಳಿ ಗೋರಕ್ಷನು ಪ್ರಭುವೇ, ನೀನು ಹೇಳಿದ್ದೆಲ್ಲ ನಿಜ; ಆದರೆ ನಾವು ವಿರಕ್ತರು ಯೋಗಿಗಳು ನಮಗೆ ವಿಲಾಸವು ಬಾಧಕವು. ನಾವು ವಿಷಯಸುಖವನ್ನು ತ್ಯಜಿಸಲಿಕ್ಕೆ ಬೇಕು; ಹೀಗಿದ್ದು ನೀನು ಮಚ್ಛೇಂದ್ರನು ಕೊನೆಯವರಿಗೂ ವಿಷಯಸುಖದಲ್ಲಿಯೇ ಮಗ್ನನಾಗಿರುವಂತೆ ಹೇಳುವಿಯಲ್ಲ; ಇದೆಲ್ಲಿಯ ಧರ್ಮವು? ನಾನು ಮಚ್ಛೇಂದ್ರ ಗುರುಗಳನ್ನು ಕರೆದೊಯ್ಯಲು ಬಂದಿದ್ದೇನೆ; ಕರೆದುಕೊಂಡು ಹೋಗುವೆನು; ಈ ವಿಷಯದಲ್ಲಿ ಯಾರ ಮಾತನ್ನೂ ಕೇಳುವದಿಲ್ಲ, ಎಂದು ಸ್ಪಷ್ಟವಾಗಿ ಹೇಳಿದನು. ಗೋರಕ್ಷನ ಮಾತಿಗೆ ಶ್ರೀರಾಮನಿಗೆ ಸಿಟ್ಟು ಬರಲಿಲ್ಲ; ಆದರೆ ಮಾರುತಿಗೆ ಮಾತ್ರ ಅದು ಸಹನವಾಗಲಿಲ್ಲ. ಅವನು ಯುದ್ಧ ಮಾಡಬೇಕೆಂಬ ಉತ್ಸುಕತೆಯನ್ನು ತೋರಿಸಿದನು; ಆದರೆ ಶ್ರೀರಾಮನು ಮಾರುತಿಯನ್ನು ಕುರಿತು:--ಮಾರುತೀ, ನೀನು ಈ ವಿಷಯದಲ್ಲಿ ದಡ್ಡತನ ಮಾಡುತ್ತೀ; ಗೋರಕ್ಷನು ನನ್ನ ಭಕ್ತನಿದ್ದಾನೆ. ನೀನೂ ನನ್ನ ಭಕ್ತನಿರುತ್ತೀ. ಭಕ್ತರಾದವರು ತಮ್ಮತಮ್ಮೊಳಗೆ ಜಗಳಾಡಬಾರದು. ನೀನು ಗೋರಕ್ಷನ ಅಸ್ತ್ರದ ಸುಖವನ್ನು ಈ ಮೊದಲೇ ಉಂಡಿರುತ್ತೀ; ಮತ್ತೆ ಅವನೊಡನೆ ಜಗಳ ತೆಗೆಯಬೇಕೆನ್ನುತ್ತೀ; ಇದು ಉಚಿತವಲ್ಲ; ಮೇಲಾಗಿ ಈತನು ಮಚ್ಛೇಂದ್ರನನ್ನು ಕರೆದುಕೊಂಡು ಹೋದರೆ, ನಿನ್ನ ವಚನಕ್ಕೇನೂ ಭಂಗವುಂಟಾಗುವದಿಲ್ಲ. ಮಚ್ಛೇಂದ್ರನು ಕೀಲೋತಳೆಯಲ್ಲಿ ಇಷ್ಟೇ ದಿವಸ ಇರುವನೆಂದು ನೀನು ವಚನ ಕೊಟ್ಟಿಲ್ಲವಷ್ಟೇ; ಮಚ್ಛೇಂದ್ರನಿಗೂ ಕೀಲೋತಳೆಗೂ ಭೆಟ್ಟೀ ಮಾಡಿಸುವದಿಷ್ಟೇ ನಿನ್ನ ಕೆಲಸವು; ಅದು ಪೂರ್ಣವಾಗಿದೆ. ಆದ್ದರಿಂದ ನೀನು ಈ ಮಾತಿನ ಬಗ್ಗೆ ಇನ್ನು ಮುಂದೆ ಯೋಚನೆ ಮಾಡಬೇಡ, ಎಂದು ನುಡಿದನು.

ಶ್ರೀರಾಮನ ಮಾತಿಗೆ ಮಾರುತಿಯು ಸಂತೋಷಪಟ್ಟನು. ಗೋರಕ್ಷನ ಪ್ರೇಮದಿಂದ ಶ್ರೀರಾಮನನ್ನು ಆಲಿಂಗಿಸಿದನು. ಆದರಂತೆ ಮಾರುತಿಯನ್ನೂ

ಆಲಿಂಗಿಸಿದನು. ಆ ಮೂವರೂ ಆಗ ಕೇವಲ ಸಖ್ಯ ಸುಖವನ್ನು ಅನುಭವಿಸಿದರು. ಬಳಿಕ ಶ್ರೀರಾಮ ಮಾರುತಿಯರು ಅಲ್ಲಿಂದ ಅಂತರ್ಧಾನವನ್ನು ಹೊಂದಿದರು.

---

# ಅಧ್ಯಾಯ ೨೦

## ಗೋರಕ್ಷ-ಮಚ್ಛಿಂದ್ರರ ಸಮಾಗಮ.

ಶ್ರೀರಾಮನ ಮಾತಿನಿಂದ ತಾನು ಕೀಲೋತಳೆಯ ವಚನದಿಂದ ಮುಕ್ತನಾಗಿರುವೆನೆಂದು ತಿಳಿದು ಮಾರುತಿಗೆ ಒಂದು ಬಗೆಯಿಂದ ಸಮಾಧಾನವಾದರೂ ಅವನು ಕೀಲೋತಳೆಯ ಪಕ್ಷವನ್ನು ಎತ್ತಿಹಿಡಿಯುವದು ತನ್ನ ಕರ್ತವ್ಯವೆಂದು ತಿಳಿದು, ಆಕೆಯ ರಾಜಧಾನಿಯ ಕಡೆಗೆ ನಡೆದನು.

ಆ ಕಾಲಕ್ಕೆ ಕೀಲೋತಳೆಯ ರಾಜಧಾನಿಯು ಶೃಂಗಮುರುಡ ಎಂಬ ನಗರಿಯಾಗಿತ್ತು. ಮಾರುತಿಯು ರಾಣಿಯ ಮಂದಿರದಲ್ಲಿ ಗುಪ್ತವಾಗಿ ಪ್ರವೇಶಮಾಡಿದನು. ಆಗ ತೃತೀಯಪ್ರಹರರಾತ್ರಿಯ ಸಮಯವಾದ್ದರಿಂದ ಎಲ್ಲರಿಗೂ ಗಾಢವಾದ ನಿದ್ರೆಯು ಹತ್ತಿತ್ತು. ಒಂದು ಸುಂದರವಾದ ಮಂದಿರದಲ್ಲಿ ಕೀಲೋತಳೆಯು ರತ್ನಖಚಿತ ಮಂಚದ ಮೇಲೆ ಮಲಗಿಕೊಂಡಿದ್ದಳು. ಮಾರುತಿಯು ಸೂಕ್ಷ್ಮರೂಪದಿಂದ ಆಕೆಯ ಬಳಿಗೆ ಹೋದನು. ಕೀಲೋತಳೆಗೆ ಗಾಢನಿದ್ರೆ ಹತ್ತಿದ್ದರಿಂದ ಆಕೆಯನ್ನು ಎಚ್ಚರಗೊಳಿಸಬೇಕೆಂದು ಆಕೆಯ ದೇಹವನ್ನು ಮುಟ್ಟಿದನು. ಪುರುಷಹಸ್ತ ಸ್ಪರ್ಶದಿಂದ ಕೀಲೋತಳೆಗೆ ಎಚ್ಚರವಾಯಿತು. ಅವಳು ಕಣ್ಣು ತೆರೆದು ನೋಡಿದಳು; ಎದುರಿಗೆ ಮಾರುತಿಯು ನಿಂತುಕೊಂಡಿದ್ದನು. ಕೂಡಲೆ ಚಟ್ಟನೆದ್ದು, ಮಾರುತಿಯ ಚರಣಗಳ ಮೇಲೆ ಮಸ್ತಕವನ್ನಿಟ್ಟು ಬದ್ಧಾಂಜಲಿಯಾಗಿ ನಿಂತುಕೊಂಡಳು. ಆಗ ಮಾರುತಿಯು ಆಕೆಯನ್ನು ಕುರಿತು ನುಡಿದನೇನಂದರೆ:—" ಕೀಲೋತಳೇ, ನಿನಗೆ ನಾನು ವಚನ ಕೊಟ್ಟಂತೆ ಮಚ್ಛಿಂದ್ರನನ್ನು ನಿನ್ನ ಬಳಿಯಲ್ಲಿ ಕರೆ

ತಂದು ಬಿಟ್ಟಿನು; ಆದರೆ ಇನ್ನು ಮುಂದೆ ನಿನಗೆ ಬಹಳ ದಿವಸ ಮಚ್ಛೇಂದ್ರನ ಸಹವಾಸ ಸುಖವು ಲಭಿಸುವಂತೆ ತೋರುವದಿಲ್ಲ. ಯಾಕಂದರೆ ಮಚ್ಛೇಂದ್ರನ ಶಿಷ್ಯನಾದ ಗೋರಕ್ಷನೆಂಬುವನು ತನ್ನ ಗುರುವಿಗಿಂತ ಮಹಾ ಬಲಾಢ್ಯನಿರುವನು. ಅವನು ಮೇಲಾದ ಭೈರಾಗಿಯೂ, ತಪಸ್ವಿಯೂ ಆಗಿರುವನು. ಅವನು ಮಚ್ಛೇಂದ್ರನನ್ನು ಕರೆದೊಯ್ಯುವದಕ್ಕಾಗಿ ನಿನ್ನ ರಾಜಧಾನಿಗೆ ಬರ ತಕ್ಕವನಿರುವನು. ಅವನನ್ನು ಉಪಾಯಾಂತರದಿಂದ ದಾಟಿಸಬೇಕೆಂದು ಬಹಳ ಪ್ರಯತ್ನ ಮಾಡಿದೆನು; ಮಚ್ಛೇಂದ್ರನನ್ನು ಕರೆದುಕೊಂಡು ಹೋಗ ದಂತೆ ಅವನಿಂದ ವಚನ ತಕ್ಕೊಳ್ಳಬೇಕೆಂದು ಹವಣಿಸಿದೆನು; ಆದರೆ ಅದೆಲ್ಲ ವ್ಯರ್ಥವಾಯಿತು. ಈ ವಿಷಯದಲ್ಲಿ ಶ್ರೀರಾಮನ ಭಿಡೆಯು ವೆಚ್ಚವಾದರೂ ಕಾರ್ಯವಾಗದೆ ಹೋಯಿತು. ಗೋರಕ್ಷನು ಮಚ್ಛೇಂದ್ರನನ್ನು ಬಿಟ್ಟು ಹೋಗುವದಿಲ್ಲೆಂದು ನಿರ್ಧರಿಸಿರುತ್ತಾನೆ; ಆದರೆ ನೀನು ಗೋರಖನಿಗೆ ರಾ-ಜ್ಯದ ಮೇಲೆ ಮೋಹವನ್ನು ಹುಟ್ಟಿಸಿ, ಅವನನ್ನು ನಿನ್ನಲ್ಲಿಯೇ ಇಟ್ಟುಕೊಳ್ಳುವಂತೆ ಪ್ರಯತ್ನಮಾಡು. ಗೋರಕ್ಷನು ಮೇಲಾದ ವಿರಕ್ತನಿದ್ದದರಿಂದ ಅವನು ವಿಷಯಲೋಭಕ್ಕೆ ಬೀಳಲಾರನು. ಆದರೂ ನೀನು ಸ್ವಂತ ಅವನ ಸೇವೆಮಾಡಿ ಉಪಾಯಾಂತರದಿಂದ ಅವನ ಮನಸ್ಸನ್ನು ಪ್ರಸನ್ನಪಡಿಸಿ, ಕಾರ್ಯ ಸಾಧಿಸಿಕೋ; ಇಷ್ಟು ಎಚ್ಚರಕೊಡುವದಕ್ಕಾಗಿಯೇ ನಾನು ಇಲ್ಲಿಗೆ ಬಂದಿರುತ್ತೇನೆ. ''

ಈ ಮೇರೆಗೆ ಮಾರುತಿಯು ನುಡಿಯಲು, ಕೀಲೋತಳೆಯು ಚಿಂತೆಗೆ ಒಳಗಾದಳು. ಆಗ ಆಕೆಯು ಮಾರುತಿಗೆ ಪುನಃ ನಮಸ್ಕರಿಸಿ ತಮ್ಮ ವಚನದಂತೆ ನಡಕೊಳ್ಳುವೆನು, ಎಂದು ಉತ್ತರ ಕೊಟ್ಟಳು. ಮಾರುತಿಯು ಅಲ್ಲಿಂದ ಹೊರಟುಹೋದನು.

ಕೀಲೋತಳೆಗೆ ಪದ್ಮಿನಿ, ಮೈನಾಕಿನಿ ಎಂಬವೆರಡು ಹೆಸರುಗಳಿದ್ದವು. ಮೂಲತಃ ಕೀಲೋತಳೆಯು ಸಿಂಹಲ ದ್ವೀಪದವಳು. ಆವಳು ಅಲ್ಲಿಯೇ ಹುಟ್ಟಿ ಬೆಳೆದವಳು. ಸಿಂಹಲದ್ವೀಪದಲ್ಲಿ ಪದ್ಮಿನಿಜಾತಿಯ ಸ್ತ್ರೀಯರು ವಿಶೇಷವಾಗಿದ್ದರು; ಅವರೆಲ್ಲರಲ್ಲಿ ಈಕೆಯು ಶ್ರೇಷ್ಠಳಾಗಿದ್ದಳು. ಈಕೆಯು ಅಪ್ರತಿಮ ಸುಂದರಿಯಾಗಿದ್ದಳು. ಪದ್ಮಿನಿಯು ಒಂದು ದಿನ ಬೆಳದಿಂಗಳಲ್ಲಿ ತನ್ನ ಮಂದಿರದ ಮೇಲ್ಮಾಳಿಗೆಯ ಮೇಲೆ ನಿಂತುಕೊಂಡಿದ್ದಳು. ಆಗ ಆಕೆಯ ಕೇಶ

ಪಾಶಗಳು ಬೆನ್ನ ಮೇಲೆ ಬಿದ್ದು, ಹಿಂಬಹವನ್ನು ಮುದ್ರಿಸುತ್ತಿದ್ದವು; ಅವಳ ಸುಂದರವಾದ ಮೈಕಟ್ಟು ನೋಡುವವರಲ್ಲಿ ಆಶ್ಚರ್ಯವನ್ನುಂಟುಮಾಡು ತ್ತಿತ್ತು. ಹೀಗೆ ಸ್ವರ್ಗೀಯ ಸೌಂದರ್ಯದಿಂದ ಒಪ್ಪುತ್ತ ಪದ್ಮಿನಿಯು ನಿಂತಿ ರಲು, ಆ ಕಾಲದಲ್ಲಿ ಉಪರಿಕ್ಷನಾಮಕ ವಸುವು ಆಕಾಶದಲ್ಲಿ ಪ್ರಯಾಣ ಮಾಡುತ್ತಿದ್ದನು. ಅವನ ದೃಷ್ಟಿಯು ಸಹಜವಾಗಿ ಕೆಳಗೆ ಬೀಳಲು, ಪದ್ಮಿ ನಿಯ ಅಪ್ರತಿಮ ಸೌಂದರ್ಯದಿಂದ ಅವನ ಮನಸ್ಸು ಚಂಚಲವಾಯಿತು. ಅವನ ಗತಿಯು ಕುಂಠಿತವಾಯಿತು. ಅವನ ಮೈಮೇಲಿನ ವಸ್ತ್ರಗಳು ಅಸ್ತ ವ್ಯಸ್ತವಾದವು. ವಸುವಿನ ಸ್ಥಿತಿಯು ಹೀಗೆ ಆಗಲು, ಪದ್ಮಿನಿಯು ಅವ ನನ್ನು ನೋಡಿ ನಕ್ಕಳು. ಪದ್ಮಿನಿಯ ಉಪಹಾಸದಿಂದ ಉಪರಿಕ್ಷನು ಶುದ್ಧಿಯ ಮೇಲೆ ಬಂದನು. ಆಗ ಅವನಿಗೆ ವಿಲಕ್ಷಣ ಸಂತಾಪವಾಯಿತು. ಓರ್ವ ಭೂಲೋಕದ ಸ್ತ್ರೀಯು ತನಗೆ ಅವಮಾನ ಮಾಡಿದಳೆಂದು ಭಾವಿಸಿದನು. ಬಳಿಕ ಅವನು ಪದ್ಮಿನಿಯನ್ನು ಕುರಿತು ನುಡಿದನೇನಂದರೆ:—"ಸ್ತ್ರೀಯೇ, ನಾನು ಯಾರೆಂಬದನ್ನು ತಿಳಿಯದೆ ನಕ್ಕು ನನ್ನನ್ನು ಅಪಮಾನಗೊಳಿಸಿದ್ದ ರಿಂದ ನೀನು ಶಾಪಕ್ಕೆ ಅರ್ಹಳಿರುತ್ತೀ; ಯಾವ ಸೌಂದರ್ಯದ ಬಲ ದಿಂದ ನೀನು ನನಗೆ ಅಪಹಾಸ್ಯ ಮಾಡಿದೆಯೋ, ಆ ಸೌಂದರ್ಯದ ಉಪ ಯೋಗವು ನಿನಗೆ ಆಗಲಾರದು. ನೀನು ಸ್ತ್ರೀರಾಜ್ಯದಲ್ಲಿ ವಾಸಮಾಡುವಿ. ಅಲ್ಲಿ ಪುರುಷ ದರ್ಶನವೇ ನಿನಗೆ ಆಗಲಾರದು"

ಉಪರಿಕ್ಷನು ಕೊಟ್ಟ ಶಾಪವನ್ನು ತಿಳಿದು ಪದ್ಮಿನಿಯು ಗಾಬರಿಯಾ ದಳು. ಆಗ ಅವಳು ಬಗೆಬಗೆಯಿಂದ ವಸುವನ್ನು ಪ್ರಾರ್ಥಿಸಿ ಉಶ್ಶಾಪ ವನ್ನು ಕೇಳಿಕೊಂಡಳು ವಸುವು ಆಕೆಯ ಪ್ರಾರ್ಥನೆಗೆ ಸಂತುಷ್ಟನಾಗಿ ನುಡಿದನೇನಂದರೆ—"ಪದ್ಮಿನೀ ನೀನು ನನ್ನ ಶಾಪದಂತೆ ಸ್ತ್ರೀ ರಾಜ್ಯದಲ್ಲಿ ವಾಸಮಾಡಿದ ಬಳಿಕ ಕೆಲವು ದಿವಸದ ಮೇಲೆ ಆ ರಾಜ್ಯದ ರಾಣಿಯಾಗುವಿ. ನನ್ನ ಮಗನಾದ ಮಚ್ಛೀಂದ್ರನು ನಿನಗೆ ಭೆಟ್ಟಿಯಾಗುವನು, ಅವನಿಂದ ನೀನು ಸಂಸಾರ ಸುಖವನ್ನು ಹೊಂದಿ ಮೀನನಾಥನೆಂಬ ಮಗನನ್ನು ಹಡೆಯುವಿ. ಬಳಿಕ ಮಚ್ಛೀಂದ್ರನ ವಿಯೋಗವು ನಿನಗಾಗುವದು. ಅನಂತರ ನೀನು ಆ ಸ್ತ್ರೀರಾಜ್ಯವನ್ನು ತ್ಯಜಿಸಿ ನಿನ್ನ ಸ್ವಸ್ಥಳವನ್ನು ಸೇರಿ ಅನಂತ ಸೌಖ್ಯವನ್ನು ಅನುಭವಿಸುವಿ."

ಈ ಮೇರೆಗೆ ಉಪರಿಕ್ಷನು ಉಶ್ಯಾಪವಕೊಟ್ಟು ಹೊರಟು ಹೋದನು. ಪದ್ಮಿನಿಯು ಇದ್ದದರೊಳಗೆ ಸಮಾಧಾನ ಹಚ್ಚಿಕೊಂಡಳು.

ಮುಂದೆ ವಸುವಿನ ಶಾಪದಂತೆ ಪದ್ಮಿನಿಯು ವಿಲಕ್ಷಣ ಪ್ರಕಾರದಿಂದ ಸ್ತ್ರೀರಾಜ್ಯದಲ್ಲಿ ಬಂದು ಬಿದ್ದಳು ಆಗ ಆವಳಿಗೆ ಅತ್ಯಂತ ಆಯಾಸವಾಗಿತ್ತು. ನಡೆಯಲಿಕ್ಕೆ ಕೂಡಾ ಸಾಮರ್ಥ್ಯವಿರಲಿಲ್ಲ. ಸ್ತ್ರೀರಾಜ್ಯದಲ್ಲಿ ಬಂದು ಬಿದ್ದ ಬಳಿಕ ಅವಳಿಗೆ ಅಲ್ಲಿ ಮೊದಲು ಒಂದು ಗ್ರಾಮವು ಹತ್ತಿತು. ಆ ಗ್ರಾಮದ ವರೆಗೆ ಅವಳು ಹ್ಯಾಗಾದರೂ ಮಾಡಿ ಹೋದಳು. ಊರ ಹೊರಗೆ ಒಂದು ಮನೆಯಿತ್ತು. ಆ ಮನೆಯ ಕಟ್ಟೆಯ ಮೇಲೆ ವಿಶ್ರಾಂತಿಗಾಗಿ ಕುಳಿತುಕೊಂಡಳು.

ಆ ಮನೆಯು ಮಾದಿಗರ ಮನೆಯಾಗಿತ್ತು. ಆ ಮನೆಯ ಯಜಮಾನತಿಯು ಸಹಜವಾಗಿ ಹೊರಗೆ ಬರಲು ಕಟ್ಟೆಯ ಮೇಲೆ ಕುಳಿತ ಈ ದಿವ್ಯಸುಂದರಿಯನ್ನು ಕಂಡು ಅಚ್ಚರಿಗೊಂಡಳು. ಅವಳು ಆಕೆಯ ಸಂಗತಿಯನ್ನು ವಿಚಾರಿಸಿದಳು. ಪದ್ಮಿನಿಯು ತನ್ನ ದುರವಸ್ಥೆಯನ್ನು ಹೇಳಿ ಆಕೆಯ ಆಶ್ರಯವನ್ನು ಕೇಳಿದಳು. ಆ ಮಾದಿಗ ಸ್ತ್ರೀಯು ಸ್ವಭಾವತಃ ಅಂತಃಕರಣವುಳ್ಳವಳಾಗಿದ್ದಳು. ಆಕೆಯಲ್ಲಿ ಪದ್ಮಿನಿಯ ವಿಷಯವಾಗಿ ದಯೆ ಉತ್ಪನ್ನವಾಯಿತು; ಆದ್ದರಿಂದ ಅವಳು ಪದ್ಮಿನಿಗೆ ಆಶ್ರಯವನ್ನು ಕೊಟ್ಟಳು. ಪದ್ಮಿನಿಯು ಸ್ವತಃ ಅಡಿಗೆ ಮಾಡಿ ಆ ಮಾದಿಗ ಯಜಮಾನತಿಗೆ ಹಾಕಿ ತಾನು ಊಟಮಾಡಲಾರಂಭಿಸಿದಳು. ಅವಳು ಆ ಮಾದಿಗ ಸ್ತ್ರೀಯ ಆಶ್ರಯದಲ್ಲಿದ್ದರೂ ತನ್ನ ಕುಲಶೀಲಕ್ಕೆ ಕುಂದುಬಾರದಂತೆ ಆಚರಿಸಿದಳು.

ಹೀಗೆ ಕೆಲಕಾಲ ಕ್ರಮಿಸಲು ಪದ್ಮಿನಿಯ ಶಾಪವಿಮೋಚನೆಯ ಕಾಲವು ಒದಗಿತು. ಸ್ತ್ರೀ ರಾಜ್ಯದ ರಾಣಿಗೆ ಕೀಲೋತಳೆ ಎಂಬ ನಾಮವಿರುವದು. ಆ ಕಾಲದ ರಾಣಿಯು ಮರಣೋನ್ಮುಖಳಾದಳು. ಆಕೆಗೆ ತನ್ನ ತರುವಾಯ ಯಾರನ್ನು ಪಟ್ಟಕ್ಕೆ ಕುಳ್ಳಿರಿಸಬೇಕೆಂಬ ವಿಚಾರವು ಹುಟ್ಟಿತು. ಆಗ ಅವಳು ಮಂತ್ರಿಗಳ ಒಪ್ಪಿಗೆಯನ್ನು ಪಡೆದು ಒಂದು ಹೆಣ್ಣಾನೆಯ ಸೊಂಡೆಯಲ್ಲಿ ಹೂಮಾಲೆಯನ್ನು ಕೊಟ್ಟು ಸ್ತ್ರೀರಾಜ್ಯದಲ್ಲಿ ಬಿಟ್ಟಳು. ಆ ಆನೆಯು ಯಾರಿಗೆ ಮಾಲೆ ಹಾಕುವದೋ ಅವರನ್ನೇ ಪಟ್ಟಕ್ಕೆ ಕುಳ್ಳಿರಿಸ ಬೇಕೆಂದು ನಿಶ್ಚಯಿಸಿದ್ದಳು.

ಹೂವಮಾಲೆಯನ್ನು ಧರಿಸಿದ ಆನೆಯು ರಾಜಧಾನಿಯಲ್ಲಿರುವ ಎಲ್ಲ ಸ್ತ್ರೀಯರನ್ನು ತ್ಯಜಿಸಿ ಪದ್ಮಿನಿಯಿರುವ ಊರಿಗೆ ಬಂದಿತು; ಮತ್ತು ಪದ್ಮಿನಿಯ ಕೊರಳಲ್ಲಿ ಮಾಲೆ ಹಾಕಿತು ಈ ಯೋಗದಿಂದ ಪದ್ಮಿನಿಯು ಸ್ತ್ರೀರಾಜ್ಯದ ರಾಣಿಯಾದಳು. ಮತ್ತು ಕೀಲೋತಳೆ ಎಂಬ ನಾಮವನ್ನು ಧರಿಸಿದಳು. ಈಕೆಗೆ ಈಕೆಯ ತಂದೆಯು ಮನೆಯವರು ಮೈನಾಕಿನಿ ಎಂದು ಕರೆಯುತ್ತಿದ್ದರು.

ಈ ಪ್ರಕಾರ ಅದ್ಭುತಚರಿತವುಳ್ಳ ಪದ್ಮಿನಿಯು ಕೀಲೋತಳೆರಾಣಿಯಾಗಲು ಅವಳು ಉಪರಿಕ್ಷ ವಸುವಿನ ಅಪ್ಪಣೆಯಂತೆ ಮಾರುತಿಯನ್ನು ಕುರಿತು ತಪಸ್ಸು ಮಾಡಿ ಆತನ ಪ್ರಸನ್ನತೆಯನ್ನು ಪಡೆದು ಮಚ್ಛಿಂದ್ರನ ಸಹವಾಸಸುಖವನ್ನು ಹೊಂದಿದ್ದಳು; ಆದರೆ ಈಗ ಆ ಸುಖಕ್ಕೆ ಅಂತರಬರುವದೆಂಬ ಸುದ್ದಿಯ ಶ್ರವಣದಿಂದ ಅವಳು ವಿಹ್ವಲಳಾದಳು. ಆದರೂ ಅವಳು ಗೋರಕ್ಷನು ಬಂದರೆ ಅವನನ್ನು ಐಶ್ವರ್ಯದಿಂದ ದಂಗು ಬಡಿಸಿ ಬಿಡಬೇಕೆಂದು ಸಮಾಧಾನ ಹಚ್ಚಿಕೊಂಡಳು.

ಹೀಗೆ ಕೀಲೋತಳೆಯು ಸಂಭ್ರಮದಿಂದ ಇರುತ್ತಿರಲು ಕಲಿಂಗನಾಮಕ ವೇಶ್ಯೆಯು ಶೃಂಗಮರುಡರಾಜಧಾನಿಗೆ ಬಂದಳು. ಆಕೆಯು ತನ್ನ ಪರಿವಾರ ಸಮೇತಳಾಗಿ ರಾಜಧಾನಿಯಲ್ಲಿರುವ ಒಂದು ವಿಶಾಲವಾದ ಧರ್ಮಶಾಲೆಯಲ್ಲಿಳಿದುಕೊಂಡು ಮಾರ್ಗಾಯಾಸವನ್ನು ಕಳೆದು ರಾಜಮಂದಿರಕ್ಕೆ ಹೋಗಿ ರಾಣಿಗೆ ಹೇಳಿಕಳಿಸಿದಳು. ರಾಣಿಯು ತನ್ನ ಒಬ್ಬ ಚತುರ ದಾಸಿಯನ್ನು ಕಲಾವಂತಿಣಿಯ ಸ್ವಾಗತಕ್ಕಾಗಿ ಕಳಿಸಿದಳು. ಆ ದಾಸಿಯು ಬಹಳ ಕುಶಲತೆಯಿಂದ ಕಲಿಂಗವೇಶ್ಯೆಯ ಸ್ವಾಗತವನ್ನು ಮಾಡಿ ಅವಳನ್ನು ಸಭೆಗೆ ಕರೆದೊಯ್ದಳು. ರಾಣಿಯು ಕಲಾವಂತಿಣಿಯನ್ನು ಯೋಗ್ಯಸ್ಥಾನದಲ್ಲಿ ಕುಳ್ಳಿರಿಸಿದಳು. ಬಳಿಕ ಕಲಿಂಗವೇಶ್ಯೆಯು ವಿನಯದಿಂದ ಎದ್ದುನಿಂತು ನುಡಿದಳೇನಂದರೆ—"ಮಹಾರಾಣಿಯವರೇ, ತಾವು ಅತ್ಯಂತ ಉದಾರರೂ ವಿದ್ಯಾಪಕ್ಷಪಾತಿಗಳೂ ಇದ್ದದರಿಂದಲೂ ಗೌಡಬಂಗಾಲದ ಗೋಪೀಚಂದ ಮಹಾರಾಜರಂತೆ ನಿಜವಾದ ದಾನಶೌಂಡರಾದ್ದರಿಂದಲೂ ತಮ್ಮಬಳಿಗೆ ಬಂದಿದ್ದೇನೆ. ನನ್ನ ವಿದ್ಯೆಯನ್ನು ಪರೀಕ್ಷಿಸುವದಾಗಬೇಕು."

ಈ ಮೇರೆಗೆ ವೇಶ್ಯೆಯು ವಿನಯದ ಗೌರವ ಪೂರ್ವಕವಾಗಿ ಮಾತ ನಾಡಲು ರಾಣಿಯು ಸಂತೋಷಪಟ್ಟು ಈ ದಿನ ರಾತ್ರಿಯಲ್ಲಿ ನಿಮ್ಮಿಂದ ಗಾಯನ-ನರ್ತನ ಮಾಡಿಸುವೆನೆಂದು ವಚನ ಕೊಟ್ಟಳು. ಬಳಿಕ ವೇಶ್ಯೆಗೆ ಸೀದಾಸಾಮಗ್ರಿಗಳನ್ನು ಕೊಟ್ಟು ಕಳಿಸಿದಳು.

ಕಲಿಂಗವೇಶ್ಯೆಯು ಇಳಿದುಕೊಂಡ ಸ್ಥಳಕ್ಕೆ ಬಂದು ಊಟ-ಉಪ ಚಾರಗಳನ್ನು ತೀರಿಸಿದಳು. ಸಂಜೆಯಾಗುತ್ತಲೆ ಯಾವಾಗ ಸಭೆಗೆ ಆಮಂ ತ್ರಣ ಬರುವದೆಂದು ದಾರೀ ನೋಡುತ್ತ ಕುಳಿತುಕೊಂಡಳು. ಇತ್ತ ರಾ- ಣಿಯ ಸಭೆಯು ಶೃಂಗಾರವಾಯಿತು. ಝಗಝಗಾಯಮಾನಗಳಾದ ದೀಪ ಗಳು ಹಚ್ಚಲ್ಪಟ್ಟವು. ರತ್ನದ ದೀಪಗಳೂ, ತರತರದ ಸುಂದರ ವಸ್ತುಗಳೂ ಸಭೆಯಲ್ಲಿ ರಂಜಿಸತೊಡಗಿದವು. ಬಳಿಕ ರಾಣಿಯು ಒಬ್ಬ ದಾಸಿಯನ್ನು ಕರೆದು ಕಲಾವಂತಿಣಿಯನ್ನು ಕರೆದು ತರುವಂತೆ ಆಜ್ಞಾಪಿಸಿದಳು. ದಾಸಿಯು ಧರ್ಮಶಾಲೆಗೆ ಬಂದು ವೇಶ್ಯೆಯನ್ನು ಕರೆದಳು. ಅದೇದಾರಿಯನ್ನು ಕಾಯು ತ್ತಿದ್ದ ಆಕೆಯು ಹೊರಡಲು ಸಿದ್ಧಳಾದಳು. ಆಕೆಯ ಬಳಿಯಲ್ಲಿದ್ದ ಏಳು ಜನ ಸ್ತ್ರೀಯರೂ ವಸ್ತ್ರಾಲಂಕಾರಗಳಿಂದ ವಿಭೂಷಿತರಾಗಿದ್ದರು; ಆದರೆ ಗೋರಕ್ಷನು ಮಾತ್ರ ಸುಮ್ಮನೆ ಕುಳಿತಿದ್ದನು. ವೇಶ್ಯೆಯು ಸಭೆಗೆ ಹೋಗು ವಳೆಂಬದು ತಿಳಿದಕೂಡಲೆ ಗೋರಕ್ಷನು ತಾನೂ ಸಭೆಗೆ ಬರುವೆನೆಂಬ ವಿಚಾರ ವನ್ನು ಕಲಿಂಗವೇಶ್ಯೆಗೆ ತಿಳಿಸಿದನು. ಆಗ ಆಕೆಯು:—ನೀನು ಪುರುಷ ನಿದ್ದದರಿಂದ ನಿನ್ನ ಪ್ರವೇಶವು ರಾಣಿಯ ಸಭೆಯಲ್ಲಿ ಹ್ಯಾಗೆ ಆಗುವದು? ಎಂದು ಸಂಶಯಗೊಂಡಳು. ಅದನ್ನು ಕೇಳಿ ಗೋರಕ್ಷನು ತಾನು ಸ್ತ್ರೀ ರೂಪವನ್ನು ಧರಿಸುವೆನೆಂದು ಹೇಳಿದನು. ಕಲಿಂಗವೇಶ್ಯೆಗೆ ಗೋರಕ್ಷನ ಈ ಮಾತುಗಳು ಯುಕ್ತವಾಗಿ ತೋರಿದವು. ಗೋರಕ್ಷನ ಯೋಗ್ಯತೆಯು ಆವ ಳಿಗೆ ಗೊತ್ತಿತ್ತಾದ್ದರಿಂದ ತನ್ನ ಕೆಲಸಕ್ಕೆ ಯಶಸ್ಸು ಬರುವದೆಂದು ತಿಳಿದಳು. ಬಳಿಕ ಗೋರಕ್ಷನು ಪುರುಷ ವೇಷವನ್ನು ತ್ಯಜಿಸಿ ಸ್ತ್ರೀ ವೇಷವನ್ನು ಧರಿಸಿ ದನು. ಕಿವಿಗಳಲ್ಲಿ, ಕೈಗಳಲ್ಲಿ, ಮೂಗಿನಲ್ಲಿ, ನಡುವಿನಲ್ಲಿ, ಕಾಲುಗಳಲ್ಲಿ ಸ್ತ್ರೀಯ ರಿಗುಚಿತವಾದ ಆಭರಣಗಳನ್ನಿಟ್ಟುಕೊಂಡನು. ಅವತಾರಿಕನಾದ ಗೋರಕ್ಷ ನು ಗುರುಗಳ ದರ್ಶನಕ್ಕಾಗಿ ಸ್ತ್ರೀ ವೇಷವನ್ನು ತಾಳಿದ ಬಳಿಕ ಆವನ ಸೌಂ- ದರ್ಯವನ್ನು ಬಣ್ಣಿಸುವದೇನು? ನರ್ತಕಿಯ ವೇಷವು ಚನ್ನಾಗಿ ಸಾಧಿಸಿದ

ಬಳಿಕ ಗೋರಕ್ಷನು ಮೃದಂಗವನ್ನು ತೆಗೆದುಕೊಂಡು ಕಲಿಂಗವೇಶ್ಯೆಯನ್ನು ಹಿಂಬಾಲಿಸಿ ನಡೆದನು. ಕಲಿಂಗವೇಶ್ಯೆಯು ಬಳಿಗೆ ಬಂದಾಗ ಅವನು ತನ್ನ ಹೆಸರನ್ನು ಪುರವಂಡೆಯೆಂದು ಹೇಳಿದ್ದನು. ಆ ವೇಶ್ಯೆಯು ಪರಿವಾರವು ಗೋ-ರಕ್ಷನಿಗೆ ಪುರವಂಡೆಯೆಂಬ ನಾಮದಿಂದಲೇ ಸಂಬೋಧಿಸುತ್ತಿತ್ತು.

ಕಲಿಂಗವೇಶ್ಯೆಯು ಕೀಲೋತಳೆಯ ಸಭೆಯನ್ನು ಸೇರಿದಳು. ಸಭೆಯ ವೈಭವವನ್ನು ನೋಡಿ ದಂಗಾಗಿ ನಿಂತಳು. ರತ್ನಖಚಿತ ಸಿಂಹಾಸನದಲ್ಲಿ ಮಚ್ಛಿಂದ್ರ—ಕೀಲೋತಳೆಯರು ಕುಳಿತಿದ್ದರು. ತನ್ನ ಗುರುಗಳನ್ನು ನೋಡಿ ಸಂತೋಷಪಟ್ಟು ಗೋರಕ್ಷನು ಮನಸ್ಸಿನಲ್ಲಿಯೇ ಅವರ ಚರಣಕ್ಕೆರಗಿದನು. ಬಳಿಕ ವೇಶ್ಯೆಯ ಪರಿವಾರವು ಸಾಹಿತ್ಯಗಳನ್ನು ಸಜ್ಜುಮಾಡಿಕೊಂಡಿತು. ಕಲಿಂಗವೇಶ್ಯೆಯು ಗಾನವನ್ನಾರಂಭಿಸಿದಳು. ಪುರವಂಡೆಯು ಮೃದಂಗವನ್ನು ಬಾರಿಸಲಾರಂಭಿಸಿದಳು. ಕಲಿಂಗವೇಶ್ಯೆಗಿಂತ ಪುರವಂಡೆಯು ಸೌಂ-ದರ್ಯದಿಂದಲೂ, ಲಾವಣ್ಯ-ತಾರುಣ್ಯಗಳಿಂದಲೂ ಮಿಗಿಲಾಗಿದ್ದಳು. ಕೀಲೋತಳೆಯು ಆಕೆಯ ಸೌಂದರ್ಯಕ್ಕೆ ಬೆರಗಾಗಿ ಕಲಿಂಗವೇಶ್ಯೆಯು ಪುರವಂಡೆಯ ದಾಸಿಯಾಗಿರಬಹುದೆಂದು ತರ್ಕಿಸಿದಳು. ಸಭೆಯಲ್ಲಿ ನೆರೆದ ಸ್ತ್ರೀಯರೆಲ್ಲರು ಪುರವಂಡೆಯನ್ನೇ ಎವೆಯಿಕ್ಕದೆ ನೋಡುತ್ತಿದ್ದರು. ಸೂರ್ಯ ಪ್ರಕಾಶದ ಮುಂದೆ ನಕ್ಷತ್ರಗಳು ನಿಸ್ತೇಜವಾಗಿ ತೋರುವಂತೆ ಪುರವಂಡೆಯ ಸೌಂದರ್ಯದ ಮುಂದೆ ಕಲಿಂಗವೇಶ್ಯೆಯ ಹಾಗು ಉಳಿದ ವೇಶ್ಯೆಯರ ಸೌಂದರ್ಯವು ತುಚ್ಛವಾಗಿ ತೋರುತ್ತಿತ್ತು. ಪುರವಂಡೆಯ ಮೃದಂಗ ಬಾರಿಸುವ ನೈಪುಣ್ಯತೆಯಲ್ಲಿ ಕಲಿಂಗವೇಶ್ಯೆಯು ಗಾನವನ್ನಾರಂಭಿಸಿ ಸಭಿಕರನ್ನು ಆನಂದಗೊಳಿಸಿದಳು. ವೇಶ್ಯೆಯ ಕೌಶಲ್ಯಕ್ಕೆ ಮಚ್ಛಿಂದ್ರನು ತಲೆದೂಗಿದನು. ಕೀಲೋತಳೆಯೂ ಸಂತೋಷಪಟ್ಟಳು.

ಗಾನಾಲಾಪವು ಮುಗಿದ ಬಳಿಕ—ಕಲಿಂಗವೇಶ್ಯೆಯು ನರ್ತನವನ್ನಾರಂಭಿಸಿದಳು. ಪುರವಂಡೆಯು ಮೃದಂಗವನ್ನು ತಾಳಗತ್ತಿನಂತೆ ಬಾರಿಸುತ್ತ ತಾಳವನ್ನು ತಪ್ಪಿಸದೆ "ಮಚ್ಛಿಂದ್ರ" ಎಂಬ ಅಕ್ಷರಗಳನ್ನು ಸ್ಪಷ್ಟವಾಗಿ ತಿಳಿಯುವಂತೆ ಬಾರಿಸಿದಳು. ಮಚ್ಛಿಂದ್ರ ಎಂಬ ಶಬ್ದವು ಕಿವಿಗೆ ಬೀಳಲು ಮಚ್ಛಿಂದ್ರನು ಗಾಬರಿಯಾಗಿ ಸುತ್ತಲೂ ನೋಡಿದನು. ಶಬ್ದವು ಎಲ್ಲಿಂದ ಉಚ್ಚರಿಸಲ್ಪಟ್ಟಿತೆಂಬುದು ಅವನಿಗೆ ತಿಳಿಯದೆ ಹೋಯಿತು. ಮೃ-

ದಂಗದಲ್ಲಿ ಈ ಶಬ್ದವು ಹೊರಬೀಳುತ್ತಿರುವದೆಂಬದನ್ನು ಪುರವಂಡೆಯು ಯಾರಿಗೂ ತಿಳಿಯಗೊಡಲಿಲ್ಲ. ಅಷ್ಟು ಶೀಘ್ರವಾಗಿ ಅವಳು ಬಾರಿಸಿದ್ದಳು.

ಹೀಗೆ ಪುರವಂಡೆಯ ವೇಷದಲ್ಲಿರುವ ಗೋರಕ್ಷನು ಮೃದಂಗದಲ್ಲಿ ತನ್ನ ಗುರುಗಳ ನಾಮಜಪವನ್ನು ನಡಿಸಿ, ನರ್ತನವು ಒಳ್ಳೇ ಭರಕ್ಕೆ ಬರಲು, "ಚಲೋ ಮಚ್ಛಿಂದ್ರ ಗೋರಖ ಆಯಾ" ಎಂದು ಒಮ್ಮೆಲೆ ನುಡಿಸಿ ಮತ್ತೆ ತಾಳವನ್ನು ಕೂಡಿಸಿ ಬಾರಿಸಲಾರಂಭಿಸಿದನು. ಈ ವಾಕ್ಯದಿಂದ ಮಚ್ಛಿಂದ್ರನು ದಂಗುಬಡಿದು ಕುಳಿತನು. ಕೀಲೋತಳೆಯು ಗಾಬರಿಯಾದಳು. ಅವಳು ಮಾರುತಿಯು ಹೇಳಿದ ಮಾತು ಸತ್ಯವಾಯಿತೆಂದು ತಿಳಿದಳು; ಆದರೆ ಈ ಶಬ್ದವು ಎಲ್ಲಿಂದ ಹೊರಡುವದೆಂಬದು ತಿಳಿಯಲಿಲ್ಲ. ಗೋರಖನು ಮತ್ತೆ ಮೂರು ನಾಲ್ಕು ಸಾರೆ ಅದೇ ಶಬ್ದವನ್ನೇ ನುಡಿಸಿದನು. ಆ ಶಬ್ದವು ಎಷ್ಟೆಷ್ಟು ಸ್ಪಷ್ಟವಾಗಿ ಕಿವಿಗೆ ಬೀಳುತ್ತಿತ್ತೋ ಅಷ್ಟಷ್ಟು ವಿಸ್ತೃತ ಪ್ರಮಾಣದಿಂದ ಮಚ್ಛಿಂದ್ರನು ಭಯಗ್ರಸ್ತನಾಗತೊಡಗಿದನು. ಅವನ ಸ್ಥಿತಿಯನ್ನು ತಿಳಿದು ಕೀಲೋತಳೆಯು ಹೀಗೇಕೆ ಮಾಡುವಿರೆಂದು ಕೇಳಿದಳು. ಆಗ ಮಚ್ಛಿಂದ್ರನು ತನ್ನ ಬಲಾಢ್ಯನಾದ ಗೋರಖ ಶಿಷ್ಯನ ಸದಾಚಾರಕ್ಕೆ ಅಂಜುತ್ತೇನೆಂದು ಹೇಳಿದನು. ಕೀಲೋತಳೆಯು ಪುರವಂಡೆಯ ಮೃದಂಗದಲ್ಲಿ ಈ ಬಗೆಯ ಶಬ್ದೋಚ್ಚಾರವಾಗುತ್ತಿದೆಯೆಂದು ಕಂಡುಹಿಡಿದಳು. ಕೂಡಲೆ ಅವಳು ಬೇರೆ ಮೃದಂಗವನ್ನು ಬಾರಿಸ ಹೇಳಿದಳು. ಯಾವ ಮೃದಂಗವನ್ನು ಬಾರಿಸಿದರೂ ಅದರಲ್ಲಿ "ಚಲೋ ಮಚ್ಛಿಂದ್ರ ಗೋರಖ ಆಯಾ" ಎಂಬ ಪದಚರಣವನ್ನು ಬಾರಿಸುವದನ್ನು ಕೇಳಿ ಕೀಲೋತಳೆಯು ಸೋಜಿಗಗೊಂಡಳು. ಬಳಿಕ ಅವಳು ಪುರವಂಡೆಯನ್ನು ಬಿಡಿಸಿ ಬೇರೆ ಕಲಾವಂತಿಣಿಯರಿಗೆ ಮೃದಂಗ ಬಾರಿಸ ಹೇಳಿದಳು; ಆದರೆ ಗೋರಖನಂತೆ ಆ ಪದಚರಣವನ್ನು ಬಾರಿಸಲಿಕ್ಕೆ ಅವರಿಗೆ ಬರಲಿಲ್ಲ. ಆಗ ಪುರವಂಡೆಯಲ್ಲಿಯೇ ಏನೋ ಗೂಢವಿದೆಯೆಂದು ಆ ಚಾಣಾಕ್ಷ ಕೀಲೋತಳೆಯು ತಿಳಿದಳು. ಕೂಡಲೆ ಅವಳು ಪುರವಂಡೆಯನ್ನು ಬೇರೆ ಕಡೆಗೆ ಕರೆದೊಯ್ದು, ಆಕೆಯ ಚರಣಗಳನ್ನು ಹಿಡಿದು ನುಡಿದಳೇನಂದರೆ:—"ಮಹಾತ್ಮಳೇ, ನೀನು ನಿಜವಾಗಿ ಯಾರಿರುವಿ? ನಿಜ ಸಂಗತಿಯನ್ನು ಹೇಳು."

ಪ್ರಸಂಗ ಇದೇ ಸಮಯವೆಂದು ತನ್ನ ನಿಜ ಸಂಗತಿಯನ್ನು ಹೇಳಿದಳು. ಆಗ ಕೀಲೋತಳೆಯು ಅಸಮಾಧಾನಪಟ್ಟರೂ ಅದನ್ನು ಬಹಿರಂಗವಾಗಿ ತೋರಿಸದೆ, ಗೋರಖನ ಮೇಲೆ ಪುತ್ರಪ್ರೇಮವನ್ನು ವ್ಯಕ್ತಗೊಳಿಸಿ ಅವನಿಗೆ ಪುರುಷ ವಸ್ತ್ರಗಳನ್ನು ತರಿಸಿ ಕೊಟ್ಟಳು. ಉತ್ತಮೋತ್ತಮ ವಸ್ತ್ರಗಳಿಂದ ವಿಭೂಷಿತನಾಗಿ ಗೋರಖನು ಸಭೆಗೆ ಬಂದು ಗುರುಗಳ ಚರಣವನ್ನು ಗಟ್ಟಿಯಾಗಿ ಹಿಡಿದುಕೊಂಡನು. ಗೋರಖನನ್ನು ಕಂಡು ಮಚ್ಛಿಂದ್ರನು ಬಹು ಸಂಭ್ರಮಪಟ್ಟು ಎದ್ದುನಿಂತು ಅವನನ್ನು ಆಲಿಂಗಿಸಿದನು. ಬಳಿಕ ಅವರವರ ನಡುವೆ ಕ್ಷೇಮಸಮಾಚಾರಗಳು ನಡೆದವು. ಇತ್ತ ಕೀಲೋತಳೆಯು ಕಲಿಂಗವೇಶ್ಯೆಗೆ ಯೋಗ್ಯ ಸಂಭಾವನೆಯನ್ನು ಕೊಟ್ಟು ಅವಳನ್ನು ಬೀಡಾರಕ್ಕೆ ಕಳಿಸಿಕೊಟ್ಟಳು. ಗೋರಕ್ಷನು ಗುರುವಿಯೋಗ ಕಾಲದಲ್ಲಿ ನಡೆದ ಎಲ್ಲ ಸಂಗತಿಗಳನ್ನು ಹೇಳಿದನು. ಮಚ್ಛಿಂದ್ರನೂ ತನ್ನ ಎಲ್ಲ ಸಂಗತಿಯನ್ನು ಹೇಳಿದನು. ಈ ರೀತಿಯಾಗಿ ಆ ಗುರು-ಶಿಷ್ಯರು ಸುಖಸಲ್ಲಾಪಗಳಲ್ಲಿ ಅಂದಿನ ರಾತ್ರಿಯನ್ನು ಕಳೆದರು.

---

# ಅಧ್ಯಾಯ ೨೧

## ಮಚ್ಛಿಂದ್ರನಿಗೆ ಗೋರಕ್ಷನ ಉಪದೇಶ.

ಕೀಲೋತಳೆಯು ಗೋರಕ್ಷನ ಮೇಲೆ ಅತಿಶಯ ಪ್ರೇಮಮಾಡಹತ್ತಿದಳು; ಮೀನನಾಥನು ಕಿರಿಯಮಗನು. ಗೋರಕ್ಷನು ಹಿರಿಯಮಗನೆಂದು ತಿಳಿದಳು. ಆಕೆಯ ಮನಸ್ಸಿನಲ್ಲಿ ಗೋರಖನಿಗೆ ವಿಷಯಗಳಲ್ಲಿ ಅಭಿರುಚಿ ಉತ್ಪನ್ನವಾಗಬೇಕೆಂಬ ಇಚ್ಛೆಯಿದ್ದದರಿಂದ ಅವಳು ಅವನ ವಿಷಯವಾಗಿ ಬಹಳ ದಕ್ಷತೆಯನ್ನು ವಹಿಸಿದ್ದಳು. ಆತನಿಗೆ ಬಗೆಬಗೆಯ ಪಕ್ವಾನ್ನಗಳನ್ನು ಮಾಡಿ ತಿನ್ನಿಸುತ್ತಿದ್ದಳು. ನಾನಾ ಬಗೆಯ ವಸ್ತ್ರಾಲಂಕಾರಗಳನ್ನು ಇಡಿಸುತ್ತಿದ್ದಳು.

ಈ ರೀತಿ ಕೀಲೋತಳೆಯು ತನ್ನ ಮೇಲೆ ಪ್ರೇಮ ಮಾಡಿದರೂ ಗೋರಕ್ಷನು ಅದರಿಂದ ಸಂತೋಷಹೊಂದಲಿಲ್ಲ. ಅವನ ಮನಸ್ಸು ವೈರಾಗ್ಯವನ್ನು ತ್ಯಜಿಸಲಿಲ್ಲ. ಅನೇಕ ಬಗೆಯ ಪಕ್ವಾನ್ನಗಳು ಕದನ್ನಕ್ಕಿಂತಲೂ ಕಡೆಯಾಗಿ ತೋರುತ್ತಿದ್ದವು. ಆತನ ವೈರಾಗ್ಯವು ಸ್ಥಿರವಾಗಿಯೇ ಉಳಿಯಿತು.

ಹೀಗಿರಲು ಒಂದು ದಿನ ಗೋರಕ್ಷನು ಏಕಾಂತದಲ್ಲಿ ಮಚ್ಛಿಂದ್ರಗುರುಗಳನ್ನು ಕಂಡು ನಮಸ್ಕರಿಸಿ ಅವರ ಬಳಿಯಲ್ಲಿ ಕುಳಿತು ಮಾತನಾಡಲುಪಕ್ರಮಿಸಿದನು. ಆತನು ನುಡಿದನೇನಂದರೆ—"ಗುರುಮಹಾರಾಜರೇ, ತಾವು ಹೀಗೆ ಈ ವಿಷಯ ಭೋಗದಲ್ಲಿ ಆಸಕ್ತರಾದರೆ ಮುಂದೇನು ಗತಿ? ನಾವು ವಿರಕ್ತರು; ವಿಷಯಸುಖವು ನಮಗೆ ಕೇವಲ ಬರಷಣವು. ಹೀ-ಗಿದ್ದು, ನೀವು ಇದರಲ್ಲಿ ಹೊರಳಾಡುವದನ್ನು ನೋಡಿದರೆ ನನಗೆ ಆಶ್ಚರ್ಯವೆನಿಸುತ್ತದೆ. ಮಹಾರಾಜ, ತಾವು ಯಾರು? ಯಾತಕ್ಕೋಸ್ಕರ ಅವತರಿಸಿದಿರಿ? ವಿಚಾರಮಾಡಿರಿ ಕವಿನಾರಾಯಣನ ಅವತಾರಿಕರು ನೀವಾಗಿದ್ದು, ಜಗತ್ತನ್ನು ಉದ್ಧರಿಸದೆ ಹೀಗೆ ವಿಷಯಲಂಪಟಿಗಳಾಗಬಹುದೆ? ಯೋಗಿಶ್ರೇಷ್ಠರೇ, ಚಿಂತಾಮಣಿಪಾತ್ರೆಯನ್ನು ಆಡಿನ ಕೊರಳಲ್ಲಿ ಕಟ್ಟಿದರೆ ಹ್ಯಾಗೆ ಶೋಭಿಸುವದು? ತಮ್ಮಂಥ ಜ್ಞಾನಿಗಳು ಲೋಕೋಪಕಾರಕ್ಕೆ ಹುಟ್ಟಿದ್ದರೂ ಹೀಗೆ ವಿಷಯ ಸೇವನೆಯಲ್ಲಿ ಕಾಲಕಳೆಯಬಹುದೇ? ವಿಚಾರ ಮಾಡಿರಿ. ಬ್ರಹ್ಮಚಿಂತನವೇ, ನಿಮ್ಮ ಧನವು; ಪ್ರಾಣಿಗಳನ್ನು ಉದ್ಧರಿಸುವದೇ ನಿಮ್ಮ ಕರ್ತವ್ಯವು; ಹೀಗಿದ್ದು, ಈ ದುರ್ಬುದ್ಧಿಯು ನಿಮ್ಮನ್ನು ಹ್ಯಾಗೆ ಅಂಟಿಕೊಂಡಿತು? ಲೋಕಕ್ಕೆ ಮಾರ್ಗವ ತೋರಿಸುವದಕ್ಕಾಗಿ ನೀವು ಈ ಮೊದಲು ಮಾಡಿದ ತಪಶ್ಚರ್ಯವು ಎಲ್ಲಿ ಹೋಯಿತು? ನಿಮ್ಮಂಥ ಮಹಾಜನರೇ ಅವಿಚಾರ ಮಾರ್ಗವನ್ನು ಹಿಡಿದಬಳಿಕ ಮನುಷ್ಯಮಾತ್ರರ ಪಾಡೇನು? ಮನೆಯ ಯಜಮಾನನೇ ಕಳವನ್ನು ಮಾಡಹತ್ತಿದ ಬಳಿಕ ಆಶ್ರಿತರು ಯಾರನ್ನು ಮೊರೆ ಹೋಗಬೇಕು? ಸೂರ್ಯನೇ, ಕಗ್ಗತ್ತಲೆಯಲ್ಲಿ ಮುಳುಗಿದರೆ ಕಿರಣಗಳೂ ಮುಳುಗುವದರಲ್ಲೇನಾಶ್ಚರ್ಯವು? ತಮ್ಮಂಥವರು ಪ್ರಪಂಚದಲ್ಲಿ ಪಶುವಿನಂತೆ ವರ್ತಿಸಿದರೆ ಅವತಾರಕ್ಕೆ ಹೀನತ್ವವು ಬರುವದೆಂಬದು ಸಹಜವು. ಆದ್ದರಿಂದ ಸಾವಧಾನತೆಯನ್ನು ಕಾಯ್ದುಕೊಳ್ಳುವದು ವಿಹಿತವು. ಗುರುಜನರು ಆಚಾರವಿಚಾರಗಳನ್ನು ಶುದ್ಧವಾಗಿಟ್ಟುಕೊಳ್ಳತಕ್ಕದ್ದು; ಆಶಾಬದ್ಧ

ತೆಯಿಂದ ಎಂಥವರಿಗಾದರೂ ನೀಚತ್ವವು ಪ್ರಾಪ್ತವಾಗುತ್ತದೆ. ವಿಕಾರಗಳನ್ನು ಜಯಿಸಿದವನ ಮೈಯಲ್ಲಿ ಕಾಲನನ್ನು ಕೂಡಾ ದಂಡಿಸುವಷ್ಟು ಸಾಮರ್ಥ್ಯವು ಬರುತ್ತದೆ. ಕಾಮಾದಿ ವೈರಿಗಳನ್ನು ಗೆದ್ದವರು ಜಗತ್ತಿನಲ್ಲಿ ನಿರ್ಭಯದಿಂದ ಸಂಚರಿಸುತ್ತಾರೆ. ಅವರು ನಿಶ್ಚಯವಾಗಿ ಲೋಕಮಾನ್ಯರಾಗುತ್ತಾರೆ. ಗುರುಮಹಾರಾಜರೇ, ಈ ಬಾಲಕನ ಈ ಭಾಷಣವನ್ನು ಕೇಳಿ ತಾವು ವೈಭವದ ಅಭಿಲಾಷೆಯನ್ನು ತ್ಯಜಿಸಬೇಕು. ತಾವು ಪುನಃ ವೈರಾಗ್ಯವನ್ನು ಧಾರಣಮಾಡಬೇಕು. ಈ ಪ್ರಪಂಚವು ದುಃಖರೂಪವಾಗಿದೆ. ಈ ದುಃಖದ ಮೂಲವು ರಜೋಗುಣದಲ್ಲಿರುತ್ತದೆ ರಜೋಗುಣದ ಪ್ರಾಬಲ್ಯದಿಂದ ವಾಸನಾರೂಪೀಅಂಕುರವು ಭರದಿಂದ ಬೆಳೆಯುತ್ತದೆ. ವಾಸನಾರೂಪೀ ವೃಕ್ಷಕ್ಕೆ ಕ್ರೋಧವೆಂಬ ಹೂಗಳು ಬಿಡುವವು. ಈ ಹೂಗಳು ಮತ್ಸರವೆಂಬ ಸುಗಂಧದಿಂದ ಯುಕ್ತವಾಗಿರುತ್ತವೆ. ಈ ಹೂಗಳಿಂದ ಲೋಭ, ಆಶಾ, ತೃಷ್ಣಾ, ಅಸ್ವಸ್ಥತೆ ಇತ್ಯಾದಿ ಫಲಗಳು ಬಿಡುತ್ತವೆ. ಈ ಫಲಗಳು ಪಕ್ವವಾಗಲು ಇವನ್ನು ಭಕ್ಷಿಸುವದರಲ್ಲಿಯೇ ಪುರುಷನು ಧನ್ಯತೆಯನ್ನು ಪ್ರಕಟಿಸುತ್ತಾನೆ. ಈ ಫಲಗಳು ನೋಡಲಿಕ್ಕೆ ಚಂದವಿರುತ್ತವೆ. ತಿನ್ನಲಿಕ್ಕೆ ರುಚಿಯಿರುತ್ತವೆ; ಆದರೆ ಪರಿಣಾಮದಲ್ಲಿ ವಿಷಕಾರಕವಿರುತ್ತವೆ. ಆದ್ದರಿಂದ ಅವುಗಳ ಸೇವನೆಯಿಂದ ಮನುಷ್ಯನ ಘಾತವಾಗಿ ಅವನು ಯಮಸದನವನ್ನು ಕಾಣುತ್ತಾನೆ. ಯಮಪುರಿಯಲ್ಲಿ ಆತನಿಗೆ ಅನಂತಯಾತನೆಗಳುಂಟಾಗುತ್ತವೆ ಆಗ ಆತನು ಪಶ್ಚಾತ್ತಾಪಪಟ್ಟರೆ ಪ್ರಯೋಜನವೇನು? ಆದ್ದರಿಂದ ಮನುಷ್ಯನು ತನ್ನ ಉದ್ಧಾರದ ಮಾರ್ಗವನ್ನು ಮೊದಲೇ ಕಂಡುಕೊಳ್ಳಬೇಕು. ಯೋಗಿರಾಜನೇ, ನಾನು ಅಜ್ಞಾನಬಾಲಕನಿರುತ್ತೇನೆ. ಆದರೆ ನಿಮ್ಮ ಕೃಪೆಯಿಂದಲೇ ಭಾಗ್ಯಸಂಪನ್ನನಾಗಿರುತ್ತೇನೆ. ಈಗ ತಾವು ಈ ಪ್ರಪಂಚದ ಲಂಪಟವನ್ನು ತ್ಯಜಿಸಬೇಕು. ಮತ್ತು ಈ ಭ್ರಮರೂಪೀ ಸೌಖ್ಯವನ್ನು ತ್ಯಜಿಸಬೇಕು ಪೂರ್ವಸ್ಥಿತಿಗೆ ಬಂದು ತಮ್ಮ ಶಿಷ್ಯನಾದ ನನ್ನನ್ನು ಕೃತಾರ್ಥನನ್ನಾಗಮಾಡಬೇಕು.''

ಗೋರಕ್ಷನ ಈ ಜ್ಞಾನಪೂರ್ಣವಾದ ಮಾತುಗಳನ್ನು ಕೇಳಿ ಮಚ್ಛೀಂದ್ರನಿಗೆ ತುಂಬಾ ಸಂತೋಷವಾಯಿತು. ಆತನಲ್ಲಿ ಪೂರ್ವದ ವಿರಕ್ತಿಯು ಸಂಚರಿಸತೊಡಗಿತು. ಅವನು ಗೋರಕ್ಷನನ್ನು ಬಿಗಿಯಾಗಿ ಅಪ್ಪಿಕೊಂಡು

ನುಡಿದನೇನಂದರೆ —"ಗೋರಕ್ಷಾ, ನೀನು ಧನ್ಯನಿರುತ್ತೀ; ನಿನ್ನ ವೈರಾಗ್ಯವು ಪ್ರಖರವಿರುತ್ತದೆ. ನಿನ್ನ ಸ್ಥಿರವಾದ ವೈರಾಗ್ಯವನ್ನು ನೋಡಿ ನನಗೆ ಬಹಳ ಆನಂದವಾಗುತ್ತದೆ. ನಾನು ನಿನ್ನೊಡನೆ ಇಲ್ಲಿಂದ ಹೊರಟು ಬರುವೆನು."

ಈ ಮೇರೆಗೆ ಗುರುಗಳಿಂದ ಅಭಿವಚನವು ಸಿಗಲು ಗೋರಕ್ಷನು ಹಿಗ್ಗಿದನು. ಬಳಿಕ ಅವರು ಅಲ್ಲಿ ಬಹಳ ಹೊತ್ತು ಕುಳಿತುಕೊಳ್ಳದೆ ನೆಟ್ಟಗೆ ಪಾಕಶಾಲೆಗೆ ಹೋದರು. ಆ ಗುರು-ಶಿಷ್ಯರು ಅಂದು ಸುಗ್ರಾಸಭೋಜನ ಮಾಡಿದರು. ಊಟವಾದನಂತರ ಗೋರಕ್ಷನು ಸ್ವಲ್ಪ ವಾಮಕುಕ್ಷಿಯಾದನು; ಆದರೆ ಮಚ್ಛಿಂದ್ರನು ಮಲಗಿಕೊಳ್ಳದ ನೆಟ್ಟಗೆ ಕೀಲೋತಳೆಯ ಮಂದಿರಕ್ಕೆ ಹೋದನು, ಮತ್ತು ಕೀಲೋತಳೆಯ ಬಳಿಯಲ್ಲಿ ಕುಳಿತು ಇಂತು ನುಡಿದನು.—" ಪ್ರಿಯೇ, ನೀನು ಇಂದಿನವರೆಗೆ ಅನಂತ ಸೌಖ್ಯಗಳನ್ನು ಅನುಭವಿಸಿದೆ; ಆದರೆ ಇನ್ನು ಮುಂದೆ ಈ ಯೋಗವು ನಿನಗೆ ಒದಗಲಾರದು. ಗೋ-ರಕ್ಷನು ನನ್ನನ್ನು ಕರೆದುಕೊಂಡು ಹೋಗುವನು. ಅವನ ವೈರಾಗ್ಯಪೂರ್ಣವಾದ ಮಾತಿಗೆ ನಾನು ಸಂತುಷ್ಟನಾಗಿ ಆ ಪ್ರಕಾರ ವಚನ ಕೊಟ್ಟಿದ್ದೇನೆ; ಆದರೆ ನಿನ್ನ ವಿನಯ ಮೊದಲಾದವುಗಳನ್ನು ನೋಡಿದರೆ, ನಿನ್ನ ವಿಯೋಗವು ನನಗೆ ಅಸಹ್ಯವಾಗುತ್ತದೆ. ಪ್ರಿಯೇ, ನಿನಗೊಂದು ಸಂಗತಿಯನ್ನು ಹೇಳುತ್ತೇನೆ. ನೀನು ಇದುವರೆಗೆ ಗೋರಕ್ಷನಿಗೆ ವಿಷಯಸುಖದ ಅಭಿಲಾಷೆಯನ್ನು ಹುಟ್ಟಿಸಬೇಕೆಂದು ಪ್ರಯತ್ನಮಾಡಿ ನಿರಾಶಳಾಗಿರುವಿ. ಆದರೂ ಪುನಃ ಪ್ರಯತ್ನ ಮಾಡು. ಅವನಿಗೆ ವಿಷಯಾನುರಾಗ ಹುಟ್ಟಿಸಿ, ಅವನನ್ನು ಇಲ್ಲಿಯೇ ಇಟ್ಟುಕೊಳ್ಳುವದಕ್ಕೆ ಪ್ರಯತ್ನ ಮಾಡು."

ಈ ಮೇರೆಗೆ ಮಚ್ಛಿಂದ್ರನು ನುಡಿಯುತ್ತಿರಲು, ಗೋರಕ್ಷನು ಅಲ್ಲಿಗೆ ಬಂದನು. ಅವನು ಕೀಲೋತಳೆಗೆ ನಮಸ್ಕರಿಸಿ —ತಾಯಿಾ, ನಾನು ತೀರ್ಥಯಾತ್ರೆಗೆ ಹೋಗಬೇಕೆಂದು ಮಾಡಿದ್ದೇನೆ; ಗುರುಗಳೊಡನೆ ಹೊರಡುವ ಸಂಕಲ್ಪವ ಮಾಡಿರುವೆನು. ನೀನು ನಮಗೆ ಸಂತೋಷದಿಂದ ಅಪ್ಪಣೆಕೊಡು, ಎಂದು ನುಡಿದನು. ಗೋರಕ್ಷನ ಈ ಮಾತುಗಳನ್ನು ಕೇಳಿ ಕೀಲೋತಳೆಯು ಅಸಮಾಧಾನಪಟ್ಟರೂ ಅದನ್ನು ವ್ಯಕ್ತಗೊಳಿಸದೆ ನುಡಿದಳೇನಂದರೆ:-ಬಾಳಾ, ಗೋರಕ್ಷಾ, ಇದನ್ನೇನು ವಿಚಾರಮಾಡಿದೆ? ನಿನ್ನ ತಮ್ಮನು ಚಿಕ್ಕವನಿರುವನು; ನಾವು ಮುದುಕರಾಗುತ್ತ ನಡೆದೆವು. ನೀನೇ ಈ ರಾಜ್ಯಕ್ಕೆ ಆಧಾರ

ಸ್ತಂಭನಿರುತ್ತೀ; ಹೀಗಿರಲು ನೀನು ತೀರ್ಥ-ಯಾತ್ರೆಗೆ ಹೋಗಬೇಕೆನ್ನುವಿಯಲ್ಲ; ತಮ್ಮಾ, ನಿನಗೆ ಹೇಳಲಿನ್ನೇನು? ನೀನೇ ನಮ್ಮ ಸರ್ವಸ್ವವಾಗಿರುತ್ತೀ; ನಾನು ನಿನ್ನ ಮೇಲೆ ಎಷ್ಟು ಪ್ರೇಮ ಮಾಡುವೆನೆಂಬದು ನಿನಗೆ ಗೊತ್ತಿರುತ್ತದೆ. ನೀನು ಈ ರಾಜ್ಯವೈಭವಕ್ಕೆ ಅಧಿಕಾರಿಯಿರುತ್ತೀ; ಈ ಮೀನನಾಥನನ್ನು ಸಂರಕ್ಷಿಸುತ್ತ ನೀನು ಸುಖವಾಗಿ ಇಲ್ಲಿಯೇ ಇರಬೇಕು. ತಮ್ಮಾ, ನಿನ್ನ ಹೊರತು ಅನ್ಯರು ನಮ್ಮನ್ನು ಯಾರು ಕೇಳಬೇಕು? ಮೋಹವಿಲ್ಲದೆ ದುಃಖವು ಬರುವದೇ? ನೀನು ತೀರ್ಥ-ಯಾತ್ರೆಗೆ ಹೊರಟುಹೋದರೆ, ನಾವು ಮನೆಮನೆಗೆ ತಿರುಗುತ್ತ ಹೋಗಬೇಕೇನು? ಇದು ನಿನಗೆ ಸರಿದೋರುವದೇ? ನಮ್ಮನ್ನು ವಿಪತ್ತಿನಲ್ಲಿ ನೂಕಿ ತೀರ್ಥ-ಯಾತ್ರೆಗಳನ್ನು ಮಾಡುವದೇ ನಿನ್ನ ಹಟವಿದ್ದರೆ, ನೀನು ಇಲ್ಲಿಂದ ಹೊರಡುವಮೊದಲು ನಮ್ಮನ್ನು ಬಾವಿಯಲ್ಲಾದರೂ ನೂಕಿಸಿ ಹೋಗು.

ಈ ಮೇರೆಗೆ ಕೀಲೋತಳೆಯು ರಸವತ್ತಾಗಿ ಮಾತನಾಡಿದರೂ ಗೋರಕ್ಷನಿಗೆ ವಿಷಯಾಭಿಲಾಷೆಯುಂಟಾಗಲಿಲ್ಲ, ಅವನು ತಾಯಿಯನ್ನು ಕುರಿತು ನುಡಿದನೇನಂದರೆ:—ತಾಯಿ, ನೀನನ್ನುವದು ಯೋಗ್ಯವಿರುತ್ತದೆ; ಆದರೆ ನಾನು ಜೋಗಿಯು. ಈ ವೈಭವವು ನನಗೆ ತುಚ್ಛವಾಗಿರುತ್ತದೆ. ನಿನ್ನ ಈ ಸ್ತ್ರೀರಾಜ್ಯದ ಬೆಲೆಯು ನಿನಗೇ ಇರುತ್ತದಲ್ಲದೆ, ನನಗೆ ಸ್ವಲ್ಪಾದರೂ ಇರುವದಿಲ್ಲ. ನನಗೆ ತ್ರಿಲೋಕವೇ ಜಹಗೀರಾಗಿ ದೊರೆತಿರುತ್ತದೆ. ನಿನ್ನ ಸ್ತ್ರೀರಾಜ್ಯವು ನಿನಗೇ ಇರಲಿ; ನಾವು ತೀರ್ಥ-ಯಾತ್ರೆಗೆ ಹೊರಟುಹೋಗುವೆವು. ನಮಗೆ ಯೋಗವೇ ಧರ್ಮವು: ಸದಾಚಾರ, ಪುಣ್ಯ, ಪರೋಪಕಾರಗಳೇ ನಮಗೆ ಸುಖ-ವೈಭವಗಳು. ಆದ್ದರಿಂದ ನಮಗೆ ಸುಮ್ಮನೆ ಆಗ್ರಹಮಾಡದೆ ಹೊರಟುಹೋಗಲು ಅಪ್ಪಣೆ ಕೊಡು.''

ಗೋರಕ್ಷನ ನಿರ್ಧಾರದ ಮಾತುಗಳನ್ನು ಕೇಳಿ ಕೀಲೋತಳೆಯು ಮತ್ತಿಷ್ಟು ಚಿಂತೆಗೆ ಒಳಗಾದಳು. ಈತನು ಸಂಪತ್ತಿಗಾಗಲಿ, ಇನ್ನುಳಿದ ವಿಷಯಸುಖಗಳಿಗಾಗಲಿ ಮೋಹಗೊಳ್ಳುವದಿಲ್ಲೆಂದು ತಿಳಿದಳು. ಆಗ ಅವಳು ತನ್ನ ಮನಸ್ಸಿನಲ್ಲಿ ಹೀಗೆ ವಿಚಾರ ಮಾಡಿದಳು. ಏನೆಂದರೆ:—ಗೋರಕ್ಷನಿಗೆ ಒಂದು ಸುಂದರವಾದ ಕನ್ಯೆಯನ್ನು ತೆಗೆದು ಲಗ್ನ ಮಾಡಬೇಕು. ಅಂದರೆ ಅವನಿಗೆ ಸಂಸಾರದ ಮೋಹವು ಹತ್ತುವದು.

ಹೀಗೆ ಯೋಚಿಸಿ ಆ ರಾಣಿಯು ಪ್ರಕಟವಾಗಿ ನುಡಿದಳೇನಂದರೆ:— “ ಅಪ್ಪಾ ಮಗು, ನನ್ನ ಒಂದು ಮಾತನ್ನು ಕೇಳು. ನೀನು ತೀರ್ಥ-ಯಾತ್ರೆಗಳಿಗೆ ಹೋಗುವ ನಿನ್ನ ನಿರ್ಧಾರವನ್ನು ಬಿಡದಿದ್ದರೂ ಚಿಂತೆಯಿಲ್ಲ. ಈಗ ಆರು ತಿಂಗಳುಗಳಿಂದ ನೀನು ನಮ್ಮಲ್ಲಿರುತ್ತೀ; ಆದರೆ ಒಂದು ವರುಷವಾದರೂ ನೀನು ನಮ್ಮಲ್ಲಿರಬೇಕು. ಇನ್ನು ಆರು ತಿಂಗಳುಗಳವರೆಗೆ ಇದ್ದೆಯೆಂದರೆ ಒಂದು ವರುಷವಾಗುವದು. ಯುಗಾದಿಯ ದಿವಸ ಮಚ್ಛಿಂದ್ರನೊಡನೆ ಅವಶ್ಯವಾಗಿ ತೀರ್ಥ-ಯಾತ್ರೆಗೆ ಹೋಗಬಹುದು. ಇಷ್ಟು ಅಲ್ಪಾವಧಿಗಾಗಿ ನನ್ನನ್ನು ಅಸಮಾಧಾನಗೊಳಿಸಬೇಡ. ”

ಈ ಪ್ರಕಾರ ಕೀಲೋತಳೆಯು ನುಡಿಯಲು ಗೋರಕ್ಷನು ಆರುತಿಂಗಳುಗಳೆಂದರೆ ನೀರು ಕುಡಿದಂತೆ ಗತಿಸಿ ಹೋಗುವವು. ಇಷ್ಟಕ್ಕಾಗಿ ಯಾಕೆ ಈಕೆಗೆ ತೊಂದರೆ ಕೊಡಬೇಕು; ಎಂದು ಯೋಚಿಸಿ ಹಾಗೇ ಆಗಲೆಂದು ನುಡಿದನು. ಆರುತಿಂಗಳು ಇರುವದಕ್ಕೆ ಗೋರಕ್ಷನು ಒಪ್ಪಿಕೊಂಡದ್ದರಿಂದ ಕೀಲೋತಳೆಗೆ ಪರಮಾನಂದವಾಯಿತು. ಈ ಅವಧಿಯಲ್ಲಿ ಗೋರಖನಿಗೆ ಸಂಸಾರದ ಬೇಡಿಯನ್ನು ತೊಡಿಸಬೇಕೆಂದು ಆಕೆಯು ಮನಸ್ಸಿನಲ್ಲಿ ಮುಂದಿಗೆ ರಚಿಸತೊಡಗಿದಳು.

ಮುಂದೆ ಒಂದು ದಿನ ಗೋರಕ್ಷನು ಒಬ್ಬನೇ ಕುಳಿತಾಗ ಕೀಲೋತಳೆಯು ಅವನ ಬಳಿಗೆ ಹೋದಳು. ಮತ್ತು ಅವನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಅವನ ಜಟೆಗಳನ್ನು ತೀಡುತ್ತ—ಬಾಲಕಾ, ನಿನಗೆ ಲಗ್ನ ಮಾಡಬೇಕೆಂದು ನನ್ನ ಇಚ್ಛೆಯಿರುತ್ತದೆ. ಇದಕ್ಕೆ ನೀನೇನೆನ್ನುವಿ? ನೀನು ಒಪ್ಪಿಕೊಂಡರೆ ಒಬ್ಬ ಸುಂದರಳಾದ ಕನ್ಯೆಯನ್ನು ನೋಡಿ ನಿನಗೆ ಮದುವೆ ಮಾಡುವೆನು. ನೀನು ತೀರ್ಥ-ಯಾತ್ರೆ ಮಾಡಿ ಬರುವವರೆಗೆ ನಾನು ಸೊಸೆಯನ್ನು ನೋಡಿ ಹೊತ್ತುಗಳೆಯುವೆನು; ಅಮ್ಮಾ, ಪುರುಷರು ಲಗ್ನವಿಲ್ಲದೆ ಮನಬಂದಂತೆ ತಿರುಗಾಡಬಾರದು. ಮನುಷ್ಯನಿಗೆ ಸಂಸಾರವಿದ್ದರೆ ಅವನು ವಿವೇಕದಿಂದ ವರ್ತಿಸುತ್ತಾನೆ. ಎಂದು ನುಡಿದಳು.

ತಾಯಿಯ ಈ ಮಾತನ್ನು ಕೇಳಿ ಗೋರಕ್ಷನು—ತಾಯಿಯಾ, ನೀನು ನನ್ನ ವಿಷಯವಾಗಿ ತಪ್ಪು ತಿಳಿದಿರುತ್ತೀ; ನಾನು ಇದುವರೆಗೆ ಇಬ್ಬರು ಸ್ತ್ರೀಯರನ್ನು ಲಗ್ನವಾಗಿರುತ್ತೇನೆ. ಅವರಿಗೆ ಕರ್ಣಮುದ್ರಿಕೆಯರೆಂಬ

ಸಂಜ್ಞೆಯಿರುತ್ತದೆ. ಗುರುಕೃಪೆಯಿಂದ ಒಮ್ಮೆ ನಾನು ಪರಿಗ್ರಹಿಸಿದ ಕಾಂತೆಯರನ್ನು ತ್ಯಜಿಸಿ ಅನ್ಯ ಸ್ತ್ರೀಯನ್ನು ಹ್ಯಾಗೆ ಮದುವೆಯಾಗಲಿ? ನನ್ನ ನಿಜವಾದ ಮಾತೆಯಾದ ಗುರುಭಕ್ತಿಯೆಂಬವಳು ನಾನು ಅನ್ಯಸ್ತ್ರೀಯನ್ನು ಲಗ್ನವಾದರೆ ನನಗೆ ಶಾಸನ ಮಾಡದೆ ಬಿಡಳು. ತಾಯಿ, ನಿನ್ನ ಇಚ್ಛೆಯನ್ನು ನಾನು ಹ್ಯಾಗೆ ಪೂರ್ಣ ಪಡಿಸಲಿ? ಎಂದು ನುಡಿದನು.

ಗೋರಕ್ಷನ ಈ ಮಾತುಗಳನ್ನು ಕೇಳಿ ಕೀಲೋತಳೆಗೆ ಆಶ್ಚರ್ಯವೆನಿಸಿತು. ಆತನ ವಿರಕ್ತಿಯು ಘನತರವಾದದ್ದೆಂದು ತಿಳಿದಳು. ಇಂದಿನ ವರೆಗೆ ಅವಳು ಆತನ ವಿರಕ್ತಿಯನ್ನು ಪರೀಕ್ಷಿಸಿ ನಿರಾಶಳಾಗಿದ್ದಳು. ಆದರೆ ಅವಳು ಆಶಾವಾದಿಯಿದ್ದಳಾದ್ದರಿಂದ ಪುನಃ ಪುನಃ ಗೋರಕ್ಷನನ್ನು ಒಲಿಸಲಿಕ್ಕೆ ಪ್ರಯತ್ನ ಮಾಡಿ ಕೊನೆಗೆ ಪೂರ್ಣ ನಿರಾಶಳಾದಳು. ಗೋರಕ್ಷನು ವಿಷಯಸುಖಕ್ಕೆ ಮೆಚ್ಚಲಾರನೆಂಬದು ಅವಳಿಗೆ ಮನವರಿಕೆಯಾಯಿತು. ಈ ಮನವರಿಕೆಯಿಂದ ಅವಳ ಚಿಂತೆಯು ಹೆಚ್ಚಿತು. ದಿವಸಗಳು ಒಂದರಹಿಂದೊಂದು ಕಳೆದು ಹೋಗಲಾರಂಭಿಸಿದವು. ವರ್ಷಪ್ರತಿಪದೆಯು ಸಮೀಪಿಸಿದ ಹಾಗೆ ಅವಳು ಮನಸ್ಸಿನಲ್ಲಿಯೇ ಸೊರಗಲಾಗತೊಡಗಿದಳು. ಆಕೆಗೆ ಆಭರಣಗಳು ಬೇಡಾದವು. ಊಟ ಮೊದಲಾದವುಗಳು ಬೇಡಾದವು. ಸರ್ವದಾ ಅವಳು ಮಚ್ಛಿಂದ್ರನ ವಿರಹಚಿಂತೆಯಿಂದ ಬಳಲತೊಡಗಿದಳು. ಹೀಗಿರಲು ಕೀಲೋತಳೆಗೆ ಕಾಲಸ್ವರೂಪವಾದ ಯುಗಪ್ರತಿಪದೆಯು ಬಂದಿತು. ಆ ದಿವಸ ನಸುಕಿನಲ್ಲಿದ್ದು, ಗೋರಕ್ಷನು ತನ್ನ ಮೈಮೇಲಿರುವ ಬೆಲೆಯುಳ್ಳ ವಸ್ತ್ರಾಭರಣಗಳನ್ನು ಬಿಸುಟಿ ವೈರಾಗಿಯ ಉಡಿಗೆಗಳನ್ನು ಧರಿಸಿದನು. ಮತ್ತು ನಾಥಪಂಥೀಯ ಸಾಹಿತ್ಯಗಳನ್ನು ತೆಗೆದುಕೊಂಡು ಮಚ್ಛಿಂದ್ರನ ಬಳಿಗೆ ಹೋಗಿ ನಮಸ್ಕರಿಸಿ—ಮಹಾರಾಜ, ಇನ್ನು ಹೊರಡಬೇಕು ಎಂದು ಬಿನ್ನವಿಸಿದನು, ಗೋರಕ್ಷನ ಈ ಸಿದ್ಧತೆಯಿಂದ ಕೀಲೋತಳೆಗೆ ಆಕಾಶವೇ ಕಡಕೊಂಡು ಬಿದ್ದಂತಾಯಿತು. ಅವಳು ಮಚ್ಛಿಂದ್ರನ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ದೊಡ್ಡದನಿಯಿಂದ ಅಳತೊಡಗಿದಳು. ಮಚ್ಛಿಂದ್ರನು ಅವಳನ್ನು ಎಷ್ಟು ಪರಿಯಿಂದ ಸಮಾಧಾನಗೊಳಿಸಿದರೂ ಅವಳ ದುಃಖವು ನಿಲ್ಲದಾಯಿತು. ಕೊನೆಗೆ ಅವಳು ತಾನೇ ಸಮಾಧಾನ ತಂದುಕೊಂಡು ಮಚ್ಛಿಂದ್ರನಿಗೆ ಊಟ ಮಾಡಿ ಹೋಗಬೇಕೆಂದು ನುಡಿದಳು.

ಆ ಮಾತಿಗೆ ಮಚ್ಛೇಂದ್ರನು ಒಪ್ಪಿಕೊಂಡನು. ಅಂದು ಕೀಲೋತಳೆಯು ಮಧುರತರ ಪದಾರ್ಥಗಳನ್ನು ಮಾಡಿಸಿದಳು. ದಾಸಿಯರು ಅರಮನೆಯ ಮುಂದೆ ಗುಡಿ ತೋರಣಗಳನ್ನು ಕಟ್ಟಿ ಉತ್ಸವವನ್ನು ನಡಿಸಿದರು. ಕೀಲೋತಳೆಗೆ ಮನಸ್ಸಿನಲ್ಲಿ ಸ್ವಲ್ಪವೂ ಸಮಾಧಾನವಿರಲಿಲ್ಲ. ಆಕೆಯು ಗೋರಕ್ಷನನ್ನು ಮನದಲ್ಲಿಯೇ ಶಪಿಸತೊಡಗಿದಳ. ಹೀಗಾಗುತ್ತ ಮಚ್ಛೇಂದ್ರಗೋರಕ್ಷರ ಊಟವಾಯಿತು. ಅವರು ಹೊರಡಲು ಸಿದ್ಧರಾದರು. ಮತ್ತೆ ಕೀಲೋತಳೆಗೆ ದುಃಖವು ಒತ್ತರಿಸಿ ಬಂದಿತು. ಅವಳು ಮೀನನಾಥನ ಬಗ್ಗೆ ಕೇಳಿದಳು. ಅವನನ್ನು ನಮ್ಮ ಸಂಗಡ ಕರೆದುಕೊಂಡು ಹೋಗೆಂದರೆ ಹೋಗುವೆವು; ಬೇಡವೆಂದರೆ ಬಿಡುವೆವು ಎಂದು ಮಚ್ಛೇಂದ್ರನು ಹೇಳಿದನು. ಆಗ ಕೀಲೋತಳೆಯು ವಿಚಾರಮಾಡಿ:—ಮಹಾರಾಜ ತಾವು ಇದುವರೆಗೆ ಇಲ್ಲಿ ಇದ್ದದರಿಂದ ತಮ್ಮ ಸಾಮರ್ಥ್ಯ ಪ್ರಭಾವದಿಂದ ಮೀನನಾಥನು ಬದುಕಿ ಉಳಿದಿರುವನು. ನೀವು ಹೊರಟು ಹೋದಬಳಿಕ ಇವನು ಮಾಂಸತಿಂದು ಬುಭುಕ್ಷಕಾರದಿಂದ ಮರಣ ಹೊಂದುವನು. ಇದೂ ಅಲ್ಲದೆ ಇಲ್ಲಿ ನಾನಿರುವ ಅವಧಿಯೂ ತೀರುತ್ತ ಬಂದದೆ; ಉಪರಿಕ್ಷುವಸುವಿನ ಉಶಾಪದಂತೆ ನಾನು ಇನ್ನು ಸ್ವರ್ಗಕ್ಕೆ ಹೋಗತಕ್ಕವಳಿರುತ್ತೇನೆ. ಸ್ವರ್ಗದಲ್ಲಿ ಮೀನನಾಥನ ಪ್ರವೇಶವಾಗದು. ಆದ್ದರಿಂದ ಅವನನ್ನು ನೀವು ನಿಮ್ಮ ಸಂಗಡ ಕರೆದುಕೊಂಡು ಹೋಗುವದೇ ಒಳ್ಳೇದೆಂದು ನುಡಿದಳು. ಇನ್ನು ಬಹಳ ಹೊತ್ತು ತಡೆದರೆ ಈ ಶೋಕವು ಹೇಗೆಯೋ ಬೆಳೆಯುತ್ತ ಹೋಗುವದೆಂದು ತಿಳಿದು ಗೋರಕ್ಷನು ಮೀನನಾಥನನ್ನು ಎತ್ತಿ ಹೆಗಲ ಮೇಲೆ ಕುಳ್ಳಿರಿಸಿಕೊಂಡು ನಡೆದನು. ಮಚ್ಛೇಂದ್ರನು ಉಪಾಯವಿಲ್ಲದೆ ಶಿಷ್ಯನನ್ನು ಹಿಂಬಾಲಿಸಿದನು. ಆಗ ಕೀಲೋತಳೆಗಾದ ದುಃಖವನ್ನು ವರ್ಣಿಸಲಸದಳವು. ಅವಳ ಶೋಕವಾರ್ತೆಯು ನಗರಿಯಲ್ಲಿ ಪಸರಿಸಿತು. ಗ್ರಾಮವಾಸಿಗಳಾದ ಎಲ್ಲ ಹೆಂಗಳೆಯರೂ ರಾಣಿಯ ಬಳಿಗೆ ಬಂದರು. ಗೋರಕ್ಷನು ಮುಂದೆ ಮುಂದೆ ಹೋಗುತ್ತಿದ್ದನು. ಅವನ ಹಿಂದೆ ಮಚ್ಛೇಂದ್ರನು ಸಾಗಿದ್ದನು. ಮಚ್ಛೇಂದ್ರನ ಹಿಂದೆ ಕೀಲೋತಳೆಯು ಶೋಕಿಸುತ್ತ ನಡೆದಿದ್ದಳು. ಅವಳು ಗೋರಕ್ಷನನ್ನು ಒದರಿ ನಿಲ್ಲಿಸಬೇಕೆಂದು ಪ್ರಯತ್ನಿಸಿದಳು. ಆದರೆ ಅವನು ತಿರುಗಿ ಸಹ ನೋಡಲಿಲ್ಲ. ಕೊನೆಗೆ ಅವಳು:-ಗೋರಕ್ಷನೇ, ಮಚ್ಛೇಂದ್ರನು ನೊರಗಿರು

ವನು; ಮೀನನಾಥನು ಇನ್ನೂ ಸಣ್ಣವನು. ಇಬ್ಬರನ್ನೂ ನಿನ್ನ ಉಡಿಯಲ್ಲಿ ಹಾಕಿದ್ದೇನೆ. ಸಂಬಾಳಿಸಿ ಕರೆದುಕೊಂಡು ಹೋಗು ಎಂದು ಹೇಳಿದಳು. ಗೋರಕ್ಷನು ಮಚ್ಛೇಂದ್ರನ ಕೈ ಹಿಡಿದು ಒತ್ತರದಿಂದ ಸಾಗಿ ಸ್ವಲ್ಪ ಹೊತ್ತಿನಲ್ಲಿಯೇ ರಾಣಿಗೆ ಕಾಣದಂತಾದನು. ಕೀಲೋತಳೆಯು ನೆಲದ ಮೇಲೆ ಬಿದ್ದು ಹೊರಳಾಡಹತ್ತಿದಳು. ಬಾಯಲ್ಲಿ ಮಣ್ಣು ಹಾಕಿಕೊಳ್ಳಲಾರಂಭಿಸಿದಳು. ಹೀಗೆ ಅವಳು ದುಃಖಿಸುತ್ತಿರಲು ಅಲ್ಲಿಗೆ ಉಪರಿಕ್ಷವಸುವು ಬಂದನು. ಆತನು ಕೀಲೋತಳೆಯನ್ನು ಕುರಿತು—ಪಾಪಿಣೀ, ಹೀಗೇಕೆ ಶೋಕಿಸುವೆ? ನೀನಾರು? ಇಲ್ಲಿಗೆ ಹ್ಯಾಗೆ ಬಂದಿರುವಿ? ಎಂಬದರ ವಿಚಾರವನ್ನು ಸ್ವಲ್ಪಾದರೂ ಮಾಡುವಿಯಾ? ಎಂದು ನುಡಿದು ಅವಳನ್ನು ಉಚಿತಮಾತಿನಿಂದ ಸಮಾಧಾನಗೊಳಿಸಿ ಅರಮನೆಗೆ ಕರೆದೊಯ್ದನು.

---

## ಅಧ್ಯಾಯ ೨೨

### ಮೀನನಾಥನ ನಾಶವೂ, ಪುನಃ ಸಂಜೀವನವೂ.

ಮೈನಾಕಿನಿಯು ಉಪರಿಕ್ಷವಸುವಿನ ಸಮಾಧಾನೋಕ್ತಿಗಳನ್ನು ಕೇಳಿ ಅರಮನೆಗೆ ಬಂದರೂ ಅಂತರಂಗದಲ್ಲಿ ಅವಳಿಗೆ ಸಮಾಧಾನವಿಲ್ಲದೆ ಹೋಯಿತು. ಅವಳು ಮಚ್ಛೇಂದ್ರನ ವಿರಹದಿಂದ ತಳಮಳಿಸಲಾರಂಭಿಸಿದಳು. ಆಗ ಆ ವಸುವು ಆಕೆಯ ಅಜ್ಞಾನಕ್ಕೆ ನಕ್ಕು ನುಡಿದನೇನಂದರೆ—ಮೈನಾಕಿನೀ, ನೀನು ನಿಜವಾಗಿಯೂ ಅಜ್ಞಳಿರುತ್ತೀ; ಈ ದೃಶ್ಯವೆಲ್ಲನಾಶವಂತವಿರುತ್ತಿರಲು ಯಾವದೊಂದು ಸಂಗತಿಗೆ ಮಹತ್ವವ ಕೊಟ್ಟು ಹೀಗೆ ದುಃಖಪಡುವದು ಎಷ್ಟು ದಡ್ಡತನವು! ನೀನು ಸ್ವರ್ಗಲೋಕವಾಸಿನಿಯು; ಮಚ್ಛೇಂದ್ರನು ಮನುಷ್ಯನು. ಶಾಪಯೋಗದಿಂದ ನಿನಗೂ ಆತನಿಗೂ ಸಂಬಂಧವಾಯಿತು. ಶಾಪವಿಮೋಚನೆಯ ಕಾಲವು ಒದಗಲು ನಿನ್ನ ಅವನ

ವಿಯೋಗವಾಯಿತು. ಇದರಲ್ಲಿ ಕೆಟ್ಟದ್ದೇನು? ಶಾಪವಿಮೋಚನೆಯು ನಿನಗೆ ಬೇಕಿಲ್ಲವೆ? ನೀನು ಸ್ವರ್ಗದಲ್ಲಿ ಪಡುವ ಸೌಖ್ಯವನ್ನು ಮರೆತೆಯಾ? ಮಚ್ಛೇಂದ್ರನು ತನ್ನ ಹಿತಕ್ಕೋಸ್ಕರ ಹೀಗೆ ಪೂರ್ವಸ್ಮರಣವನ್ನು ಹೊಂದಿ ನಿನ್ನನ್ನು ತ್ಯಜಿಸಿ, ಹ್ಯಾಗೆ ಹೋದನೋ ಹಾಗೆ ನೀನು ನಿನ್ನ ಪೂರ್ವಸ್ಮರಣವನ್ನು ಹೊಂದಿ ನಿನ್ನ ಸ್ವಸ್ಥಳಕ್ಕೆ ನಡೆ. ಮೈನಾಕಿನೀ ನೀನು ನನ್ನ ಜೊತೆಗೆ ಬಂದರೆ ನಿನ್ನನ್ನು ಸಿಂಹಲದ್ವೀಪಕ್ಕೆ ಕರೆದೊಯ್ದು, ಪೂರ್ವವತ್ ಸುಖವನ್ನು ಅನುಭವಿಸಹಚ್ಚುವೆನು.''

ಈ ಮೇರೆಗೆ ಉಪರಿಕ್ಷವಸುವು ತನ್ನ ಸೊಸೆಯನ್ನು ಕುರಿತು ನುಡಿಯಲು ಆಕೆಯು—ಮಹಾರಾಜ, ನೀವು ಏನು ಹೇಳಿದರೂ ನನಗೆ ಸಮಾಧಾನವೆನಿಸುವದಿಲ್ಲ. ಮಚ್ಛೇಂದ್ರನ ವಿಯೋಗವು ನನಗೆ ಅಸಹ್ಯವಾಗಿದೆ ಎಂದಳು. ಆ ಮಾತನ್ನು ಕೇಳಿ ಪುನಃ ವಸುವು ನುಡಿದನೇನಂದರೆ—ಮೈನಾಕಿನೀ ಚಿಂತೆಮಾಡಬೇಡ; ನನ್ನೊಡನೆ ನೀನು ಈಗ ಸಿಂಹಲದ್ವೀಪಕ್ಕೆ ಬಂದರೆ ನಿನಗೆ ಮಚ್ಛೇಂದ್ರ-ಮೀನನಾಥರ ದರ್ಶನ ಮಾಡಿಸುವೆನು. ಇಂದಿಗೆ ೧೨ ವರ್ಷಗಳ ಮೇಲೆ ಇಂದ್ರನು ಸಿಂಹಲದ್ವೀಪದಲ್ಲಿ ಒಂದು ದೊಡ್ಡ ಯಜ್ಞವನ್ನು ಮಾಡುತ್ತಾನೆ. ಆ ಯಜ್ಞಕ್ಕೋಸ್ಕರ ಎಲ್ಲ ದೇವತೆಗಳೂ ಋಷಿಗಳೂ ಬರುವರು. ಮಚ್ಛೇಂದ್ರ, ಮೀನನಾಥ, ಗೋರಖ, ಗಹಿನೀ, ಗೋಪೀಚಂದ ಮೊದಲಾದವರು ಬರುವರು. ಆಗ ನಿನಗೆ ಮಚ್ಛೇಂದ್ರ-ಮೀನನಾಥರ ದರ್ಶನವಾಗುವದು.''

ವಸುವಿನ ಈ ಮಾತು ಕೇಳಿ ಮೈನಾಕಿನಿಯು—ದೇವೇಂದ್ರನು ಯಜ್ಞ ಮಾಡಲಿ ಮಾಡದೆ ಇರಲಿ ನೀವು ನನಗೆ ಮಚ್ಛೇಂದ್ರ-ಮೀನನಾಥರ ಭೆಟ್ಟೀ ಮಾಡಿಸುವೆನೆಂದು ವಚನ ಕೊಟ್ಟರೆ ನನಗೆ ಪೂರ್ಣ ಸಮಾಧಾನವಾಗುವದು. ನಿಮ್ಮ ವಚನರೂಪೀ ರತ್ನವನ್ನು ನಾನು ನನ್ನ ಹೃದಯದಲ್ಲಿ ಗಟ್ಟಿಯಾಗಿಟ್ಟುಕೊಂಡು ಸಂರಕ್ಷಿಸುವೆನು ಎಂದು ನುಡಿದಳು. ವಸುವು ಅದರಂತೆ ಮಾಡಲು ವಚನ ಕೊಟ್ಟನು. ಬಳಿಕ ಕೀಲೋತಳೆಯು ವಸುವಿನೊಡನೆ ಹೊರಡಲು ಸಿದ್ಧಳಾದಳು; ಆದರೆ ಸ್ತ್ರೀ ರಾಜ್ಯದ ಅರಸೊತ್ತಿಗೆಯನ್ನು ಯಾರಿಗೆ ಕೊಡಬೇಕೆಂದು ಯೋಚಿಸಿ ವಸುವಿನ ಸಮ್ಮತಿಯಿಂದ ದೈಭಾರ್ವೆ ಯೆಂಬ ಕರ್ತೃತ್ವ ಶಾಲಿನಿಯಾದ ಓರ್ವ ಸ್ತ್ರೀಗೆ ಕೊಡಬೇಕೆಂದು ನಿಶ್ಚಯಿಸಿ

ಆ ಪ್ರಕಾರ ಜವನಿಸ್ನು ಲಟ್ಟಕ್ಕೆ ಕುಳ್ಳಿರಿಸಿದಳು; ಮತ್ತು ಪ್ರಜೆಗಳನ್ನು ಹ್ಯಾಗೆ ಕಾಪಾಡಬೇಕೆಂಬ ಧರ್ಮವನ್ನು ಅವಳಿಗೆ ಉಪದೇಶಿಸಿದಳು. ಮೈನಾಕಿನಿಯು ಸ್ವರ್ಗಕ್ಕೆ ಹೋಗುವಳೆಂಬದನ್ನು ತಿಳಿದು ನಗರವಾಸಿನಿಯರು ಶೋಕಾಕುಲ ರಾದರು. ಆಗ ಮೈನಾಕಿನಿಯು ಅವರೆಲ್ಲರನ್ನು ಸಮಾಧಾನಗೊಳಿಸಿ ವಸು ವಿನೊಡನೆ ವಿಮಾನವನ್ನೇರಿ ಸ್ವರ್ಗಕ್ಕೆ ಹೊರಟು ಹೋದಳು.

ಈ ಪ್ರಕಾರ ಮೈನಾಕಿನಿಯು ಶಾಪದಿಂದ ಮುಕ್ತಳಾಗಿ ಪೂರ್ವ ಸ್ಥಿತಿಯನ್ನು ಹೊಂದಲು, ಇತ್ತ ಗುರುಗಳೊಡನೆ ಹೊರಟ ಗೋರಖನು ಪಯ ಣದ ಮೇಲೆ ಪಯಣ ಮಾಡುತ್ತ ಕಾನೀಫನಿಗೂ ತನಗೂ ಭೆಟ್ಟಿಯಾದ ಸ್ಥಳಕ್ಕೆ ಬಂದನು ಆಗ ಆತನಿಗೆ ಹಿಂದಿನ ಎಲ್ಲ ಸಂಗತಿ ನೆನಪಾಗಿ ಕಂಠವು ಬಿಗಿದು ಬಂದಿತು. ಮಚ್ಛೇಂದ್ರನು ಅದರ ಕಾರಣವನ್ನು ಕೇಳಲು ಗೋರ ಖನು ಸಾವರಿಸಿಕೊಂಡು ಗುರುವಿಯೋಗವಾದಾಗ ತಾನು ಕಷ್ಟಪಟ್ಟದ್ದನ್ನೂ ಗುರುಗಳ ಸಂಗತಿಯು ಹ್ಯಾಗೆ ಗೊತ್ತಾಯಿತೆಂಬದನ್ನೂ ಹೇಳಿದನು. ಮಚ್ಛೇಂದ್ರನು ಗೋರಕ್ಷನ ಭಕ್ತಿ-ವಿಶ್ವಾಸಗಳಿಗೆ ತಲೆದೂಗಿದನು. ಆಗ ಗೋರಖನು ಜಾಲಂಧರನನ್ನು ಗೋಪೀಚಂದನು ಹೂಗಿದಿಟ್ಟ ಸಂಗತಿಯನ್ನು ಹೇಳಿದನು. ಅದರ ಶ್ರವಣದಿಂದ ಮಚ್ಛೇಂದ್ರನಿಗೆ ಅತಿಶಯವಾದ ಸಿಟ್ಟು ಬಂದಿತು. ಈಗಲೇ ಹೇಲಾಪಟ್ಟಣಕ್ಕೆ ಹೋಗಿ ಗೋಪೀಚಂದನನ್ನು ಭಸ್ಮೀ ಭೂತನನ್ನಾಗ ಮಾಡಬೇಕೆಂದು ಯೋಚಿಸಿದನು. ಆ ಪ್ರಕಾರ ಅತನು ಗೋರಕ್ಷನೊಡನೆ ಶೀಘ್ರಗತಿಯಿಂದ ಹೇಲಾಪಟ್ಟಣಕ್ಕೆ ಹೋದನು. ಆದರೆ ಅಲ್ಲಿ ಹೋಗಿ ವಿಚಾರಿಸುತ್ತಿರಲು ಕಾನೀಫನು ಯುಕ್ತಿಯಿಂದ ಜಾಲಂದರ ನನ್ನು ಹೊರಗೆ ತೆಗೆಯಿಸಿದನೆಂದೂ ಗೋಪೀಚಂದನು ಜಾಲಂದರನ ಅನುಗ್ರ ಹಕ್ಕೆ ಪಾತ್ರನಾಗಿ ಈಗ ಬದರಿಕಾಶ್ರಮದಲ್ಲಿ ತಪಸ್ಸು ಮಾಡುತ್ತಿರುವನೆಂದೂ ಗೊತ್ತಾಯಿತು. ಅದನ್ನು ತಿಳಿದು ಮಚ್ಛೇಂದ್ರನ ಸಿಟ್ಟು ಶಾಂತವಾಯಿತು. ಬಳಿಕ ಅವನು ಗೋಪೀಚಂದನ ರಾಜ್ಯದ ವ್ಯವಸ್ಥೆಯನ್ನು ಕೇಳಿದನು. ಗೋಪೀಚಂದನ ಮಗನಾದ ಮುಕ್ತಚಂದನೆಂಬವನೂ ತಾಯಿಯಾದ ಮೈ-ನಾವತಿ ಎಂಬವಳೂ ರಾಜ್ಯಸೂತ್ರಗಳನ್ನು ನಡಿಸುತ್ತಿದ್ದು ಅವರು ಜಾಲಂ ಧರ ಯೋಗಿಗಳ ಕೃಪೆಗೆ ಪಾತ್ರರಾಗುವರೆಂದು ಪುರಜನರು ಹೇಳಿದರು. ಮೈನಾವತಿ-ಮುಕ್ತಚಂದರವರನ್ನು ಭೆಟ್ಟಿಯಾಗಬೇಕೆಂದು ಮಚ್ಛೇಂದ್ರನು

ಇಚ್ಛಿಸಿ ರಾಜಮಂದಿರಕ್ಕೆ ಹೋದನು. ಮೈನಾವತಿಯು ಬಹು ಆದರ ದಿಂದ ಮಚ್ಛೀಂದ್ರನನ್ನು ಮನ್ನಿಸಿದಳು. ಆಕೆಯ ಭಕ್ತಿಯನ್ನು ನೋಡಿ ಮಚ್ಛೀಂದ್ರನು ಸಂತೋಷಪಟ್ಟು ಜಾಲಂದರನು ನನ್ನ ಗುರುಬಂಧುವಾಗ ಬೇಕು.' ನೀನು ಆತನಿಂದ ಅನುಗ್ರಹಪಡೆದು ದೇಹಸಾರ್ಥಕ ಮಾಡಿ ಕೊಂಡಿರುವಿ ಎಂದು ಆಕೆಗೆ ಶುಭಾಶೀರ್ವಾದವನ್ನು ಮಾಡಿ ಮಚ್ಛೀಂದ್ರನು ಮುಂದಕ್ಕೆ ಪ್ರಯಾಣ ಬೆಳೆಸಿದನು.

ಬಳಿಕ ಅವನು ನಾಥಜಗನ್ನಾಥಕ್ಕೆ ಹೋಗಿ ಸಮುದ್ರಸ್ನಾನ ಮಾಡಿ ದನು. ಅನಂತರ ಅವನು ಶಿಷ್ಯರೊಡನೆ ಸೌರಾಷ್ಟ್ರಕ್ಕೆ ಹೋದನು. ಮಚ್ಛೀಂ ದ್ರನು ಒಂದು ದಿನ ಒಂದು ಸ್ಥಳದಲ್ಲಿ ವಸತಿಯನ್ನು ಮಾಡಿದನು. ಸಣ್ಣ ಮಗುವಾದ ಮೀನನಾಥನು ಮರುದಿನ ಬೇಗನೆ ಏಳಲಿಲ್ಲ. ಗೋರಕ್ಷನು ಊರಲ್ಲಿ ಹೋಗಿ ಭಿಕ್ಷೆ ಮಾಡಿಕೊಂಡು ಬಂದು ವಿಶ್ರಾಂತಿ ಹೊಂದುತ್ತಿ ದ್ದನು. ಆಗ ಮಚ್ಛೀಂದ್ರನು ಮೀನನಾಥನನ್ನು ಎಬ್ಬಿಸಿ ಹೊರಗೆ ಕರೆದು ಕೊಂಡು ಹೋಗಿ ದೇಹಧರ್ಮಕ್ಕೆ ಕುಳ್ಳಿರಿಸಿದನು. ಆಗ ಗೋರಕ್ಷನ ಮನಸ್ಸಿನಲ್ಲಿ ಅನೇಕ ಬಗೆಯ ವಿಚಾರಗಳು ಬಂದವು—" ಮಚ್ಛೀಂದ್ರನು ಯೋಗಿಯಿದ್ದು, ಈತನಿಗೆ ಈ ಹುಡುಗನ ಉಪಾಧಿಯು ಎಲ್ಲಿ ಹತ್ತಿತು? ಯೋಗಿಗಳು ಹೀಗೆ ಮೋಹಕ್ಕೆ ಒಳಗಾಗಬಹುದೇ? ಯಾರಿಗೆ ಸಂಸಾರವು ಇಲ್ಲವೋ ಮತ್ತು ಯಾರು ಎಲ್ಲ ಉಪಾಧಿಗಳನ್ನು ತೊರೆದು ಬ್ರಹ್ಮಚಿಂತನ ದಲ್ಲಿ ಕಾಲ ಕಳೆಯುವದಕ್ಕಾಗಿಯೇ ದೇಹಧಾರಣ ಮಾಡಿರುವರೋ, ಅವ ರಿಗೂ ಸಹ ಇಂಥ ಉಪಾಧಿಯೇ? ಈ ಹಾಳು ರಗಳೆಯು ನಮ್ಮ ಗುರು ಗಳಿಗೆ ಯಾಕೆ ಬೇಕಾಗಿದ್ದೀತು? ಎಂದು ಯೋಚಿಸುತ್ತಿರುವಷ್ಟರಲ್ಲಿ ಮಚ್ಛೀಂ ದ್ರನು ಗೋರಕ್ಷನನ್ನು ಕರೆದು ನುಡಿದನೇನಂದರೆ:—" ತಮ್ಮಾ, ಮೀನ ನಾಥನ ದೇಹಧರ್ಮವಿಧಿಯು ಮುಗಿದಿರಬಹುದು; ಆತನನ್ನು ನದಿಗೆ ಕರೆ ದೊಯ್ದು ಸ್ವಚ್ಛವಾಗಿ ತೊಳೆದುಕೊಂಡು ಬಾ."

ಈ ಮೇರೆಗೆ ಗುರುಗಳು ನುಡಿಯಲು, ಗೋರಕ್ಷನು ಹೊರಗೆ ಬಂದು ನೋಡಿದನು. ಮೀನನಾಥನು ಅಜ್ಞಾನಬಾಲಕನಿದ್ದುದರಿಂದ ಮೈಯೆಲ್ಲ ಹೊಲಸು ಮಾಡಿಕೊಂಡಿದ್ದನು. ಅದನ್ನು ಕಂಡು ಗೋರಕ್ಷನಿಗೆ ಬಹಳ ಅಸಹ್ಯವೆನಿಸಿತು. ಗುರುಗಳು ಈ ಇಲ್ಲದ ಉಪಾಧಿಯನ್ನು ಹಚ್ಚಿಕೊಂಡು

ತೊಳಲಾಡುತ್ತಾರೆ. ಈ ಉಪಾಧಿಯನ್ನೇ ಕಡಿದೊಗೆಯಬೇಕೆಂಬ ವಿಚಾರವು ಆತನ ಮನಸ್ಸಿನಲ್ಲಿ ಬಂದಿತು. ಅವನು ಮೀನನಾಥನನ್ನು ಕರಕೊಂಡು ನದಿಗೆ ಹೋದನು; ಮತ್ತು ನಡುಮಟ ನೀರೊಳಗೆ ಪ್ರವೇಶಿಸಿ, ಅಲ್ಲಿದ್ದ ಒಂದು ಬಂಡೆಯನ್ನು ಮುಟ್ಟಿದನು. ಬಳಿಕ ಅವನು ಅರಿವೆಯನ್ನು ಒಗೆಯುವಂತೆ ಮೀನನಾಥನನ್ನು ನೀರಿನಲ್ಲಿ ಎದ್ದಿ ಕಲ್ಲ ಮೇಲೆ ಅಪ್ಪಳಿಸಿದನು. ಆ ಆಘಾತಕ್ಕೆ ಮೀನನಾಥನ ಪ್ರಾಣವು ತತ್‌ಕ್ಷಣದಲ್ಲಿ ಹೋಯಿತು. ಅವನ ತಲೆಯೊಡೆದು ರಕ್ತವು ಹೊರಬಿದ್ದು ನದಿಯ ನೀರನ್ನು ಕೆಂಪಗೆಮಾಡಿತು. ಮೀನಗಳು ಆ ರಕ್ತವನ್ನು ಭಕ್ಷಿಸುವದಕ್ಕೋಸ್ಕರ ಧಾವಿಸಿಬಂದವು. ಅದನ್ನು ನೋಡಿ ಗೋರಕ್ಷನು ಜಲಚರಗಳಿಗೆ ಆಹಾರವನ್ನು ಒದಗಿಸಿಕೊಡಬೇಕೆಂದು ಮೀನನಾಥನ ಮಾಂಸವನ್ನೆಲ್ಲ ಕಿತ್ತು ತೆಗೆದು ಮೀನಗಳಿಗೆ ಹಾಕಿದನು. ಅಸ್ಥಿಗಳನ್ನೆಲ್ಲ ನದಿಯಲ್ಲಿ ಚಲ್ಲಿಕೊಟ್ಟು ಚರ್ಮವನ್ನು ಸ್ವಚ್ಛವಾಗಿ ತೊಳೆದುಕೊಂಡು ಮನೆಗೆ ಹೋದನು. ಬಳಿಕ ಅವನು ಒಂದು ಸ್ವಚ್ಛವಾದ ದೋತರವನ್ನು ಹಾಸಿ ಅದರ ಮೇಲೆ ಆ ಚರ್ಮವನ್ನು ಒಣಗಹಾಕಿದನು.

ಗೋರಕ್ಷನು ಈ ರೀತಿ ಕೆಲಸ ಮಾಡಿಕೊಂಡು ಬಂದಾಗ ಮಚ್ಛಿಂದ್ರನು ಮನೆಯಲ್ಲಿರಲಿಲ್ಲ; ಭಂಗೀ ತರುವದಕ್ಕಾಗಿ ಹೊರಗೆ ಹೋಗಿದ್ದನು. ಮುಂದೆ ಕೆಲ ಹೊತ್ತಿನ ಮೇಲೆ ಬಂದು ಮೀನನಾಥನು ಎಲ್ಲಿ? ಎಂದು ಪ್ರಶ್ನ ಮಾಡಿದನು. ಅದಕ್ಕೆ ಗೋರಕ್ಷನು.—ನೀವು ಹೇಳಿದಂತೆ ಮೀನನಾಥನನ್ನು ಸ್ವಚ್ಛವಾಗಿ ಒಗೆದು ಒಣಗಹಾಕಿರುವೆನು, ಎಂದು ನುಡಿದನು. ಮಚ್ಛಿಂದ್ರನಿಗೆ ಅವನ ಮಾತಿನ ಅರ್ಥವಾಗಲಿಲ್ಲ. ಆಗ ಅವನು ಮತ್ತೆ ಅದೇ ಮಾತನ್ನೇ ಕೇಳಿದನು. ಗೋರಕ್ಷನು ನಿಮಗೆ ನನ್ನ ಮಾತಿನಲ್ಲಿ ಅವಿಶ್ವಾಸವಿದ್ದರೆ, ಹೊರಗೆ ಹಿತ್ತಲಲ್ಲಿ ಒಣಗಹಾಕಿರುವೆನು; ನೋಡಬೇಕು; ಎಂದನು. ಮಚ್ಛಿಂದ್ರನು ಗಾಬರಿಯಾಗಿ ಹಿತ್ತಲಕ್ಕೆ ಹೋದನು. ಮೀನನಾಥನ ಚರ್ಮವು ಮಾತ್ರ ಅವನ ದೃಷ್ಟಿಗೆ ಬಿತ್ತು. ಕೂಡಲೆ ಮಚ್ಛಿಂದ್ರನು ಹಾ! ಮೀನನಾಥನೇ ಕೈಬಿಟ್ಟು ಹೋದೆಯಾ!! ಎಂದು ಅಳುತ್ತ ನೆಲಕ್ಕೆ ಬಿದ್ದುಬಿಟ್ಟನು. ಅವನು ಮೀನನಾಥನ ಗುಣಗಳನ್ನು ನೆನೆಸಿಕೊಂಡು ದೊಡ್ಡ ದನಿಯಿಂದ ಅಳಹತ್ತಿದನು. ಬಾಯಲ್ಲಿ ಮಣ್ಣು ಹಾಕಿಕೊಳ್ಳಹತ್ತಿದನು. ಹಾ! ಮೀನನಾಥನೇ ನೀನು ಎಷ್ಟು ಸುಂದರನಿದ್ದೆಯಲ್ಲ!! ನಿನ್ನನ್ನು ಹ್ಯಾಗೆ

ಮರೆಯಲಿ? ಸ್ತ್ರೀರಾಜ್ಯದಲ್ಲಿದ್ದರೆ ನೀನು ಮಾರುತಿಯ ಬುಭುಃಕಾರದಿಂದ ಮರಣಹೊಂದುವಿಯೆಂದು ಇಲ್ಲಿಗೆ ಕರೆತಂದೆನು. ಇಲ್ಲಿ ಗೋರಕ್ಷನೇ ನಿನಗೆ ಮಾರುತಿಯಾದನು. ಹಾಯ್! ಹಾಯ್!! ಕೀಲೋತಳಿಗೆ ಏನು ಹೇಳಲಿ? ಮೀನನಾಥನೇ, ನೀನು ನನ್ನನ್ನು ಬಿಟ್ಟು ಒಂದು ಕ್ಷಣ ಸಹ ಅಗಲುತ್ತಿದ್ದಿಲ್ಲ ವಲ್ಲ? ಈಗ ನನ್ನನ್ನು ಬಿಟ್ಟು ಹ್ಯಾಗೆ ಪರಲೋಕಕ್ಕೆ ತೆರಳಿದೆ? ಇನ್ನು ನನ್ನ ಕಾಟಿನಲ್ಲಿ ಯಾರು ಉಣ್ಣುವರು? ತೊದಲ್ನುಡಿಗಳಿಂದ ಯಾರು ನನ್ನನ್ನು ಆನಂದಿಸುವರು? ಎಂದು ಮಚ್ಛಿಂದ್ರನಾಥನು ಹಾಡಿಕೊಂಡು ಅಳಹತ್ತಿದನು. ಆವನ ವಿಲಾಪವು ಮೇರೆದಪ್ಪಿತು.

ಹೀಗೆ ಗುರುಗಳು ಶೋಕಮಗ್ನವಾಘುದನ್ನು ಕಂಡು ಗೋರಕ್ಷನು ಆವರ ಬಳಿಗೆ ಹೋಗಿ:—"ಗುರುಮಹಾರಾಜ, ತಮ್ಮಂಥ ಜ್ಞಾನಿಗಳು ಹೀಗೆ ಬುದ್ಧಿಪೂರ್ವಕವಾಗಿ ಮೋಹದಲ್ಲಿ ಸೇರುವ ಕಾರಣವೇನು? ಮೀನ ನಾಥನಾರು? ನೀವಾರು? ಕೊಂದವರಾರು? ಸತ್ತವರಾರು? ಹೀಗೇಕೆ ಆ-ಕ್ರೋಶ ಮಾಡುವಿರಿ? ನೀವು ಯಾವ ಮೀನನಾಥವನ್ನು ಪ್ರೀತಿಸುತ್ತಿದ್ದಿರೋ ಆ ಮೀನನಾಥನು ಈಗಲೂ ಇರುವನು. ಆವನ ಜಡದೇಹವು ಮಾತ್ರ ನಾಶ ವಾಗಿರುವದು. ಜಡದೇಹಕ್ಕೆ ನೀವು ಮೀನನಾಥನೆಂದು ಪ್ರೀತಿಸಿದ್ದರಿಂದ ನಿಮ್ಮ ಸ್ಥಿತಿಯು ಹೀಗೆ ಆಗಿರುವದು. ಮಹಾರಾಜ, ಆತ್ಮವು ಅವಿನಾಶಿಯಾ ಗಿದ್ದು, ಅನಾತ್ಮವು ನಾಶವಂತವಿದೆ"

ಈ ಮೇರೆಗೆ ಗೋರಕ್ಷನು ಮಾತನಾಡಿದನು. ಆತನ ಮಾತಿನ ಪರಿಣಾಮವು ಮಚ್ಛಿಂದ್ರನ ಮನಸ್ಸಿನ ಮೇಲೆ ಸ್ವಲ್ಪವೂ ಆಗಲಿಲ್ಲ. ಆದರೂ ಮತ್ತಿಷ್ಟು ಹೆಚ್ಚು ತಲೆಯೊಡೆದುಕೊಳ್ಳಲಾರಂಭಿಸಿದನು; ಮತ್ತು ಮೀನ ನಾಥನು ತನ್ನ ದೇಹಧಾರಣಮಾಡಿ ಪುನಃ ಭೆಟ್ಟಿಯಾದ ಹೊರತು ನನ್ನ ದುಃಖವು ಕಡಿಮೆಯಾಗದ ಎಂದು ನುಡಿಯ ಹತ್ತಿದನು. ಮಚ್ಛಿಂದ್ರನು ಈ ಮಾತಿನ ವಿಷಯವಾಗಿ ಹಟವನ್ನೇ ಹಿಡಿದನು. ಆಗ ಗೋರಕ್ಷನು ಭಸ್ಮವನ್ನು ತೆಗೆದುಕೊಂಡು ಸಂಜೀವಿನೀ ಮಂತ್ರದಿಂದ ಅಭಿಮಂತ್ರಿಸಿದನು; ಮತ್ತು ಆ ಮಂತ್ರಪೂತ ಭಸ್ಮವನ್ನು ಮೀನನಾಥನ ಚರ್ಮದಮೇಲೆ ಒಗೆ ದನು. ಕೂಡಲೆ ಸಂಜೀವಿನೀ ಮಂತ್ರಪ್ರಭಾವದಿಂದ ಮೀನನಾಥನು ಜೀವಿಸಿ ಓಡುತ್ತ ಬಂದು ಮಚ್ಛಿಂದ್ರನ ಕೊರಳಿಗೆ ತೆಕ್ಕೆಬಿದ್ದನು. ಅದನ್ನು

ಕಂಡು ಮಚ್ಛೀಂದ್ರನು ಶೋಕವನ್ನು ಬಿಟ್ಟು ಆತನನ್ನು ಅಪ್ಪಿಕೊಂಡು ಮುದ್ದಾಡಿದನು. ಮತ್ತು ಅವನಮೇಲೆ ಅತ್ಯಂತ ಪ್ರೇಮ ಮಾಡುತ್ತ ಅವನ ಮಧುರ ಭಾಷಣದ ಆಸ್ವಾದವನ್ನು ಅನುಭವಿಸಿದನು. ಮಚ್ಛೀಂದ್ರನಿಗೆ ಹೊಸ ಜೀವಬಂದಂತಾಯಿತು. ಮರಣೋನ್ಮುಖನಾದವನಿಗೆ ಅಮೃತ ಸೇಚನವಾದಂತೆಯೂ, ಒಣಗುವ ಪೈರಿಗೆ ಮಳೆಬಂದಂತೆಯೂ ಆತನ ಸ್ಥಿತಿಯಾಯಿತು. ಇಷ್ಟೆಲ್ಲ ಆಗುವಷ್ಟರಲ್ಲಿ ಆ ದಿನ ಹೊತ್ತು ಮುಣುಗಿತು. ಆದ್ದರಿಂದ ಮಚ್ಛೀಂದ್ರ-ಮೀನನಾಥ-ಗೋರಕ್ಷ ಇವರು ಆ ರಾತ್ರಿಯನ್ನು ಆ ಬೀಡಾರದಲ್ಲಿಯೇ ಕಳೆದು ಮರುದಿನ ಬೇರೆಕಡೆಗೆ ಪ್ರಯಾಣಬೆಳೆಸಿದರು.

ದಾರಿಯಲ್ಲಿ ಗೋರಕ್ಷನು ಮಚ್ಛೀಂದ್ರನನ್ನು ಕುರಿತು—ಗುರುಮಹಾರಾಜ, ನಾನು ತಮಗೊಂದು ಪ್ರಶ್ನಮಾಡುತ್ತೇನೆ. ಅದನ್ನು ಪೂರ್ಣವಾಗಿ ಕೇಳಿಕೊಳ್ಳಬೇಕು ಎಂದು ಹೇಳಿ ನುಡಿದನೇನಂದರೆ—ಮಹಾರಾಜ, ನೀವು ಘನತರವಾದ ಯೋಗ್ಯತಾ ಸಂಪನ್ನರಿರುತ್ತೀರಿ, ಸಂಜೀವಿನೀ ಮಂತ್ರದಿಂದ ಮೀನನಾಥನನ್ನು ಎಬ್ಬಿಸುವಷ್ಟು ಸಾಮರ್ಥ್ಯವು ನಿಮ್ಮಲ್ಲಿರುತ್ತದೆ. ಇಷ್ಟೇ ಅಲ್ಲ; ಇಂಥ ನೂರಾರು ಜನ ಮೀನನಾಥರನ್ನು ಉಂಟು ಮಾಡಬಹುದು. ಹೀಗಿದ್ದು, ಇಂಥ ದೊಡ್ಡ ಯೋಗ್ಯತೆಯನ್ನು ಅಚ್ಛಾದನಮಾಡಿ, ದೇಹವು ನಾಶವಂತವಿದ್ದು, ಆತ್ಮವು ಅಮರವಿರುತ್ತದೆಂಬ ವೇದಾಂತ ತತ್ವವನ್ನು ಕಟ್ಟಿಟ್ಟು ನೀವು ಇಷ್ಟು ಶೋಕಮಾಡಿದ ಕಾರಣವೇನು? ಮತ್ತು ಮೀನನಾಥನು ಪ್ರತ್ಯಕ್ಷ ಭೆಟ್ಟಿಯಾದ ಹೊರತು ನನ್ನ ದುಃಖವು ಕಡಿಮೆಯಾಗದೆಂದು ಹಟ ಹಿಡಿದ ಕಾರಣವೇನು? ನಿಮ್ಮಂಥ ಸಾಮರ್ಥ್ಯ ಸಂಪನ್ನರು ಹೀಗೆ ಬುದ್ಧಿಪೂರ್ವಕವಾಗಿ ಮಾಯೆಯ ಆಡಂಬರವನ್ನುಂಟು ಮಾಡಿದ್ದನ್ನು ನೋಡಿ ನನಗೆ ತುಂಬಾ ಆಶ್ಚರ್ಯವಾಗುತ್ತದೆ.

ಈ ಮೇರೆಗೆ ಗೋರಕ್ಷನು ನುಡಿಯಲು ಮಚ್ಛೀಂದ್ರನು ನಕ್ಕನು; ಮತ್ತು ಈ ರೀತಿ ಉತ್ತರ ಕೊಟ್ಟನು—ಗೋರಕ್ಷಾ, ನಾನು ನಿನ್ನ ಪ್ರಶ್ನೆಗೆ ಉತ್ತರಕೊಡುವೆನು; ಆದರೆ ನಾನೊಂದು ಪ್ರಶ್ನಮಾಡುತ್ತೇನೆ. ಅದರ ಉತ್ತರವನ್ನು ಮೊದಲು ನೀನು ಹೇಳು. ಆ ಪ್ರಶ್ನೆಯೇನಂದರೆ—ನೀನು ಮೀನನಾಥನನ್ನು ನಾಶಪಡಿಸಬೇಕಾದರೆ ಮನಸ್ಸಿನಲ್ಲಿ ಏನನ್ನು ತಿಳಿದುಕೊಂಡಿದ್ದಿ?

ಆದಕ್ಕೆ ಗೋರಕ್ಷನು—ಮಹಾರಾಜ, ಇದಕ್ಕೆ ನನ್ನ ಉತ್ತರವೇನಂದರೆ—ಗುರುಗಳು ನಿಜವಾಗಿಯೂ ಮೋಹಕ್ಕೆ ಬಿದ್ದಿರುವರೋ ಹ್ಯಾಗೆ? ನೀವು ದೊಡ್ಡ ವಿರಕ್ತರೆಂದೆನಿಸಿಕೊಳ್ಳುತ್ತೀರಾದ್ದರಿಂದ ಮೀನನಾಥನ ನಾಶದಿಂದ ನಿಮ್ಮಲ್ಲಿ ಮೋಹ, ಶೋಕ, ಲೋಭ ಮೊದಲಾದ ವಿಕಾರಗಳು ಉಂಟಾಗುತ್ತವೆಯೋ ಹ್ಯಾಗೆಂಬದನ್ನು ಪರೀಕ್ಷಿಸುವದಕ್ಕೋಸ್ಕರ ಹೀಗೆ ಮಾಡಿದೆನು. ಎಂದು ನುಡಿದನು.

ಗೋರಕ್ಷನ ಉತ್ತರವನ್ನು ಕೇಳಿ ಮಚ್ಛಿಂದ್ರನು ಅವನಂತೆಯೇ ಉತ್ತರ ಕೊಟ್ಟನು ಗೊರಕ್ಷಾ, ನೀನು ನನ್ನ ಶಿಷ್ಯನಿದ್ದಂತೆ ನಾನು ನಿನ್ನ ಗುರುವಿರುತ್ತೇನೆ. ನೀನು ನನ್ನ ಪರೀಕ್ಷಾರ್ಥವಾಗಿ ಹ್ಯಾಗೆ ಖಟಾಟೋಪವನ್ನು ನಡಿಸಿದೆಯೋ ಹಾಗೆ ನಾನೂ ನಿನ್ನ ಪರೀಕ್ಷಾರ್ಥವಾಗಿ ಈ ಅಟ್ಟಹಾಸವನ್ನು ಹೂಡಿದೆನು. ಕಾಮ, ಕ್ರೋಧ, ಆಶಾ, ಲೋಭ ಮೊದಲಾದವುಗಳು ಮೋಹಗ್ರಸ್ತ ಶರೀರದಲ್ಲಿ ವಾಸ ಮಾಡುತ್ತವೆ ನಿನ್ನ ಮನಸ್ಸು ಮಾಯಾವಶವಾಗಿದೆಯೋ ಅಥವಾ ಮಾಯಾರಹಿತವಾಗಿದೆಯೋ ಇದನ್ನು ನೋಡುವದೇ ನನ್ನ ಉದ್ದೇಶವಾಗಿತ್ತು. ಅಲಕ್ಷರೂಪದಲ್ಲಿ ದೃಷ್ಟಿಯನ್ನು ಲಯಗೊಳಿಸಿ ಜ್ಞಾನದ ಯೋಗದಿಂದ ವಿಜ್ಞಾನದ ವಿವೇಚನೆಯನ್ನು ಮಾಡುವದಷ್ಟೇ; ಈ ಮಾತಿನ ಕೌತುಕವನ್ನು ನೋಡಬೇಕೆಂದು ಈ ಆಟ ಹೂಡಿದೆನು. ಶಾಶ್ವತವಾದ ವಸ್ತು ಯಾವದು? ಅಶಾಶ್ವತವಾದದ್ದು ಯಾವದು? ಇದು ನಿನಗೆ ತಿಳಿದದೆಯೋ ಇಲ್ಲವೋ ಎಂಬದನ್ನು ನೋಡುವದಕ್ಕಾಗಿ ಬೇಕೆಂತ ವಿಲಾಪ ಮಾಡಿದೆನು. ಈ ಪರೀಕ್ಷೆಯಿಂದ ನಿನ್ನಲ್ಲಿ ಸಾರಾ ಸಾರವನ್ನು ವಿಂಗಡಿಸುವ ಹಂಸಗುಣವು ಬಂದಿದೆಯೆಂಬದು ಅನುಭವಕ್ಕೆ ಬಂದಿತು. ನೀನು ಧನ್ಯನಿರುತ್ತೀ; ನಿನಗೆ ಪರಮಹಂಸಪದವಿಯು ಪ್ರಾಪ್ತವಾಗಿರುತ್ತದೆ.''

ಈ ಮೇರೆಗೆ ಮಚ್ಛಿಂದ್ರನು ನುಡಿಯಲು ಗೋರಕ್ಷನು ಗುರುಗಳ ಚರಣಗಳನ್ನು ಹಿಡಿದ್ಧುಕೊಂಡನು ಮತ್ತು ಗುರುಕೃಪೆಯಿಂದ ತಾನು ಸನಾಥನೂ ಸಮರ್ಥನೂ ಆದೆನೆಂದು ಗುರುವಿನ ಗೌರವವನ್ನು ಮಾಡಿದನು ಈ ರೀತಿ ಪರಸ್ಪರರ ಮಾತುಗಳಿಂದ ಸಂತೋಷಚಿತ್ತರಾದ ಆ ಗುರು-ಶಿಷ್ಯರು ಮುಂದೆ ಮಾರ್ಗಕ್ರಮಿಸಲಾರಂಭಿಸಿದರು.

———

# ಅಧ್ಯಾಯ ೨೩

## ಗರ್ಭಾಗಿರಿಯ ಮೇಲಿನ ಉತ್ಸವ.

ಯಾತ್ರೆಯ ನಿಮಿತ್ತವಾಗಿ ಗೋರಕ್ಷ-ಮಚ್ಛಿಂದ್ರರು ತೇಲಂಗ ದೇಶದಲ್ಲಿ ಗೋದಾಸಂಗಮಕ್ಕೆ ಹೋದರು. ಅಲ್ಲಿ ಸ್ನಾನ ಮಾಡಿ ಈಶ್ವರನ ಆತ್ಮಲಿಂಗವನ್ನು ಪೂಜಿಸಿದರು. ಬಳಿಕ ಅವರು ಗೋದಾತೀರಗುಂಟ ಪಶ್ಚಿಮಕ್ಕೆ ಸಾಗಿ ನಾಗನಾಥ, ಪರಳಿ, ವೈಜನಾಥ ಮೊದಲಾದ ಕ್ಷೇತ್ರಗಳನ್ನು ನೋಡುತ್ತ ಗೋದಾತೀರವನ್ನು ಬಿಟ್ಟು ಗರ್ಭಾಗಿರಿಯ ಕಡೆಗೆ ನಡೆದರು.

ಗರ್ಭಾಗಿರಿಗೆ ಹೋಗುವ ಮಾರ್ಗವು ಬಹಳ ಬಿಕ್ಕಟ್ಟಿನದಾಗಿತ್ತು. ಭಯಂಕರವಾದ ಅರಣ್ಯವು ಪಸರಿಸಿತ್ತು. ಆ ಅರಣ್ಯದೊಳಗಿನ ವೃಕ್ಷಗಳು ಆಕಾಶವನ್ನೇ ಮುದ್ದಿಡುತ್ತಿದ್ದವು. ಆ ಅರಣ್ಯದಲ್ಲಿ ಸಂಚರಿಸುವವರಿಗೆ ಸೂರ್ಯ ಕಿರಣಗಳು ಎಂತಹವೋ ಎಂಬದು ಗೊತ್ತಾಗುವಂತಿರಲಿಲ್ಲ. ಕಿರಿ-ಗಂಟಿಗಳೂ, ನಾನಾ ತರದ ಬಳ್ಳಿಗಳೂ ಅಲ್ಲಿ ಬಹುದಟ್ಟವಾಗಿ ಬೆಳೆದದ್ದರಿಂದ ಆ ಅಡವಿಯಲ್ಲಿ ದಾರೀ ನಡೆಯುವದೇ ಕಷ್ಟವಾಗಿತ್ತು. ಇಂಥ ಗಹನವಾದ ಅರಣ್ಯವನ್ನು ನೋಡಿ ಮಚ್ಛಿಂದ್ರನ ಮನಸ್ಸಿನಲ್ಲಿ ಒಂದು ವಿಚಾರವು ಬಂದಿತು. ಏನೆಂದರೆ—"ಏನಾದರೊಂದು ಹಂಚಿಕೆಯಿಂದ ಗೋರಕ್ಷನನ್ನು ಅಂಜಿಸಬೇಕು. ಮತ್ತು ಅವನಲ್ಲಿ ನಿಸ್ಪೃಹತೆಯು ಎಷ್ಟರಮಟ್ಟಿಗೆ ಯಿದೆ ಎಂಬದನ್ನು ಪರೀಕ್ಷಿಸಬೇಕು."

ಈ ಮೇರೆಗೆ ಆಲೋಚಿಸಿ ಮಚ್ಛಿಂದ್ರನು ಗೋರಖನನ್ನು ಕುರಿತು—ತಮ್ಮಾ ಈ ಪ್ರಾಂತದಲ್ಲಿ ಕಳ್ಳರು ಬಹಳೆಂದು ಕೇಳಿದ್ದೇನೆ. ಮೇಲಾಗಿ ಇದು ಭಯಂಕರವಾದ ಅರಣ್ಯವು? ಇಂಥದರಲ್ಲಿ ನಾವು ಹ್ಯಾಗೆ ಮಾಡೋಣ? ಯಾರಾದರೂ ಕಳ್ಳರು ಗಂಟು ಬಿದ್ದರೆ ಏನು ಮಾಡಬೇಕು? ಎಂದು ನುಡಿದನು.

ಮಚ್ಛಿಂದ್ರನ ಈ ಮಾತಿಗೆ ಗೋರಕ್ಷನು ಏನೂ ಉತ್ತರ ಕೊಡಲಿಲ್ಲ. ಈತನು ಕಳ್ಳರಿಗೆ ಇಷ್ಟೇಕೆ ಅಂಜುವನು? ಎಂದು ಅಂದುಕೊಂಡು ಮುಂದಕ್ಕೆ ಸಾಗಿದನು. ಮಚ್ಛಿಂದ್ರನು ೨-೩ ಸಾರೆ ಮಾತನಾಡಿದರೂ ಗೋರಖನು ಉತ್ತರಕೊಡಲಿಲ್ಲ. ಆತನು ಮೌನದಿಂದ ದಾರೀ ಕ್ರಮಿಸಲಾರಂಭಿಸಿದನು. ಹೀಗೆ ಅವರು ಆ ಅಡವಿಯಲ್ಲಿ ಪ್ರಯಾಣ ಮಾಡುತ್ತಿರಲು ಅವರಿಗೆ ಒಂದು ಸರೋವರವು ಹತ್ತಿತು. ಆ ಸರೋವರವು ರಮಣೀಯವಿದ್ದು, ತಿಳಿನೀರಿನಿಂದ ಸುಶೋಭಿತವಾಗಿತ್ತು. ಅದರಲ್ಲಿ ಕಮಲ-ಕಲ್ಹಾರಗಳು ಅರಳಿ ಆ ಸರೋವರದ ಶೋಭೆಯನ್ನು ಹೆಚ್ಚಿಸಿದ್ದವು. ಸರೋವರವನ್ನು ನೋಡಿದ ಕೂಡಲೆ ಮಚ್ಛಿಂದ್ರನಿಗೆ ಅಲ್ಲಿ ಸ್ನಾನ ಮಾಡಬೇಕೆಂಬ ಇಚ್ಛೆಯುತ್ಪನ್ನವಾಯಿತು. ಆಗ ಅವನು ಗೋರಕ್ಷನನ್ನು ಕುರಿತು—ತಮ್ಮಾ, ನಾನು ಇಲ್ಲಿ ಸ್ನಾನಾದಿಗಳನ್ನು ತೀರಿಸಿಕೊಂಡು ಬರುತ್ತೇನೆ ನೀನು ವಿಮಾನನಾಥನನ್ನು ಕರಕೊಂಡು ಮುಂದೆ ನಡೆ ಎಂದು ನುಡಿದು ತನ್ನ ಬಗಲೊಳಗಿನ ಜೋಳಿಗೆಯನ್ನು ಆತನ ಕೈಯಲ್ಲಿ ಕೊಟ್ಟನು.

ಮಚ್ಛಿಂದ್ರನು ಕೊಟ್ಟ ಜೋಳಿಗೆಯು ಬಲು ಭಾರವಾಗಿತ್ತು. ಅದರಲ್ಲಿ ಆತನು ಬಂಗಾರದ ಒಂದು ಇಟ್ಟಂಗಿಯನ್ನು ಹಾಕಿದ್ದನು. ಅದನ್ನು ಕೀಲೋತಳೆಯು ಮಚ್ಛಿಂದ್ರನಿಗೆ ದಾರಿಯ ಖರ್ಚಿಗಾಗಿ ಕೊಟ್ಟಿದ್ದಳು. ಮಚ್ಛಿಂದ್ರನು ಅದನ್ನು ಇದುವರೆಗೆ ಗೋರಕ್ಷನಿಗೆ ತೋರಿಸದೆ ಮುಚ್ಚಿಕೊಂಡಿದ್ದನು. ಇದರ ನಿಮಿತ್ತದಿಂದ ಗೋರಕ್ಷನ ನಿಸ್ಪೃಹತೆಯನ್ನು ಪರೀಕ್ಷಿಸುವದೇ ಮಚ್ಛಿಂದ್ರನ ಉದ್ದೇಶವಾಗಿತ್ತು. ಅದಕ್ಕಾಗಿಯೇ ಅವನು ಬಂಗಾರದ ಸುದ್ದಿಯನ್ನು ಅವನ ಮುಂದೆ ಹೇಳದೆ ಕಳ್ಳರಿಗೆ ಹೆದರುವ ಲಕ್ಷಣವನ್ನು ತೋರ್ಪಡಿಸುತ್ತಿದ್ದನು. ಈ ಬಗ್ಗೆ ಗೋರಕ್ಷನ ಮನಸ್ಸಿನಲ್ಲಿ ಯೋಚನೆಯು ಇದ್ದೇ ಇತ್ತು. ಮಚ್ಛಿಂದ್ರನು ತನ್ನ ಕೈಯಲ್ಲಿ ಜೋಳಿಗೆಯನ್ನು ಕೊಟ್ಟ ಕೂಡಲೆ ಅವನಿಗೆ ಮಚ್ಛಿಂದ್ರನ ಭಯದ ಕಾರಣವು ಸ್ಪಷ್ಟವಾಗಿ ತಿಳಿಯಿತು. ಆಗ ಗೋರಕ್ಷನು ಏನನ್ನೂ ಮಾತನಾಡದೆ ಜೋಳಿಗೆಯನ್ನು ಸುಮ್ಮನೆ ಬಗಲಿಗೆ ಹಾಕಿಕೊಂಡು ನಡೆದನು. ಕೆಲಹೊತ್ತು ದಾರೀನಡೆದ ಬಳಿಕ ಅವನು ಜೋಳಿಗೆಯಲ್ಲಿ ಹಣಿಕಿ ನೋಡಿದನು. ಅವನಿಗೆ ಆ ಬಂಗಾರದ ಗಟ್ಟಿಯು ಕಾಣಿಸಿತು. ಕೂಡಲೆ ಅವನು ಮಚ್ಛಿಂದ್ರನ ಭಯವನ್ನು

ಹೋಗಲಾಡಿಸಬೇಕೆಂದು ಆ ಬಂಗಾರದ ಇಟ್ಟಂಗಿಯನ್ನು ಹತ್ತಿರಿದ್ದ ಒಂದು ಪೆಳೆಯಲ್ಲಿ ಚಲ್ಲಿಕೊಟ್ಟು ತನ್ನ ದಾರಿಯನ್ನು ಹಿಡಿದು ಸಾಗಿದನು. ಬಹಳ ಹೊತ್ತಾದರೂ ಮಚ್ಛೇಂದ್ರನು ಬಾರದ್ದರಿಂದ ಒಂದು ಗಿಡದ ನೆರಳಿನಲ್ಲಿ ಕುಳಿತುಕೊಂಡನು.

ಇತ್ತ ಮಚ್ಛೇಂದ್ರನು ಸ್ನಾನ ಮಾಡಿ ಆ ಸರೋವರದ ತೀರದಲ್ಲಿ ಸ್ವಲ್ಪ ಹೊತ್ತು ಅಡ್ಡಾಡಿ ಬಳಿಕ ದಾರಿಯನ್ನು ಹಿಡಿದನು. ಮಚ್ಛೇಂದ್ರನಿಗೂ ಗೋರಕ್ಷನಿಗೂ ಎರಡು ತಾಸಿನ ಅಂತರವು ಆದದ್ದರಿಂದ ಮಚ್ಛೇಂದ್ರನು ಎಷ್ಟು ಒತ್ತರದಿಂದ ನಡೆದರೂ ಅವನಿಗೆ ಗೋರಕ್ಷನು ಸಿಗದಾದನು; ಆದರೆ ಗೋರಕ್ಷನು ವಿಶ್ರಾಂತಿಗಾಗಿ ಗಿಡದಡಿಯಲ್ಲಿ ಕುಳಿತದ್ದರಿಂದ ಮುಂದೆ ಸ್ವಲ್ಪ ಹೊತ್ತಿನಲ್ಲಿ ಅವನು ಮಚ್ಛೇಂದ್ರನಿಗೆ ಸಿಕ್ಕನು.

ಗುರು-ಶಿಷ್ಯರು ಕೂಡಿದ ಬಳಿಕ ಅಲ್ಲಿ ಕೆಲಹೊತ್ತು ವಿಶ್ರಾಂತಿಯನ್ನು ತಕ್ಕೊಂಡು ಮುಂದೆ ನಡೆದರು. ಗೋರಕ್ಷನು ಮಚ್ಛೇಂದ್ರನ ಜೋಳಿಗೆಯನ್ನು ಅವನಿಗೆ ತಿರುಗಿ ಕೊಟ್ಟನು. ಅದರಲ್ಲಿ ಆತನು ಬಂಗಾರದ ಇಟ್ಟಂಗಿಯನ್ನು ಚಲ್ಲಿಕೊಟ್ಟು ಅಷ್ಟೇ ತೂಕವುಳ್ಳ ಒಂದು ಕಲ್ಲನ್ನು ಹಾಕಿದ್ದನು. ಮಚ್ಛೇಂದ್ರನು ಜೋಳಿಗೆಯನ್ನು ತಕ್ಕೊಂಡು ದಾರಿಯನ್ನು ಹಿಡಿದನು. ಹೋಗ ಹೋಗುತ್ತ ಮತ್ತೆ ಅವನು ಗೋರಖನನ್ನು ಕುರಿತು—ತಮ್ಮಾ, ಇಲ್ಲಿ ಕಳ್ಳರ ಉಪದ್ರ ಬಹಳ ಇರುತ್ತದೆಂದು ಕೇಳಿದ್ದೇನೆ. ಈ ಬಗ್ಗೆ ನೀನು ಏನೂ ವಿಚಾರ ಮಾಡುವದಿಲ್ಲ ಹೀಗೇಕೆ ಮಾಡುವಿ? ಎಂದು ನುಡಿದನು. ಈ ಸಾರೆ ಗೋರಖನು ಸುಮ್ಮನಿರಲಿಲ್ಲ. ಅವನು ಗುರುಗಳನ್ನು ಕುರಿತು ನುಡಿದನೇನಂದರೆ—ಮಹಾರಾಜ, ನಿಮ್ಮ ಹೆದರಿಕೆಯು ದೂರ ಉಳಿಯಿತು''

ಗೋರಕ್ಷನ ಈ ಮಾತಿನಿಂದ ಮಚ್ಛೇಂದ್ರನಿಗೆ ಸಂಶಯ ಬಂದಿತು. ಕೂಡಲೆ ಅವನು ಜೋಳಿಗೆಯಲ್ಲಿ ಹಣಿಕಿ ನೋಡಿದನು. ಒಳಗೆ ಬಂಗಾರವಿರದೆ ಕಲ್ಲು ಇರುತ್ತದೆಂಬದು ತಿಳಿಯಿತು. ಕೂಡಲೆ ಮಚ್ಛೇಂದ್ರನು ಜೋಳಿಗೆಯನ್ನು ಚಲ್ಲಿಕೊಟ್ಟು ನೆಲದ ಮೇಲೆ ಬಿದ್ದು, ಹೊರಳಾಡಿ ಅಳಹತ್ತಿದನು ಎದೆ ಎದೆ ಬಡಿದುಕೊಂಡನು. ಬೆಲೆಯುಳ್ಳ ಬಂಗಾರದ ಇಟ್ಟಂಗಿಯನ್ನು ಈ ಗೋರಕ್ಷನು ಎತ್ತಿ ಹಾಕಿದನು. ಈತನು ನನ್ನ ಶಿಷ್ಯನಲ್ಲ ಯಾವನೋ ಒಬ್ಬ ಕಳ್ಳನಿರುವನು ಎಂದು ಅನ್ನಲಾರಂಭಿಸಿದನು. ಆ ಇಟ್ಟಂ

ಗಿಯ ಸಲುವಾಗಿ ಅವನು ಬಾಯಿಗೆ ಬಂದಂತೆ ಅಂದನು. ಗೋರಕ್ಷನು ಮನಸ್ಸಿಗೆ ಸ್ವಲ್ಪ ಆಸಮಾಧಾನ ಮಾಡಿಕೊಂಡನು. ಆದರೂ ಅವನು ಪುನಃ ಧೈರ್ಯವ ತಂದುಕೊಂಡು ಒಂದು ತುಟಿ ಎರಡು ಮಾಡದೆ ಗುರುಗಳನ್ನು ಎಬ್ಬಿಸ ಹೋದನು. ಬಂಗಾರದ ಇಟ್ಟಂಗಿಯನ್ನು ತಂದು ಕೊಟ್ಟ ಹೊರತು ಬರಲಾರೆನೆಂದು ಮಚ್ಛಿಂದ್ರನು ಅಂದನು. ಆಗ ಗೋರಕ್ಷನು ನಿಮ್ಮ ಬಂಗಾರದ ಇಟ್ಟಂಗಿಯನ್ನು ಕೊಡುತ್ತೇನೆಂದು ಹೇಳಿ ಅವನನ್ನು ಗರ್ಭಾಗಿರಿಯ ಮೇಲೆ ಕರೆದೊಯ್ದನು. ಆ ಗಿರಿಯ ಮೇಲೆ ಹೋದ ಕೂಡಲೆ ಗೋರಕ್ಷನು ಸಿದ್ಧಿಯೋಗದ ಮಂತ್ರವನ್ನು ಜಪಿಸಿ ವಿಭೂತಿಯನ್ನು ಗುಡ್ಡದ ಮೇಲೆ ತೂರಿದನು. ಕೂಡಲೆ ಗರ್ಭಗಿರಿಯು ಸುವರ್ಣಮಯವಾಯಿತು. ಗೋರಕ್ಷನ ಈ ಅದ್ಭುತ ಕೃತಿಯನ್ನು ನೋಡಿ ಮಚ್ಛಿಂದ್ರನು ಆನಂದಪಟ್ಟು—ತಮ್ಮಾ, ನೀನು ನಿಜವಾಗಿಯೂ ಧನ್ಯನಿರುತ್ತೀ ಎಂದು ನುಡಿದು ಅವನನ್ನು ಬಿಗಿದಪ್ಪಿಕೊಂಡನು. ಆಗ ಗೋರಕ್ಷನು ನಿಮ್ಮ ಸುವರ್ಣದ ಇಟ್ಟಂಗಿಯು ನಿಮಗೆ ಬೇಕೇನು? ಎಂದು ಕೇಳಿದನು. ಅದಕ್ಕೆ ಮಚ್ಛಿಂದ್ರನು—ಗೋರಕ್ಷಾ, ನಿನ್ನಂಥ ಶಿಷ್ಯರತ್ನವು ಬಳಿಯಲ್ಲಿರಲು ಆ ಇಟ್ಟಂಗಿಯಿಂದ ನನಗೇನು ಪ್ರಯೋಜನ? ಸುಮ್ಮನೆ ನಿನ್ನ ಪರೀಕ್ಷಾರ್ಥವಾಗಿ ಹೀಗೆ ಮಾಡಿದೆನು. ಎಂದು ನುಡಿದನು.

ಈ ಮೇರೆಗೆ ಗುರುಗಳು ಮಾತನಾಡಲು, ಗೋರಕ್ಷನು:—ಮಹಾರಾಜ, ಇದುವರೆಗೆ ಆ ಸುವರ್ಣದ ಇಟ್ಟಂಗಿಯನ್ನು ನೀವು ನಿಮ್ಮ ಜೋಳಿಗೆಯಲ್ಲಿಟ್ಟುಕೊಂಡು ಯಾಕೆ ಭಾರವನ್ನು ಹೊತ್ತು ಶ್ರಮಬಟ್ಟಿರಿ? ಎಂದು ನುಡಿದನು. ಅದನ್ನು ಕೇಳಿ ಮಚ್ಛಿಂದ್ರನು:—ಅಪ್ಪಾ ಶಿಷ್ಯೋತ್ತಮನೇ, ನಿನ್ನ ಮುಂದೆ ಮುಚ್ಚುಮರೆಯೇನು? ಈ ಗಿರಿಯ ಮೇಲೆ ಸಾಧು-ಸಜ್ಜನರಿಗೆ ಭೋಜನ ಮಾಡಿಸಬೇಕೆಂದು ಮಾಡಿದ್ದೆನು, ಎಂದು ನುಡಿದನು. ಗುರುಗಳ ಈ ಇಚ್ಛೆಯನ್ನು ತಿಳಿದುಕೊಂಡು ಕೂಡಲೆ ಆ ಶಿಷ್ಯಶ್ರೇಷ್ಠನು ಗಂಧರ್ವಾಸ್ತ್ರವನ್ನು ಜಪಿಸಿ, ಚಿತ್ರಸೇನ ಗಂಧರ್ವನನ್ನು ತನ್ನೆಡೆಗೆ ಬರಮಾಡಿಕೊಂಡನು. ಚಿತ್ರಸೇನನು ಬಳ್ಳೇ ವಿನಯದಿಂದ ಏನಪ್ಪಣೆಯೆಂದು ಗೋರಕ್ಷನ ಮುಂದೆ ನಿಂತುಕೊಂಡನು, ಆಗ ಗೋರಕ್ಷನು ನುಡಿದನೇನಂದರೆ:—"ಗಂಧರ್ವಾಧಿಪತಿಯೇ, ನೀನು ನಿನ್ನ ಪರಿವಾರವನ್ನೆಲ್ಲ ಇಲ್ಲಿಗೆ ಕರೆಯಿಸು; ಹಾಗು ನಿನ್ನ

ದೂತರನ್ನು ಕಳುಹಿಸಿ ಭೂತಲದ ಮೇಲಿರುವ ಸಂತ-ಸಜ್ಜನರನ್ನು ಇಲ್ಲಿಗೆ ಬರ ಮಾಡು. ನಮ್ಮ ಗುರುಗಳ ಮನಸ್ಸಿನಲ್ಲಿ ಇಲ್ಲಿ ಸಂತರಿಗೋಸ್ಕರ ಸಂತರ್ಪಣೆ ಯನ್ನು ನಡಿಸಿ, ಉತ್ಸವ ಮಾಡುವದಿರುತ್ತದೆ.''

ಗೋರಕ್ಷನ ಆಜ್ಞೆಯಂತೆ ಚಿತ್ರಸೇನನು ತನ್ನ ಸಮಸ್ತ ಪರಿವಾರವನ್ನು ಕರೆಯಿಸಿದನು; ಹಾಗು ದೂತರನ್ನು ಕಳುಹಿಸಿ ಭೂತಲದೊಳಗಿನ ಎಲ್ಲ ಸಂತ ಸಜ್ಜನರನ್ನು ಕರೆಯಿಸಿದನು. ಇಂದ್ರಾದಿ ದೇವತೆಗಳೂ ಬಂದರು. ಶಂಕರ, ವಿಷ್ಣು ಮೊದಲಾದವರು ಬಂದರು; ಶುಕ, ದತ್ತಾತ್ರೇಯ, ವಾಮದೇವ, ಯಾಜ್ಞವಲ್ಕ್ಯ, ವಸಿಷ್ಠ, ಕಪಿಲ, ವ್ಯಾಸ, ನಾರದ ಮೊದಲಾದವರು ಬಂದರು. ಉಪರಿಕ್ಷವಸುವು ತನ್ನ ಪರಿವಾರ ಸಮೇತನಾಗಿ ಬಂದನು. ಉಪರಿಕ್ಷವಸುವನ್ನು ಕಂಡು ಮಚ್ಛಿಂದ್ರನು ವಿನಯದಿಂದ ಆತನನ್ನು ನಮ ಸ್ಕರಿಸಿ ಕುಶಲವಾರ್ತೆಯನ್ನು ಕೇಳಿದನು. ಕೀಲೋತಳೆಯು ಸಿಂಹಲದ್ವೀಪಕ್ಕೆ ಹೋದ ಸುದ್ದಿಯನ್ನು ಉಪರಿಕ್ಷವಸುವು ಮಚ್ಛಿಂದ್ರನಿಗೆ ಹೇಳಿದನು.

ಸಮಸ್ತ ದೇವತೆಗಳು, ಮಹರ್ಷಿಗಳು, ಸಾಧು-ಸಂತರು ಆ ಗಿರಿ ಯಲ್ಲಿ ಕೂಡಿದ್ದನ್ನು ನೋಡಿ ಮಚ್ಛಿಂದ್ರನಿಗೆ ತುಂಬಾ ಸಂತೋಷವಾಯಿತು. ಆಗ ಗೋರಕ್ಷನು ಗುರುಗಳ ಬಳಿಗ ಬಂದು—ಮಹಾರಾಜ, ತಮ್ಮ ಬಂಗಾ ರದ ಇಟ್ಟಂಗಿಯನ್ನು ತಂದು ಕೊಡಬೇಕೇನೆಂದು ಕೇಳಿದನು. ಅದನ್ನು ಕೇಳಿ ಮಚ್ಛಿಂದ್ರನು—ಶಿಷ್ಯೋತ್ತಮನೇ, ಆ ಬಂಗಾರದ ಇಟ್ಟಂಗಿಯಿಂದ ಇಷ್ಟು ಜನರ ಆತಿಥ್ಯವಾಗಬಹುದೇ? ನಿನ್ನಂಥ ಮಹಾನುಭಾವ ಶಿಷ್ಯನಿರಲು ನನಗೇಕೆ ಚಿಂತೆ ಎಂದನು. ಗುರುಗಳು ತನಗೆ ಇಷ್ಟೊಂದು ಗೌರವಕೊಟ್ಟ ದ್ದನ್ನು ತಿಳಿದು ಗೋರಕ್ಷನು ಮಹಾರಾಜ, ಇದೆಲ್ಲ ತಮ್ಮ ಅನುಗ್ರಹದ ಪ್ರಭಾವವು. ತಾವು ಚಿತ್ತೈಯಿಸಿದರೆ ಬೇಕಾದ ಕಾರ್ಯವನ್ನು ಮಾಡ ಲು ಸಮರ್ಥನಾಗುವೆನು ಎಂದು ನುಡಿದು ಮಂತ್ರಶಕ್ತಿಯಿಂದ ಅಷ್ಟಸಿದ್ಧಿ ಗಳನ್ನು ಬರಮಾಡಿಕೊಂಡನು. ಮತ್ತು ಆ ಸಿದ್ಧಿಗಳನ್ನು ಕುರಿತು ಕೂಡಿದ ಜನರ ಆತಿಥ್ಯವನ್ನು ಮಾಡಲು ಹೇಳಿದನು. ಆ ಕೂಡಲೆ ಷಡ್ರಸಾನ್ನವು ಸಿದ್ಧವಾಯಿತು. ಅಷ್ಟಸಿದ್ಧಿಗಳೇ ಆತಿಥ್ಯಮಾಡಲು ಟೊಂಕಕಟ್ಟಿದ ಬಳಿಕ ಯಾತಕ್ಕೆ ಕೊರತೆಯಾಗಬೇಕು? ಸಮಸ್ತ ಜನರೂ ಯಥಾಶ್ರಮವಾಗಿ ಉಂಡು ತೃಪ್ತರಾದರು. ಎಲ್ಲ ಕಡೆಗೂ ಆನಂದವೇ ಆನಂದವುಂಟಾಯಿತು.

ಹೀಗೆ ಸರ್ವತ್ರದಲ್ಲಿ ಆನಂದವು ತುಂಬಿ ತುಳುಕುತ್ತಿರಲು. ಗೋರಕ್ಷನಿಗೆ ಗಹಿನಿಯು ಸ್ಮರಣವಾಯಿತು. ಕೂಡಲೆ ಅವರು ಗುರುಗಳಪ್ಪಣೆ ಪಡೆದು ಕನಕಗಿರಿಗೆ ಒಬ್ಬ ಗಂಧರ್ವನನ್ನು ಕಳುಹಿಸಿದನು. ಮಧುವಿಪ್ರನು ಮಚ್ಛಿಂದ್ರನ ಆಜ್ಞೆಯನ್ನು ಮನ್ನಿಸಿ ಪರಿವಾರದೊಡನೆ ಗಹಿನಿಯನ್ನು ಕರೆದುಕೊಂಡು ಬಂದನು. ಮಚ್ಛಿಂದ್ರನು ಗಹಿನಿಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮುದ್ದಾಡಿದನು. ಈತನು ಕರಭಂಜನನಾರಾಯಣನ ಅವತಾರಿಕನೆಂದು ಸಮಸ್ತರಿಗೂ ಗುರುತುಮಾಡಿಕೊಟ್ಟನು. ಶಂಕರನು ಮಚ್ಛಿಂದ್ರನ ಬಳಿಗೆ ಬಂದು—ಮಚ್ಛಿಂದ್ರನೇ, ಈ ಗಹಿನಿಗೆ ಚನ್ನಾಗಿ ವಿದ್ಯಾಭ್ಯಾಸ ಮಾಡಿಸು. ಯಾಕೆಂದರೆ ನಾನು ನಿವೃತ್ತಿನಾಥನೆಂಬ ಹೆಸರಿನಿಂದ ಅವತರಿಸತಕ್ಕವನಿದ್ದೇನೆ ನಿವೃತ್ತಿನಾಥನ ಅವತಾರ ಕಾಲದಲ್ಲಿ ನಾನು ಈ ಗಹಿನಿಯಿಂದ ಅನುಗ್ರಹಪಡೆಯತಕ್ಕವನಿರುತ್ತೇನೆ. ಈತನು ನನ್ನ ಗುರುಸ್ಥಾನದಲ್ಲಿ ಇರಬೇಕೆಂತಲೇ ಅವತರಿಸಿದ್ದಾನೆ. ಎಂದು ಭವಿಷ್ಯವಾಣಿಯನ್ನು ನುಡಿದನು. ಅದನ್ನು ಕೇಳಿ ಸಮಸ್ತರಿಗೂ ಸಂತೋಷವಾಯಿತು.

ಬಳಿಕ ಮಚ್ಛಿಂದ್ರನು ಗೋರಕ್ಷನನ್ನು ಕರೆದು ಗಹಿನಿಗೆ ಅನುಗ್ರಹ ಮಾಡುವದಕ್ಕೋಸ್ಕರ ಅಜ್ಞಾಪಿಸಿದನು. ಗೋರಕ್ಷನು ಅಲ್ಲಿ ನೆರೆದ ಸಮಸ್ತರನ್ನೂ ಸಾಕ್ಷಿಯಾಗಿಟ್ಟು ಗಹಿನಿಯ ತಲೆಯ ಮೇಲೆ ವರದ ಹಸ್ತವನ್ನಿಟ್ಟನು. ಈ ನಿಮಿತ್ತದಿಂದ ಮುಂದೆ ಒಂದು ತಿಂಗಳವರೆಗೆ ಅಲ್ಲಿ ಉತ್ಸವವು ನಡೆಯಿತು ಈ ಉತ್ಸವದಲ್ಲಿ ಸಮಸ್ತ ದೇವತೆಗಳು ದುಡಿದರು. ಪ್ರಾಣಿಗಳ ಹಣೆಯಲ್ಲಿ ವಿಧಿಲಿಖಿತವನ್ನು ಬರೆಯುವ ಏಳು ಜನ ಸಟವಿಯರು ಇಲ್ಲಿ ಬಂ ಜಲ-ಗೋಮಯ ಮಾಡುತ್ತಿದ್ದರು. ಜಲದೇವತೆಗಳು ಬಡಿಸುವ ಕೆಲಸ ಮಾಡುತ್ತಿದ್ದರು. ಹೀಗೆ ಒಂದೊಂದು ದೇವತೆಗೆ ಒಂದೊಂದು ಕೆಲಸವು ಕೊಡಲ್ಪಟ್ಟಿತ್ತು.

ಉತ್ಸವವು ಯಥಾಸಾಂಗವಾಗಿ ಜರುಗಿತು. ಸಮಸ್ತರೂ ತಮ್ಮ ತಮ್ಮ ಸ್ಥಳಗಳಿಗೆ ಹೋಗಲು ಇಚ್ಛೆಯನ್ನು ಪ್ರಕಟಿಸಿದರು. ಆಗ ಗೋರಕ್ಷನು ಕುಬೇರನನ್ನು ಕರೆದು ನುಡಿದನೇನಂದರೆ:—ಧನಪತಿಯೇ, ನೀನು ಈ ಸುವರ್ಣದ ಬೆಟ್ಟವನ್ನು ತೆಗೆದುಕೊಂಡು ನಮಗೆ ಬೇಕಾಗುವಷ್ಟು ಅಲಂ

ಕಾರಗಳನ್ನು ಕೊಡು. ಕುಬೇರನು ನಾಚಿದನು. ಅವನು ಸುವರ್ಣದ ಬೆಟ್ಟ ವನ್ನು ಸ್ವೀಕರಿಸಲಿಕ್ಕೆ ಒಪ್ಪದೆ ಅಲಂಕಾರಗಳನ್ನು ಕೊಡಲು ಒಪ್ಪಿಕೊಂಡನು. ಗೋರಕ್ಷನು ಹಾಗೇ ಆಗಲೆಂದು ನುಡಿದು ಸಮಸ್ತರನ್ನೂ ಹತ್ತರ ಕರೆದು ಅವರವರ ಯೋಗ್ಯತೆಯಂತೆ ವಸ್ತ್ರಾಭರಣಗಳನ್ನು ಕೊಟ್ಟು ಕಳುಹಿದನು. ಸಮಸ್ತರೂ ಗೋರಕ್ಷನಿಂದ ಸನ್ಮಾನಿತರಾಗಿ ಸ್ವಸ್ಥಳಕ್ಕೆ ಹೊರಟು ಹೋದರು.

ಬಳಿಕ ಮಚ್ಛಿಂದ್ರನು ಉಪರಿಕ್ಷವಸುವಿನ ವಶಕ್ಕೆ ಮೀನನಾಥನನ್ನು ಕೊಟ್ಟು ಈತನನ್ನು ಕೀಲೋತಳೆಗೆ ಒಪ್ಪಿಸಬೇಕೆಂದು ಹೇಳಿದನು. ಆ ಪ್ರಕಾರ ವಸುವು ಸಿಂಹಲದ್ವೀಪಕ್ಕೆ ಹೋಗಿ ಮೀನನಾಥನನ್ನು ಕೀಲೋತಳೆಗೆ ಒಪ್ಪಿಸಿದನು. ಮಚ್ಛಿಂದ್ರನ ವಿಯೋಗದಿಂದ ಚಡಪಡಿಸುತ್ತಿದ್ದ ಕಿಲೋತಳೆಯು ಮೀನನಾಥನನ್ನು ನೋಡಿ ಸ್ವಲ್ಪ ಸಮಾಧಾನವನ್ನು ತಾಳಿದಳು.

ಇತ್ತ ಮಚ್ಛಿಂದ್ರನು ಗೋರಕ್ಷ-ಗಹಿನಿಯರೊಡನೆ ಗರ್ಭಗಿರಿಯ ಮೇಲೆ ಬಂದನು. ಗಹಿನಿಯು ಗೋರಕ್ಷನಿಂದ ಸಮಸ್ತ ವಿದ್ಯೆಯನ್ನು ಕಲಿತುಕೊಂಡು ಸಾಮರ್ಥ್ಯವನ್ನು ಪಡೆದನು. ಬಳಿಕ ಗೋರಕ್ಷನು ಗರ್ಭಗಿರಿಯ ವ್ಯವಸ್ಥೆಯನ್ನು ಕುಬೇರನಿಗೆ ಒಪ್ಪಿಸಿದನು. ಅವನು ಅದೃಶ್ಯಮಂತ್ರವನ್ನು ಜಪಿಸಿ ಗಿರಿಯ ಸುವರ್ಣತ್ವವನ್ನು ಹೋಗಲಾಡಿಸಿದನು. ಬಳಿಕ ಗೋರಕ್ಷನು ಗಹಿನಿಯನ್ನು ಅವರ ಪಾಲಕರ ಕಡೆಗೆ ಮುಟ್ಟಿಸಿ ಗುರುಗಳೊಡನೆ ತೀರ್ಥ-ಯಾತ್ರೆಗೆ ಹೊರಟುಹೋದನು.



# ಅಧ್ಯಾಯ ೨೪

## ಭರ್ತೃಹರಿಯ ಕಥೆಯು.

ಒಂದಾನೊಂದು ಕಾಲದಲ್ಲಿ ಮಿತ್ರವರುಣ ಎಂಬ ಹೆಸರಿನ ಓರ್ವ ದೇವಪುರುಷನು ತನ್ನ ರಥದಲ್ಲಿ ಕುಳಿತುಕೊಂಡು ಅಸ್ತಾಚಲದ ಕಡೆಗೆ ಹೋಗುತ್ತಿದ್ದನು. ಅದೇ ಕಾಲಕ್ಕೆ ಊರ್ವಶಿಯೆಂಬ ಹೆಸರಿನ ದಿವ್ಯ ಅಪ್ಸರೆಯು ವಿಮಾನದಲ್ಲಿ ಕುಳಿತು ಆಕಾಶದಲ್ಲಿ ಸಂಚರಿಸುತ್ತಿದ್ದಳು. ಆ ದೇವಾಂಗನೆಯನ್ನು ಕಂಡು ಆ ಮಿತ್ರವರುಣನಿಗೆ ಆಕೆಯನ್ನು ಲಗ್ನಮಾಡಿಕೊಳ್ಳುವ ಇಚ್ಛೆಯುಂಟಾಯಿತು. ಆತನ ಮನೋಗತವನ್ನು ಲಕ್ಷಿಸದೆ, ಉರ್ವಶಿಯು ತನ್ನ ಮಾರ್ಗದಿಂದ ಹೊರಟುಹೋದಳು. ಉರ್ವಶಿಯನ್ನು ಲಗ್ನಮಾಡಿಕೊಂಡರೆ ತನಗೆ ಉತ್ತಮವಾದ ಸಂತತಿಯು ಪ್ರಾಪ್ತವಾಗುವದೆಂದು ಮಿತ್ರವರುಣದೇವನು ಕಲ್ಪಿಸಿದ್ದನು. ಕೆಲ ಹೊತ್ತಿನ ಮೇಲೆ ಆವನಿಗೆ ಉರ್ವಶಿಯು ಕಾಣದಾದಳು. ಆಗ ಆತನ ಮನಸ್ಸಿಗೆ ಬಹಳ ಕಷ್ಟವಾಯಿತು. ಬಹಳವಾಗಿ ವಿಚಾರಿಸಿ ಮಿತ್ರವರುಣನು ಆಕೆಯ ವಿಯೋಗದಿಂದ ಆದ ದುಃಖವನ್ನು ಕಿತ್ತುಹಾಕಿದನು; ಆದರೆ ತನಗೆ ಸಂತತಿಯಾಗಬೇಕೆಂಬ ಭಾವನೆಯನ್ನು ಮಾತ್ರ ಬಿಡಲಿಲ್ಲ. ಇಷ್ಟೇ ಅಲ್ಲ; ಆ ಇಚ್ಛೆಯು ಅವನಲ್ಲಿ ದೃಢವಾಗಿ ಉಳಿಯಿತು. ಅವನು ಪೌರುಷಪ್ರಿಯನಿದ್ದದರಿಂದ ತನ್ನ ಇಚ್ಛೆಯನ್ನು ಪೂರ್ಣಮಾಡಿಕೊಳ್ಳಲು ಸಮರ್ಥನಾಗಿದ್ದನು. ಅವನು ತನ್ನ ಇಚ್ಛೆಯ ಮಾತ್ರದಿಂದಲೇ ಇಬ್ಬರು ಪುತ್ರರನ್ನು ಉಂಟುಮಾಡಿದನು. ಲೋಮಋಷಿಯ ಆಶ್ರಮದಲ್ಲಿ ಕೊಡದೊಳಗೆ ಅಗಸ್ತ್ಯ ಎಂಬ ಹೆಸರಿನ ಮೊದಲನೇ ಪುತ್ರನು ಉತ್ಪನ್ನನಾದನು.

ಪೂರ್ವಕಾಲದಲ್ಲಿ ಕೌಲಿಕನೆಂಬ ಹೆಸರಿನ ಒಬ್ಬ ತ್ರಿಕಾಲಜ್ಞ ಋಷಿಯು ಇದ್ದನು. ಭಿಕ್ಷೆಯ ಮೇಲೆ ತನ್ನ ಉದರನಿರ್ವಾಹವನ್ನು ಸಾಗಿಸಿಕೊಂಡು ತನ್ನ ಕರ್ಮಾಚರಣೆಯನ್ನು ಸಾಗಿಸಿಕೊಳ್ಳುವದರಲ್ಲಿ ಮಗ್ನನಾಗಿ

ದ್ದನು. ಒಂದು ಸಮಯದಲ್ಲಿ ಅವನು ಭರ್ತರಿ ಎಂಬ ಹೆಸರಿನ ಭಿಕ್ಷಾಪಾತ್ರೆಯನ್ನು ಕೈಯಲ್ಲಿ ತೆಗೆದುಕೊಂಡು ಭಿಕ್ಷೆಗಾಗಿ ಮನೆಯಿಂದ ಹೊರಟನು. ಮನೆಗೆ ಕೀಲಿಯನ್ನು ಹಾಕುವದಕ್ಕಾಗಿ ಅವನು ತನ್ನ ಭಿಕ್ಷೆಯ ಪಾತ್ರೆಯನ್ನು ಅಂಗಳದಲ್ಲಿ ಇಟ್ಟು ಬಾಗಿಲಿಗೆ ಕೀಲೀ ಹಾಕಿದನು. ಮಿತ್ರವರುಣದೇವನಿಗೆ ಆ ಭರ್ತರಿಯಲ್ಲಿ ಎರಡನೇ ಪುತ್ರನಾಗಬೇಕೆಂಬ ಇಚ್ಛೆಯು ಉತ್ಪನ್ನವಾಯಿತು. ಕೌಲಿಕ ಋಷಿಯು ಬಾಗಿಲನ್ನು ಮುಚ್ಚಿ ಅಂಗಳದೊಳಗಿನ ಭಿಕ್ಷೆಯ ಪಾತ್ರೆಯ ಬಳಿಗೆ ಬಂದನು. ಅವನು ಆ ಭರ್ತರಿಯ ಕಡೆಗೆ ಲಕ್ಷ್ಯವನ್ನು ಕೊಡಲು, ಆಗ ಆ ಭಿಕ್ಷಾಪಾತ್ರೆಯು ದಿವ್ಯ ತೇಜದಿಂದ ಮಿನುಗುತ್ತಿದ್ದದು ಅವನ ಕಣ್ಣಿಗೆ ಬಿತ್ತು. ಹೀಗಾಗಲಿಕ್ಕೆ ಕಾರಣವೇನೆಂದು ಆ ಮಹಾತ್ಮನಾದ ಕೌಲಿಕಋಷಿಯು ಅಂತರ್ಜ್ಞಾನದಿಂದ ನೋಡಹತ್ತಿದನು. ಆ ಜ್ಞಾನದಿಂದ ಅವನಿಗೆ ತಿಳಿದು ಬಂದದ್ದೇನಂದರೆ:—ಕೆಲವು ಕಾಲದ ಮೇಲೆ ಈ ಭರ್ತರಿಯಲ್ಲಿ ನಾರಾಯಣನ ಇಚ್ಛೆಯಿಂದ ದಿವ್ಯವಾದ ಪುತ್ರನು ಉತ್ಪನ್ನನಾಗುವನು. ಇದನ್ನು ತಿಳಿದು ಆ ಕೌಲಿಕಋಷಿಯು ಆ ಭರ್ತರಿಯನ್ನು ತನ್ನ ಹತ್ತರ ಜೋಕೆಯಿಂದ ಇಟ್ಟನು. ಪುತ್ರೋತ್ಪತ್ತಿಯ ಕಾಲವು ಸಮೀಪಿಸಲು ಆ ಭರ್ತರಿಯನ್ನು ಮಂದರಪರ್ವತದ ಮೇಲೆ ಒಂದು ಗುಹೆಯಲ್ಲಿ ಇಟ್ಟನು. ಮಿತ್ರವರುಣನ ಇಚ್ಛೆಯನ್ನು ತಿಳಿದು ಧ್ರುಮಿ ಎಂಬ ಹೆಸರಿನ ನಾರಾಯಣನು ಆ ಭರ್ತರಿಯಲ್ಲಿ ಅವತಾರ ತೆಗೆದುಕೊಂಡನು. ಆ ಭರ್ತರಿಯಲ್ಲಿ ಬಾಲಕನು ಉತ್ಪನ್ನನಾದನು. ಆ ಬಾಲಕನು ಸ್ವಲ್ಪ ದೊಡ್ಡವನಾಗಲು, ಕೌಲಿಕನ ಆ ಭಿಕ್ಷಾಪಾತ್ರೆಯು ಒಡೆಯಿತು ಪಾತ್ರೆಯು ಒಡೆದ ಕೂಡಲೆ ಆ ಬಾಲಕನು ಅಳಹತ್ತಿದನು. ಅವನ ರೋದನವನ್ನು ಕೇಳಿ ವನದೊಳಗಿನ ಚಿಗರೆಯ ಹಿಂಡು ಆ ಸ್ಥಳದಲ್ಲಿ ಓಡಿ ಬಂದವು. ಆ ಗುಂಪಿನಲ್ಲಿ ಒಂದು ಚಿಗರೆಯು ಗರ್ಭಿಣಿ ಇತ್ತು. ಅದು ಆ ಬಾಲಕನ ಹತ್ತರ ಬಂದು ಕುಳಿತಿತು. ಆ ಕಾಲಕ್ಕೆ ಆ ಚಿಗರೆಯ ಪ್ರಸವಕಾಲ ಬಂದಿತ್ತು. ಅದು ಪ್ರಸೂತವಾಗಲು ಅದಕ್ಕೆ ಎರಡು ಮರಿಗಳು ಹುಟ್ಟಿದವು ಬಳಿಕ ಅದು ತನ್ನ ಮರಿಗಳ ಕಡೆಗೆ ನೋಡಲು, ಅದಕ್ಕೆ ಆ ಬಾಲಕನನ್ನು ಕೂಡಿಸಿ ಮೂರು ಮರಿಗಳು ಕಂಡವು. ಆ ಭರ್ತರಿಯೊಳಗಿನ ಬಾಲಕನು ಮಾನವ ದೇಹಿಯಾಗಿದ್ದರೂ, ಅದಕ್ಕೆ ತನ್ನ ಮರಿಯೆಂದೇ ಭಾಸವಾಯಿತು. ಅದು ತನ್ನ ಎರಡು

ಮರಿಗಳ ಕೂಡ ಆ ಶಿಶುವನ್ನೂ ನೆಕ್ಕಿತು. ಕೆಲ ಹೊತ್ತಿನ ಮೇಲೆ ಆ ಎರಡು ಮರಿಗಳು ತಾಯಿಯ ಸ್ತನಪಾನವನ್ನು ಮಾಡಹತ್ತಿದವು; ಆದರೆ ಭರ್ತರಿಗೆ ಆ ಸ್ತನಪಾನವನ್ನು ಮಾಡಲಿಕ್ಕೆ ಬರಲಿಲ್ಲ. ತನ್ನ ಮೂರನೆಯ ಬಾಲಕನು ಸ್ತನಪಾನ ಮಾಡದಿದ್ದದ್ದನ್ನು ಕಂಡು ಆ ಚಿಗರೆಯು ಆ ಹುಡುಗನ ಹತ್ತರ ಹೋಗಿ ನಿಂತುಕೊಂಡಿತು. ಹೇಗಾದರೂ ಮಾಡಿ ಆ ಬಾಲಕನು ತನ್ನ ಮೊಲೆಯನ್ನು ಉಣ್ಣಲೆಂದು ಮಾರ್ಗ ನೋಡುತ್ತಿತ್ತು. ಕಡೆಗೆ ಆ ಬಾಲಕನು ಕುಡಿಯದಾಗಲು ನಿರಾಶೆಯನ್ನು ಹೊಂದಿತು. ಹೀಗಿರಲು ಕೆಲ ದಿನಗಳ ಮೇಲೆ ಭರ್ತರಿಗೆ ಚಿಗರೆಯ ಮರಿಯ ಆಚರಣೆಯನ್ನು ಸ್ವೀಕರಿಸುವ ಬುದ್ಧಿಯು ಉತ್ಪನ್ನವಾಯಿತು. ಮತ್ತು. ಅವನು ಚಿಗರೆಯ ಮರಿಯಂತೆ ಆ ಮೊಲೆಯನ್ನು ಉಣ್ಣಹತ್ತಿದನು. ಈ ಪ್ರಕಾರ ಮೂರು ವರ್ಷಗಳು ಹೋದವು. ಆ ಮೇಲೆ ಬಾಲಕನು ಚಿಗರೆಯ ಮರಿಗಳೊಡನೆ ಹೋಗಿ ಎಳೆಹುಲ್ಲನ್ನೂ, ಎಲೆಯನ್ನೂ ತಿನ್ನಹತ್ತಿದನು. ಹೀಗೆ ಆ ವನದಲ್ಲಿಯೇ ವಾಸ ಮಾಡಿದ್ದರಿಂದ ಭರ್ತರಿಗೆ ಆಕಳು, ಎಮ್ಮೆ, ಸಿಂಹ, ಹುಲಿ, ತೋಳ, ನರಿ, ಇತ್ಯಾದಿ ಪಶುಗಳ ಪಕ್ಷಿಗಳ ಮತ್ತು ಹುಳ, ಇರಿವೆ, ಹಾವು ಇತ್ಯಾದಿ ಅನ್ಯ ಪ್ರಾಣಿಗಳ ಭಾಷೆಯು ತಿಳಿಯಹತ್ತಿತು. ಈ ಮೇರೆಗೆ ಆ ಋಷಿಯ ಅವತಾರವು ಪಶುಗಳಲ್ಲಿ ಕೂಡಿ ಅವನು ಯಾವಾಗಲೂ ಚಿಗರೆಯೊಡನೆ ತಿರುಗಹತ್ತಿದನು.

ಈ ಪ್ರಕಾರ ನಾಲ್ಕು ವರ್ಷ ಕಳೆಯಲು, ಭರ್ತರಿಗೆ ಐದನೆಯ ವರುಷವು ಒಂತು. ಕ್ರಮದಂತೆ ಅವನು ತನ್ನ ತಾಯಿಯೊಡನೆ ತಿರುಗಿ ತಿರುಗಿ ಅರಣ್ಯವನ್ನು ಬಿಟ್ಟು ಒಂದು ಮಾರ್ಗದ ತೀರ ಸಮೀಪಕ್ಕೆ ಬಂದು ಎಲೆಗಳನ್ನು ತಿನ್ನಹತ್ತಿದನು. ಅದೇ ಕಾಲಕ್ಕೆ ಆ ಹಾದಿಯಿಂದ ಜಯಸಿಂಗನೆಂಬ ಒಬ್ಬ ಭಾಟನು ತನ್ನ ಹೆಂಡತಿಯೊಡನೆ ಪ್ರವಾಸವನ್ನು ಮಾಡುತ್ತಿದ್ದನು. ಅವನ ಪತ್ನಿಯ ಹೆಸರು ರೇಣುಕಾ ಎಂಬದಾಗಿತ್ತು. ಆಕೆಯು ಸಾಧ್ವಿಯಾಗಿದ್ದಳು. ಆಕೆಯ ಪತಿಯ ಎಲ್ಲ ಕೆಲಸಗಳಿಗೂ ಅನುಕೂಲಳಾಗಿದ್ದಳು. ಇಂತು ಆ ದಂಪತಿಗಳು ಸತ್ವಶಾಲಿಗಳಾಗಿದ್ದರು. ಭರ್ತರಿಯು ಆ ಮಾರ್ಗಕ್ಕೆ ಬಂದದ್ದರಿಂದ ಆ ದಂಪತಿಗಳಿಗೆ ಇವನ ಭೆಟ್ಟಿಯಾಯಿತು. ಭರ್ತರಿಯು ಬಾಲಸೂರ್ಯನಂತಿರುವ ತೇಜವನ್ನು ಕಂಡು ಅವನ ಕಡೆಗೆ ಆ

ಜಯಸಿಂಗನ ಲಕ್ಷ್ಯವು ಹೋಯಿತು. ಪ್ರತ್ಯಕ್ಷ ಚಂದ್ರನೇ ಅವತಾರವನ್ನು ಮಾಡಿರಬೇಕು ; ಅಥವಾ ಅಗ್ನಿಯೇ ಈ ಬಾಲಕನ ರೂಪದಿಂದ ಭೂಮಿಯ ಮೇಲೆ ಪ್ರಾಪ್ತನಾಗಿರಬೇಕು. ಹೀಗೆ ಜಯಸಿಂಗನಲ್ಲಿ ಕಲ್ಪನೆಯು ಉತ್ಪನ್ನ ವಾಗಹತ್ತಿತು. ಇಂಥ ತೇಜಃಪುಂಜ ಬಾಲಕನು ಈ ಸ್ಥಳದಲ್ಲಿ ಹೇಗೆ ಬಂದಿರಬಹುದು? ಇವನ ತಾಯಿ-ತಂದೆಗಳು ಯಾರಿರಬಹುದು? ಈ ಹುಡುಗನು ತಂದೆ-ತಾಯಿಗಳನ್ನು ತಪ್ಪಿಸಿಕೊಂಡು ಬಂದಿರಬಹುದೋ, ಅಥವಾ ಅವರು ಮೃತಪಟ್ಟಿರಬಹುದೋ ತಿಳಿಯದೆಂದು ಅವನು ಸೋಜಿಗಬಟ್ಟು ಆ ಕೂಸಿನ ತೀರ ಸಮೀಪಕ್ಕೆ ಹೋದನು. ಅವನು ಸಮೀಪಕ್ಕೆ ಬಂದದ್ದನ್ನು ನೋಡಿ ಭರ್ತರಿಯು ಹೆದರಿದನು. ಅವನು ಚಿಗರೆಯಂತೆ ಶಬ್ದ ಮಾಡುತ್ತ ಅಳ ಹತ್ತಿದನು. ಮನುಷ್ಯನ ಭಯದಿಂದ ಅವನು ಓಡಹತ್ತಿದನು. ಜಯಸಿಂಗನು ಅವನ ಬೆನ್ನುಹತ್ತಿ ನಡೆದನು. ಕೆಲಹೊತ್ತಿನ ಮೇಲೆ ಅವನು ಭರ್ತರಿಯನ್ನು ಹಿಡಿದನು; ಮತ್ತು ಅವನ ಪೂರ್ವ ಸಂಗತಿಯನ್ನು ವಿಚಾರಿಸಿದನು. ಬಾಳಾ, ನೀನು ಹೀಗೆ ಹೆದರಬೇಡ; ನಿನ್ನ ತಾಯಿಯು ಎಲ್ಲಿರುವಳು? ತಿಳಿಸು, ಅಂದರೆ ಅವರ ಕಡೆಗೆ ಕಳಿಸಿಕೊಡುವೆನು

ಇದನ್ನು ಕೇಳಿ ಭರ್ತರಿಯು ಏನೂ ಮಾತಾಡಲಿಲ್ಲ ಪಶುಭಾಷೆಯಿಂದ ತನ್ನ ಚಿಗರೆಯನ್ನು ಒದರಹತ್ತಿದನು. ಅವನ ಒದರುವಿಕೆಯನ್ನು ಕೇಳಿ ಆ ಚಿಗರೆಯು ಧಾವಿಸುತ್ತ ಬಂದು ಎದುರಿಗೆ ನಿಂತಿತು. ತನ್ನ ಬಾಲಕನು ಮನುಷ್ಯನ ಕೈಯಲ್ಲಿ ಸಿಕ್ಕಿರುವನೆಂದು ತಿಳಿದು ತಳಮಳಿಸಹತ್ತಿತು. ಆದರೂ ಮನುಷ್ಯನ ಭಯಕ್ಕೆ ಹತ್ತರ ಬರುವದಾಗಲಿಲ್ಲ. ಜಯಸಿಂಹನು ಧೈರ್ಯಕೊಟ್ಟು ಪುನಃ ಆ ಹುಡುಗನನ್ನು ವಿಚಾರಿಸಿದನು. ಅವನಪ್ರಶ್ನೆಗೆ ಏನೂ ಉತ್ತರಕೊಡದೆ ಭರ್ತರಿಯು ಭೀತಿಯಿಂದ ಬ್ಯಾ, ಬ್ಯಾ ಎಂದು ಅಳಹತ್ತಿದನು. ಇದನ್ನು ಕೇಳಿ ಜಯಸಿಂಹನು ಈ ಹುಡುಗನು ಮೂಕನಿದ್ದಾನೆಂದು ತಿಳಿದು ಕೆಲವು ಸಾಂಕೇತಿಕಶಬ್ದಗಳಿಂದ ಅವನ ಇತಿಹಾಸವನ್ನು ಕೇಳಿದನು. ಆ ಹುಡುಗನು ಆ ಸನ್ನೆಯನ್ನು ತಿಳಿಯದಾದನು. ಆಗ್ಗೆ ಮಾತ್ರ ಜಯಸಿಂಹನು ನಿರಾಶೆಯಾದನು. ಆದರೂ ಆ ಅಜ್ಞಾನ ಬಾಲಕನನ್ನು ಕರೆದುಕೊಂಡು ಹೋಗಬೇಕು ಮತ್ತು ಅವನ ತಾಯಿ-ತಂದೆಗಳನ್ನು ಶೋಧಿಸಿ ಅವರಿಗೆ ಒಪ್ಪಿಸಬೇಕು. ಹೀಗೆ ತನ್ನ ಮನಸ್ಸಿನಲ್ಲಿ ವಿಚಾರವನ್ನು ಮಾಡಿದನು.

ಕೂಡಲೆ ಅವನು ಆ ಹುಡುಗನನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡನು. ಅದನ್ನು ಕಂಡು ಚಿಗರೆಯು ಗಾಬರಿಯಾಗಿ ಜಯಸಿಂಹನ ಎಡಬಲ ಸುಳಿದಾಡಹತ್ತಿತು. ಬಾಲಕನ ಮೇಲೆಯೇ ದೃಷ್ಟಿಯನ್ನಿಟ್ಟು ಆ ಚಿಗರಿಯು ಜಯಸಿಂಹನ ಎದುರಿಗೆ ನಿಂತು ದೀನಸ್ವರದಿಂದ ಶಬ್ದ ಮಾಡಹತ್ತಿತು. ಜಯಸಿಂಹನು ಆ ಹುಡುಗನನ್ನು ತೆಗೆದುಕೊಂಡು ಮಾರ್ಗಕ್ರಮಿಸಹತ್ತಿದನು. ಇದನ್ನು ಕಂಡು ಅದು ಅವನ ಹಿಂದೆಯೇ ಸಾಗಹತ್ತಿತು. ಚಿಗರೆಯು ತನ್ನ ಹಿಂದೆಯೇ ಸುಳಿದಾಡಹತ್ತಿದ್ದನ್ನು ಕಂಡು ಜಯಸಿಂಗನಿಗೆ ಸಂಶಯಉತ್ಪನ್ನವಾಯಿತು. ಆದರೆ ಈ ಹುಡುಗನ ಸಲುವಾಗಿಯೇ ಈ ಚಿಗರೆಯು ಜಡಪಡಿಸುತ್ತದೆಂಬ ವರ್ಮ ಆ ಜಯಸಿಂಹನಿಗೆ ಹೇಗೆ ಗೊತ್ತಾಗಬೇಕು? ಈ ಚಿಗರೆಯು ತನ್ನ ಮರಿಯ ಸಲುವಾಗಿ ಹೀಗೆ ಮಾಡುತ್ತಿರಬಹುದೆಂದು ಆ ಮಾತಿನ ಬಗ್ಗೆ ಹೆಚ್ಚು ವಿಚಾರ ಮಾಡದೆ ಮುಂದಕ್ಕೆ ನಡೆದನು. ಹೀಗೆ ಬಹಳ ದೂರ ಹೋಗಿ ಒಂದು ಗ್ರಾಮದಲ್ಲಿ ನಿಂತುಕೊಂಡನು. ಇದನ್ನು ಕಂಡು ಆ ಚಿಗರೆಯು ನಿರಾಶೆಯಾಗಿ ಅರಣ್ಯದಲ್ಲಿ ಹೊರಟು ಹೋಯಿತು.

ಆ ಗ್ರಾಮದಲ್ಲಿ ಒಂದು ಉತ್ತಮವಾದ ಸ್ಥಳವನ್ನು ನೋಡಿ ಅಲ್ಲಿಯೇ ಇರಹತ್ತಿದನು. ಜಯಸಿಂಹನು ಊರಲ್ಲಿ ತಿರುಗಾಡಲಿಕ್ಕೆ ಹೋಗಲು ಭರ್ತರಿಯು ರೇಣುಕೆಯ ಹತ್ತರ ಇರುತ್ತಿದ್ದನು. ಆ ಊರಲ್ಲಿ ಜಯಸಿಂಹನು ಮೂರು ತಿಂಗಳ ವರೆಗೆ ವಸತಿಯನ್ನು ಮಾಡಿದನು. ಅಷ್ಟು ಅವಧಿಯಲ್ಲಿ ಭರ್ತರಿಗೆ ಭಯವು ಬಹಳ ಕಡಿಮೆಯಾಯಿತು. ಊಟ, ಉಡಿಗೆ ಆಟ ನೋಟ, ಇತ್ಯಾದಿ ಸಂಗತಿಗಳ ಬಗ್ಗೆ ಆತನಲ್ಲಿ ಬಹಳ ಈ ವಿಚಾರವುತ್ಪನ್ನವಾಯಿತು. ಮೆಲ್ಲಮೆಲ್ಲಗೆ ಭರ್ತರಿಯು ಮಾತಾಡಲಿಕ್ಕೆ ಹತ್ತಿ ತಾಯಿಾ, ತಾಯಿಾ, ಅಪ್ಪಾ, ಅಪ್ಪಾ ಎಂದು ಮಾತಾಡಹತ್ತಿದನು. ಅವನಿಗೆ ಹಸಿವೆಯಾಗಲು ರೇಣುಕೆಯ ಹತ್ತರ ಬೇಡಹತ್ತಿದನು.

ಒಂದು ಊರಿಂದ ಮತ್ತೊಂದು ಊರೆಗೆ ಹೋಗುತ್ತ ಅಲ್ಲಿ ವಸತಿಯನ್ನು ಮಾಡುತ್ತ ಆ ಜಯಸಿಂಗಭಾಟನು ಕಾಶೀಕ್ಷೇತ್ರಕ್ಕೆ ಹೋದನು. ಅಲ್ಲಿ ಸ್ನಾನವನ್ನು ಮಾಡಿ ಜಯಸಿಂಹನು ಭರ್ತರಿಯ ಸಹವಾಗಿ ವಿಶ್ವೇಶ್ವರನ ದರ್ಶನಕ್ಕೆ ಹೋದನು. ವಿಶ್ವೇಶ್ವರನಿಗೆ ಸಾಷ್ಟಾಂಗವಾಗಿ ವಂದಿಸಿ ಭರ್ತರಿಯಿಂದಲೂ ಸಾಂಬನಿಗೆ ನಮಸ್ಕಾರ ಮಾಡಿಸಿದನು. ಭರ್ತರಿಯು

ನಮಸ್ಕಾರ ಹಾಕಿದ ಕೂಡಲೆ ಶಂಕರನ ಲಿಂಗದೊಳಗಿಂದ "ಹೇ ಋಷಿ ನಾರಾಯಣಾ, ಈ ಭರ್ತರಿಯ ಅವತಾರದಿಂದ ನೀನು ನನ್ನ ದರ್ಶನಕ್ಕೆ ಬಂದದ್ದು ಬಹಳ ಚನ್ನಾಗಿ ಮಾಡಿದೆ." ಹೀಗೆ ಶಬ್ದವು ಹೊರಟಿತು. ಆ ಶಬ್ದವು ಸಹಜವಾಗಿ ಜಯಸಿಂಗನ ಕಿವಿಯ ಮೇಲೆ ಬಿದ್ದಿತು. ಇದನ್ನು ಕೇಳಿ ಜಯಸಿಂಗನು ಸೋಜಿಗಗೊಂಡಿದನು. ಭರ್ತರಿಯು ಶಂಕರನಿಗೆ ನಮಸ್ಕಾರ ಹಾಕಲು ಲಿಂಗದೊಳಗಿಂದ ಶಬ್ದಗಳು ಹೊರಟದ್ದರಿಂದ ಈ ಹುಡುಗನು ಬಹುತರವಾಗಿ ಅವತಾರೀಪುರುಷನಿರಬಹುದೆಂದು ಅವನಿಗೆ ತಿಳಿಯಿತು. ಶ್ರೀ ಶಂಕರನ ಮುಖದಿಂದ ಭರ್ತರಿ ಎಂಬ ಹೆಸರು ಹೊರಟದ್ದರಿಂದ ಈ ಹುಡುಗನ ಹೆಸರು ಬಹುತರವಾಗಿ ಭರ್ತರಿ ಎಂದೇ ಇರಬಹುದೆಂದು ತಾನೂ ಅದೇ ಹೆಸರಿನಿಂದ ಒದರ ಹತ್ತಿದನು. ಭರ್ತರಿಯು ಸ್ವರ್ಗದೊಳಗಿನ ಪುಣ್ಯಪುರುಷನಿದ್ದು ನನಗೆ ಈತನ ಲಾಭವಾಯಿತೆಂದು ಜಯಸಿಂಹನು ಆನಂದಪಟ್ಟನು. ದರಿದ್ರನಿಗೆ ಧನದ ಹಂಡೆಯು ದೊರೆತಂತೆಯೂ, ಚಿಂತಾತುರನಿಗೆ ಚಿಂತಾಮಣಿಯು ಅಕಸ್ಮಾತ್ ತೊರೆತಂತೆಯೂ, ದುಷ್ಕಾಳದಿಂದ ಜರ್ಜರನಾದವನಿಗೆ ಕಾಮಧೇನು ಪ್ರಾಪ್ತವಾದಂತೆಯೂ ಜಯಸಿಂಹನು ಅತಿ ಪ್ರಮುದಿತನಾಗಿ ಆ ಹುಡುಗನೊಡನೆ ತನ್ನ ಸ್ಥಾನಕ್ಕೆ ಬಂದನು. ಅವನು ತನ್ನ ಹೆಂಡತಿಗೆ ದೇವಾಲಯದೊಳಗಿನ ಎಲ್ಲ ವೃತ್ತಾಂತವನ್ನು ಹೇಳಿದ್ದಲ್ಲದೆ ಈ ಹುಡುಗನ ಹೆಸರು ಭರ್ತರಿಯೆಂದು ಹೇಳಿದನು. ರೇಣುಕಾಸ್ತ್ರೀಗೆ ಮಕ್ಕಳಿರದ್ದರಿಂದ ಅವಳು ಭರ್ತರಿಯನ್ನು ಬಹಳ ಪ್ರೀತಿಸಹತ್ತಿದಳು. ಅವಳು ಅವನನ್ನು ಮುದ್ದಾಡುತ್ತಿದ್ದಳು. ನನಗೆ ಸಂತಾನವಿಂದ್ದರಿಂದ ಶಂಕರನು ಕೃಪೆ ಮಾಡಿ ನಮಗೆ ಈ ಭರ್ತರಿಯನ್ನು ಕೊಟ್ಟನೆಂದು ಆ ದಂಪತಿಗಳು ಈಶ್ವರನಿಗೆ ಮನಸ್ಸಿನಿಂದ ವಂದಿಸುತ್ತಿದ್ದರು. ಭರ್ತರಿಯು ದೊಡ್ಡವನಾದಂತೆ ಅವರ ಆನಂದವೂ ಬೆಳೆಯಹತ್ತಿತು. ಆದರೆ ಭರ್ತರಿಯ ತಾಯಿ ತಂದೆಗಳ ಶೋಧವಾಗಿ ತಮ್ಮನ್ನಗಲಿ ಎಲ್ಲಿ ಹೊಗುವನೋ ಎಂದು ಒಮ್ಮೊಮ್ಮೆ ಖೇದಪಡುತ್ತಿದ್ದರು. ನಾವು ಹೀಗೆ ದೇಶಸಂಚರಿಸಹತ್ತಲು ಇವನ ತಾಯಿ ತಂದೆಗಳ ಶೋಧವಾಗಿ ಈ ಬಾಲಕನು ನಮ್ಮನ್ನಗಲಬಹುದೆಂದು ವಿಚಾರಿಸಿ ಮುಂದೆ ಅವರು ಯಾವ ಯಾತ್ರೆಯನ್ನೂ ಮಾಡುವ ಗೋಜಿಗೆ ಹೋಗದೆ ಆ ಕಾಶೀಕ್ಷೇತ್ರದಲ್ಲಿಯೇ ಇರಹತ್ತಿದರು.

ಭರ್ತರಿಯು ರಾಜಚಿಹ್ನದಿಂದ ಒಪ್ಪುತ್ತಿದ್ದನು. ಅನೇಕ ಹುಡುಗರೊಡನೆ ಕೂಡಿಕೊಂಡು ನಾನಾ ಪ್ರಕಾರದ ಆಟಗಳನ್ನು ಆಡಹತ್ತಿದನು. ಅವನು ಒಂದು ಕಟ್ಟಿಗೆಯ ಕುದುರೆಯನ್ನು ಮಾಡಿ ಪಾಗೆಯಲ್ಲಿ ಕಟ್ಟುತ್ತಿದ್ದನು. ಶಿಪಾಯಿ, ಸ್ವಾರ, ಕಾರಕೂನ ಮೊದಲಾದ ಹುದ್ದೆಗಳನ್ನು ಹುಡುಗರಿಗೆ ಕೊಟ್ಟು ತಾನು ರಾಜನಾಗುತ್ತಿದ್ದನು.

ಇದು ಈ ಹುಡುಗರ ಸಹಜವಾದ ಆಟವಾಗಿರದೆ ಭವಿಷ್ಯಕಾಲದ ಚಿಹ್ನವೇ ಎಂದು ಹೇಳಬಹುದು.

ಒಂದು ದಿನ ಕಟ್ಟಿಗೆಯ ಕುದುರೆಗಳನ್ನು ಮಾಡಿ ಹುಡುಗರು ಸ್ವಾರರಾದರು ಆಡಆಡುತ್ತ ಆ ಎಲ್ಲ ಹುಡುಗರು ಅರಣ್ಯದಲ್ಲಿ ಹೋದರು. ಭರ್ತರಿಯೂ ಒಂದು ಕುದರೆಯನ್ನು ಮಾಡಿ ಆ ಹುಡುಗರೊಡನೆ ಆಡುತ್ತಿದ್ದನು. ಆಡ ಆಡುತ್ತ ಭರ್ತರಿಯು ಎಡವಿ ಆ ಕುದರೆಯ ಮೇಲಿಂದ ಬಕ್ಕ ಬೋರಲು ಬಿದ್ದನು. ಆ ಪೆಟ್ಟಿನಿಂದ ಅವನು ತೀರ ಹಣ್ಣಾಗಿ ಕಣ್ಣನ್ನು ಬೆಳ್ಳಗೆ ಮಾಡಿದನು. ಆತನ ಈ ಸ್ಥಿತಿಯನ್ನು ಕಂಡು ಉಳಿದ ಹುಡುಗರಿಗೆ ಈ ಹುಡುಗನು ಮೃತಪಟ್ಟನೆಂದು ತಿಳಿಯಿತು. ಇನ್ನು ಭೂತನಾಗಿ ನಮ್ಮ ಬೆನ್ನು ಹತ್ತಬಹುದೆಂದು ಆ ಎಲ್ಲ ಹುಡುಗರು ಅರಣ್ಯದೊಳಗೆ ಓಡಿಹೋದರು. ಆ ಎಲ್ಲ ಹುಡುಗರು ಭಾಗೀರಥಿಯ ಘಾಟಿನ ಮೇಲೆ ಒತ್ತಟ್ಟಿಗೆ ಕೂಡಿ ಭರ್ತರಿಯ ಬಗ್ಗೆ ವಿಚಾರಿಸಹತ್ತಿದರು. ಭರ್ತರಿಯು ಭೂತನಾಗಿ ಊರಲ್ಲಿ ತಿರುಗಾಡಹತ್ತಿದರೆ ನಮ್ಮ ಆಟವು ಬಂದಾಗುವದು. ನಾವು ತಪ್ಪಿಸಿಕೊಂಡು ಅರಣ್ಯದಲ್ಲಿ ಬಂದರೂ ನಮ್ಮನ್ನು ಬೆನ್ನಹತ್ತಿ ತಿಂದುಬಿಡುವನು. ನಾವೆಲ್ಲರೂ ಇನ್ನು ಮೇಲೆ ನಮ್ಮ ನಮ್ಮ ಮನೆಯಲ್ಲಿಯೇ ಆಡಬೇಕು. ಈ ಮೇರೆಗೆ ಮಾತಾಡುತ್ತ ಆ ಭರ್ತರಿಯ ವಿಚಾರದಲ್ಲಿ ಮಗ್ನರಾದರು.

ಭರ್ತರಿಯು ಭೂಮಿಯ ಮೇಲೆ ಬಿದ್ದದ್ದರಿಂದ ಅವನಿಗೆ ಅನೇಕ ಕಲ್ಲುಗಳ ಪೆಟ್ಟು ಹತ್ತಿ ಅವನ ಮೈಯೊಳಗಿಂದ ರಕ್ತವು ಹರಿಯುತ್ತಿತ್ತು. ಅವನ ತೇಜಃಪುಂಜ ಶರೀರವು ಒಂದು ಕ್ಷಣದಲ್ಲಿಯೇ ನಿಸ್ತೇಜವಾಯಿತು. ರಕ್ತಸ್ರಾವದಿಂದ ಅವನು ತೀರ ನಿತ್ರಾಣನಾದನು. ಅವನ ಈ ನಿರಾಧಾರ ಸ್ಥಿತಿಯನ್ನು ನೋಡಿ ಅವನ ತಂದೆಯಾದ ಮಿತ್ರವರುಣನಿಗೆ ಬಹಳ ಮೋಹ ಉತ್ಪನ್ನವಾಯಿತು. ಪುತ್ರಪ್ರೇಮದ ಕಳವಳದಿಂದ ಭೂಮಿಯ ಮೇಲೆ

ಪ್ರಾಪ್ತನಾದನು. ಅವನು ತನ್ನ ಮಗನನ್ನು ಎತ್ತಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡನು. ತನ್ನ ಕೈಯಿಂದ ಅವನಿಗೆ ಘಾಳಿ ಹಾಕಿ ಬಾಯಿಯೊಳಗೆ ಭಾಗೀರಥಿಯ ನೀರನ್ನು ಹಾಕಿ ಸಾವಧಾನ ಗೊಳಿಸಿದನು. ಮಿತ್ರವರುಣನ ಕೃಪಾದೃಷ್ಟಿಯು ಅವನ ದೇಹದ ಮೇಲೆ ಬೀಳಲಾಗಿ ಘಾಯವೆಲ್ಲ ನಾಶವಾಯಿತು. ನಂತರ ಅವನ ಮೈಮೇಲೆ ಕೈಯಾಡಿಸಿ ತನ್ನ ಮನೆಗೆ ಹೋಗಲಿಕ್ಕೆ ಹೇಳಿದನು. ಅವನ ಕೈಯನ್ನು ಹಿಡಿದು ಭರ್ತರಿಯು ತನ್ನ ಮನೆಯ ಕಡೆಗೆ ಹೋಗ ಹತ್ತಿದನು. ಆ ಅವರಿಬ್ಬರು ಮನೆಯ ಕಡೆಗೆ ಹೋಗುತ್ತಿರಲು ಅವರನ್ನು ಘಾಟಿನ ಮೇಲೆ ಕುಳಿತ ಹುಡುಗರು ನೋಡಿದರು. ಭರ್ತರಿಯು ನಿಜವಾಗಿ ಪಿಶಾಚಿಯಾಗಿ ನಮ್ಮನ್ನು ತಿನ್ನುವ ಸಲುವಾಗಿ ಬರುತ್ತಾನೆಂದು ತಿಳಿದು ಆ ಹುಡುಗರು ಸಿಕ್ಕ ಕಡೆಗೆ ಓಡಿ ಹೋದರು. ಮಿತ್ರವರುಣನು ಭರ್ತರಿಯ ಮನೆತನಕ ಹೋಗಿ ರೇಣುಕಾದೇವಿಯನ್ನು ಒದರಿ ಅವಳ ಸ್ವಾಧೀನ ಮಾಡಿದನು ಅವಳು ಬ್ರಾಹ್ಮಣನ ಕಾಲುಗಳ ಮೇಲೆ ಹಣೆಯನ್ನಿಟ್ಟು ಅವನ ಉಪಕಾರವನ್ನು ಕೊಂಡಾಡಿದಳು. ಮತ್ತು ಮಿತ್ರವರುಣನ ಬಗ್ಗೆ ಯಾರೆಂಬುದನ್ನು ವಿಚಾರಿಸಿದಳು. ಅವನಿಗೆ ಕೂಡ್ರುವ ಸಲುವಾಗಿ ಆಸನವನ್ನು ಹಾಕಿದಳು. ಆ ಸಾಧ್ವಿಯ ಭಾವನೆಯನ್ನು ನೋಡಿ ಮಿತ್ರವರುಣನು ಆಸನದ ಮೇಲೆ ಕುಳಿತುಕೊಂಡು ಅವಳಿಗೆ—ಹೇ ಸಾಧ್ವಿ, ಎರಡನೆಯವರಲ್ಲಿ ಈ ಹುಡುಗನ ಬಗ್ಗೆ ಇಷ್ಟು ಪ್ರೀತಿ ಯಾಕೆ ಉತ್ಪನ್ನವಾದೀತು. ಇವನು ನಮ್ಮ ಮಗನಿದ್ದಾನೆ. ನಾನು ಈ ಹುಡುಗನನ್ನು ನಿನಗೆ ಒಪ್ಪಿಸಿದ್ದೇನೆ. ನೀನೇ ಇವನನ್ನು ಚನ್ನಾಗಿ ಸಂಗೋಪನೆ ಮಾಡು.

ರೇಣುಕೆಗೆ ಬ್ರಾಹ್ಮಣನ ಮಾತು ನಿಜವೆನಿಸಿತು. ಆದರೆ ಈ ಹುಡುಗನು ನಿಮ್ಮ ಮಗನು ಹೇಗೆ ಎಂದು ಕೇಳಿದಳು. ಆಗ ಅವನು ಭರ್ತರಿಯ ಎಲ್ಲ ಪೂರ್ವ ಸಂಗತಿಯನ್ನು ಹೇಳಿ ತನ್ನ ನಿಜ ಸ್ಥಿತಿಯನ್ನು ಪ್ರಕಟ ಮಾಡಿದನು. ಮತ್ತು ಭರ್ತರಿಯನ್ನು ನಿನ್ನ ಹೊಟ್ಟೆಯ ಮಗನಂತೆ ಲಾಲನ-ಪಾಲನ ಮಾಡಬೇಕೆಂದು ಹೇಳಿ ಆ ದೇವನು ಹೊರಟು ಹೋದನು.

ಮಿತ್ರವರುಣನ ಮಾತನ್ನು ಕೇಳಿ ಆ ದಂಪತಿಗಳಿಗೆ ಆ ಹುಡುಗನ ತಾಯಿ-ತಂದೆಗಳ ಬಗ್ಗೆ ಇದ್ದ ಭಯವು ದೂರಾಯಿತು. ಸಬಕಾರದಿಂದ

ಹೇಗೆ ಅರಿವೆಗಳು ಸ್ವಚ್ಛವಾಗುವವೋ ಹಾಗೆ ದೇವಪುರುಷನ ಮಾತಿನಿಂದ ಅವನ ಮನಸ್ಸು ನಿರ್ಮಲವಾಗಿ ಅವನ ಮುಖವು ಪ್ರಫುಲ್ಲಿತವಾಯಿತು. ನೀರೊಳಗೆ ಮುಣುಗುವ ಮನುಷ್ಯನಿಗೆ ಯಾರಾದರೂ ಆಶ್ರಯಕೊಟ್ಟರೆ ಹೇಗೆ ಧೈರ್ಯ ಉಂಟಾಗುವದೋ, ಕಳ್ಳನ ಭಯದಿಂದ ಓಡುವಾಗ ಜನರ ನೆರತಿಯ ಸ್ಥಳ ದೊರೆತರೆ ಹೇಗೆ ಹರ್ಷವಾಗುವದೋ ಆ ಮೇರೆಗೆ ಆ ದಂಪತಿಗಳಿಗೆ ಆನಂದ ವಾಯಿತು. ಯಾವನೊಬ್ಬನ ಮನಸ್ಸಿನೊಳಗಿನ ಹೃದ್ರೋಗ ನಷ್ಟವಾಗಲು ಅವನು ಹೇಗೆ ಪುಷ್ಟನಾಗುವನೋ ತದ್ವತ ಅವರ ಚಿಂತೆಯು ನಷ್ಟವಾಗಿ ಅವರ ಹೃದಯಾಕಾಶದೊಳಗಿನ ಆನಂದರೂಪವಾದ ಸೂರ್ಯನು ಪ್ರಜ್ವಲಿತ ನಾಗಿ ಪ್ರಕಾಶಿಸಹತ್ತಿದನು. ಅವರು ಭರ್ತರಿಯ ಮೇಲೆ ಪ್ರೇಮವನ್ನಿಟ್ಟು ಸಂರಕ್ಷಿಸಹತ್ತಿದರು.

ಬರಬರುತ್ತ ಭರ್ತರಿಯು ದೊಡ್ಡವನಾದನು. ಜಯಸಿಂಗ ಮತ್ತು ರೇಣುಕಾ ಇವರ ಮನಸ್ಸಿನಲ್ಲಿ ಅವನ ಲಗ್ನ ಮಾಡುವ ಇಚ್ಛೆಯು ಉತ್ಪನ್ನ ವಾಯಿತು. ಅವರ ಈ ಇಚ್ಛಾಪೂರಣವು ಕಾಶೀಕ್ಷೇತ್ರದಲ್ಲಿ ಆಗುವಂತೆ ಇದ್ದಿಲ್ಲ. ಇದನ್ನು ತಿಳಿದು ಅವರು ಭರ್ತರಿಯನ್ನು ಕರೆದುಕೊಂಡು ತಮ್ಮ ದೇಶಕ್ಕೆ ಹೊರಟರು. ಕಾಶೀಕ್ಷೇತ್ರವನ್ನು ತ್ಯಜಿಸಿ ಅವರು ಮಾಳವ ದೇಶದ ಹಾದಿ ಯನ್ನು ಹಿಡಿದರು. ಊರೂರಿಗೆ ಭಿಕ್ಷೆಯನ್ನು ಬೇಡುತ್ತ ಬೇಡುತ್ತ ತಿರುಗು ತ್ತಿರಲು, ಅವರು ದಾರೀತಪ್ಪಿ ಅರಣ್ಯವನ್ನು ಸೇರಿದರು. ಅಲ್ಲಿ ಕಳ್ಳರು ಸುಲಿಗೆ ಮಾಡಿ ಜಯಸಿಂಗನನ್ನು ಕೊಂದುಬಿಟ್ಟರು. ತನ್ನ ಪತಿಯು ನಾಶ ವಾಗಲು ಆ ಸಾಧ್ವಿಯಾದ ರೇಣುಕೆಯು ಹತಭಾಗ್ಯಳಾದಳು. ಪತಿಯ ವಿಯೋಗದ ಮುಂದೆ ಆಕೆಗೆ ಯಾವದೂ ಶೋಭದಾಯಿತು. ಆ ಸಾಧ್ವಿಯು ಪತಿಯ ದೇಹವನ್ನು ಆಲಿಂಗಿಸಿ ತಾನೂ ಪ್ರಾಣಬಿಟ್ಟಳು. ತಾಯಿ-ತಂದೆ ಗಳ ಈ ಸ್ಥಿತಿಯನ್ನು ಕಂಡು ಭರ್ತರಿಯು ದುಃಖದಿಂದ ವ್ಯಾಪ್ತನಾದನು. ಅವನು ಬಹಳ ಪ್ರಯಾಸದಿಂದ ಕಟ್ಟಿಗೆಗಳನ್ನು ಕೂಡಿಸಿ ಅವರನ್ನು ಚಿತೆ ಯಲ್ಲಿ ಹಾಕಿದನು. ಚಿತೆಯ ಅಗ್ನಿಯ ಕೂಡ ಅವನ ಮನಸ್ಸಿನೊಳಗಿನ ಅಗ್ನಿಯೂ ಹೆಚ್ಚಾಗಹತ್ತಿತು. ಅವನು ದೀನವಾಣಿಯಿಂದ ಶೋಕಮಾಡುತ್ತ ಅಂದದ್ದೇನಂದರೆ:—ನನ್ನ ತಾಯಿತಂದೆಗಳು ನನ್ನನ್ನು ಬಿಟ್ಟು ಪರಲೋಕಕ್ಕೆ ಹೋದರಲ್ಲ! ಇನ್ನು ನನ್ನನ್ನು ಯಾರು ಸಂರಕ್ಷಣೆ ಮಾಡುವರು? ತಾಯಿ!

ನೀನು ರಾತ್ರಿಯಲ್ಲಿ ನನಗೆ ಮೂರುಸಾರೆ ದುಗ್ಧಪಾನ ಮಾಡಿಸುತ್ತಿದ್ದೆ! ಈಗ ಇಷ್ಟುನಿಷ್ಠುರ ಯಾಕೆ ಆದೆ? ನನ್ನನ್ನು ಅರಣ್ಯದಲ್ಲಿ ಬಿಟ್ಟು ನೀನುಹೇಗೆ ಹೊರಟು ಹೋದೆ? ತಂದೆಯೇ ನೀನೂ ನನ್ನನ್ನು ಅಗಲಿದಿ! ಈಗ ನಾನು ನಿರಾಧಾರ ನಾಗಿದ್ದೇನೆ! ನೀನು ನಿತ್ಯ ನನಗೆ ಅನ್ನವನ್ನು ತಂದು ಉಣ್ಣಿಸುತ್ತಿದ್ದಿ! ನೀವು ಇಷ್ಟು ನನ್ನ ಬಗ್ಗೆ ಕಠೋರರು ಯಾಕೆ ಆದಿರಿ? ನನ್ನ ಬಗ್ಗೆ ಇದ್ದ ನಿಮ್ಮ ಮನಸ್ಸಿನೊಳಗಿನ ಪ್ರೇಮವು ಒಮ್ಮೆಲೆ ಹೇಗೆ ನಾಶವಾಯಿತು!'' ಹೀಗೆಂದು ಅವನು ಹಣೆ ಹಣೆ ಬಡಕೊಳ್ಳಹತ್ತಿದನು. ಹೀಗೆ ಶೋಕಮಾಡಲು ಅವನ ಕಣ್ಣುಗಳು ಕೆಂಪಗಾದವು. ಶೋಕದೊಡನೆ ಅವನ ಪ್ರಾಣವೂ ಹೊರಟು ಹೋಗುವಂತೆ ಆಯಿತು.

ತಾಯಿ-ತಂದೆಗಳ ಮರಣದಿಂದ ಭರ್ತರಿಯು ದುಃಖಮಗ್ನನಾಗಿ ಒದರುತ್ತಿರಲು, ಆ ಸ್ಥಳಕ್ಕೆ ಕೆಲವು ವ್ಯಾಪಾರಸ್ಥರು ಬಂದರು. ಅವರಲ್ಲಿ ಎತ್ತುಗಳಿದ್ದವು. ಭರ್ತರಿಯ ಶೋಕವನ್ನು ಕೇಳಿ ಅವರ ಮನಸ್ಸು ಕಳವಳ ಗೊಂಡಿತು. ಅವರು ಅವನಿಗೆ ಸಮಾಧಾನ ಹೇಳಿ, ಅವನಿಂದ ಶೋಕದ ಕಾರಣ ವನ್ನು ಕೇಳಿಕೊಂಡರು. ಅವನ ದುಃಖವನ್ನು ಸಮಾಧಾನಗೊಳಿಸಿ:— '' ಬಾಳಾ, ಇನ್ನು ದುಃಖವನ್ನು ಮಾಡಬೇಡ. ಬ್ರಹ್ಮದೇವರು ಬರೆದ ಬರ ಹದ ಮುಂದೆ ಯಾರ ಯತ್ನವೂ ನಡೆಯಲಾರದು. ಇಲ್ಲಿ ನೀನು ಎಷ್ಟು ವಿಲಾಪಿಸಿದರೂ ನಿನ್ನ ತಾಯಿ-ತಂದೆಗಳ ಭೆಟ್ಟಿಯು ಆಗಲಾರದು. ಈಶ್ವರಿಯ ಸತ್ತೆಯ ಮುಂದೆ ಯತ್ನವಿಲ್ಲ; ಪ್ರಾರಬ್ಧಕರ್ಮವೆಂದು ತಿಳಿದು ಸ್ವಸ್ಥವಾ ಗಿರು; ಧೈರ್ಯವನ್ನು ತಂದುಕೊಳ್ಳು; ನಿನ್ನ ಹಿತವನ್ನು ವಿಚಾರಿಸು; ಸಂ-ಸಾರದಲ್ಲಿ ಸೇರಿ ಉತ್ತಮ ಪ್ರಕಾರದ ಆಚರಣೆಯಿಂದ ಜಗತ್ತಿನಲ್ಲಿ ಶ್ರೇಷ್ಠತೆ ಯನ್ನು ಹೊಂದು; ಈ ದುಃಖದಿಂದ ನಿನಗೆ ಹಿತವಾಗಲಾರದು.

ಹೀಗೆ ಅನೇಕ ರೀತಿಯಿಂದ ಬೋಧಿಸಿ ಆ ವ್ಯಾಪಾರಸ್ಥರು ಅವನನ್ನು ಸಂತೈಸಿದರು. ಅವರು ಅವನ ಕೈಯನ್ನು ಹಿಡಿದು ಎದ್ದು ನಿಲ್ಲಿಸಿದರು. ಮತ್ತು ಅವನನ್ನು ತಮ್ಮ ಗುಂಪಿನಲ್ಲಿ ಸೇರಿಸಿಕೊಂಡರು. ಅಲ್ಲಿಂದ ಮುಂದೆ ಹೋಗಿ ಆ ವ್ಯಾಪಾರಸ್ಥರು ಒಂದು ಸ್ಥಳದಲ್ಲಿ ವಸತಿಯನ್ನು ಮಾಡಿದರು. ಅವರೊಡನೆ ಇದ್ದ ಭರ್ತರಿಯ ವ್ಯವಸ್ಥೆಯೂ ಸರಿಯಾಗಿ ಆಯಿತು. ೬-೭ ದಿವಸಗಳು ಕಳೆದುಹೋಗಲು, ಭರ್ತರಿಯ ದುಃಖದ ಕಸುವು ಕೆಲಮಟ್ಟಿಗೆ

ಕಡಿಮೆಯಾಯಿತು. ಕೆಲವು ಕಾಲದಮೇಲೆ ಭರ್ತರಿಯು ಕೆಲಸ-ಬೊಗಸೆಗಳನ್ನು ಮಾಡಹತ್ತಿದನು. ಅವನಲ್ಲಿರುವ ತತ್ಪರತೆಯನ್ನು ಕಂಡು ಆ ವ್ಯಾಪಾರಸ್ಥರು ಅವನನ್ನು ಪ್ರೀತಿಸುತ್ತಿದ್ದರು. ಅನೇಕ ಗ್ರಾಮಗಳನ್ನು ತಿರುಗಿ ಆ ವ್ಯಾಪಾರಸ್ಥರು ಧಾನ್ಯದ ಚೀಲಗಳನ್ನು ಕ್ರಯಮಾಡಿ ಉಜ್ಜನಿಯ ಮಾರ್ಗವನ್ನು ಹಿಡಿದರು. ಕೆಲವು ದಿವಸ ಮಾರ್ಗಕ್ರಮಿಸಿ ಆ ಎಲ್ಲ ಜನರು ಭರ್ತರಿಯ ಸಹವಾಗಿ ಉಜ್ಜನೀ ಪಟ್ಟಣಕ್ಕೆ ಮುಟ್ಟಿದರು.

---

# ಅಧ್ಯಾಯ ೨೬

## ಸುರೋಚನನಿಗೆ ಗರ್ದಭ ದೇಹ ಪ್ರಾಪ್ತಿ.

ಆ ವ್ಯಾಪಾರಸ್ಥರು ಪಟ್ಟಣದೊಳಗೆ ಹೋಗದೆ, ಊರ ಹೊರಬದಿಗಿರುವ ಒಂದು ಧರ್ಮಶಾಲೆಯಲ್ಲಿಯೇ ವಸತಿಯನ್ನು ಮಾಡಿದರು. ಆ ವ್ಯಾಪಾರಸ್ಥರು ತಮ್ಮ ತಮ್ಮ ಚೀಲಗಳನ್ನು ಒಳ್ಳೇ ವ್ಯವಸ್ಥೆಯಿಂದ ಸಂರಕ್ಷಣೆ ಮಾಡುತ್ತಿದ್ದರು.

ಅವರು ತಮ್ಮ ತಮ್ಮ ಇಚ್ಛೆಯ ಮೇರೆಗೆ ಚೀಲಗಳನ್ನು ಹಚ್ಚಿ ಚೀಲದ ಸುತ್ತಲು ಕುಳಿತರು. ಅಷ್ಟರಲ್ಲಿ ಕತ್ತಲಾಗಲು ನರಿಗಳು ಕೂಗಾಟವನ್ನೆಬ್ಬಿಸಿದವು. ಅವು ತಮ್ಮ ಭಾಷೆಯಲ್ಲಿ ವ್ಯಾಪಾರಸ್ಥರನ್ನು ಕುರಿತು— ಸಾವಧರಾಗಿರಿ. ನಿಮ್ಮ ಮೇಲೆ ಬೀಳಲು ಕಳ್ಳರು ಒರುವರು ಎಂದು ಹೇಳಿದವು. ಈ ನರಿಗಳ ಮಾತುಗಳು ಭರ್ತರಿಗೆ ತಿಳಿದವು. ಅವನು ತನ್ನ ಮನಸ್ಸಿನಲ್ಲಿ ಅಂದದ್ದೇನಂದರೆ—ನಾನು ಈ ವ್ಯಾಪಾರಸ್ಥರ ಅನ್ನವನ್ನು ಉಂಡಿರುವೆನು. ಇವರ ಉಪಕಾರವು ನನ್ನ ಮೇಲೆ ಆಗಿದೆ. ಆದ್ದರಿಂದ ಕಳ್ಳರು ಬರುವರೆಂದು ಸೂಚನೆಯನ್ನು ಮೊದಲೇ ತಿಳಿಸುವದು ಕೃತಜ್ಞತೆಯ ಲಕ್ಷಣವು. ಗರುಡನು ಅಮೃತವನ್ನು ತಂದು ಹೇಗೆ ತಾಯಿಯ

ಉಪಕಾರವನ್ನು ತೀರಿಸಿದನೋ ಅದರಂತೆ ನಾನು ಇವರನ್ನು ಎಚ್ಚರಗೊಳಿಸಿ ಋಣಮುಕ್ತನಾಗಬೇಕು. ಹೀಗೆ ವಿಚಾರಿಸಿ ಅವನು ಆ ವ್ಯಾಪಾರಸ್ಥರಿಗೆ ನರಿಗಳ ಶಬ್ದಗಳ ಅರ್ಥವನ್ನು ಹೇಳಿದನು. ಅವನ ಮಾತಿನ ಮೇಲೆ ಅವರ ವಿಶ್ವಾಸ ಕುಳಿತು, ಅವರು ಬೆಲೆಯುಳ್ಳ ಮಾಲನ್ನು ವ್ಯವಸ್ಥೆಯಿಂದ ಇಟ್ಟು ಕೈಯೊಳಗೆ ಬಡಿಗೆಯನ್ನು ತೆಗೆದುಕೊಂಡು ರಾತ್ರಿಯಲ್ಲಿ ಕಾಯು ಹತ್ತಿದರು. ಕೆಲಹೊತ್ತಿನ ಮೇಲೆ ಭರ್ತರಿಯ ಸೂಚನೆಯು ನಿದರ್ಶನಕ್ಕೆ ಬಂತು. ಐವತ್ತು ಮಂದಿ ಚೋರರು ಅವರ ಮೇಲೆ ಹಲ್ಲೆಯನ್ನು ಮಾಡಿ ದರು. ಆದರೆ ವ್ಯಾಪಾರಸ್ಥರು ಎಚ್ಚರಿಕೆಯಿಂದ ಇದ್ದದರಿಂದ ಅವರು ಕಳ್ಳ ರನ್ನು ಲೆಕ್ಕಿಸದೆ ಅವರ ಸಮಾಚಾರವನ್ನು ಚನ್ನಾಗಿ ತೆಗೆದುಕೊಂಡರು. ವ್ಯಾಪಾರಸ್ಥರ ಹೊಡತಕ್ಕೆ ಕಳ್ಳರು ತಡೆಯದೆ ಪಲಾಯನ ಸೂಕ್ತವನ್ನು ಜಪಿಸಿದರು.

ಭರ್ತರಿಯಿಂದಲೇ ನಮ್ಮ ಸಂರಕ್ಷಣೆಯಾಯಿತೆಂದು ಆ ಎಲ್ಲ ವ್ಯಾ-ಪಾರಸ್ಥರು ಭರ್ತರಿಯನ್ನು ಅಧಿಕವಾಗಿ ಪ್ರೀತಿಸಹತ್ತಿದರು. ಹೋದ ಕಳ್ಳರು ಪುನಃ ಬರಬಹುದೆಂದು ಭರ್ತರಿಯೊಡನೆ ಸುಖಗೋಷ್ಠಿಗಳನ್ನು ಆಡುತ್ತ ಜಾ ಗ ರೂ ಕ ರಾ ಗಿ ದ್ದ ರು. ಮಧ್ಯರಾತ್ರಿಯ ಸುಮಾರಿಗೆ ಮತ್ತೆ ನರಿಯ ಶಬ್ದವು ಉಂಟಾಯಿತು. ಅದನ್ನು ಕೇಳಿ ವ್ಯಾಪಾ ರಸ್ಥರು ಭರ್ತರಿಗೆ ಅದರ ಅರ್ಥವನ್ನು ವಿಚಾರಿಸಿದರು. ಭರ್ತರಿಯು ಹೇಳಿದ್ದೇನಂದರೆ—ಉತ್ತರದಿಕ್ಕಿನಿಂದ ಒಬ್ಬ ಪ್ರವಾಸಿಯು ದಕ್ಷಿಣದಿಕ್ಕಿಗೆ ಹೊರಟಿದ್ದಾನೆ. ಆ ಪ್ರವಾಸಿಯು ಸಾಮಾನ್ಯ ಪುರುಷನಿರದೆ ಅವನು ಈಶ್ವರನಿಂದ ವರವನ್ನು ಪಡೆದ ರಾಕ್ಷಸನಿದ್ದಾನೆ. ಆ ರಾಕ್ಷಸನಲ್ಲಿ ನಾಲ್ಕು ದೈದೀಪ್ಯಮಾನವಾದ ರತ್ನಗಳು ಇರುತ್ತವೆ ಆತನನ್ನು ಕೊಂದು ಆತನ ರಕ್ತವನ್ನು ಹಣೆಗೆ ಹಚ್ಚಿಕೊಂಡರೆ ರಾಜಪದವು ಪ್ರಾಪ್ತವಾಗುವದು!! ಭರ್ತರಿಯು ಹೇಳಿದ ಈ ಸಂಗತಿಯನ್ನು ಬಳಿಯಲ್ಲಿದ್ದ ಅವಂತಿಯ ಭಾವೀ ರಾಜನಾದ ವಿಕ್ರಮನು ಕೇಳಿಕೊಂಡನು. ಅವನು ಕೂಡಲೆ ತನ್ನ ಕತ್ತಿಯನ್ನು ಹಿರಿದು ರಾಕ್ಷಸನು ಬರುವ ಮಾರ್ಗದಲ್ಲಿ ಕುಳಿತುಕೊಂಡನು. ಮತ್ತು ಭರ್ತರಿಯ ಮಾತಿನಂತೆ ರಾಕ್ಷಸನನ್ನು ಸಂಹರಿಸಿ ತನ್ನ ಕಾರ್ಯವನ್ನು ಸಾಧಿಸಿಕೊಂಡನು.

ಭರ್ತರಿಯು ಹೇಳಿದ ರಾಕ್ಷಸನು ಯಾರು? ಅವನನ್ನು ಸಂಹರಿಸಿದ ವಿಕ್ರಮರಾಜನು ಯಾರು? ವಿಕ್ರಮರಾಜನು ಆ ಭರ್ತರಿಯು ಇಳಿದುಕೊಂಡ ಸ್ಥಳಕ್ಕೆ ಬಂದ ಕಾರಣವೇನು? ಈ ಎಲ್ಲ ಸಂಗತಿಗಳನ್ನು ಇಲ್ಲಿ ಬರೆಯುವದು ಅವಶ್ಯವದೆ. ಒಂದಾನೊಂದು ಕಾಲದಲ್ಲಿ ಕೈಲಾಸಪರ್ವತದಲ್ಲಿ ಶ್ರೀ ಶಂಕರ ಪಾರ್ವತಿಯರು ಜೂಜಿನ ಆಟದಲ್ಲಿ ತಲ್ಲೀನರಾಗಿದ್ದರು. ಆ ಕಾಲಕ್ಕೆ ಚಿತ್ರಮಾ ಎಂಬ ಹೆಸರಿನ ಗಂಧರ್ವನು ಆ ಪರ್ವತಕ್ಕೆ ಹೋದನು. ಮತ್ತು ಶ್ರೀ ಶಂಕರ-ಪಾರ್ವತಿಗೆ ನಮಸ್ಕಾರ ಮಾಡಿದನು. ಶ್ರೀ ಶಂಕರನು ಅವನಿಗೆ ಆಶೀರ್ವಾದ ಮಾಡಿ ಬಳಿಯಲ್ಲಿ ಕುಳ್ಳಿರಿಸಿಕೊಂಡನು. ಜೂಜಾಡುತ್ತಾಡುತ್ತ ಶಂಕರ-ಪಾರ್ವತಿಯರಲ್ಲಿ ಜಗಳ ಉತ್ಪನ್ನವಾಯಿತು. ಶಂಕರನು ಕವಡಿಯನ್ನು ಒಗೆದಾಗ ಅದು ೧೮ ಬಿದ್ದಿತ್ತೆಂದು ಶಂಕರನು ಅಂದನು. ೧೨ ಬಿದ್ದಿತ್ತೆಂದು ಪಾರ್ವತಿಯು ಅಂದಳು. ಆಗ ಅವರು ಚಿತ್ರಮಾಗಂಧರ್ವನಿಗೆ ನ್ಯಾಯ ನಿರ್ಣಯ ಮಾಡ ಹೇಳಿದರು. ಆ ಚಿತ್ರಮನು ಶಂಕರನ ಪಕ್ಷವನ್ನು ಹಿಡಿದು ವಾದವನ್ನು ತೀರಿಸಿದನು. ನಿಜವಾಗಿ ವಿಚಾರಿಸಿದರೆ ಆ ಕಾಲಕ್ಕೆ ಹನ್ನೆರಡೇ ಬಿದ್ದಿತ್ತು. ಗಂಧರ್ವನು ಶಿವಪಕ್ಷವನ್ನು ಹಿಡಿದು ಸುಳ್ಳು ಮಾತಾಡಿದ್ದನ್ನು ಕಂಡು ಜಗನ್ಮಾತೆಯಾದ ಪಾರ್ವತಿಯು ಕ್ರುದ್ಧಳಾದಳು. ಅವಳು ಗಂಧರ್ವನಿಗೆ ಶಾಪ ಕೊಟ್ಟಳು ಏನಂದರೆ—ನೀನು ಅಸತ್ಯಪ್ರಿಯನಿದ್ದು ಬಹಳ ಪಾಪಿಷ್ಠನಿರುವಿ. ಆದ್ದರಿಂದ ನೀನು ಮೃತ್ಯಲೋಕದಲ್ಲಿ ರಾಕ್ಷಸನಾಗುವಿ.'' ಪಾರ್ವತಿಯ ಶಾಪದಿಂದ ಚಿತ್ರಮಾಗಂಧರ್ವನು ಭಯಭೀತನಾದನು. ಅವನ ಮೈಮೇಲೆ ರೋಮಾಂಚನಗಳು ಉತ್ಪನ್ನವಾದವು. ಅವನು ಕಣ್ಣು ತುಂಬ ನೀರು ತಂದು ಶಂಕರನ ಚರಣವನ್ನು ಹಿಡಿದನು. ಅವನ ಈ ದುಃಖಾವಸ್ಥೆಯನ್ನು ಕಂಡು ಶಂಕರನು—ಗಂಧರ್ವನಾಥ, ನೀನು ಈ ವಿಷಯದಲ್ಲಿ ಏನೂ ಚಿಂತಿಸುವ ಕಾರಣವಿಲ್ಲ. ನಿನ್ನಂತೆಯೇ ಸುರೋಚನನಾ ಗಂಧರ್ವನು ಇಂದ್ರಶಾಪದಿಂದ ಭೂಲೋಕದಲ್ಲಿ ದೇಹಧಾರಣಮಾಡುವನು ಅವನ ಮಗನ ಕೈಯಿಂದ ನಿನ್ನ ವಧವಾಗಿ ಶಾಪಮುಕ್ತನಾಗುವಿ ಎಂದನು.

ಶಂಕರನ ಮಾತಿಗೆ ಗಂಧರ್ವನು—ಸುರೋಚನನ ಪುತ್ರನಿಗೆ ನನ್ನನ್ನು ನಾಶಗೊಳಿಸಿದರೆ ಏನು ಲಾಭವಾಗುವದು ಮೇಲಾಗಿ ಈ ಸಂಗತಿ ಹ್ಯಾಗೆ

ಅವನಿಗೆ ಗೊತ್ತಾಗಬೇಕು. ನನಗೂ ಅವನಿಗೂ ಯುದ್ಧವಾಗಲು ಕಾರಣ ವೇನು? ಎಂದು ಪ್ರಶ್ನೆ ಮಾಡಿದನು.

ಗಂಧರ್ವನ ಪ್ರಶ್ನೆಗೆ ಶಂಕರನು ಉತ್ತರಕೊಟ್ಟನೇನಂದರೆ—ಧೃಮಿ ಎಂಬ ಹೆಸರಿನ ನಾರಾಯಣನು ಭೂಲೋಕದಲ್ಲಿ ಭರ್ತರಿಯೆಂಬ ಹೆಸರಿನಿಂದ ಅವತಾರ ಧರಿಸಿದ್ದಾನೆ. ಆ ಭರ್ತರಿಯು ಮುಖದಿಂದ ನಿನ್ನ ಸಂಗತಿಯು ಸುರೋಚನ ಪುತ್ರನಿಗೆ ಗೊತ್ತಾಗುವದು. ಆ ಸುರೋಚನಪುತ್ರನು ನಿನ್ನನ್ನು ಕೊಂದು ನಿನ್ನ ರಕ್ತದ ಹನಿಯನ್ನು ಹಣೆಗೆ ಧರಿಸುವನು. ಆದರ ಯೋಗದಿಂದ ನಿನಗೆ ಶಾಪವಿಮೋಚನವಾಗಿ ಪುನಃ ಗಂಧರ್ವಲೋಕಕ್ಕೆ ಹೋಗುವಿ. ನಿನ್ನ ವಧ ಮಾಡಿದವನಿಗೆ ರಾಜ್ಯಪದ ದೊರಕುವದು.

ಶಂಕರನ ಮಾತಿನಿಂದ ಗಂಧರ್ವನಿಗೆ ಬಹಳವಾಗಿ ಸಮಾಧಾನವಾಯಿತು. ಪಾರ್ವತಿಯ ಶಾಪಕ್ಕನುಸಾರವಾಗಿ ಅವನು ರಾಕ್ಷಸದೇಹವನ್ನು ಧರಿಸಿ ಪೃಥ್ವಿಯ ಮೇಲೆ ಸಂಚರಿಸಹತ್ತಿದನು. ಭರ್ತರಿಯು ಯಾವ ರಾಕ್ಷಸನ ಬಗ್ಗೆ ಉದ್ಗಾರ ತೆಗೆದನೋ ಅವನ ಪೂರ್ವವೃತ್ತವು ಈ ಮೇರೆಗೆ ಇತ್ತು. ಇನ್ನು ವಿಕ್ರಮನ ಪೂರ್ವವೃತ್ತವೇನಂದರೆ—ಒಂದು ಕಾಲದಲ್ಲಿ ಅಮರೇಂದ್ರನು ತನ್ನ ಗಣಗಳಿಂದ ಸಹವಾಗಿ ಅಮರಾವತಿಯ ಸಿಂಹಾಸನದಲ್ಲಿ ವಿರಾಜಮಾನನಾಗಿದ್ದನು. ಅದೇವೇಳೆಗೆ ಗಂಧರ್ವರ ಸಮುದಾಯವೂ ಬಂದಿತು. ಸಭಾಸ್ಥಾನದಲ್ಲಿ ಮೇನಕಾ ತಿಲೋತ್ತಮಾ ಇತ್ಯಾದಿ ಅಪ್ಸರೆಯರು ನೃತ್ಯ-ಗಾನಗಳನ್ನಾರಂಭಿಸಿದರು. ಅನೇಕ ಪ್ರಕಾರದ ಹಾವಭಾವವನ್ನೂ ತೋರಿಸಿ ಮತ್ತು ಮಧುರಆಲಾಪದಿಂದ ಶ್ರೋತೃಸಮುದಾಯಕ್ಕೆ ಆನಂದಪಡಿಸುತ್ತಿದ್ದರು. ಅವರ ಹಾವಭಾವಕ್ಕೆ ಸುರೋಚನಗಂಧರ್ವನು ಮೋಹಬದ್ಧನಾದನು. ಇದನ್ನು ಇಂದ್ರನು ತಿಳಿದು ಕ್ರೋಧದಿಂದ ಸುರೋಚನನಿಗೆ ಶಪಿಸಿದ್ದೇನಂದರೆ—ನೀನು ಮೃತ್ಯುಲೋಕದಲ್ಲಿ ಗಾರ್ದಭನಾಗು. ಇಂದ್ರನ ಶಾಪದಿಂದ ಆ ಗಂಧರ್ವನು ಸ್ವರ್ಗಚ್ಯುತನಾಗಿ ಮೃತ್ಯುಲೋಕದಲ್ಲಿ ಗಾರ್ದಭನಾದನು. ಸ್ವರ್ಗದಿಂದ ಇಳಿಯುವಾಗ್ಗೆ ದೀನವಾಣಿಯಿಂದ ಅವನು ಇಂದ್ರನಿಗೆ—"ದೇವೇಂದ್ರ ನಾನು ಮಹಾ ಪಾಪಿಯಿದ್ದೇನೆ. ಕ್ಷಮಿಸಿ ಉಶ್ಶಾಪವಕೊಡು. ನೀನು ನನಗೆ ಕಾಯಿ ಇದ್ದು ನಾನು ನಿನ್ನ ಕರು ಇರುತ್ತೇನೆ" ಎಂದು ನುಡಿದನು.

ಸುರೋಚನನ ಸ್ತುತಿಗೆ ಇಂದ್ರನ ಕೋಪವು ಶಾಂತವಾಯಿತು. ಅವನು ಉಶ್ಶಾಪ ಕೊಟ್ಟದ್ದೇನಂದರೆ:-ಮಿಥಿಲಾದೇಶಾಧಿಪನಾದ ಸತ್ಯವರ್ಮನು ನಿನಗೆ ಮಗಳನ್ನು ಕೊಡುವನು. ಆಕೆಯ ಹೊಟ್ಟೆಯಿಂದ ವಿಕ್ರಮನೆಂಬ ಪುತ್ರನು ಹುಟ್ಟುವನು. ಆ ವಿಕ್ರಮನು ಪರಾಕ್ರಮಿಯೆನಿಸಿ ಬಲವಂತನಾಗುವನು; ನೀನು ಆ ವಿಕ್ರಮನ ಮುಖವನ್ನು ನೋಡಿದರೆ, ನಿನ್ನ ಶಾಪವಿಮೋಚನೆಯಾಗಿ ಹನ್ನೆರಡು ವರುಷಗಳ ನಂತರ ಗಂಧರ್ವದೇಹದಿಂದ ಮತ್ತೆ ಸ್ವರ್ಗಲೋಕಕ್ಕೆ ಬರುತ್ತೀ. ಇಂದ್ರನ ಮಾತಿನಿಂದ ಗಂಧರ್ವನಿಗೆ ಸಂತೋಷವಾಯಿತು. ತುಂಬಿದ ನದಿಯಲ್ಲಿ ಹರಿದುಹೋಗುವವನಿಗೆ ಸಿಂಗಡಿಕಾರನು ಕೂಡಿದರೆ ಹೇಗೆ ಆನಂದವಾಗುವದೋ ಅದರಂತೆ ಗಂಧರ್ವನ ಸ್ಥಿತಿಯಾಯಿತು. ಅವನು ಸ್ವರ್ಗಲೋಕವನ್ನು ತ್ಯಜಿಸಿದನು; ಮತ್ತು ಮೃತ್ಯುಲೋಕದಲ್ಲಿ ಮಿಥಿಲಾನಗರಕ್ಕೆ ಹೊಂದಿದ ಅರಣ್ಯದೊಳಗೆ ಹೋದನು. ಅವನ ಚರಣವು ಭೂಮಿಗೆ ಸ್ಪರ್ಶವಾಗಲು, ಗಂಧರ್ವ ದೇಹವು ಹೋಗಿ ಗಾರ್ದಭ ದೇಹವು ಪ್ರಾಪ್ತವಾಯಿತು.

ಆ ಊರಲ್ಲಿ ಕಮಟನೆಂಬ ಹೆಸರಿನ ಒಬ್ಬ ಕುಂಬಾರನಿದ್ದನು. ಅವನ ಬಳಿಯಲ್ಲಿ ಹೇರಳ ಕತ್ತೆಗಳಿದ್ದವು. ಒಂದು ದಿವಸ ಕಮಟನು ತನ್ನ ಎಲ್ಲ ಕತ್ತೆಗಳನ್ನು ಮೇಯಿಸುವದಕ್ಕೆ ತನ್ನ ಮನೆಯಿಂದ ಹೊರಗೆ ಹೊಡೆದನು. ಮೇಯುವ ಉಬ್ಬಿನಿಂದ ಆ ಎಲ್ಲ ಕತ್ತೆಗಳು ಅರಣ್ಯದಲ್ಲಿಯೇ ಉಳಿದವು. ೪-೬ ದಿನಗಳಾದರೂ ಆ ಕತ್ತೆಗಳು ಮನೆಗೆ ಬರಲಿಲ್ಲ. ಇದನ್ನು ಕಂಡು ಕುಂಬಾರನು ಅವುಗಳ ಶೋಧಕ್ಕಾಗಿ ಹೊರಟು ಆ ಕತ್ತೆಗಳಿದ್ದಲ್ಲಿಗೆ ಬಂದನು. ಆ ಕತ್ತೆಗಳ ಸಮುದಾಯದಲ್ಲಿ ಸುರೋಚನನೂ ಸೇರಿದ್ದನು. ಅವನು ಕಮಟನೆಂಬ ಕುಂಬಾರನ ಮನೆಗೆ ಹೋದನು. ಆದರೆ ಕುಂಬಾರನಿಗೆ ಈ ಹೊಸ ಕತ್ತೆಯು ತನ್ನದಲ್ಲೆಂದು ತಿಳಿದರೂ ಯಾರದೆಂಬುವದರ ಗೊತ್ತಾಗುವವರೆಗೆ ಸಂರಕ್ಷಿಸಲು ಅಡ್ಡಿಯಿಲ್ಲೆಂದು ಅದಕ್ಕೆ ಆಶ್ರಯ ಕೊಟ್ಟನು. ಕಮಟನ ಮನೆಗೆ ಸುರೋಚನ ಕತ್ತೆಯು ಬಂದಬಳಿಕ ಕೆಲವುಕಾಲದನಂತರ ಆ ಕುಂಬಾರನ ಇದ್ದಸಂಪತ್ತೆಲ್ಲ ನಾಶವಾಗಿ ದಾರಿದ್ರ್ಯವು ಪ್ರಾಪ್ತವಾಯಿತು. ಇದನ್ನು ತಿಳಿದು ಆ ಕುಂಬಾರನು ತನ್ನೆಲ್ಲ ಕತ್ತೆಗಳನ್ನು ವಿಕ್ರಯಮಾಡಿ ಸುರೋಚನನೆಂಬ ಹೊಸ ಕತ್ತೆಯೊಂದನ್ನು ಇಟ್ಟುಕೊಂಡನು.

ಮುಂದೆ ಕೆಲವು ದಿವಸ ಹೋಗಲು ಆ ಕತ್ತೆಯು ಒಂದು ಚಮತ್ಕಾರವನ್ನು ತೋರಿಸಿತು. ಏನಂದರೆ ಒಂದು ದಿನ ರಾತ್ರಿ—"ಈ ನಗರದ ರಾಜನಾದ ಸತ್ಯವರ್ಮನ ಸುಂದರಿಯಾದ ಮಗಳನ್ನು ನನಗೆ ಲಗ್ನ ಮಾಡು" ಹೀಗೆ ಅಂದಿತು. ಈ ಶಬ್ದವನ್ನು ಕಮಟನು ಕೇಳಿದನು ಆದರೆ ಆ ಶಬ್ದವನ್ನು ಯಾರು ಆಡಿರಬಹುದೆಂಬ ಸಂಶಯದಿಂದ ತಲೆಬಾಗಿಲದ ಹೊರಗೆ ಬಂದು ಕಕ್ಕಾ ಬಿಕ್ಕಿಯಾಗಿ ನೋಡಿದನು. ಅಲ್ಲಿ ಯಾರೂ ಕಾಣಿಸಲಿಲ್ಲ. ಆಗ ಆಶ್ಚರ್ಯ ಚಕಿತನಾಗಿ ತನ್ನ ಮನೆಯನ್ನು ಸೇರಿದನು. ಪುನಃ ಅದೇ ಶಬ್ದವಾಯಿತು. ಕುಂಬಾರನಿಗೆ ಗೊತ್ತಾಗಲಿಲ್ಲ ಪ್ರತಿನಿತ್ಯ ಇದೇ ಮೇರೆಗೆ ಕೇಳಹತ್ತಿತು. ಹೀಗೆ ಯಾರು ಆಡುತ್ತಿರಬಹುದೆಂದು ಬಹಳ ಪ್ರಯತ್ನ ಮಾಡಿದರೂ ಶೋಧವಾಗಲಿಲ್ಲ. ರಾಜಕನ್ಯೆಯನ್ನು ಬಯಸುವದು ತನ್ನ ಕತ್ತೆಯೆಂದು ಅವನಿಗೆ ಹೇಗೆ ಗೊತ್ತಾಗಬೇಕು?

ತಾನು ಹೇಳಿದ್ದು ಈ ಕಮಟನಿಗೆ ತಿಳಿಯದಾಗಲು, ಆ ಕತ್ತೆಯು ಒಂದು ದಿನ ಮನುಷ್ಯವಾಣಿಯಿಂದ ಅವನನ್ನು ಹತ್ತರ ಬರಮಾಡಿಕೊಂಡು ಕಮಟಾ, ನೀನು ಇಷ್ಟು ಸಂಶಯದಲ್ಲಿ ಯಾಕೆ ಬಿದ್ದಿರುವಿ? ನಾನು ಪ್ರತಿನಿತ್ಯ ರಾಜಕನ್ಯೆಯ ಅಪೇಕ್ಷೆಯಿಂದ ಮಾತಾಡುವದನ್ನು ನೀನು ಕೇಳುತ್ತೀ; ಇನ್ನಾದರೂ ನನಗೆ ರಾಜಕನ್ಯೆಯನ್ನು ತಂದು ಲಗ್ನಮಾಡು ಎಂದಿತು.

ಗಾರ್ದಭನ ಮಾತನ್ನು ಕೇಳಿ ಕಮಟನಿಗೆ ಆಶ್ಚರ್ಯಕ್ಕಿಂತ ಭಯವೇ ಹೆಚ್ಚಾಯಿತು. ಈ ಕತ್ತೆಯ ಸಾಹಸದ ಮಾತನ್ನು ಯಾರಾದರೂ ಕೇಳಿದರೆ, ತನಗೆ ಅಪಾಯ ಸಂಭವಿಸಬಹುದೆಂದು ತಿಳಿದು ಅವನು ಕತ್ತೆಗೆ:— ನೀನು ಜಾತಿಯಿಂದ ಕತ್ತೆಯಿದ್ದು, ರಾಜಕನ್ಯೆಯ ಅಪೇಕ್ಷೆಯನ್ನು ಮಾಡುವದು ಮೂರ್ಖತನವಲ್ಲವೇ? ಸತ್ಯವರ್ಮ ರಾಜನಿಗೆ ಈ ಸಂಗತಿಯು ಗೊತ್ತಾದರೆ, ನನ್ನ ಶಿರಚ್ಛೇದ ಮಾಡುವನು; ಎಂದು ನುಡಿದನು. ಬಳಿಕ ಅವನು ಈ ಸಂಗತಿಯನ್ನು ತನ್ನ ಹೆಂಡತಿಗೆ ತಿಳಿಸಿದನು. ಆ ಸ್ತ್ರೀಯೂ ಕುಂಬಾರನಂತೆ ಮೂರ್ಖಳಿದ್ದಳು. ಪತಿಯ ಮಾತಿಗೆ ಭೀತಿಗೊಂಡು ದೇಶತ್ಯಾಗ ಮಾಡಬೇಕೆಂದು ನಿರ್ಧರಿಸಿದಳು. ಕತ್ತೆಯು ಮನುಷ್ಯನಂತೆ ಮಾತಾಡುವದೆಂದರೆ ಯಾವನಾದರೂ ಮಹಾಪುರುಷನು ಈ ಕತ್ತೆಯ ರೂಪದಿಂದ ಇರಬಹುದೆಂಬ ವಿಚಾರವು ಆ ಮೂರ್ಖ ಸ್ತ್ರೀಯಳಲ್ಲಿ ಹೇಗೆ ಉತ್ಪನ್ನವಾಗ

ಬೇಕು? ಆ ಮೂರ್ಖ ದಂಪತಿಗಳು ನಗರವನ್ನು ಬಿಟ್ಟು ಹೋಗುವದನ್ನು ನಿಶ್ಚಯಿಸಿದರು; ಮತ್ತು ತಮ್ಮ ಸಾಮಾನುಗಳನ್ನು ಕತ್ತೆಯಮೇಲೆ ಹೇರಿಕೊಂಡು ಅಗಸೇ ಬಾಗಿಲಿನಿಂದ ಹೊರಬೀಳುವಾಗ ಅಗಸೆಯನ್ನು ಕಾಯುವ ದ್ವಾರರಕ್ಷಕರು ಅವರಿಗೆ ಅಡ್ಡಿಯನ್ನು ಮಾಡಿದರು. ಹೇ ಕಮಟಾ, ನೀನು ಸರ್ವ ಸಾಮಾನುಗಳನ್ನು ಈ ಕತ್ತೆಯ ಮೇಲೆ ಹೇರಿಕೊಂಡು ಎಲ್ಲಿಗೆ ಓಡಿಹೋಗುವಿ? ಎಂದು ಗದ್ದರಿಸಿದರು.

ರಾಜದೂತರ ಪ್ರಶ್ನೆಗೆ ಅವನು ಏನೂ ಉತ್ತರ ಕೊಡಲಿಲ್ಲ. ಅವರು ಎಷ್ಟು ರೀತಿಯಿಂದ ಮಾತಾಡಿಸಿದರೂ ಅವನಿಂದ ಉತ್ತರ ದೊರೆಯಲಿಲ್ಲ. ಅದನ್ನು ಕಂಡು ಆ ರಾಜದೂತರು ಅವನನ್ನು ಅಲ್ಲಿಯೇ ಹಿಡಿದುಕೊಂಡು ಈ ಸಂಗತಿಯನ್ನು ರಾಜನಿಗೆ ಅರಿಕೆ ಮಾಡಿಕೊಂಡರು. ರಾಜನು ಈ ಸಂಗತಿಯನ್ನು ಕೇಳಿ ಕಮಟನನ್ನು ಅರಮನೆಗೆ ಕರೆಯಿಸಿದನು. ರಾಜಾಜ್ಞೆಯಂತೆ ದೂತರು ಕಮಟನನ್ನು ಕರೆದುಕೊಂಡು ಹೋಗಲು, ಅರಸನು ಕಮಟನನ್ನು ಕುರಿತು:—ಎಲೋ ಕುಂಬಾರಾ, ನಿನಗೆ ಯಾವ ದುಃಖ ಪ್ರಾಪ್ತವಾದೆ? ನನ್ನ ರಾಜಧಾನಿಯನ್ನು ಯಾಕೆ ಬಿಡುತ್ತೀ? ಇದರ ಕಾರಣವನ್ನು ಹೇಳು. ನನಗೆ ಸತ್ಯವರ್ಮನೆಂಬ ಹೆಸರು ಇದ್ದು, ಈ ಹೆಸರಿನಂತೆ ನನ್ನ ರಾಜಕಾರ್ಯವನ್ನು ನಡಿಸುತ್ತೇನೆ. ಹೀಗಿದ್ದು, ನನ್ನ ರಾಜ್ಯವನ್ನು ತ್ಯಜಿಸುವ ಕಾರಣವನ್ನು ತೀವ್ರವಾಗಿ ಹೇಳು; ಎಂದನು.

ರಾಜನ ಗಂಭೀರ ಹಾಗು ಔದಾರ್ಯಯುಕ್ತ ಮಾತನ್ನು ಕೇಳಿ ಕಮಟನಿಗೆ ಸ್ವಲ್ಪ ಧೈರ್ಯವುತ್ಪನ್ನವಾಯಿತು. ಆಗ ಅವನು—"ಮಹಾರಾಜ, ಪ್ರಜಾಪಾಲನದಲ್ಲಿ ತಾವು ತತ್ಪರರಿರುತ್ತೀರಿ. ಆದರೆ ನನ್ನ ದುಃಖವು ಬೇರೆ ತರದ್ದಾಗಿದೆ ಆ ಮಾತನ್ನು ಹೇಳಲಿಕ್ಕೆ ಬರುವದಿಲ್ಲ. ಆ ಸಂಬಂಧದಿಂದ ಒಂದು ಶಬ್ದ ಮಾತಾಡಿದರೆ ಇಲ್ಲಿಂದಿಲ್ಲೇ ನನ್ನ ಶಿರಚ್ಛೇದವಾಗುವದು ಎಂದನು.

ಕಮಟನು ತನಗೆ ಹೆದರುವನೆಂದು ತಿಳಿದು ಅವನಿಗೆ ಧೈರ್ಯಕೊಟ್ಟು ಅವನನ್ನು ಏಕಾಂತದಲ್ಲಿ ಒರಮಾಡಿಕೊಂಡು ವಿಚಾರಿಸಿದನು. ಆಗ ಕಮಟನು ರಾಜನ ಮುಂದೆ ಕೈಜೋಡಿಸಿಕೊಂಡು—ಹೇ ಸರ್ವಜ್ಞನಾದ ರಾಜೇಂದ್ರನೇ, ನಿಮಗೆ ಸತ್ಯವತಿಯೆಂಬ ಹೆಸರಿನ ಕನ್ಯೆ ಇರುವಳಷ್ಟೇ; ಆ

ಕನ್ಯೆಯ ಅಪೇಕ್ಷೆಯನ್ನು ನನ್ನ ಮನೆಯೊಳಗಿನ ಕತ್ತೆಯು ಮಾಡುತ್ತದೆ; ಆ ಕತ್ತೆಯು ಪ್ರತಿದಿವಸ ಮನುಷ್ಯವಾಣಿಯಿಂದ ಹೇಳುತ್ತದೆ. ನನ್ನಂಥ ದರಿದ್ರನ ಮನೆಯೊಳಗಿನ ಕತ್ತೆಯು ತಮ್ಮಂಥವರ ವಿಷಯವಾಗಿ ಹೀಗೆ ಮಾತಾಡುವದು ತಮಗೆ ಗೊತ್ತಾದರೆ ನನ್ನ ಪ್ರಾಣ ಹಾನಿಯಾಗುವದೆಂಬ ಭೀತಿಯಿಂದ ದೂರ ದೇಶಕ್ಕೆ ಹೋಗುತ್ತೇನೆ. ಎಂದನು.

ಕಮಟನ ಮಾತನ್ನು ಕೇಳಿ ಆ ಸುಜ್ಞನಾದ ರಾಜನಿಗೆ ಬಹಳ ಆಶ್ಚರ್ಯವಾಯಿತು. ಕತ್ತೆಯು ಮನುಷ್ಯನಂತೆ ಮಾತಾಡುವದೆಂದರೆ ಆಶ್ಚರ್ಯವು. ಅದು ನಿಜವಾಗಿ ಕತ್ತೆ ಇರದೆ ಒಬ್ಬ ದಿವ್ಯ ಪುರುಷನಿರಲಿಕ್ಕೆ ಬೇಕು. ಆದ್ದರಿಂದ ಆ ಕತ್ತೆಯ ಪರೀಕ್ಷೆ ಮಾಡೇ ತೀರಬೇಕೆಂದು ತಿಳಿದು ರಾಜನು ಕುಂಬಾರನಿಗೆ—ನೀನು ಭಯವನ್ನು ಬಿಟ್ಟುಕೊಡು. ನಾನು ಆ ಕತ್ತೆಯ ಪರೀಕ್ಷೆಯನ್ನು ಮಾಡುವೆನು. ಅದು ಒಂದು ವೇಳೆ ನನ್ನ ಅಭಿಪ್ರಾಯಕ್ಕೆ ಸಮ್ಮತಿಸಿದರೆ ನನ್ನ ಸತ್ಯವತಿ ಎಂಬ ಪುತ್ರಿಯನ್ನು ಅದಕ್ಕೇ ಅರ್ಪಿಸುವೆನು. ನೀನು ಈಗ ನಿನ್ನ ಮನೆಗೆ ಹೋಗು ಮತ್ತು ಈಗ ಅದು ಮಾತಾಡ ಹತ್ತಿದರೆ ಈ ಪ್ರಕಾರ ಹೇಳು ಏನಂದರೆ— ನಾನು ನಿನ್ನ ಅಪೇಕ್ಷೆಯನ್ನು ರಾಜನಿಗೆ ತಿಳಿಸಿದೆನು. ನಿನ್ನ ಅಪೇಕ್ಷೆಯಂತೆ ತನ್ನ ಮಗಳನ್ನು ನಿನಗೆ ಕೊಡಲೊಪ್ಪಿರುವನು. ಆದರೆ ರಾಜನ ಅಪೇಕ್ಷೆಯೇನಂದರೆ—ಈ ವಿಶಿಲಾನಗರವು ತಾಂಬ್ರಮಯವಾಗಬೇಕು. ಹಾಗೆ ನೀನು ಮಾಡಿದರೆ ನಿನಗೆ ಸತ್ಯವತಿಯನ್ನು ಕೊಡುವೆನು ಎಂದು ಹೇಳಿರುವನು.''

ಈ ಮೇರೆಗೆ ರಾಜನು ಕುಂಬಾರನಿಗೆ ಹೇಳಿ ಮನೆಗೆ ಕಳಿಸಿದನು. ಎರಡು ಪ್ರಹರ ರಾತ್ರಿಯ ಸುಮಾರಕ್ಕೆ ಆ ಕತ್ತೆಯು ಕಮಟನಿಗೆ ರಾಜಕನ್ಯೆಯನ್ನು ಬೇಡಹತ್ತಿತು. ಕಮಟನು ಅದರ ಮಾತನ್ನು ಕೇಳಿ ರಾಜನ ಅಭಿಪ್ರಾಯವನ್ನು ಅರುಹಿದನು. ಅದನ್ನು ಕೇಳಿ ಕತ್ತೆಯು ನಗಹತ್ತಿತು. ರಾಜನು ನನ್ನ ಪರೀಕ್ಷೆಗಾಗಿ ಈ ಯುಕ್ತಿಯನ್ನು ಯೋಚಿಸಿದಂತೆ ಕಾಣುತ್ತದೆ. ಅಡ್ಡಿಯಿಲ್ಲ; ಅವನ ಇಚ್ಛೆಯಿದ್ದರೆ ಈ ನಗರವನ್ನು ತಾಮ್ರಮಯವೇಕೆ? ಸುವರ್ಣಮಯವಾಗಿ ಮಾಡಬಹುದು. ರಾಜನ ಸಂಪತ್ತು ನನಗೆ ತುಚ್ಛವಾಗಿ ತೋರುತ್ತದೆ. ಎಲೋ ಕಮಟಾ, ಇಂದ್ರನ ಸಂಪತ್ತಿಯ ಮೇಲೆ ಯಾವನ ಅಧಿಕಾರ ನಡೆಯುವದೋ, ಅವನಿಗೆ ಈ ನಗರಿಯನ್ನು

ತಾಮ್ರಮಯವಾಗಿ ಮಾಡುವದು ಅಶಕ್ಯವೇ? ಕಾಮಧೇನು, ಕಲ್ಪದ್ರುಮ, ಚಿಂತಾಮಣಿ ಇವುಗಳಲ್ಲಿ ಯಾವದೊಂದು ಬೇಡುವದನ್ನು ಬಿಟ್ಟುಕೊಟ್ಟು ರಾಜನಿಗೆ ಈ ರೀತಿ ಬುದ್ಧಿಯು ಹೇಗೆ ಹುಟ್ಟಿರಬಹುದು? ಏನೇ ಇರಲಿ; ನೀನು ರಾಜನ ಕಡೆಗೆ ಹೋಗಿ ನಿನ್ನ ಇಚ್ಛೆಯು ಪೂರ್ಣವಾಗುವದು, ಎಂದು ಹೇಳು.

ರಾಜನ ಅಪೇಕ್ಷೆಯನ್ನು ಪೂರ್ಣಗೊಳಿಸುವದಕ್ಕಾಗಿ ಆ ಸುರೋಚನ ಗಂಧರ್ವನು ವಿಶ್ವಕರ್ಮನ ಪ್ರಾರ್ಥನೆಯನ್ನು ಮಾಡಿದನು. ಅದರಂತೆ ವಿಶ್ವಕರ್ಮನು ಪ್ರಾಪ್ತನಾಗಲು, ರಾಜನ ಅಪೇಕ್ಷೆಯನ್ನು ಪೂರ್ಣಗೊಳಿಸುವದಕ್ಕಾಗಿ ತಿಳಿಸಿದನು. ವಿಶ್ವಕರ್ಮನು ಈ ಸುರೋಚನನು ಪೂರ್ವ ಕಾಲದಲ್ಲಿ ಗಂಧರ್ವನಿರುವನೆಂದು ತಿಳಿದು ಅವನ ಪ್ರಾರ್ಥನೆಯ ಮೇರೆಗೆ ಅಂದು ರಾತ್ರಿಯಲ್ಲಿ ಮಿಥಿಲಾನಗರವನ್ನು ತಾಮ್ರಮಯವಾಗಿ ಮಾಡಿದನು. ನಗರದೊಳಗಿನ ಜನರು ಬೆಳಿಗ್ಗೆ ಎದ್ದು ನೋಡಲು, ಎಲ್ಲ ಕಡೆಗೂ ತಾಮ್ರಮಯವಾಗಿತ್ತು. ಒಮ್ಮೆಂದೊಮ್ಮೆ ಒದಗಿದ ಈ ಅಪೂರ್ವ ಪ್ರಕಾರವನ್ನು ನೋಡಿ ಎಲ್ಲ ಜನರಿಗೆ ಆಶ್ಚರ್ಯವಾಯಿತು. ಆದರೆ ಅದರ ಇಂಗಿತವೇನೆಂಬುವದು ಯಾರಿಗೂ ತೋಚಲಿಲ್ಲ. ಸತ್ಯವರ್ಮರಾಜನು ಮಾತ್ರ ಅರಿತುಕೊಂಡನು ತನ್ನ ಇಚ್ಛೆಯನ್ನು ಕಮಟನ ಕತ್ತೆಯು ಪೂರ್ಣಗೊಳಿಸಿತೆಂದು ತಿಳಿದು ತನ್ನ ಮಗಳನ್ನು ಸುರೋಚನ ಕತ್ತೆಗೆ ಕೊಡಲಿಕ್ಕೆ ಸಮ್ಮತಿಸಿದನು. ಆದರೆ ಈ ಸಂಗತಿಯು ಯಾರಿಗೂ ತಿಳಿಯಬಾರದಾಗಿತ್ತು. ಯಾಕಂದರೆ ಕತ್ತೆಗೂ ಮನುಷ್ಯನಿಗೂ ವಿವಾಹವಾಗುವ ಬಗೆ ಹ್ಯಾಗೆ? ಉತ್ತಮ ವರಕ್ಕೆ ಕನ್ಯೆಯನ್ನು ಕೊಟ್ಟರೂ ದೋಷಕೊಡುವ ಜಗತ್ತಿನಲ್ಲಿ ಗಾರ್ದಭನಿಗೆ ತನ್ನ ಮಗಳನ್ನು ಕೊಟ್ಟರೆ, ಈ ವಿಪರೀತವನ್ನು ಕಂಡು ಜನರು ತನಗೆ ಏನೆನ್ನುವರೋ ಎಂದು ರಾಜನು ಚಿಂತೆಗೊಳಗಾದನು. ಇನ್ನು ಲೌಕಿಕಕ್ಕೆ ಹೆದರಿ ವಚನಭ್ರಷ್ಟನಾಗುವದೂ ವಿಹಿತವಲ್ಲ; ವಚನದಂತೆ ಗುಪ್ತರೀತಿಯಿಂದ ಲಗ್ನವನ್ನು ಮಾಡಿಕೊಡಬೇಕೆಂದು ನಿಶ್ಚಯಿಸಿದನು; ಮತ್ತು ಲಗ್ನವಾದಕೂಡಲೆ ದೂರದೇಶಕ್ಕೆ ಕಳಿಸಬೇಕೆಂದು ನಿಶ್ಚಯಿಸಿ ಅದರಂತೆ ಆ ಕುಂಬಾರನಿಗೆ ಹೇಳಿದನು. ರಾಜನ ಮಾತಿನಂತೆ ಕಮಟನು ದೇಶತ್ಯಾಗ ಮಾಡಲಿಕ್ಕೆ ಸಮ್ಮತಿಸಿದನು. ಬಳಿಕ ರಾಜನು ತನ್ನ ಮಗಳನ್ನು

ಹತ್ತಿರ ಕರೆದ :—" ಹೇ ಕನ್ಯೇ, ಸತ್ಯವತೀ, ನಾನು ನಿನ್ನನ್ನು ಒಬ್ಬ ದೇವಪುರುಷನಿಗೆ ಅರ್ಪಿಸುತ್ತೇನೆ; ನೀನು ಆತನನ್ನು ಮದುವೆಯಾಗಬೇಕು. ಆ ದೇವನು ಈಗ ಕುಂಬಾರನ ಮನೆಯಲ್ಲಿ ಗಾರ್ದಭರೂಪದಿಂದ ಇರುವನು. ಈ ಸಂಗತಿಯನ್ನು ನಾನು ನಂಬಿಗೆಗೆ ತಂದುಕೊಂಡಿದ್ದೇನೆ. ಅವನ ಸಾಮರ್ಥ್ಯದಿಂದ ನಮ್ಮ ಈ ಮಿಥಿಲಾನಗರವು ಒಂದೇ ರಾತ್ರಿಯಲ್ಲಿ ತಾಮ್ರಮಯವಾಗಿರುವದು. ಆದ್ದರಿಂದ ಆತನನ್ನು ನೀನು ಒರಿಸಿ ಪವಿತ್ರವಾದ ಆಚರಣೆಯಿಂದ ಎರಡೂ ಕುಲಗಳ ಉದ್ಧಾರಮಾಡು. ಆ ಗಾರ್ದಭರೂಪನಾದ ದೇವನು ನಿನ್ನನ್ನು ಅನುಗ್ರಹಿಸುವದು ಸತ್ಯವು. ನೀನು ಕಾಯಾ, ವಾಚಾ, ಮನಸ್ಸಿನಿಂದ ಆ ಪತಿಯನ್ನು ಸೇವಿಸು. ಅಂದರೆ ನಿನಗೆ ಕಲ್ಯಾಣವಾಗುವದು. ನೀನು ಸಮ್ಮತಿಸದಿದ್ದರೆ, ಆ ದೇವಪುರುಷನು ನನಗೆ ಶಾಪವನ್ನು ಕೊಡುವನು. ಆದ್ದರಿಂದ ನೀನು ಆತನ ಹೀನ ಸ್ವರೂಪವನ್ನು ನಿರಾಕರಿಸದೆ ಆತನನ್ನು ಸೇವಿಸು. ನಿನ್ನ ಪವಿತ್ರ ಆಚರಣೆಯನ್ನೂ, ಪತಿಭಕ್ತಿಯನ್ನೂ ನೋಡಿ ಆ ದೇವಪುರುಷನು ತನ್ನ ಹೀನದೇಹವನ್ನು ತ್ಯಜಿಸಿ, ದಿವ್ಯದೇಹವನ್ನು ಧರಿಸುವನೆಂಬುವದು ನನಗೆ ನಂಬಿಗೆಯಾಗಿದೆ. ನೀನು ನನ್ನ ಮಾತಿನಮೇಲೆ ವಿಶ್ವಾಸವನ್ನಿಟ್ಟು ಆ ಕಮುಟನ ಮನೆಗೆ ಹೋಗಲಿಕ್ಕೆ ಸಿದ್ಧಳಾಗು!" ಎಂದನು.

ತಂದೆಯ ಮಾತನ್ನು ಕೇಳಿ ಸತ್ಯವತಿಯು ಕೆಲಹೊತ್ತು ವಿಚಾರಿಸಿದಳು. ನಂತರ ತಂದೆಯ ಮಾತಿನೊಳಗಿನ ಮರ್ಮವನ್ನರಿತು ಸತ್ಯವತಿಯು ತಂದೆಯ ಮಾತನ್ನು ಮಾನ್ಯಮಾಡಿದಳು.

ರಾತ್ರಿಯಾಗಲು ಸತ್ಯವರ್ಮನೃಪತಿಯು ಸತ್ಯವತಿಯೊಡನೆ ಆ ಕುಂಬಾರನ ಮನೆಗೆ ಹೋದನು. ಕಮುಟನು ರಾಜನನ್ನು ಸನ್ಮಾನಿಸಿ ಸತ್ಯವತಿಯನ್ನು ತನ್ನ ಕತ್ತೆಗೆ ತೋರಿಸಿದನು. ರಾಜನು ಸತ್ಯವತಿಯನ್ನು ಕತ್ತೆಗೆ ಅರ್ಪಣಮಾಡಿ ಹೇಳಿದ್ದೇನಂದರೆ:—ತಾವು ಈ ಕನ್ಯೆಯನ್ನು ಸ್ವೀಕರಿಸಬೇಕು. ಈಕೆಯು ತಮ್ಮ ಪತ್ನಿಯಿದ್ದಾಳೆ.

ರಾಜನ ಸದ್ಭಾವನೆಯುಕ್ತ ಮಾತನ್ನು ಕೇಳಿ ಗಾರ್ದಭನು:—" ರಾಜಾ, ನೀನು ನಿನ್ನ ಮಗಳನ್ನು ಕೊಟ್ಟು ವಚನವನ್ನು ಪಾಲಿಸಿದಿ; ಇದು ನಿನಗೆ ಭೂಷಣವು; ನೀನು ಭಾಗ್ಯವಂತನಿರುವಿ; ಜನರ ದೃಷ್ಟಿ

ಯಿಂದ ನಾನು ಕತ್ತ್ರಿಯಾಗಿ ತೋರುತ್ತೇನೆ; ಆದರೆ ನಾನು ನಿಜವಾಗಿ ಕತ್ರಿಯಲ್ಲ; ನಾನು ಸುರೋಚನ ಎಂಬ ಗಂಧರ್ವನಿದ್ದೇನೆ. ಇಂದ್ರನ ಶಾಪದಿಂದ ನನಗೆ ಈ ನೀಚ ಜನ್ಮವು ಒದಗಿರುತ್ತದೆ.'' ಎಂದನು.

ಈ ಮೇರೆಗೆ ಗಾದರ್ಭನು ತನ್ನ ಪೂರ್ವವೃತ್ತವನ್ನು ಕಥನಮಾಡಲು ರಾಜನು ಬಹಳ ಸಂತುಷ್ಟನಾದನು. ತನ್ನ ಮಗಳನ್ನು ಕತ್ರಿಗೆ ಒಪ್ಪಿಸಿ ಕಮಟನ ಅಪ್ಪಣೆ ಪಡಕೊಂಡು ತನ್ನ ರಾಜಧಾನಿಗೆ ಹೋದನು. ರಾಜನು ಹೋದ ಕೂಡಲೆ ಕಮಟನು ಮಿಥಿಲಾನಗರವನ್ನು ತ್ಯಜಿಸಿ, ಕುಟುಂಬಸಹಿತನಾಗಿ ಅವಂತೀ ನಗರದ ಮಾರ್ಗವನ್ನು ಹಿಡಿದನು.

---

# ಅಧ್ಯಾಯ ೨೭

## ವಿಕ್ರಮ—ಭರ್ತರಿಐಕ್ಯ.

ಅವಂತಿನಗರಿಯಲ್ಲಿ ಓರ್ವ ಕುಂಬಾರನಿದ್ದನು. ಅವನಿಗೆ ಎರಡು ಮನೆಗಳಿದ್ದವು. ಅವನು ಒಂದು ಮನೆಯನ್ನು ಕಮಟನಿಗೆ ಇರಲಿಕ್ಕೆ ಕೊಟ್ಟನು. ಆ ಮನೆಯಲ್ಲಿ ಕಮಟನು ಸತ್ಯವತಿಯೊಡನೆ ಇರತೊಡಗಿದನು. ಸತ್ಯವತಿಯು ಪ್ರಾಯಕ್ಕೆ ಬರಲು ಅವಳಲ್ಲಿ ಚಿಂತೆಯು ಉತ್ಪನ್ನವಾಯಿತು. ತನ್ನ ಪತಿಯು ಕತ್ರಿಯಾಗಿದ್ದು, ತನಗೆ ಇನ್ನು ಸಂಸಾರಸುಖವು ಹ್ಯಾಗೆ ಸಿಗಬೇಕೆಂದು ಅವಳು ಚಿಂತಿಸತೊಡಗಿದಳು. ಆಕೆಯು ಹೆಚ್ಚು ಹೆಚ್ಚು ಪ್ರಬುದ್ಧಳಾದಂತೆ ಅವಳ ಚಿಂತೆಯೂ ಹೆಚ್ಚುತ್ತ ನಡೆಯಿತು. ಕಮಠನ ಹೆಂಡತಿಯು ಸತ್ಯವತಿಯನ್ನು ಕೇವಲ ಮಗಳಂತೆ ಸಂರಕ್ಷಿಸುತ್ತಿದ್ದಳು. ಆಕೆಗೆ ಸತ್ಯವತಿಯ ದುಃಖದ ಕಾರಣವು ಹೊಳೆಯಿತು. ಅವಳೂ ಮನಸ್ಸಿನಲ್ಲಿ ಚಡಪಡಿಸಹತ್ತಿದಳು. ಬರಬರುತ್ತ ಈ ಸಂಗತಿಯು ಕಮಠನಿಗೂ ತಿಳಿಯಿತು. ಸತ್ಯವತಿಗೆ ಸಂಸಾರಸುಖವು ಲಭಿಸಬೇಕಾದರೆ ಏನು ಮಾಡ

ಬೇಕೆಂದು ಅವನೂ ಚಿಂತಿಸತೊಡಗಿದನು. ಈ ಚಿಂತೆಯಿಂದ ಅವನ ಮೋರೆಯೂ ಸಣ್ಣದಾಯಿತು. ಈ ಲಕ್ಷಣವನ್ನು ತಿಳಿದು ಸುರೋಚನಕತ್ತೆಯು ಒಂದುದಿನ ಕಮಠನನ್ನು ಕುರಿತು ವಿಚಾರಿಸಿದನು. ಈ ಸಂಧಿಯನ್ನು ಸಾಧಿಸಿ ಕಮಠನು ಸತ್ಯವತಿಯ ಇಚ್ಛೆಯನ್ನು ತಿಳಿಸಿದನು. ಅದನ್ನು ಕೇಳಿ ಸುರೋಚನನು ನುಡಿದನೇನಂದರೆ—ಕಮಠನೇ ನಿನ್ನ ಉಪಕಾರವು ನನ್ನ ಮೇಲೆ ಬಹಳವಾಗಿದೆ ನೀನು ನನ್ನ ವಚನವನ್ನು ಮಾನ್ಯಮಾಡಿ ಅರಸು ಮಗಳನ್ನು ನನಗೆ ಲಗ್ನ ಮಾಡಿಕೊಟ್ಟಿ; ಆದ್ದರಿಂದ ನಾನು ನಿನ್ನ ಇಚ್ಛೆಯನ್ನು ಪೂರ್ಣಪಡಿಸುವದೂ ಹಾಗು ಲಗ್ನ ಮಾಡಿಕೊಂಡ ಹೆಂಡತಿಯ ಇಚ್ಛೆಯನ್ನು ಪೂರ್ಣಪಡಿಸುವದೂ ನನ್ನ ಕರ್ತವ್ಯವಾಗಿದೆ. ನಿಮ್ಮೆಲ್ಲರ ಸಂತೋಷಕ್ಕಾಗಿ ನಾನು ದಿವ್ಯದೇಹವನ್ನು ತಾಳಿ ಸತ್ಯವತಿಗೆ ಸಂಸಾರಸುಖವನ್ನುಂಟು ಮಾಡುವೆನು. ಆದರೆ ಕಮಠನೇ, ಸತ್ಯವತಿಗೆ ನನ್ನ ಬಳಿಗೆ ಬರಲು ಎಂದು ಇಚ್ಛೆಯುತ್ಪನ್ನವಾಗುವದೋ ಅಂದು ನೀನು ನನ್ನ ಬಳಿಗೆ ಬಾ ಅಂದರೆ ನಾನು ಅವಳ ಮನಃಕಾಮನೆಯನ್ನು ಪೂರ್ಣಗೊಳಿಸುವೆನು.

ಈ ಮೇರೆಗೆ ಸುರೋಚನಕತ್ತೆಯು ಆಶ್ವಾಸನ ಕೊಡಲು ಕಮಠನು ಸಂತೋಷಹೊಂದಿ ಈ ಸಂಗತಿಯನ್ನು ಸತ್ಯವತಿಗೆ ತಿಳಿಸಿದನು ಮುಂದೆ ಕೆಲವು ದಿವಸಗಳು ಕಳೆಯಲು ಸತ್ಯವತಿಯೂ, ಕಮಠನ ಹೆಂಡತಿಯೂ ಕೂಡಿ ಕಮಠನನ್ನು ಸುರೋಚನನ ಬಳಿಗೆ ಕಳಿಸಿದರು. ಆತನು ಕತ್ತೆಯ ಬಳಿಗೆ ಹೋಗಿ ಸತ್ಯವತಿಯ ಇಚ್ಛೆಯನ್ನು ಹೇಳಿದನು. ಕೂಡಲೆ ಸುರೋಚನನು ಕತ್ತೆಯ ದೇಹವನ್ನು ತ್ಯಜಿಸಿ ತನ್ನ ಗಂಧರ್ವ ರೂಪವನ್ನು ಧರಿಸಿದನು. ಅವನ ಭವ್ಯಶರೀರವು ಕಮಠನಲ್ಲಿ ಆಶ್ಚರ್ಯವನ್ನುಂಟು ಮಾಡಿತು. ಸತ್ಯವತಿಯ ಯೋಗದಿಂದ ತನಗೆ ಗಂಧರ್ವರಾಜನ ದರ್ಶನವಾಯಿತೆಂದು ಅವನು ಬಹಳವಾಗಿ ಹಿಗ್ಗಿದನು ಮತ್ತು ವಿನಯದಿಂದ ಕೈಜೋಡಿಸಿಕೊಂಡು ನಿಂತು ಮಹಾರಾಜ, ನಾನು ಪಾಪಿಷ್ಠನಿದ್ದೇನೆ. ನಾನು ತಮ್ಮ ಈ ದಿವ್ಯರೂಪವನ್ನು ತಿಳಿಯದೆ ಕೇವಲ ಕತ್ತೆಯೆಂದು ಭಾವಿಸಿ ನಿಮ್ಮ ಮೇಲೆ ಹತ್ತಿ ಕುಳಿತೆನು. ಹೇರಬಾರದ ಪದಾರ್ಥಗಳನ್ನು ಹೇರಿದೆನು. ದಾರಿಯು ಬೇಗನೆ ಸಾಗಬೇಕೆಂಬ ಕೋರಡೆಯಿಂದ ಹೊಡೆದೆನು. ಹೀಗೆ ಅನಂತ ಅಪರಾಧಗಳನ್ನು ಮಾಡಿದೆನು. ಅವನ್ನೆಲ್ಲ ತಾವು ಕ್ಷಮಿಸುವಿ

ರೆಂದು ತಿಳಿಯುತ್ತೇನೆ ಎಂದನು. ಕಮಠನ ಮಾತಿಗೆ ಸುರೋಚನನು ಸಮಾಧಾನಪಟ್ಟು ನಾಲ್ಕು ಸಮಾಧಾನೋಕ್ತಿಗಳನ್ನು ಹೇಳಿದನು. ಬಳಿಕ ಕಮಠನು ಸತ್ಯವತಿಯನ್ನು ಕರೆತಂದು ಸುರೋಚನನಿಗೆ ಒಪ್ಪಿಸಿ ತಾನು ಅಲ್ಲಿಂದ ಹೊರಟು ಹೋದನು. ಸತ್ಯವತಿಯು ಸುರೋಚನನ ದಿವ್ಯ ದೇಹವನ್ನು ಕಂಡು ಆನಂದಭರಿತಳಾಗಿ ಅವನಿಗೆ ಪಂಚಾರತಿಯನ್ನು ಮಾಡಿದಳು. ಸುರೋಚನನು ಸತ್ಯವತಿಯನ್ನು ಹತ್ತರ ಕುಳ್ಳಿರಿಸಿಕೊಂಡು ತನ್ನ ಸಂಗತಿಯನ್ನೆಲ್ಲ ಹೇಳಿದನು. ಬಳಿಕ ಸತ್ಯವತಿಯು ತನಗೆ ಬಲಾಢ್ಯನಾದ ಪುತ್ರನನ್ನು ದಯ ಪಾಲಿಸಬೇಕೆಂದು ಪ್ರಾರ್ಥಿಸಿದಳು. ಅದನ್ನು ಕೇಳಿ ಸುರೋಚನನು—ಪ್ರಿಯೇ, ನಿನ್ನ ಉದರದಲ್ಲಿ ನನ್ನಿಂದ ನಿನಗೆ ಮಹಾ ಪರಾಕ್ರಮಶಾಲಿಯಾದ ಪುತ್ರನು ಉದಯಿಸುವನು. ಅವನು ಶಕಪುರುಷನಾಗುವನು. ನಾನು ಅವನ ಮುಖವನ್ನು ನೋಡಿದ ಕೂಡಲೆ ನನ್ನ ಶಾಪವಿಮೋಚನವಾಗುವದು ಎಂದು ಹೇಳಿದನು. ಸತ್ಯವತಿಯು ಬಹಳ ಸಂಭ್ರಮವನ್ನು ತಾಳಿದಳು. ಅಂದಿನ ರಾತ್ರಿಯಲ್ಲಿ ಸುರೋಚನನು ಸತ್ಯವತಿಯ ಇಚ್ಛೆಯನ್ನು ಪೂರ್ಣ ಮಾಡಿದನು.

ಮರುದಿನ ಬೆಳಗಾಗಲು ಸುರೋಚನನು ಮತ್ತೆ ಕತ್ತೆಯ ದೇಹಧಾರಣ ಮಾಡಿ ಹಾಳುಗೋಡೆಯಲ್ಲಿ ನಿಂತನು. ಇತ್ತ ಸತ್ಯವತಿಯು ಸಂತೋಷದಿಂದ ಕಾಲಕ್ರಮಿಸಲಾರಂಭಿಸಿದಳು. ಅವಳ ಗರ್ಭವು ಬೆಳೆಯುತ್ತ ನಡೆಯಿತು. ಕಮಠನಿಗೂ ತುಂಬಾ ಸಂತೋಷವಾಯಿತು. ಈ ಸಂಗತಿಯು ಊರಲ್ಲಿ ಹಬ್ಬಿತು. ಕಮಠನೆಂಬ ಕುಂಬಾರನ ಮನೆಯಲ್ಲಿ ಓರ್ವ ಸುಂದರ ತರುಣಿಯಿದ್ದು, ಅವಳು ಗರ್ಭವತಿಯಾಗಿರುವಳು ಎಂದು ಜನರು ಆಡಿಕೊಳ್ಳಲಾರಂಭಿಸಿದರು. ಅವರಿಗೆ ಕಮಠನು—ಸತ್ಯವತಿಯು ನನ್ನ ಮಗಳು, ಹಡೆಯುವದಕ್ಕಾಗಿ ತವರ ಮನೆಗೆ ಬಂದಿರುವಳು ಎಂದು ಉತ್ತರ ಹೇಳಿ ಜನರಲ್ಲಿ ಪಸರಿಸಿರುವ ಸುದ್ದಿಯ ಮೂಲವನ್ನು ಕಡಿದುಹಾಕಿದನು.

ದಿವಸಗಳು ತುಂಬಲು ಸತ್ಯವತಿಯು ಓರ್ವ ಸುಂದರ ಬಾಲಕನನ್ನು ಹಡೆದಳು. ಮಗನು ಹುಟ್ಟಿದನೆಂಬ ಸುದ್ದಿಯನ್ನು ಕೇಳಿ ಸುರೋಚನನು ಸಂತೋಷಚಿತ್ತನಾಗಿ ಗಂಧರ್ವದೇಹವನ್ನು ತಾಳಿದನು. ಮತ್ತು ಲಗಬಗೆಯಿಂದ ಸತ್ಯವತಿಯಿದ್ದಲ್ಲಿಗೆ ಬಂದನು. ಸತ್ಯವತಿಯು ಗಂಗನ ಕೈಯಲ್ಲಿ

ಮಗವನ್ನು ಕೊಟ್ಟಳು. ಶಿಶುವನ್ನು ಕೈಯಲ್ಲಿ ತಕ್ಕೊಂಡು ಸುರೋಚನನು ಮುದ್ದಾಡಿದನು. ಅಷ್ಟರಲ್ಲಿ ದಿವ್ಯವಿಮಾನಾರೂಢನಾಗಿ ಸ್ವರ್ಗದಿಂದ ಮಾತಲಿಯು ಬಂದನು. ಅವನು ಸುರೋಚನನನ್ನು ಕುರಿತು—ಗಂಧರ್ವರಾಜನೇ, ನಿನ್ನ ಶಾಪವಿಮೋಚನವಾದ್ದರಿಂದ ದೇವೇಂದ್ರನು ನಿನ್ನ ಮಾರ್ಗಪ್ರತೀಕ್ಷೆ ಮಾಡುತ್ತಿರುವನು. ಆದ್ದರಿಂದ ನೀನು ತಡಮಾಡದೆ ಹೊರಡು. ಪುತ್ರ ಮೋಹದಲ್ಲಿ ಸಿಲ್ಕಬೇಡ ಎಂದನು. ಗಂಡನು ಸ್ವರ್ಗಕ್ಕೆ ಹೊರಡುವನೆಂದು ತಿಳಿದು ಸತ್ಯವತಿಯು ಶೋಕಾಕುಲಳಾದಳು. ಮತ್ತು ಅವಳು ನುಡಿದಳೇನಂದರೆ—ಮಹಾರಾಜ, ನಿಮ್ಮ ಸಲುವಾಗಿ ನನ್ನ ತಂದೆಯು ನನ್ನನ್ನು ತ್ಯಾಗ ಮಾಡಿದನು. ನೀವು ಈಗ ಸ್ವರ್ಗಕ್ಕೆ ಹೊರಟು ಹೋದರೆ ಅನಾಥಳಾದ ನನ್ನನ್ನು ಯಾರು ಜೋಕೆ ಮಾಡುವರು. ನನ್ನ ಮಗನು ಯಾರ ಮೋರೆ ನೋಡಿ ಕಾಲ ಕಳೆಯಬೇಕು. ಆದ್ದರಿಂದ ನೀವು ಸ್ವರ್ಗಕ್ಕೆ ಹೋಗುವದನ್ನು ಸರ್ವಥಾ ಬಿಟ್ಟು ಬಿಡಬೇಕು. ಹೆಂಡತಿಯ ಮಾತು ಕೇಳಿ ಸುರೋಚನನಿಗೂ ವ್ಯಸನವಾಯಿತು. ಆದರೆ ಅವನು ದೇವೇಂದ್ರನ ಅಪ್ಪಣೆಯ ಮೇರೆಗೆ ಹೋಗಲೇಬೇಕಾದ್ದರಿಂದ ಅವನು ಹೆಂಡತಿಗೆ ಬಗೆಬಗೆಯಿಂದ ಸಮಾಧಾನ ಹೇಳಿ ನೀನು ಸ್ಮರಿಸಿದಾಗ ಬರುವೆನೆಂದು ವಚನ ಕೊಟ್ಟು ಆಕೆಯ ಒಪ್ಪಿಗೆಯನ್ನು ಪಡೆದನು; ಬಳಿಕ ಅವನು ಕಮರಕುಂಬಾರನ ಸಮ್ಮತಿ ಪಡೆದು ಸ್ವರ್ಗಕ್ಕೆ ಹೋದನು.

ಇತ್ತ ಸತ್ಯವತಿಯು ಕಮಟಕುಂಬಾರನ ಮನೆಯಲ್ಲಿ ಉಳಿದಳು. ಆಕೆಯ ಮಗನಿಗೆ ೧೨ದಿನಗಳು ತುಂಬಲು, ಕಮಟನು ಉತ್ಸವಮಾಡಿ ಆ ಶಿಶುವಿಗೆ ವಿಕ್ರಮನೆಂಬ ಹೆಸರಿಟ್ಟನು. ವಿಕ್ರಮನು ಪ್ರತಿನಿತ್ಯ ಶುಕ್ಲಪಕ್ಷದ ಚಂದ್ರನಂತೆ ಬೆಳೆಯಹತ್ತಿದನು. ಅವನ ವರ್ಚಸ್ಸು ಓರಿಗೆಯ ಗೆಳೆಯರ ಮೇಲೆ ಚನ್ನಾಗಿ ಕೂತಿತು. ಅವನ ದೇಹಮಾನವನ್ನೂ, ಸಾಮರ್ಥ್ಯವನ್ನೂ, ಬುದ್ಧಿಯನ್ನೂ ನೋಡಿ ಜನರಿಗೆ ಆಶ್ಚರ್ಯವಾಗುತ್ತಿತ್ತು. ಅವನ ಈ ಪ್ರಶಂಶೆಯು ರಾಜನ ಕಿವಿಯವರೆಗೆ ಹೋಯಿತು. ಆ ಕಾಲಕ್ಕೆ ಅವಂತಿಯಲ್ಲಿ ಶುಭವಿಕ್ರಮನೆಂಬ ರಾಜನಿದ್ದನು. ಅವನು ವಿಕ್ರಮನನ್ನು ನೋಡಿ ಅವನಿಗೆ ಒಂದು ಕೆಲಸವನ್ನು ಕೊಟ್ಟನು. ಮೊದಲು ವಿಕ್ರಮನು ದ್ವಾರ

ಪಾಲಕನಾದನು. ಅಗಸೆಯ ದೊಡ್ಡಬಾಗಿಲದ ಕಾವಲುಗಾರಿಕೆಯು ಅವನ ಪಾಲಿಗೆ ಬಂದಿತು.

ಹೀಗೆ ವಿಕ್ರಮನು ಅಗಸೆಯ ಬಾಗಿಲವನ್ನು ಕಾಯುತ್ತಿರಲು, ಹಿಂದೆ ಹೇಳಿದ ವ್ಯಾಪಾರಸ್ಥರ ಮುಂದೆ ಭರ್ತರಿಯು ಹೇಳಿದ ಸಂಗತಿಯನ್ನು ಕೇಳಿ ಚಿತ್ರಮಾ ರಾಕ್ಷಸನನ್ನು ಸಂಹರಿಸಿ, ಅವನ ರಕ್ತದ ತಿಲಕವನ್ನಿಟ್ಟುಕೊಂಡು ಅವನ ಬಳಿಯಲ್ಲಿದ್ದ ನಾಲ್ಕು ರತ್ನಗಳನ್ನು ಸಂಪಾದಿಸಿದನು. ಆ ರತ್ನಗಳು ಕ್ರಮವಾಗಿ ಹಿರಾ, ಪರಿಸ, ಮೋಹನ, ಚಿಂತಾಮಣಿ ಎಂಬವಾಗಿದ್ದವು. ಇವು ಯಾವದಾದರೊಂದು ಮಹತ್ವದ ಕೆಲಸಕ್ಕೆ ಉಪಯೋಗಬೀಳುವ ವೆಂದು ಅವನು ಅವನ್ನು ಬಳಿಯಲ್ಲಿಟ್ಟುಕೊಂಡನು.

ವಿಕ್ರಮನು ಸಂಹರಿಸಿದಾಗ ಚಿತ್ರಮಾ ರಾಕ್ಷಸನು ಮನುಷ್ಯರೂಪ ವನ್ನು ಧರಿಸಿದ್ದನು. ಕೊಲೆಯಾಗಲು, ಅವನು ರಾಕ್ಷಸ ದೇಹಿಯಾದನು. ಮುಂದೆ ಸ್ವಲ್ಪ ಹೊತ್ತಿನಲ್ಲಿ ಗಂಧರ್ವದೇಹಧಾರಿಯಾಗಿ ವಿಮಾನದಲ್ಲಿ ಕುಳಿ ತನು. ಅದನ್ನು ಕಂಡು ವಿಕ್ರಮನು ಅಚ್ಚರಿಗೊಂಡು ಆ ಬಗ್ಗೆ ಆತನನ್ನು ವಿಚಾರಿಸಿದನು. ಆಗ ಆ ಚಿತ್ರಮಾ ಗಂಧರ್ವನು ತನಗೆ ದೊರೆತ ಶಾಪ ವನ್ನು ಕಥನಮಾಡಿ ಸ್ವರ್ಗಕ್ಕೆ ಹೊರಟು ಹೋದನು.

ಇಷ್ಟೆಲ್ಲ ಸಂಗತಿಯು ಸಂಭವಿಸಿಹೋದಬಳಿಕ ವಿಕ್ರಮನಿಗೆ ಆ ವ್ಯಾಪಾರಸ್ಥರಲ್ಲಿರುವ ಭರ್ತರಿಯ ಕಡೆಗೆ ಲಕ್ಷ್ಯವು ಹೋಯಿತು. ಭರ್ತರಿಯು ಎರಡನೇ ಸಾರೆ ಹೇಳಿದ ಮಾತನ್ನು ವಿಕ್ರಮನು ಅಕ್ಷರಶಃ ಕೇಳಿದ್ದನು. ಆದ್ದರಿಂದ ಅವನು ಭರ್ತರಿಯಲ್ಲಿ ಪೂಜ್ಯಬುದ್ಧಿಯುಳ್ಳವನಾದನ ; ಮತ್ತು ಆ ವ್ಯಾಪಾರಸ್ಥರ ಕಡೆಗೆ ಹೋಗಿ ಭರ್ತರಿಯ ಸಂಗತಿಯನ್ನು ಕೇಳಿಕೊಂಡು ಬರಬೇಕೆಂದು ಹೋದನು. ಆಗ ವ್ಯಾಪಾರಸ್ಥರು ಭರ್ತರಿಯನ್ನು ನಡುವೆ ಕುಳ್ಳಿರಿಸಿ ತಾವು ಸುತ್ತುವರೆದು ಕುಳಿತು ಹರಟೆಯನ್ನು ಹೊಡೆಯುತ್ತಿದ್ದರು. ವಿಕ್ರಮನು ಅವರ ನಡುವೆ ಹೋಗಿ ಭರ್ತರಿಯ ಮುಂದೆ ಕುಳಿತನು. ಹೀಗೆ ಒಮ್ಮಿಂದೊಮ್ಮೆ ಒಬ್ಬ ಹೊಸ ಮನುಷ್ಯನು ತಮ್ಮ ಗುಂಪಿನಲ್ಲಿ ಬಂದು ಕುಳಿ ತುಕೊಳ್ಳಲು, ವ್ಯಾಪಾರಸ್ಥರು ಮಾತನ್ನು ನಿಲ್ಲಿಸಿ ಆಗಂತುಕನ ವಿಷಯವಾಗಿ ಕೇಳಿದರು. ಆಗ ವಿಕ್ರಮನು:—ತಾನು ರಾಜದೂತನಿದ್ದು, ಎದುರಿಗೆ ಕಾಣಿ ಸುವ ದೊಡ್ಡ ಬಾಗಿಲು ಕಾಯುತ್ತೇನೆ, ಎಂದು ಹೇಳಿ ನುಡಿದನೇನಂದರೆ—

ನೀವು ಕಳ್ಳರು ಬರುವ ಸುದ್ದಿಯನ್ನು ಮೊದಲೇ ಅರಿತುಕೊಂಡಂತೆ ತೋರು ತ್ತದೆ; ಅಂತೇ ಪಾರಾದಿರಿ; ಆದರೆ ಈ ಸಂಗತಿಯು ನಿಮಗೆ ಮುಂಗಡ ವಾಗಿ ಹ್ಯಾಗೆ ತಿಳಿಯಿತು? ಎಂದು ಕೇಳಿದನು. ವಿಕ್ರಮನ ಈ ಪ್ರಶ್ನೆಗೆ ಆ ವ್ಯಾಪಾರಸ್ಥರು ಭರ್ತರಿಯ ಕಡೆಗೆ ಬೊಟ್ಟುಮಾಡಿ ಇವನಿಂದಲೇ ನಾವು ಇಂದು ಪಾರಾದೆವೆಂದು ನುಡಿದು ಎಲ್ಲ ಸಂಗತಿಯನ್ನು ಹೇಳಿದರು.

ಹೀಗೆ ನಿರಾಯಾಸವಾಗಿ ಭರ್ತರಿಯ ಪರಿಚಯವಾಗಲು, ವಿಕ್ರಮನು ಅವನೊಡನೆ ಬಹಳ ಹೊತ್ತು ಹರಟೆ ಹೊಡೆದು ಪುನಃ ತನ್ನ ಅಗಸೆಯ ಬಾಗಿಲ ಕಡೆಗೆ ಸಾಗಿದನು. ಅಷ್ಟರಲ್ಲಿ ಹಾದಿಯಲ್ಲಿ ಅವನಿಗೆ ಸುಂಕದ ಕಟ್ಟೆಯ ಮಾಲಕನು ಭೆಟ್ಟಿಯಾದನು. ವಿಕ್ರಮನ ಮನಸ್ಸಿನಲ್ಲಿ ಆ ಮಾಲಕ ನಿಗೆ ಭೆಟ್ಟಿಯಾಗುವದಿತ್ತು. ಅನಾಯಾಸವಾಗಿ ಆತನೇ ಎದುರಿಗೆ ಬರಲು, ವಿಕ್ರಮನು ಸಮಾಧಾನಬಟ್ಟು ಆ ಸುಂಕದವನನ್ನು ಕರೆದು ನುಡಿದನೇನಂದರೆ ಸುಂಕದೊಡೆಯನೇ,ನೀನು ಈ ದಿನ ಈ ಧರ್ಮಶಾಲೆಯಲ್ಲುಳಿದ ವ್ಯಾಪಾರ ಸ್ಥರ ಕಡೆಯಿಂದ ಸುಂಕವನ್ನು ತಕ್ಕೊಳ್ಳಬೇಡ. ಅವರ ಸುಂಕದ ಮೂರು ಪಟ್ಟು ಹಣವನ್ನು ನಾನು ನಿನಗೆ ಕೊಡುತ್ತೇನೆ; ಆದರೆ ನೀನು ಮಾಡಬೇಕಾ ದದ್ದೇನಂದರೆ, ಆ ವ್ಯಾಪಾರಸ್ಥರಲ್ಲಿ ಭರ್ತರಿ ಎಂಬ ನನ್ನ ಬಂಧುವೊಬ್ಬ ನಿದ್ದಾನೆ. ಅವನು ಬಹಳ ದಿವಸಗಳಿಂದ ನಮ್ಮನ್ನು ಬಿಟ್ಟುಹೋದದ್ದರಿಂದ ನನ್ನ ಗುರುತು ಹಿಡಿಯಲಾರನು. ಆದ್ದರಿಂದ ನೀನು ಈ ಕೆಲಸದಲ್ಲಿ ನನಗೆ ಸಹಾಯ ಮಾಡಬೇಕು. ಆ ವ್ಯಾಪಾರಸ್ಥರಿಂದ ಆತನನ್ನು ನೀನು ನಿನ್ನ ವಶಕ್ಕೆ ತೆಗೆದುಕೋ; ಬಳಿಕ ಅವನನ್ನು ನನಗೆ ಒಪ್ಪಿಸು. ಅಂದರೆ ನನ್ನ ಬಂಧುವನ್ನು ನನಗೆ ಒಪ್ಪಿಸಿದ ಪುಣ್ಯವು ನಿನಗೆ ಬರುವದು. ''

ಈ ಮೇರೆಗೆ ವಿಕ್ರಮನು ನುಡಿಯಲು, ದ್ರವ್ಯಲೋಭದಿಂದ ಹಾಗೆ ಮಾಡಲು ಆ ಸುಂಕದವನು ಒಪ್ಪಿಕೊಂಡನು. ಬಳಿಕ ಅವನು ಬಹಿರ್ದೆಶೆಗೆ ಹೋಗಿ ಮುಖಪ್ರಕ್ಷಾಲನ ಮಾಡಿಕೊಂಡು ಸುಂಕದ ಕಟ್ಟೆಗೆ ಹೋದನು. ಅಷ್ಟರಲ್ಲಿ ಆ ವ್ಯಾಪಾರಸ್ಥರ ಮುಖಂಡನು ಸುಂಕದ ಕಟ್ಟೆಗೆ ಬಂದನು; ಮತ್ತು ನಮ್ಮ ಸುಂಕವೆಷ್ಟಾಗುವದು? ಲೆಕ್ಕ ಮಾಡಬೇಕೆಂದು ಹೇಳಿದನು. ಸುಂಕದವನು ಲೆಕ್ಕ ಮಾಡಿ ಪಟ್ಟಿಯನ್ನು ಮುಂದಿಟ್ಟನು. ಆ ಪಟ್ಟಿಯಲ್ಲಿ ಇದ್ದಷ್ಟು ಹಣವನ್ನು ವ್ಯಾಪಾರಸ್ಥರ ಮುಖಂಡನು ಅವನ ಮುಂದಿಟ್ಟನು.

ಇದರ ಮೂರಷ್ಟು ಹಣ ಕೊಡುವೆನೆಂದು ವಿಕ್ರಮನು ಹೇಳಿದ್ದರಿಂದ ಸುಂಕದವನು ಆ ಹಣವನ್ನು ಸ್ವೀಕರಿಸದೆ ನುಡಿದನೇನಂದರೆ:—" ಎಲೈ ವ್ಯಾಪಾರಸ್ಥನೇ, ನನಗೆ ಈ ಹಣ ಬೇಡ; ನಿಮ್ಮೆಲ್ಲರ ಸುಂಕವು ಮುಟ್ಟಿತೆಂದು ಪಾವತಿಯನ್ನು ಕೊಡುತ್ತೇನೆ; ಆದರೆ ನಿಮ್ಮ ಬಳಿಯಲ್ಲಿ ಭರ್ತರಿ ಎಂಬ ಹೆಸರಿನ ಒಬ್ಬ ಹುಡುಗನಿರುವನು. ಅವನನ್ನು ನಮ್ಮ ವಶಕ್ಕೆ ಒಪ್ಪಿಸು. ನಮಗೆ ಉದ್ರೀ ವಸೂಲ ಮಾಡುವ ಕೆಲಸಕ್ಕೆ ಅವನು ಯೋಗ್ಯನಿರುತ್ತಾನೆ. ಅವನ ಹೊಟ್ಟೆ-ಬಟ್ಟೆಯ ವಿಚಾರವನ್ನು ನಾವು ನೋಡಿಕೊಳ್ಳುತ್ತೇವೆ. "

ಸುಂಕದವನ ಮಾತಿಗೆ ಆ ವ್ಯಾಪಾರಸ್ಥರ ಮುಖಂಡನು ಒಪ್ಪಿಕೊಂಡನು. ಅವನು ಮೂರ್ಖನಿದ್ದದರಿಂದ ಭರ್ತರಿಯ ಘನವಾದ ಯೋಗ್ಯತೆಯು ಅವನಿಗೆ ಗೊತ್ತಾಗಲಿಲ್ಲ. ಸುಂಕದ ಹಣವನ್ನು ತಾನು ಎತ್ತಿಹಾಕಿ ಭರ್ತರಿಯನ್ನು ಅವನಿಗೆ ಒಪ್ಪಿಸಿ ಬಿಡಬೇಕೆಂದು ಯೋಚಿಸಿ ಆ ಪ್ರಕಾರ ಮಾಡಿದನು. ಭರ್ತರಿಯು ಸುಂಕದವನ ವಶಕ್ಕೆ ಹೋದನು. ಬಳಿಕ ಆ ವ್ಯಾಪಾರಿಗಳು ಧಾನ್ಯವನ್ನು ಮಾರಿ ತಮ್ಮ ಗ್ರಾಮಕ್ಕೆ ಹೋದರು

ವಿಕ್ರಮನು ಸುಂಕದವನಿಗೆ ಭೆಟ್ಟಿಯಾದನು. ಆಗ ಅವನು ಭರ್ತರಿಯನ್ನು ಸಂಪಾದಿಸಿದ್ದೇನೆಂದು ಹೇಳಿ ಹಣವನ್ನು ಕೇಳಿದನು. ವಿಕ್ರಮನ ಬಳಿಯಲ್ಲಿ ಅಷ್ಟು ಹಣವಿಲ್ಲದ್ದರಿಂದ ಅವನು ತನ್ನ ಬಳಿಯಲ್ಲಿರುವ ನಾಲ್ಕು ರತ್ನಗಳಲ್ಲಿ ಒಂದನ್ನು ಅವನ ಕೈಯಲ್ಲಿಟ್ಟು—ಸುಂಕದೊಡೆಯನೇ, ನಾನು ಹಣಕೊಡುವವರೆಗೆ ಈ ರತ್ನವು ನಿನ್ನ ಬಳಿಯಲ್ಲಿರಲಿ ಸ್ವಲ್ಪ ದಿವಸಗಳಲ್ಲಿ ಹಣಕೊಟ್ಟು ಇದನ್ನು ಒಯ್ಯುತ್ತೇನೆ ಎಂದು ಹೇಳಿದನು ಬಹಳ ಬೆಲೆ ಬಾಳುವ ರತ್ನವು ಕೈಗೆ ಬೀಳಲು ಸುಂಕದವನು ಹಿಗ್ಗಿದನು. ಮತ್ತು ವಿಕ್ರಮನ ಮಾತಿಗೆ ಒಪ್ಪಿಕೊಂಡನು. ಆಗ ವಿಕ್ರಮನು—ಭರ್ತರಿಯ ಗುರ್ತ ನನಗಿಲ್ಲ. ಅವನು ನಮ್ಮ ಮನೆಯಲ್ಲಿ ಊಟ ಮಾಡುವಂತೆ ಅವನಿಗೆ ಹೇಳಿರಿ ಎಂದನು. ಸುಂಕದವನು ಅದರಂತೆ ಹೇಳಲು ಭರ್ತರಿಯು ವಿಕ್ರಮನ ಮನೆಗೆ ಊಟಕ್ಕೆ ಹೋದನು. ವಿಕ್ರಮನು ಅವನನ್ನು ಮನೆಗೆ ಕರೆದೊಯ್ದು, ಪಡಸಾಲೆಯ ಮೇಲೆ ಕುಳ್ಳಿರಿಸಿ ಅವನೊಡನೆ ಮನಸೋಕ್ತವಾಗಿ ಹರಟೆಹೊಡೆದು ಒಳಗೆ ಹೋಗಿ ತನ್ನ ತಾಯಿಗೆ ಭರ್ತರಿಯ ಸಂಗತಿಯನ್ನು ಹೇಳಿದನು. ಸತ್ಯವತಿಯು ಕೌತುಕದಿಂದ ಅವನನ್ನು ನೋಡಲಾರಂಭಿಸಿ

ದಳು. ತನ್ನ ಮಾತಿನ ಪರಿಣಾಮವು ತಾಯಿಯ ಮೇಲೆ ಚನ್ನಾಗಿ ಆಗಲಿ ಲ್ಲೆಂದು ತಿಳಿದು ವಿಕ್ರಮನು ಪುನಃ ನುಡಿದನೇನಂದರೆ:—"ಅವ್ವಾ, ಈ ಭರ್ತರಿಯು ಸಾಮಾನ್ಯ ಪುರುಷನೆಂದು ತಿಳಿಯಬೇಡ; ಅವನು ಅವತಾರೀ ಪುರುಷನಿರುತ್ತಾನೆ. ಇದರ ಅನುಭವವನ್ನು ನಾನು ತಕ್ಕೊಂಡಿದ್ದೇನೆ. ನೀನು ಇವನನ್ನು ಕೇವಲ ಹಿರೇಮಗನೆಂದು ತಿಳಿ; ಮಾತೃಪ್ರೇಮದಿಂದ ಅವನನ್ನು ನೋಡು. ಮುಂದೆ ಪ್ರಸಂಗ ಬಂದಾಗ ಅವನಿಂದ ನನಗೆ ಬಹಳ ಸಹಾಯ ವಾಗುವದು."

ಮಗನ ಮಾತನ್ನು ಕೇಳಿ ಸತ್ಯವತಿಯು ಭರ್ತರಿಯ ವಿಷಯವಾಗಿ ಪ್ರೇಮವನ್ನು ತಾಳಿದಳು. ಆ ದಿನ ಊಟಕ್ಕೆ ಕುಳಿತಾಗ ಸತ್ಯವತಿಯ ಪ್ರೇಮಾದರಗಳನ್ನು ನೋಡಿ ಭರ್ತರಿಗೆ ಸಮಾಧಾನವಾಯಿತು. ಊಟವಾದ ಬಳಿಕ ವಿಕ್ರಮನು ಅವನನ್ನು ದುರ್ಗವನ್ನು ನೋಡುವದಕ್ಕೆ ಕರೆದೊಯ್ದನು. ಸಂಜೆಗೆ ಮನೆಗೆ ಬಂದು ಪುನಃ ಊಟಮಾಡಿ ಮಲಗಿದರು. ವಿಕ್ರಮನು ಸುಂಕದವನಿಂದ ಭರ್ತರಿಗೆ ನಮ್ಮ ಕೆಲಸ ಬಿದ್ದಾಗ ನಿನ್ನನ್ನು ಕರೆಯಿಸು ವೆವು. ಅಲ್ಲಿಯವರೆಗೆ ನೀನು ವಿಕ್ರಮನ ಮನೆಯಲ್ಲಿರು ಎಂದು ಹೇಳಿಸಿದನು. ಭರ್ತರಿಯು ಅದಕ್ಕೆ ಸಮ್ಮತಿಸಿದನು.

ಈ ಮೇರೆಗೆ ಭರ್ತರಿಯು ವಿಕ್ರಮನ ಮನೆಯಲ್ಲಿರಲಾರಂಭಿಸಿದನು. ವಿಕ್ರಮನ ಹಾಗು ಅವನ ತಾಯಿಯ ಪ್ರೇಮಾದರಗಳಿಂದ ಅವನ ಮನಸ್ಸು ಪ್ರಸನ್ನವಾಯಿತು. ಬರಬರುತ್ತ ಅವರಿಬ್ಬರಲ್ಲಿ ಬಹಳ ಸ್ನೇಹವು ಕೂಡಿತು. ಒಬ್ಬರನ್ನೊಬ್ಬರು ಒಂದು ಕ್ಷಣಕಾಲ ಸಹ ಅಗಲದಷ್ಟು ಪ್ರೇಮವು ಅವ ರಲ್ಲಿ ಉಂಟಾಯಿತು.



# ಅಧ್ಯಾಯ ೨೭

## ಭರ್ತರಿ-ಪಿಂಗಲೆಯರ ವಿವಾಹ.

ಅವಂತಿಯ ರಾಜನಾದ ಶುಭವಿಕ್ರಮನಿಗೆ ಗಂಡು ಮಕ್ಕಳಿದ್ದಿಲ್ಲ. ಮೇಧಾವತಿಯೆಂಬ ಓರ್ವ ಸುಂದರಿಯಾದ ಮಗಳಿದ್ದಳು. ಆಕೆಯು ಉಪ ವರಳಾದಳು. ಆಗ ರಾಜನು ಮನಸ್ಸಿನಲ್ಲಿ:—ನಾನು ಮುದುಕನಾದೆನು; ಇನ್ನು ನನಗೆ ಗಂಡುಮಕ್ಕಳಾಗುವ ಸಂಭವವಿಲ್ಲ. ಆದ್ದರಿಂದ ಮುಂದೆ ರಾಜ್ಯಕ್ಕೆ ಯಾರನ್ನು ಪಟ್ಟಕ್ಕೆ ಕೂಡ್ರಿಸಬೇಕು? ಮಗಳನ್ನು ಯಾರಿಗೆ ಕೊಟ್ಟು ಲಗ್ನ ಮಾಡಬೇಕು? ಎಂದು ಯೋಚಿಸಿ ಮಂತ್ರಿಯನ್ನು ಕರೆಯಿಸಿ ದನು; ಮತ್ತು ಆತನಿಗೆ ತನ್ನ ಮನಸ್ಸಿನ ದುಃಖವನ್ನು ಶ್ರುತಗೊಳಿಸಿದನು. ಮಂತ್ರಿಯು ರಾಜನ ಮಾತನ್ನು ಕೇಳಿ ಶಾಂತಮನಸ್ಸಿನಿಂದ ವಿಚಾರಮಾಡಿ ನುಡಿದನೇನಂದರೆ:—"ಮಹಾರಾಜ, ಈ ಬಗ್ಗೆ ತಾವು ಇಷ್ಟೊಂದು ಚಿಂತೆ ಮಾಡುವ ಕಾರಣವಿಲ್ಲ. ತಮಗೆ ಗಂಡುಮಕ್ಕಳಿಲ್ಲದಿದ್ದರೂ ಕುಲದೀಪಕ ಳಾದ ಓರ್ವ ಹೆಣ್ಣುಮಗಳಿರುವಳು. ಆಕೆಯಿಂದಲೇ ನಿಮ್ಮ ಸಮಸ್ತ ಚಿಂತೆಯು ಪರಿಹೃತವಾಗುವದು. ಮೊದಲು ನಿಮ್ಮ ಮಗಳ ಸ್ವಯಂವರ ವನ್ನು ಮಾಡಿರಿ; ಬಳಿಕ ಅಳಿಯನಿಗೆ ರಾಜ್ಯಪ್ರದಾನ ಮಾಡಿರಿ. ಅಂದರೆ ನಿಮ್ಮ ಚಿಂತೆಯು ದೂರಾಗುವದು."

ಈ ಮೇರೆಗೆ ಮಂತ್ರಿಯು ಮಾತನಾಡಲು, ಅಳಿಯನಿಗೆ ರಾಜ್ಯವನ್ನು ಕೊಡಬೇಕೆಂಬಮಾತು ರಾಜನಿಗೆ ಸಮ್ಮತವಾಯಿತು; ಆದರೆ ಮಗಳ ಸ್ವಯಂ ವರದ ವಿಷಯದಲ್ಲಿ ರಾಜನಿಗೂ, ಮಂತ್ರಿಗೂ ಸ್ವಲ್ಪ ಮತಭೇದವಿತ್ತು. ಆಗ ಶುಭವಿಕ್ರಮನು:—ಮಂತ್ರಿಶ್ರೇಷ್ಠನೇ, ನೀನಾಡಿದ ಮಾತು ನನಗೆ ಸಮ್ಮತ ವಿದೆ; ಆದರೆ ನಾನು ಹೀಗೆ ಯೋಚನೆ ಮಾಡಿರುತ್ತೇನೆ—ಮೊದಲು ಆನೆಯ ಸೊಂಡೆಯಲ್ಲಿ ಮಾಲೆಯನ್ನು ಕೊಡಬೇಕು. ಅದು ಯಾರ ಕೊರಳಿಗೆ ಮಾಲೆ

ಹಾಕುವದೋ, ಆ ಭಾಗ್ಯಶಾಲಿಯನ್ನು ಕರೆತಂದು ರಾಜ್ಯಭಾರವನ್ನು ಅವನಿಗೊಪ್ಪಿಸಿ ಬಳಿಕ ಅವನಿಗೆ ಮಗಳನ್ನು ಕೊಡಬೇಕೆಂದು ಮಾಡಿದ್ದೇನೆ, ಎಂದು ನುಡಿದನು. ರಾಜನ ಮಾತಿಗೂ ಮಂತ್ರಿಯ ಮಾತಿಗೂ ಒಹಳ ವ್ಯತ್ಯಾಸವಿರದೆ ಇಬ್ಬರ ಅಭಿಪ್ರಾಯವೂ ಒಂದೇಯಾದ್ದರಿಂದ ರಾಜನ ಇಚ್ಛೆಯಂತೆ ಕಾರ್ಯವನ್ನು ಜರುಗಿಸುವದು ಗೊತ್ತಾಯಿತು. ಅವಂತೀನಗರಿಯು ಶೃಂಗರಿಸಲ್ಪಟ್ಟಿತು. ಊರಲ್ಲಿ ಗುಡಿ ತೋರಣಗಳು ಕಟ್ಟಲ್ಪಟ್ಟವು. ಒಂದು ವಿಸ್ತೀರ್ಣವೂ, ಸುಂದರವೂ ಆದ ಸಭಾಮಂಟಪವನ್ನು ನಿರ್ಮಿಸಿದರು. ಈ ಸಂಗತಿಯು ದೇಶಾಂತರಗಳಿಗೆ ಹೋಯಿತು. ಶುಭವಿಕ್ರಮರಾಜನ ಮಗಳನ್ನು ಮದುವೆಯಾಗುವ ಇಚ್ಛೆಯಿಂದಲೂ, ಅವಂತೀನಗರಿಯ ಅರಸೊತ್ತಿಗೆಯನ್ನು ಸಂಪಾದಿಸುವ ಇಚ್ಛೆಯಿಂದಲೂ, ಅನೇಕ ಜನರು ಸೇರಿದರು. ಹಲವು ಜನ ರಾಜಪುತ್ರರೂ ಬಂದರು.

ಗೊತ್ತಾದ ದಿವಸ ಸಭಾಮಂಟಪದಲ್ಲಿ ಒಂದು ಶೃಂಗರಿಸಿದ ಬಹು ದೊಡ್ಡ ಆನೆಯನ್ನು ತಂದರು. ಆ ಆನೆಯು ಅನೇಕ ಬಗೆಯ ಅಲಂಕಾರಗಳಿಂದ ವಿಭೂಷಿತವಾಗಿತ್ತು. ಅದರ ಬೆನ್ನ ಮೇಲಿಂದ ಜೋಲುಬಿದ್ದಿರುವ ಬಂಗಾರದ ಕಿರುಗಂಟೆಗಳ ಸುನಾದವು ಅಲ್ಲಿ ನೆರೆದ ರಾಜಪುತ್ರರ ಮನಸ್ಸನ್ನು ಆಕರ್ಷಿಸುತ್ತಿತ್ತು. ಆ ಆನೆಯ ಮೇಲೆ ರತ್ನಖಚಿತವಾದ ಅಂಬಾರಿಯಿತ್ತು. ಆ ಅಂಬಾರಿಯಲ್ಲಿ ರಾಜನು ಮಂತ್ರಿಯೊಡನೆ ಕುಳಿತುಕೊಂಡನು ಬಳಿಕ ಆ ಆನೆಯ ಸೊಂಡೆಯಲ್ಲಿ ಒಂದು ಸುಂದರವಾದ ಮಾಲೆಯನ್ನು ಕೊಟ್ಟರು. ಯಾವ ಭಾಗ್ಯಶಾಲಿಗೆ ಆನೆಯು ಮಾಲೆಯನ್ನು ಹಾಕುವದೋ ಎಂದು ಜನರು ಕೌತುಕದಿಂದ ನೋಡಲಾರಂಭಿಸಿದರು. ಆನೆಯು ಅಲ್ಲಿ ನೆರೆದ ಸಮಸ್ತ ರಾಜಪುತ್ರರನ್ನೂ ತ್ಯಜಿಸಿ ಸಭಾಮಂಟಪದಿಂದ ಹೊರಗೆ ಹೊರಟಿತು. ಆ ನಗರವಾಸಿ ಪುರುಷರೆಲ್ಲರೂ ಉತ್ಸವ ಪ್ರಕಾರದಿಂದ ಅಲಂಕೃತರಾಗಿ ಬೀದಿಯಲ್ಲಿ ಸಾಲ್ಗೊಂಡು ನಿಂತಿದ್ದರು. ಆನೆಯು ಅವರಲ್ಲಿ ಯಾರಿಗೂ ಮಾಲೆಯನ್ನು ಹಾಕದೆ, ನೆಟ್ಟಗೆ ಊರಹೊರಕ್ಕೆ ಹೋಯಿತು. ಅಲ್ಲಿ ಒಂದು ಕೊತ್ತಳವಿದ್ದು, ಆ ಕೊತ್ತಳದ ಮೇಲೆ ಅಗಂಜನ ಕಾವಲುಗಾರರು ಕುಳಿತಿದ್ದರು. ಆನೆಯು ಆ ಕೊತ್ತಳದ ಬುಡಕ್ಕೆ ಹೋಗಿ ನಿಂತುಕೊಂಡಿತು. ಅದನ್ನು ಕಂಡು ರಾಜನು ಆ ಕೊತ್ತಳದ ಮೇಲಿನ ಕಾವಲುಗಾರರನ್ನು

ಕೆಳಗೆ ಕರೆದನು. ಅವರು ಒಬ್ಬೊಬ್ಬರೇ ಕ್ರಮದಿಂದ ಕೆಳಗೆ ಇಳಿದರು. ಅವರಲ್ಲಿ ವಿಕ್ರಮನಿದ್ದನು. ಅವನು ಎಲ್ಲರಕ್ಕೂ ಹಿಂದಿನಿಂದ ಇಳಿದನು. ವಿಕ್ರಮನನ್ನು ಕಂಡಕೂಡಲೆ ಆನೆಯು ಅವನು ತನ್ನಕಡೆಗೆ ಬರುವ ದಾರಿಯನ್ನು ನೋಡದೆ ಧಾವಿಸಿ ಹೋಗಿ ಅವನ ಕೊರಳಿಗೆ ಮಾಲೆಯನ್ನು ಹಾಕಿತು. ಹೀಗೆ ಆನೆಯು ವಿಕ್ರಮನ ಕೊರಳಿಗೆ ಮಾಲೆಯನ್ನು ಹಾಕಲು, ಜಯಭೇರಿಯು ಮೊಳಗಿತು. ಎಲ್ಲರೂ ಜಯಜಯಕಾರವನ್ನು ಮಾಡಿದರು.

ಕೂಡಲೆ ರಾಜನು ಆನೆಯಿಂದಿಳಿದು ವಿಕ್ರಮನನ್ನು ಆದರದಿಂದ ಕರೆದುಕೊಂಡು ತನ್ನ ಜೊತೆಗೆ ಅಂಬಾರಿಯಲ್ಲಿ ಕುಳ್ಳಿರಿಸಿಕೊಂಡನು; ಮತ್ತು ಮಂಗಲವಾದ್ಯಗಳ ಘೋಷದೊಡನೆ ಅರಮನೆಗೆ ಹೋದನು. ರಾಜನಿಗೆ ಪರಮಸಂತೋಷವಾಯಿತು. ಆದರೆ ವಿಕ್ರಮನು ಕುಂಬಾರನೆಂದು ತಿಳಿದು ಬರಲು ಅವನಿಗೆ ತುಂಬಾ ವಿಷಾದವಾಯಿತು.

ಬಳಿಕ ರಾಜನು ವಿಕ್ರಮನ ಸಂಗಡ ಕೆಲಸ ಮಾಡುತ್ತಿದ್ದ ಕಾವಲುಗಾರರನ್ನು ಕರೆದು ವಿಕ್ರಮನ ಜಾತಿಯ ಬಗ್ಗೆ ವಿಚಾರಿಸಿದನು. ಅವರು ವಿಕ್ರಮನು ಕುಂಬಾರನೆಂದು ಹೇಳಿದರು. ಆದರೆ ರಾಜನಿಗೆ ವಿಕ್ರಮನ ಭವ್ಯದೇಹ, ಅವನ ತೇಜಸ್ಸು, ಬುದ್ಧಿವಂತಿಕೆ ಮೊದಲಾದವುಗಳನ್ನು ನೋಡಿ ಈತನು ಕುಂಬಾರನಿರಲಿಕ್ಕಿಲ್ಲೆಂಬ ಸಂಶಯವು ಬಂದಿತು. ಆಗ ಅವನು ವಿಕ್ರಮನ ಪಾಲಕನಾದ ಕಮಟಕುಂಬಾರನನ್ನು ಕರೆಯಿಸಿ ಏಕಾಂತದಲ್ಲಿ ವಿಚಾರಿಸಿದನು. ಕಮಟನು ವಿಕ್ರಮನ ಜನ್ಮದ ವಿಷಯದಲ್ಲಿ ಸತ್ಯಸಂಗತಿಯನ್ನು ಕಥನ ಮಾಡಿದನು. ಕಮಟನು ಹೇಳಿದ ಸಂಗತಿಯಿಂದ ರಾಜನಿಗೆ ತುಂಬಾ ಸಂತೋಷವಾಯಿತು. ತನ್ನ ಅಳಿಯನು ಮಿಥಿಲಾನಗರಿಯ ರಾಜನಾದ ಸತ್ಯವರ್ಮನ ಮೊಮ್ಮಗನೆಂಬದನ್ನೂ ವಿಕ್ರಮನ ತಾಯಿಯಾದ ಸತ್ಯವತಿಯು ಆ ರಾಜನ ಮಗಳೆಂಬದನ್ನೂ ತಿಳಿದು ಅವನು ಕೂಡಲೆ ಸತ್ಯವರ್ಮನಿಗೆ ಪತ್ರ ಬರೆದು ದೂತರನ್ನು ಕಳುಹಿದನು. ಶುಭವಿಕ್ರಮನ ಪತ್ರವನ್ನು ನೋಡಿ ಸತ್ಯವರ್ಮನು ಸಂತೋಷ ಹೊಂದಿ ಮೊಮ್ಮಗನ ಲಗ್ನಕ್ಕಾಗಿ ಪರಿವಾರದೊಡನೆ ಬಂದನು. ಉಭಯರಾಜರ ಭೆಟ್ಟಿಯಾಯಿತು. ಸತ್ಯವರ್ಮನು ಮಗಳನ್ನೂ ಮೊಮ್ಮಗನನ್ನೂ ನೋಡಿ ಸಂತೋಷಬಟ್ಟನು.

ಶುಭವರ್ಮನು ವಿಕ್ರಮನಿಗೆ ರಾಜ್ಯಾಭಿಷೇಕ ಮಾಡಿ ಮಗಳನ್ನು ಕೊಟ್ಟು ಲಗ್ನ ಮಾಡಿದನು. ತನಗೆ ಗಂಡುಮಕ್ಕಳಿಲ್ಲದ್ದರಿಂದ ಸತ್ಯವರ್ಮನೂ ತನ್ನ ಮಿಥಿಲಾರಾಜ್ಯವನ್ನು ಮೊಮ್ಮಗನಿಗೆ ಕೊಟ್ಟುಬಿಟ್ಟನು. ಹೀಗೆ ದ್ವಾರಪಾಲಕನಾದ ವಿಕ್ರಮನು ಎರಡು ರಾಜ್ಯಗಳ ರಾಜನಾದನು.

ಭರ್ತರಿಯ ಪುಣ್ಯದಿಂದ ತನಗೆ ರಾಜ್ಯವು ಸಿಕ್ಕಿತೆಂದು ವಿಕ್ರಮನು ತಿಳಿದನು; ಮತ್ತು ಆತನನ್ನು ತನ್ನ ಯುವರಾಜನನ್ನಾಗ ಮಾಡಿಕೊಂಡನು. ಭರ್ತರಿಗೂ ವಿಕ್ರಮನಿಗೂ ಸ್ನೇಹವು ಹೆಚ್ಚುತ್ತಲೇ ಇತ್ತು. ಭರ್ತರಿಯು ತನ್ನ ಅಣ್ಣನೆಂದೇ ವಿಕ್ರಮನು ಹೇಳುತ್ತಿದ್ದನು. ಹೀಗಿರಲು ವಿಕ್ರಮರಾಜನ ಸುಮಂತನೆಂಬವನು ಭರ್ತರಿಗೆ ಹೆಣ್ಣು ಕೊಡಬೇಕೆಂದು ಮಾಡಿದನು. ಅವನು ಭರ್ತರಿಯು ವಿಕ್ರಮನ ಅಣ್ಣನೆಂದೇ ಭಾವಿಸಿದ್ದನು. ಯಾಕೆಂದರೆ ಜನರ ಮುಂದೆ ವಿಕ್ರಮನು ಹಾಗೇ ಹೇಳುತ್ತಿದ್ದನು. ಆದರೆ ವಿಚಾರಾಂತ್ಯದಲ್ಲಿ ಭರ್ತರಿಯು ವಿಕ್ರಮನ ಅಣ್ಣನಲ್ಲೆಂಬದು ಅವನಿಗೆ ಗೊತ್ತಾಯಿತು. ಆದ್ದರಿಂದ ಭರ್ತರಿಯ ಕುಲಶೀಲಗಳ ವಿಷಯವಾಗಿ ಸುಮಂತನಿಗೆ ಚಿಂತೆಯುತ್ಪನ್ನವಾಯಿತು. ಅವನು ಕಮಟ ಹಾಗು ಸತ್ಯವತಿಯರನ್ನು ಈ ಬಗ್ಗೆ ವಿಚಾರಿಸಿದನು. ಅವರು ಭರ್ತರಿಯು ಯಾರು? ಅತನು ಯಾರ ಮಗನು? ಅವನ ಕುಲವಾವುದು? ಎಂಬ ಯಾವ ಸಂಗತಿಗಳೂ ನಮಗೆ ಗೊತ್ತಿಲ್ಲವೆಂದು ಹೇಳಿದರು. ಇದರಿಂದ ಸುಮಂತನ ಚಿಂತೆಯು ಮತ್ತಿಷ್ಟು ಹೆಚ್ಚಿತು. ಆಗ ಅವನು ಈ ವಿಷಯದಲ್ಲಿ ಭರ್ತರಿಯನ್ನೇ ಕೇಳಬೇಕೆಂದು ನಿಶ್ಚಯಿಸಿ ಅದರಂತೆ ಅವನನ್ನು ಕೇಳಿದನು.

ಸುಮಂತನ ಮಾತುಗಳನ್ನು ಕೇಳಿ ಭರ್ತರಿಯು ತನ್ನ ಪೂರ್ವವೃತ್ತವನ್ನು ಹೇಳಿದನು:—"ನಾನು ಮಿತ್ರವರುಣ ನಾಮಕ ಗಂಧರ್ವನ ಮಗನು. ನನ್ನ ಜನ್ಮವು ಭರ್ತರಿಯೆಂಬ ಒಂದು ಭಿಕ್ಷಾಪಾತ್ರೆಯಲ್ಲಿ ಆಗಿರುವದು. ಮೊದಲು ನನ್ನನ್ನು ಒಂದು ಚಿಗರೆಯು ಸಂರಕ್ಷಿಸಿತು. ಆಬಳಿಕ ಒಬ್ಬ ಭಾಟನು ನನ್ನನ್ನು ಮನುಷ್ಯರಲ್ಲಿ ತಂದನು." ಎಂಬ ಸಂಗತಿ ಮೊದಲುಮಾಡಿಕೊಂಡು ವಿಕ್ರಮನ ಬಳಿಗೆ ಬರುವವರೆಗಿನ ಎಲ್ಲ ಸಂಗತಿಗಳನ್ನು ಹೇಳಿದನು.

ಭರ್ತರಿಯು ಈ ಮಾತುಗಳು ಸುಮಂತನಿಗೆ ನಿಜವೆಂದು ಕಂಡುಬರಲಿಲ್ಲ. ಆಗ ಅವನು ಭರ್ತರಿಯನ್ನು ಕುರಿತು:—ಭರ್ತರೀ, ನಿನ್ನ ಮಾತೃಸ್ಥಾನದಲ್ಲಿದ್ದ ಭರ್ತರೀಪಾತ್ರೆಯು ಒಡೆದು ಹೋಗಿರಬಹುದು; ಆದರೆ ನಿನ್ನ ಪಿತೃಸ್ಥಾನದಲ್ಲಿ ಮಿತ್ರಾವರುಣಿಯು ಇರುವನಷ್ಟೇ; ಆದರಿಂದ ಅವನು ನಿನ್ನ ಲಗ್ನಕಾಲಕ್ಕೆ ಪ್ರತ್ಯಕ್ಷ ಇರಬೇಕಾಗುವದು, ಎಂದನು. ಭರ್ತರಿಗೆ ಈ ಮಾತುಗಳು ನಿಜವೆಂದು ತೋರಿದವು. ಕೂಡಲೆ ಅವನು ರಾಜಾಂಗಣಕ್ಕೆ ಹೋಗಿ ಆಕಾಶದ ಕಡೆಗೆ ಮೋರೆಯನ್ನೆತ್ತಿ ಮಿತ್ರಾವರುಣನನ್ನು ಧ್ಯಾನಿಸಿದನು. ತನ್ನ ಮಗನು ತನ್ನನ್ನು ಸ್ಮರಿಸುವನೆಂದು ತಿಳಿದು ಮಿತ್ರಾವರುಣಿಯು ಶೀಘ್ರವಾಗಿ ಕೆಳಗಿಳಿದು ಸುಮಂತನಿಗೆ ಭೆಟ್ಟಿಯಾಗಿ ನುಡಿದನೇನಂದರೆ:—ಎಲೈ ಸುಮಂತನೇ, ನೀನು ಯಾವಬಗೆಯ ಸಂಶಯಕ್ಕೂ ಗುರಿಯಾಗಬೇಡ; ಭರ್ತರಿಯು ನನ್ನ ಮಗನಿರುತ್ತಾನೆ. ಆತನ ಲಗ್ನದ ಕಾಲದಲ್ಲಿ ತಂದೆಯು ಇರುವದು ಯೋಗ್ಯವೆಂದು ನೀನು ಅಂದದ್ದರಿಂದ ನಾನು ಈ ದಿನ ಬಂದಿದ್ದೇನೆ. ನಿನ್ನ ಭಾಗ್ಯವು ದೊಡ್ಡದು; ಅಂತೇ ಭರ್ತರಿಯು ನಿನಗೆ ಅಳಿಯನಾಗುತ್ತಾನೆ. ಈ ಭರ್ತರಿಯು ನನ್ನ ಮಗನಿರುವನು, ಇಷ್ಟೇ ಅಲ್ಲ; ನವನಾರಾಯಣರಲ್ಲಿ ಒಬ್ಬನಾದ ದ್ರುಮಿನಾರಾಯಣನ ಅವತಾರಿಕನಿರುತ್ತಾನೆ. ಈತನ ಲಗ್ನಕ್ಕೆ ನಮ್ಮ ಸಮಸ್ತ ಗಂಧರ್ವ ಪರಿವಾರವನ್ನು ಕಳಿಸುತ್ತೇನೆ; ಎಂದು ನುಡಿದು ಸ್ವರ್ಗಕ್ಕೆ ಹೋಗಿ ಸುರೋಚನ ಮೊದಲಾದ ಗಂಧರ್ವರನ್ನು ಕಳಿಸಿದನು. ಸುರೋಚನನು ಹೆಂಡತಿಯಾದ ಸತ್ಯವತಿಯನ್ನು ನೋಡಿ ಸಮಾಧಾನಪಟ್ಟು ಮಗನನ್ನು ಮುದ್ದಾಡಿದನು. ಆಗ ವಿಕ್ರಮನು ಸುಮಂತನನ್ನು ಕರೆದೊಯ್ದು ಸುರೋಚನನಿಗೆ ಭೆಟ್ಟೀಮಾಡಿಸಿದನು. ಸುರೋಚನನ ದೇದೀಪ್ಯ ಸ್ವರೂಪವನ್ನು ನೋಡಿ ಸುಮಂತನು ದಂಗುಬಡಿದು ನಿಂತನು. ಬಳಿಕ ಅವನು ತನ್ನ ಮಗಳಾದ ಪಿಂಗಲೆಯನ್ನು ಭರ್ತರಿಗೆ ಕೊಟ್ಟು ಲಗ್ನಮಾಡಿದನು. ಆತನ ಲಗ್ನಕ್ಕೆ ದೇವತೆಗಳು ವಿಮಾನಾರೂಢರಾಗಿ ಬಂದಿದ್ದರು. ಮುಂದೆ ಸುರೋಚನನು ಒಂದು ತಿಂಗಳವರೆಗೆ ಅಲ್ಲಿ ನಿಂತು ಸತ್ಯವತಿಯನ್ನು ಸಂತೋಷಗೊಳಿಸಿದನು.

ಪಿಂಗಲೆಯು ಪ್ರಬುದ್ಧಳಾದ ಬಳಿಕ ಭರ್ತರಿಯೊಡನೆ ಸಂಸಾರಸುಖವನ್ನು ಅನುಭವಿಸಹತ್ತಿದಳು. ಆಕೆಯು ಒಳ್ಳೇ ಪತಿಭಕ್ತಿಪರಾಯಣಳು

ಅವಳು ಅವನಲ್ಲಿ ಅತ್ಯಂತ ಪ್ರೀತಿಯನ್ನು ತಾಳಿದಳು. ಭರ್ತರಿಯಾದರೂ ಹೆಂಡತಿಯ ವಿಷಯಕ್ಕೆ ಬಹಳ ಮೋಹಗ್ರಸ್ತನಾದನು. ರಾಜಕಾರಭಾರ ದಲ್ಲಿ ಕುಳಿತಾಗ ಅವನಿಗೆ ಹೆಂಡತಿಯ ನೆನಪು ಆಗಲು, ಆ ಕೆಲಸವನ್ನು ಅಲ್ಲಿಯೇ ನಿಲ್ಲಿಸಿ ಅಂತಃಪುರಕ್ಕೆ ಹೋಗಿ ಮೊದಲು ಹೆಂಡತಿಯ ಮುಖವನ್ನು ನೋಡಿ ಮತ್ತೆ ದರ್ಬಾರಕ್ಕೆ ಬಂದು ಕೆಲಸ ನೋಡುತ್ತಿದ್ದನು. ಹೀಗೆ ಅವನು ಹೆಂಡತಿಯ ಮೋಹದಲ್ಲಿ ಸಿಕ್ಕು ಹುಚ್ಚನಾದನು.

ಹೀಗೆ ಭರ್ತರಿಯು ವಿಷಯಾಸಕ್ತನಾಗಲು, ಅವನ ತಂದೆಯಾದ ಮಿತ್ರಾವರುಣಿಯು ಚಡಪಡಿಸತೊಡಗಿದನು. ಅವನು ಮನಸ್ಸಿನಲ್ಲಿ ವಿಚಾರಿಸಿ ದ್ದೇನಂದರೆ:—ನನಗೆ ಇಬ್ಬರು ಮಕ್ಕಳು. ಅವರಲ್ಲಿ ಅಗಸ್ತ್ಯನು ಮನುಷ್ಯ ದೇಹವು ಅಶಾಶ್ವತವೆಂದು ತಿಳಿದು ತನ್ನ ಜನ್ಮಸಾರ್ಥಕತೆಯನ್ನು ಮಾಡಿ ಕೊಂಡನು; ಆದರೆ ಭರ್ತರಿಯು ಮಾತ್ರ ಐಹಿಕಸುಖಕ್ಕೆ ಮೆಚ್ಚಿ, ಅರ್ಧ ಆಯುಷ್ಯವನ್ನು ಹಾಳುಮಾಡಿಕೊಂಡನು. ಅವನಿಗೆ ದೇಹಸಾರ್ಥಕದ ಕಲ್ಪನೆಯೇ ಇರುವದಿಲ್ಲ. ವಿಷಕ್ರಿಮಿನ್ಯಾಯದಂತೆ ಕೇವಲ ವಿಷಯದ ಲ್ಲಿಯೇ ಮುಳುಗಿ ಏಳುತ್ತಾನೆ. ಹ್ಯಾಗಾದರೂ ಮಾಡಿ ಅವನಿಗೆ ಎಚ್ಚರ ಬರುವಂತೆ ಮಾಡಬೇಕು.

ಈ ಮೇರೆಗೆ ಯೋಚಿಸಿ ಮಿತ್ರಾವರುಣನು ಶ್ರೀದತ್ತಾತ್ರಯ ಗುರುವಿನ ಬಳಿಗೆಹೋಗಿ ಸಾಷ್ಟಾಂಗ ನಮಸ್ಕಾರ ಹಾಕಿ ಹೇ ಪ್ರಭೋ, ಗುರುಮಹಾ ರಾಜನೇ: ನೀನು ಪ್ರಾಣಿಗಳನ್ನು ಉದ್ಧಾರ ಮಾಡಲಿಕ್ಕೆ ಸಮರ್ಥನಿದ್ದೀ; ಜಾಲಂದರನಿಗೆ ನೀನು ಅನುಗ್ರಹ ಮಾಡಿ ಅವನಿಗೆ ನಾಥದೀಕ್ಷೆಯನ್ನು ಕೊಟ್ಟು ಅವನನ್ನು ಕೃತಾರ್ಥನನ್ನಾಗಿ ಮಾಡಿರುತ್ತೀ; ಆದರೆ ದ್ರುಮಿನಾರಾ ಯಣನ ಅವತಾರಿಕನಾದ ಭರ್ತರಿಯು ಕೇವಲ ವಿಷಯಲಂಪಟನಾಗಿ ಆಚರಿ ಸುತ್ತಾನೆ. ಅವನು ನನ್ನ ಮಗನಿದ್ದು, ಅವನಿಗೆ ತಾವು ಅನುಗ್ರಹಿಸಬೇ ಕೆಂದು ನನ್ನ ಪ್ರಾರ್ಥನೆಯಿದೆ ಎಂದು ನುಡಿದನು.

ಮಿತ್ರಾವರುಣಿಯ ಮಾತು ಕೇಳಿ ದತ್ತಾತ್ರಯನು ಭರ್ತರಿಯನ್ನು ಅನುಗ್ರಹಿಸುವದಕ್ಕಾಗಿ ವಚನ ಕೊಟ್ಟನು. ಮಿತ್ರಾವರುಣಿಯು ಸಮಾ ಧಾನ ತಾಳಿ ಸ್ವರ್ಗಕ್ಕೆ ಹೊರಟು ಹೋದನು. ಮಿತ್ರಾವರುಣಿಯು ಹೋದಬಳಿಕ ದತ್ತಾತ್ರಯನು ಸ್ಥಳಬಿಟ್ಟು ಭರ್ತರಿಯ ಕಡೆಗೆ ಹೊರಟನು.

ಆಗ ಭರ್ತರಿಯು ವನದಲ್ಲಿ ಬೇಟೆಯಾಡುವದರಲ್ಲಿ ಮಗ್ನನಾಗಿದ್ದನು. ಅವನ ಬೆಂಬಲಕ್ಕಾಗಿ ಅಸಂಖ್ಯ ಸೈನಿಕರು ಬಂದಿದ್ದರು. ವನದೊಳಗಿನ ವನ್ಯಪಶುಗಳು ದಿಕ್ಕುತಪ್ಪಿ ಓಡಾಡುತ್ತಿದ್ದವು. ಹೀಗಿರಲು ದತ್ತಾತ್ರೇಯರ ಮಾಯೆಯಿಂದ ಭರ್ತರಿಗೆ ನೀರಡಿಕೆಯುಂಟಾಯಿತು. ಅವನ ಸೈನಿಕರೂ ತೃಷೆಯಿಂದ ಬಳಲಲಾರಂಭಿಸಿದರು. ಅವರು ಮೃಗಯಾ ವಿಹಾರವನ್ನು ಬಿಟ್ಟು ಆ ಅರಣ್ಯದಲ್ಲಿ ನೀರನ್ನು ಹುಡುಕತೊಡಗಿದರು. ಎಷ್ಟು ಹುಡುಕಿದರೂ ಅವರಿಗೆ ನೀರು ಸಿಗದಾಯಿತು. ಅದು ನಿರ್ಜಲ ಅರಣ್ಯವೆಂಬಂತೆ ಅವರಿಗೆ ಭಾಸವಾಯಿತು. ಸೈನ್ಯವನ್ನು ಬಿಟ್ಟು ಜಲಶೋಧಕ್ಕಾಗಿ ಬಹುದೂರ ಹೋದನು. ನೀರಿಲ್ಲದೆ ಅವನ ಜೀವವು ತಳಮಳಿಸಹತ್ತಿತು. ಅವನು ಬಹಳ ವ್ಯಾಕುಲನಾದನು. ಅಷ್ಟರಲ್ಲಿ ದತ್ತಾತ್ರೇಯರು ಮಾಯೆಯಿಂದ ಒಂದು ಸರೋವರವನ್ನುಂಟು ಮಾಡಿ ಅದರ ದಂಡೆಯ ಮೇಲೆ ಒಂದು ಪರ್ಣಕುಟೀರವನ್ನು ನಿರ್ಮಿಸಿ ಅದರಲ್ಲಿ ತಾವು ಕುಳಿತರು. ಆ ಸರೋವರವು ಬಹು ರಮಣೀಯವಾಗಿದ್ದು ಭರ್ತರಿಯು ಅದನ್ನು ಕಂಡ ಕೂಡಲೆ ಜೀವ ಬದುಕಿತೆಂದು ತಿಳಿದು ಧಾವಿಸಿಬಂದು ನೀರಲ್ಲಿ ಇಳಿದನು. ಅಷ್ಟರಲ್ಲಿ ದತ್ತಾತ್ರೇಯಮುನಿಗಳು ಗದ್ದರಿಸಿ—ಎಲೋ ನೀನಾರು? ಈ ಸರೋವರವು ನನ್ನದಿರುತ್ತಿರಲು ನನ್ನ ಒಪ್ಪಿಗೆಯಿಲ್ಲದೆ ನೀರಲ್ಲಿ ಹ್ಯಾಗೆ ಇಳಿದೆ? ಎಂದು ನುಡಿದು ನೀರು ಕುಡಿದೆಯೆಂದರೆ ನಿನ್ನನ್ನು ಭಸ್ಮೀಭೂತನನ್ನಾಗಿ ಮಾಡುವೆನು ಎಂದು ಅಂದನು. ಭರ್ತರಿಯು ಆ ಮುನಿಯ ರೌದ್ರತೆಗೆ ಹೆದರಿ ನೀರು ಬಿಟ್ಟು ಹೊರಗೆ ಬಂದನು. ಆಗ ಆ ಮುನಿಯು—ನೀನಾರು? ನಿನ್ನ ಗುರು ಯಾರು? ಎಂಬ ಎಲ್ಲ ಸಂಗತಿಗಳನ್ನು ವಿಚಾರಿಸಿದನು. ಭರ್ತರಿಯು ತನ್ನ ಎಲ್ಲ ಸಂಗತಿ ಹೇಳಿದನು. ಆದರೆ ಇದುವರೆಗೆ ಯಾರನ್ನೂ ಗುರುಗಳನ್ನಾಗ ಮಾಡಿಕೊಳ್ಳದ್ದರಿಂದ ಗುರುಗಳ ಹೆಸರನ್ನು ಹೇಳಲಿಲ್ಲ. ಅದನ್ನು ಕೇಳಿ ದತ್ತಾತ್ರೇಯರು—ಭ್ರಷ್ಟಾ, ನೀನು ಇದುವರೆಗೆ ಗುರಗಳನ್ನು ಮಾಡಿಕೊಂಡಿಲ್ಲವಷ್ಟೆ; ಗುರೂಪದೇಶವಿಲ್ಲದ ನಿನ್ನಂಥವನು ನೀರು ಕುಡಿದರೆ ಈ ಸರೋವರವು ಬತ್ತಿ ಹೋಗಬಹುದು ಎಂದನು. ಆಗ ಭರ್ತರಿಗೆ ನೀರಡಿಕೆಯು ಆಗಿ ಜೀವವು ತಳಮಳಿಸುತ್ತಿದ್ದದರಿಂದ—ಸ್ವಾಮಿ, ನೀವೇ ನನ್ನ ಗುರುಗಳಾಗಿ ಅನುಗ್ರಹ ಮಾಡಿರಿ ಎಂದನು. ಅದಕ್ಕೆ ಮುನಿಗಳು—ನೀನು

ಅನುಗ್ರಹಕ್ಕೆ ಪಾತ್ರನಿರಬಹುದು; ಆದರೆ ನಿನಗೆ ಅನುಗ್ರಹ ಮಾಡುವ ಮನಸ್ಸು ನನಗಿಲ್ಲ. ಬ್ರಹ್ಮಾದಿ ದೇವತೆಗಳು ಅನುಗ್ರಹಕ್ಕಾಗಿ ನನ್ನೆಡೆಗೆ ಬರುವರು; ಆದರೆ ಅವರು ಅಯೋಗ್ಯರೆಂದು ಅವರಿಗೆ ನಾನು ಅನುಗ್ರಹ ಮಾಡಿಲ್ಲ, ಆದರೆ ನಿನ್ನಂಥ ವಿಷಯಾಂಧನ ಪಾಡೇನು! ಎಂದು ಅವನ ನಿರ್ಭರ್ತ್ಸನೆ ಮಾಡಿದರು. ಭರ್ತರಿಯು ಬಹಳವಾಗಿ ಹೇಳಿಕೊಂಡನು. ಕಡೆಗೆ ದತ್ತಗುರುಗಳು ಅವನಿಗೆ ಹನ್ನೆರಡು ವರುಷ ತಪಸ್ಸುಮಾಡಿದರೆ ನಿನಗೆ ಅನುಗ್ರಹ ಮಾಡುವೆನೆಂದು ಹೇಳಿದರು. ಭರ್ತರಿಯು—ಸ್ವಾಮಿಾ ನಾನು ಗೃಹಸ್ಥಾಶ್ರಮಿಯು; ನಿಸ್ಸಂಗನಾಗಿ ಹನ್ನೆರಡು ವರುಷ ತಪಸ್ಸು ಹ್ಯಾಗೆ ಮಾಡಲಿ? ಮಕ್ಕಳಾದ ಹೊರತು ಪುರುಷನು ಹೆಂಡತಿಯ ಋಣದಿಂದ ಮುಕ್ತನಾಗುವದಿಲ್ಲೆಂದು ಶಾಸ್ತ್ರವಚನವಿದೆ; ಆದ್ದರಿಂದ ಇನ್ನೊಂದು ತಪದ ವರೆಗೆ ಸಂಸಾರ ಮಾಡಲಿಕ್ಕೆ ನನಗೆ ಅವಕಾಶ ಕೊಡಿರಿ. ಆ ಬಳಿಕ ನಾನು ವೈರಾಗಿಯಾಗಿ ತಪಸ್ಸನ್ನಾಚರಿಸುವೆನು ಎಂದನು.

ಅವನ ಮಾತಿಗೆ ದತ್ತಗುರುಗಳು ಸಮ್ಮತಿಸಿ ಆದರಂತೆ ಅವನ ಕಡೆಯಿಂದ ಸಂಕಲ್ಪ ಮಾಡಿಸಿ ನೀರು ಬಿಡಿಸಿದರು ಭರ್ತರಿಯು ನೀರು ಬಿಡಲು. ದತ್ತಗುರುಗಳು ಅದೃಶ್ಯರಾದರು. ಅವರ ಜೊತೆಗೆ ಆ ಸರೋವರವೂ ಅದೃಶ್ಯವಾಯಿತು. ಆಗ ಭರ್ತರಿಗೆ ಆಶ್ಚರ್ಯವಾಯಿತು. ತನ್ನನ್ನು ಹೀಗೆ ಸಂಕಲ್ಪದಿಂದ ಪ್ರತಿಬಂಧಿಸಿದವರು ದತ್ತಗುರುಗಳು ಎಂಬದು ತಿಳಿಯಲು, ಅವನು ಮತ್ತಿಷ್ಟು ಆಶ್ಚರ್ಯಕ್ಕೊಳಗಾದನು. ಅವನಿಗೆ ನೀರಡಿಕೆ ಬಹಳವಾದ್ದರಿಂದ ದತ್ತಗುರುಗಳ ಹೆಸರಿನಿಂದ ಒಂದೇಸವನೆ ಒದರಿ ಅರಣ್ಯವನ್ನೆಲ್ಲ ನಾದಮಯವಾಗ ಮಾಡಿದನು. ಆಗ ದತ್ತಗುರುಗಳು ದಯಾವಂತರಾಗಿ ಭೋಗವತಿ ನದಿಯನ್ನು ನಿರ್ಮಿಸಿ ತಮ್ಮ ಕಾಮಧೇನುವಿನಿಂದ ಷಡ್ರಸಾನ್ನವನ್ನುಂಟುಮಾಡಿಸಿದರು. ಅದನ್ನು ಕಂಡು ಭರ್ತರಿಯು ಹಿಗ್ಗಿದನು. ಅಷ್ಟರಲ್ಲಿ ಅವನ ಸೈನಿಕರೂ ಅಲ್ಲಿಗೆ ಬಂದರು. ಬುಭುಕ್ಷಿತರಾದ ಅವರು ಈ ನೀರು-ಆಹಾರಗಳನ್ನು ನೋಡಿ ಹರುಷಗೊಂಡು ನದಿಯಲ್ಲಿ ಸ್ನಾನಮಾಡಿ ಹೊಟ್ಟೆತುಂಬ ಉಂಡರು. ಅವರ ಕ್ಷುಧಾ-ತೃಷೆಗಳು ಶಾಂತವಾಗಲು, ನದಿಯು ಅದೃಶ್ಯವಾಯಿತು. ಭರ್ತರಿಯು ತನ್ನ ರಾಜಧಾನಿಗೆ ಬಂದನು.

———

# ಅಧ್ಯಾಯ ೨೮

## ಭರ್ತೃಹರಿಯ ವಿರಕ್ತಾವಸ್ಥೆ.

ಭರ್ತೃಹರಿಯು ಪಿಂಗಲೆಯೊಡನೆ ಪ್ರಪಂಚ ಮಾಡುತ್ತಿರಲು, ಒಂದು ಸಮಯದಲ್ಲಿ ಅವನು ಊಟ-ಉಡಿಗೆಗಳನ್ನು ತೀರಿಸಿಕೊಂಡು ಪಿಂಗಲೆಯ ಮಂದಿರಕ್ಕೆ ಹೋದನು. ಪಿಂಗಲೆಯು ಪ್ರೇಮದಿಂದ ಅವನನ್ನು ಷೋಡಶೋಪಚಾರಗಳಿಂದ ಪೂಜಿಸಿದಳು. ಅವಳ ಆದರದಿಂದ ಸಂತುಷ್ಟನಾಗಿ ಭರ್ತೃಹರಿಯು ಪಿಂಗಲೆಯೊಡನೆ ಪ್ರೇಮದಿಂದ ಮಾತಾಡಹತ್ತಿದನು. ಆಡುತ್ತಾಡುತ್ತ ಪ್ರೇಮದ ಭರದಲ್ಲಿ ಭರ್ತೃಹರಿಯು ಪಿಂಗಲೆಗೆ.—"ಪಿಂಗಲೇ, ನಿನ್ನಂತೆ ನನಗೆ ಅನೇಕ ಮಂದಿ ಹೆಂಡರಿದ್ದಾರೆ; ಆದರೆ ಎಲ್ಲರಗಿಂತಲೂ ನಿನ್ನಲ್ಲಿ ಹೆಚ್ಚು ಪ್ರೀತಿಯುಂಟು. ನಿನ್ನಲ್ಲಿ ಎಷ್ಟು ಮಾತ್ರವೂ ಭೇದಬುದ್ಧಿ ಇಲ್ಲ. ಚಂದ್ರನಿಗೂ ಆತನ ಪ್ರಕಾಶಕ್ಕೂ ಹೇಗೆ ನಿಕಟ ಸಂಬಂಧವು ಇರುವದೋ, ಅದೇ ಮೇರೆಗೆ ನನ್ನ ನಿನ್ನ ಸಂಬಂಧವುಂಟು. ನನ್ನ ನಿನ್ನ ಹೆಸರುಗಳು ಬೇರೆಯಾಗಿದ್ದರೂ ಭಾವನೆಯು ಮಾತ್ರ ಬೇರೆಯಾಗಿಲ್ಲ. ಸಕ್ಕರೆ ಮತ್ತು ಅದರ ರುಚಿ, ಸಮುದ್ರ ಮತ್ತು ಅದರ ತೆರೆ ಇವುಗಳಂತೆ ನಮ್ಮಿಬ್ಬರ ಪ್ರೀತಿಯಿರುವದು." ಈ ಮೇರೆಗೆ ನುಡಿದು ಭರ್ತೃಹರಿಯು ಪಿಂಗಲೆಯಲ್ಲಿದ್ದ ತನ್ನ ಪ್ರೇಮವನ್ನು ವ್ಯಕ್ತಗೊಳಿಸಿದನು.

ತನ್ನ ಪತಿಯು ಸರಳ ಮಾತನ್ನು ಕೇಳಿ ಪಿಂಗಲೆಗೆ ಸಮಾಧಾನವೆನಿಸಿತು. ಅವಳು ಭರ್ತೃಹರಿಗೆ ತ್ರಯೋದಶ ಗುಣಗಳಿಂದ ಯುಕ್ತವಾದ ತಾಂಬೂಲವನ್ನು ಅರ್ಪಿಸಿದಳು. ಪತಿಯು ಪ್ರೇಮದ ಮಾತುಗಳನ್ನು ಕೇಳಿ ಪಿಂಗಲೆಯ ಮನಸ್ಸಿನಲ್ಲಿ ಒಂದು ಗಹನ ವಿಚಾರವು ಉತ್ಪನ್ನವಾಯಿತು. ಅವಳು ಬಹಳ ಆದರದಿಂದ ಅಂದದ್ದೇನಂದರೆ:—ಮಹಾರಾಜ, ತಾವು ನನ್ನ ಪ್ರಾಣಪತಿಯಾಗಿದ್ದೀರಿ. ನನ್ನ ಮನಸ್ಸೆಂಬ ಚಕೋರಪಕ್ಷಿಗೆ ಪ್ರೇಮವೆಂಬ ಅಮೃತವನ್ನು ಕುಡಿಸುವಂಥ ಚಂದ್ರನ್ನೋಪಾದಿಯಲ್ಲಿರುವಿರಿ. ಈಶ್ವರೀಸಂಕೇತ

ದಿಂದ ನನ್ನ ನಿಮ್ಮಲ್ಲಿ ವಿವಾಹವುಂಟಾಗಿ ಚಿತ್ತೈಕ್ಯವಾಗಿರುವದು. ಸಮುದ್ರದ ನೀರೊಳಗಿನ ಕ್ಷಾರಗುಣವು ಹೇಗೆ ಒಡೆದು ತೋರುವದಿಲ್ಲವೋ ಅದರಂತೆ ತಮ್ಮ ಮನಸ್ಸಿನೊಳಗಿನ ಅನ್ಯಭಾವನೆಯು ಎಂದೂ ಗೋಚರವಾಗುವದಿಲ್ಲ. ಹೀಗೆ ತಮ್ಮ ಮನಸ್ಸಿನಲ್ಲಿ ನಿಸ್ಸೀಮ ಪ್ರೇಮವಿದ್ದರೂ ಆ ಪ್ರೇಮವನ್ನು ನಾಶಗೊಳಿಸಲಿಕ್ಕೆ ಕಾಲನು ಹೊಂಚುಹಾಕಿಕೊಂಡು ಕುಳಿತಿರುತ್ತಾನೆ. ಅವನು ಯಾರ ಸುಖದುಃಖದ ಬಗ್ಗೆಯೂ ವಿಚಾರ ಮಾಡುವದಿಲ್ಲ. ಈ ವಿಚಾರವು ನನ್ನ ಮನಸ್ಸಿನಲ್ಲಿ ಉದ್ಭವಿಸಿ ಅಸ್ವಸ್ಥಳಾಗಿದ್ದೇನೆ. ಮನುಷ್ಯನ ಹೃದಯದಲ್ಲಿ ಒಂದುವೇಳೆ ಯಾವದೊಂದು ಚಿಂತೆಯು ಉಂಟಾದಲ್ಲಿ ಬಹಳ ಕಠಿಣವಾಗುವದು. ಯಾಕಂದರೆ, ಚಿಂತಾರೂಪವಾದ ಸರ್ಪವು ಮನುಷ್ಯನ ದೇಹವನ್ನು ನಾಶಗೊಳಿಸದೆ ಇರುವದಿಲ್ಲ. ಚಿಂತೆಯೆಂಬ ವಿಷವು ಮೈಯಲ್ಲಿ ಸೇರಿಕೊಂಡರೆ ಯಾವ ವಿಷಯವೂ ರುಚಿಸುವದಿಲ್ಲ. ಆದ್ದರಿಂದ ನನ್ನ ಇಚ್ಛೆಯೇನಂದರೆ—ನನಗೆ ತಮ್ಮಕಿಂತಲೂ ಮೊದಲು ಮರಣ ಬರಬೇಕು. ಯಮರಾಜನು ಬಹಳ ನಿರ್ದಯನಿದ್ದದರಿಂದ ಅವನು ನಮ್ಮಿಬ್ಬರಲ್ಲಿ ಯಾರನ್ನಾದರೂ ಸೆಳಕೊಂಡು ಹೋಗಿ ನಮ್ಮ ಪ್ರೇಮವನ್ನು ಭಂಗಪಡಿಸುವದು ನಿಶ್ಚಯವು. ಅವನು ಕೃಪೆಮಾಡಿ ತಮ್ಮಕಿಂತಲೂ ನನ್ನನ್ನು ಮೊದಲು ತೆಗೆದುಕೊಂಡು ಹೋದರೆ ನನ್ನ ಜನ್ಮವು ಸಾರ್ಥಕವಾಗುವದು.

ಆ ಸಾಧ್ವಿಯು ಮುಖದಿಂದ ಹೊರಟ ಈ ಉದ್ಗಾರಗಳನ್ನು ಕೇಳಿ ಭರ್ತರಿಯು ಅಂದದ್ದೇನಂದರೆ:—" ಪ್ರಿಯೇ, ನಿನ್ನ ಈ ಉಚ್ಚ ಮತ್ತು ಶುದ್ಧಭಾವನೆಯನ್ನು ಕೇಳಿದರೆ ನೀನು ಸ್ತುತಿಗೆ ಪಾತ್ರಳಾಗಿರುವಿ. ಆದರೆ ಈ ಮಾತು ನನ್ನ ಕೈಯೊಳಗೆ ಇಲ್ಲ. ಅದು ಈಶ್ವರೀ ಅಧೀನವು. ಈಶ್ವರನ ಕಾರ್ಯಕ್ಕೆ ಭವಿಷ್ಯವನ್ನು ಯಾರು ಹೇಳಬೇಕು? ನೀನು ಮೊದಲು ಮರಣವನ್ನು ಇಚ್ಛಿಸುವದು ನಿಜವು; ಆದರೆ ಯಮನ ಸಂಕೇತವು ಹೇಗದೆಯೆನ್ನುವದು ಯಾರಿಗೆ ತಿಳಿಯಬೇಕು? ಆ ಯಮನು ಶುಭಾಶುಗಳನ್ನು ತಿಳಿಯಲಾರನು. ಅವನುಯಾವಾಗಲೂ ತನ್ನ ಇಚ್ಛೆಯ ಮೇರೆಗೆ ನಡೆಯತಕ್ಕವನು. ಅವನು ನಿನ್ನ ಇಚ್ಛೆಯನ್ನು ಅರಿಯದೆ ನಿನ್ನಕಿಂತಲೂ ಮೊದಲು ನನ್ನನ್ನು ಎಳೆದೊಯ್ದರೆ ಯಾರು ಏನು ಮಾಡತಕ್ಕದ್ದು?

ಪತಿಯು ಉತ್ತರವನ್ನು ಕೇಳಿ ಪಿಂಗಲೆಯು ಬಹಳ ದುಃಖದಿಂದ:— "ಬ್ರಹ್ಮದೇವರ ಬರಹವು ಹೇಗೆ ಇರುವದೋ ಯಾರು ತಿಳಿಯಬೇಕು? ಒಂದುವೇಳೆ ದುರ್ದೈವದಿಂದ ಆದೇ ಸ್ಥಿತಿಯು ಪ್ರಾಪ್ತವಾದರೆ ಅಶುಭದೇಹದಿಂದ ಈ ಪೃಥ್ವಿಯಮೇಲೆ ಇರದೆ ತಮ್ಮೊಡನೆ ಸಹಗಮನವನ್ನು ಹೊಂದುವೆನು." ಎಂದಳು.

ತನ್ನ ಪತ್ನಿಯ ಅಭಿಮಾನದ ಉತ್ತರವನ್ನು ಕೇಳಿ ಭರ್ತರಿಯು ಅಂದದ್ದೇನಂದರೆ, ಈ ನಿನ್ನ ಭಾಷಣವು ಬರಿಯ ಆತ್ಮಪ್ರೌಢಿಗಾಗಿಯೇ ತೋರುತ್ತದೆ. ಸಮಯ ಬಂದರೆ ಬಹಳ ಕಠಿಣವಾಗುವದು. ಪ್ರತಿಯೊಬ್ಬ ಮನುಷ್ಯನಿಗೆ ತನ್ನ ಜೀವಕ್ಕಿಂತಲೂ ಯಾವದೂ ಪ್ರಿಯವಾಗಿರುವದಿಲ್ಲ. ಯಾವದೊಂದು ಕಾರಣದಿಂದ ಮನುಷ್ಯನು ತನ್ನ ಪ್ರಾಣದಮೇಲಿನ ಮಮತೆಯನ್ನು ಬಿಡುವನು. ನನಗೆ ಸಂತೋಷವಾಗಬೇಕೆಂದು ನೀನು ಹೀಗೆ ಮಾತು ಆಡುತ್ತೀ; ಅಂಥ ಸಮಯವು ಬಂದರೆ ನೀನು ಹೇಳದೆ ಓಡಿಹೋಗುವಿ. ಇದರಂತೆ ಬೇರೆ ಅನೇಕ ಮಾತುಗಳ ವಿಷಯವಾಗಿಯೂ ನನಗೆ ಅನುಭವವದೆ. ನಾನು ವ್ಯರ್ಥವಾಗಿ ಮಾತಾಡುವದಿಲ್ಲ. ನನ್ನ ಕೈಯೊಳಗೆ ಕೆಲಸ ಮಾಡುವ ರಾಜಸೇವಕರೂ, ಯುದ್ಧದಲ್ಲಿ ಪ್ರಾಣಅರ್ಪಣಮಾಡಿ ಬಡಿದಾಡುವವರೂ ಸಹ ಸಮಯವು ಬಂದರೆ ಪ್ರಾಣದಾಶೆಗಾಗಿ ಪಲಾಯನ ಸೂಕ್ತವನ್ನು ಜಪಿಸುವರು. ನಿನ್ನ ಅಭಿಪ್ರಾಯವೂ ಅದೇ ರೀತಿಯಾಗಿ ತೋರುತ್ತದೆ. ನಾಯಿಯ ಬಾಲವು ಯಾವಾಗಲೂ ಕಹಳೆಯಂತೆ ಡೊಂಕಾಗಿಯೇ ತೋರುವದು; ಆದರೆ ಬಲಿಷ್ಠವಾದ ಬೇರೊಂದು ನಾಯಿಯನ್ನು ಕಂಡರೆ ಅದು ತನ್ನ ಬಾಲವನ್ನು ಕೆಳಗೆ ಮಾಡುವದು. ಇದೇಮೇರೆಗೆ ಚೇಳಿನ ಕೊಂಡೆಯು ಯಾವಾಗಲೂ ಸೆಟೆದಿರುವದು; ಆದರೆ ಹಲ್ಲಿಯು ದೃಷ್ಟಿಗೆ ಬೀಳಲು, ಅದು ಕೂಡಲೆ ಕೆಳಗಾಗುವದು. ಇದೇಮೇರೆಗೆ ನಿನ್ನ ಸ್ಥಿತಿಯಾಗಿರುವದೆಂದು ನಾನು ತಿಳಿಯುತ್ತೇನೆ.

ತನ್ನ ವಿಷಯದಲ್ಲಿ ಪತಿಯ ಮನಸ್ಸು ಸಂಶಯಗ್ರಸ್ತವಾಗಿರುವದನ್ನು ಕಂಡು ಪಿಂಗಲೆಯು—"ಹೇ ನಾಥ! ತಾವು ಏನು ಮಾತಾಡಿದರೂ ನನ್ನ ಪ್ರಾಣವು ತಮ್ಮದೇ ಇರುವದು. ತಮ್ಮ ಹೆಸರಿನಿಂದ ನಾನು ಕೊರಳಲ್ಲಿ ಮಂಗಲಸೂತ್ರವನ್ನು ಧರಿಸಿದ್ದೇನೆ. ಇದರಂತೆ ಈ ಮಾತಿನ ಮಂಗಳ

ಸೂತ್ರವನ್ನೂ ನಾನು ಕೊರಳಲ್ಲಿ ಹಾಕಿಕೊಂಡಿದ್ದೇನೆ. ಈ ಮಾತು ಸತ್ಯವೆಂದು ಭಾವಿಸಿರಿ. ಕಾಯಾ, ವಾಚಾ, ಮನಸ್ಸಿನಿಂದ ತಮ್ಮ ದಾಸಿ ಇದ್ದೇನೆ. ಈಶ್ವರೀಸತ್ತೆಯನ್ನು ಬ್ರಹ್ಮದೇವನೂ ತಿಳಿಯನು. ಅಂದಬಳಿಕ ನಾವು ಈ ಸಂಗತಿಯ ಬಗ್ಗೆ ವಾದವಿವಾದ ಮಾಡಿ ಫಲವೇನು? ಈ ವಿಷಯದಲ್ಲಿ ಕಡೆಗೆ ನಿರ್ಧಾರವಾಗಿ ಹೇಳುವದೇನಂದರೆ—ನಾನು ಈ ದೇಹಕ್ಕೆ ಎಂದೂ ವೈಧವ್ಯ ತಂದುಕೊಳ್ಳಲಾರೆನು. ನನ್ನ ಮನೋಭಾವನೆಯು ತಮಗೆ ಸತ್ಯವಾಗಿ ತೋರದಿದ್ದರೂ ಸರ್ವಾಂತರ್ಯಾಮಿಯಾದ ಪರಮಾತ್ಮನು ತಿಳಿಯದೆ ಇರಲಾರನು. ತಮ್ಮ ಸಾಕ್ಷಿಯಾಗಿಯೇ ಈ ಪ್ರತಿಜ್ಞೆಯ ಮಾತನ್ನು ಹೊರಗೆಡವಿದ್ದೇನೆ ಈಶ್ವರನು ಸತ್ಯಪಕ್ಷಪಾತಿಯಾಗಿದ್ದಾನೆ. ಇಂಥ ಸತ್ಯದೇವನನ್ನು ಸ್ಮರಿಸಿ ಪುನಃ ಅಭಿಮಾನದಿಂದ ಹೇಳುವದೇನಂದರೆ—ಈ ದೇಹಕ್ಕೆ ವೈಧವ್ಯವು ಎಂದೂ ಪ್ರಾಪ್ತವಾಗಲಾರದು. ಯಾವ ಬೀಜವನ್ನು ಬಿತ್ತುವರೋ ಆ ವೃಕ್ಷವು ಆಗುವದೆಂಬುವದು ಸಿದ್ಧಾಂತವದೆ! ನನ್ನ ವಾಸನಾರೂಪವೆಂಬ ಶುದ್ಧಬೀಜ ಜನ್ಯವೃಕ್ಷಕ್ಕೆ ಶುದ್ಧವಾದ ಫಲವು ಬರುತ್ತದೆಂದು ನನಗೆ ಪೂರ್ಣನಂಬಿಗೆಯದೆ. ಇಷ್ಟು ಮಾತಾಡಿ ಸಾಧ್ವಿಯಾದ ಪಿಂಗಲೆಯು ಸುಮ್ಮನಾದಳು. ಭರ್ತರಿಯೂ ಆಕೆಯ ಮಾತಿಗೆ ಉತ್ತರ ಕೊಡಲಿಲ್ಲ. ಆದರೆ ಕೆಲವು ಕಾಲದ ಮೇಲೆ ಪಿಂಗಲೆಯ ಮಾತಿನ ಸತ್ಯತೆಯನ್ನು ಪರೀಕ್ಷಿಸಬೇಕೆಂದು ಗೊತ್ತು ಮಾಡಿಕೊಂಡನು.

ಕೆಲವು ದಿವಸಗಳ ನಂತರ ಯುವರಾಜನಾದ ಭರ್ತರಿಯು ಬೇಟೆಗಾಗಿ ಅರಣ್ಯಕ್ಕೆ ಹೋದನು. ಮೃಗಗಳನ್ನು ಬೆನ್ನಟ್ಟಿ ದಣಿದು ವಿಶ್ರಾಂತಿಗಾಗಿ ಕೆಲಹೊತ್ತು ಸ್ವಸ್ಥವಾಗಿ ಕುಳಿತನು ಅದೇ ಕಾಲಕ್ಕೆ ಪಿಂಗಲೆಯ ಪ್ರತಿಜ್ಞೆಯೂ ಸ್ಮರಣಕ್ಕೆ ಬಂದಿತು. ಇದೇ ಕಾಲಕ್ಕೆ ಪಿಂಗಲೆಯ ಮಾತನ್ನು ಒರೆಗೆ ಹಚ್ಚಬೇಕೆಂದು ಗೊತ್ತು ಮಾಡಿಕೊಂಡನು. ಈ ಉದ್ದೇಶದಿಂದ ಮತ್ತೆ ಬೇಟೆಗಾಗಿ ಹೊರಟನು. ಕೆಲವು ಹೊತ್ತಿನ ಮೇಲೆ ಬಹಳ ಕೌಶಲ್ಯದಿಂದ ಒಂದು ಜೀವಂತ ಮೃಗವನ್ನು ಹಿಡಿದುಕೊಂಡನು. ಕೂಡಲೇ ತನ್ನ ಸೇವಕನಿಂದ ಆ ಮೃಗದ ಘಾತವನ್ನು ಮಾಡಿಸಿದನು. ಬಳಿಕ ತನ್ನ ವಸ್ತ್ರಗಳನ್ನು ಆ ಮೃಗದ ರಕ್ತದಲ್ಲಿ ತೋಯಿಸಿದನು, ಆ ರಕ್ತದಿಂದ ತೊಯಿದ ವಸ್ತ್ರವನ್ನು ತನ್ನ ಸೇವಕನ ಕೈಯಲ್ಲಿ ಕೊಟ್ಟು ತಾನು ಬೇರೆ ವಸ್ತ್ರವನ್ನು

ಪರಿಧಾನ ಮಾಡಿದನು. ಆ ಮೇಲೆ ಒಂದು ವಿಸ್ತೀರ್ಣವಾದ ಗಿಡದ ಬುಡದಲ್ಲಿ ಕುಳಿತುಕೊಂಡು ತನ್ನ ವಿಶ್ವಾಸವುಳ್ಳ ಸೇವಕನನ್ನು ಬರಮಾಡಿಕೊಂಡು ಅಂದದ್ದೇನಂದರೆ—ಈ ರಕ್ತದಿಂದ ಮಲಿನವಾದ ವಸ್ತ್ರಾಲಂಕಾರಗಳನ್ನು ತೆಗೆದುಕೊಂಡು ನೀನು ಹೀಗೆಯೇ ಪಿಂಗಲೆಯ ಕಡೆಗೆ ಹೋಗು. ನೀನು ಈ ವಸ್ತ್ರಗಳನ್ನು ಅವಳಿಗೆ ತೋರಿಸಿ ನಾನು ಮೃತನಾದೆನೆಂದು ಸ್ಪಷ್ಟವಾಗಿ ಹೇಳು. ಹುಲಿಯು ನನ್ನನ್ನು ಕೊಂದಿತೆಂದು ಹೇಳು.

ಹೀಗೆ ಒತ್ತಾಯದಿಂದ ಹೇಳಿ ಭರ್ತರಿಯು ಆ ಸೇವಕನನ್ನು ಅವಂತೀನಗರದ ಕಡೆಗೆ ಕಳಿಸಿದನು. ಅವನು ಪಿಂಗಲೆಯ ಮಂದಿರಕ್ಕೆ ಹೋಗಿ ರಕ್ತದಿಂದ ತೊಯಿದ ವಸ್ತ್ರಭೂಷಣಗಳನ್ನು ಅವಳ ಮುಂದೆ ಇಟ್ಟು ಕೈ ಜೋಡಿಸಿಕೊಂಡು ಹೇಳಿದ್ದೇನಂದರೆ—"ಅವ್ವನವರೇ, ತಮಗೆ ನಾನು ಇಂಥ ದುಃಖದಾಯಕವಾದ ವಾರ್ತೆಯನ್ನು ತಿಳಿಸುವದು ನನ್ನ ದುರ್ದೈವದಲ್ಲಿ ಬರದದೆ. ಯುವರಾಜರಾದ ಭರ್ತರಿಯು ಮೃಗಗಳ ಬೇಟೆಗಾಗಿ ತಿರುಗುವಾಗ ಒಂದು ಕಂಟಿಯೊಳಗಿಂದ ಭಯಂಕರವಾದ ಹುಲಿಯು ಅಕಸ್ಮಾತ್ ಅವರ ಮೇಲೆ ಬಿದ್ದು ಕುತ್ತಿಗೆಯನ್ನು ಹಿಚಿಕಿ ರಕ್ತಪಾನ ಮಾಡಿತು. ಮಹಾರಾಜರ ದಹನಕ್ರಿಯೆಯನ್ನು ತೀರಿಸಿ ಎಲ್ಲ ಸೈನ್ಯವು ತಿರುಗಿ ಬರುವದು.

ಸೇವಕನ ಮುಖದಿಂದ ಈ ಸಂಗತಿಯನ್ನು ಕೇಳಿ ಅವಳು ತನ್ನ ಹೃದಯವನ್ನು ಬಡಕೊಳ್ಳಹತ್ತಿದಳು. ತನ್ನ ತಲೆಯ ಮೇಲಿನ ಕೂದಲನ್ನು ಬಿಚ್ಚಿ ಹರವಿ ಹಣೆಯನ್ನು ಬಡಬಡಕೊಳ್ಳಹತ್ತಿದಳು. ಅವಳು ಸಭ್ಯವಾದ ಆಕಳದಂತೆ ಒದರಹತ್ತಿದಳು. ಮೋರೆಯ ಮೇಲೆ ಮಣ್ಣನ್ನು ಚೆಲ್ಲಿಕೊಂಡು ವಿಲಾಪಿಸಹತ್ತಿದಳು;—"ಹೇ ಪ್ರಾಣನಾಥ! ತಾವು ನನ್ನೊಬ್ಬಳನ್ನು ಬಿಟ್ಟು ಪರಲೋಕಕ್ಕೆ ಹೇಗೆ ಹೋದಿರಿ? ನನ್ನನ್ನು ಭಾವಿಯಲ್ಲಿ ನೂಕಿ ಹೋಗಬೇಕಾಗಿತ್ತು. ನನ್ನ ಬಗ್ಗೆ ತಮ್ಮ ಹೃದಯದಲ್ಲಿರುವ ಅಂತಃಕರಣವು ಹೇಗೆ ಒಮ್ಮೆಲೆ ಅಟ್ಟಿಸಿತು? ಹೇ ನಾಥ, ನನ್ನನ್ನಗಲಿ ಒಂದು ಕ್ಷಣ ಸಹ ಇರದ ತಾವು ಒಮ್ಮಿಂದೊಮ್ಮೆ ಹೇಗೆ ನಿರ್ದಯರಾದಿರಿ?

ಈ ಮೇರೆಗೆ ಪಿಂಗಲೆಯ ಶೋಕಧ್ವನಿಯನ್ನು ಕೇಳಿದ ಕೂಡಲೇ ಭರ್ತರಿಯ ಉಳಿದ ಸ್ತ್ರೀಯರು ಬಹಳ ಗಾಬರಿಯಾಗಿ ಪಿಂಗಲೆಯ ಮಂದಿರಕ್ಕೆ ಬಂದರು. ಪತಿಯು ಮೃತಪಟ್ಟ ಸಂಗತಿಯನ್ನು ಕೇಳಿ ಅವರು

ಬಹಳ ದುಃಖದಲ್ಲಿ ಬಿದ್ದರು. ಕೆಲವರು ಮೂರ್ಛೆ ಹೋದರು. ಕೆಲವರು ಹಣೆಹಣೆ ಬಡಕೊಳ್ಳಹತ್ತಿದರು. ಕೆಲವರು ಒಬ್ಬರಿಗೊಬ್ಬರ ಕೊರಳಿಗೆ ಬಿದ್ದು ವಿಲಾಪಿಸಹತ್ತಿದರು. ಇವರೆಲ್ಲರ ದುಃಖವನ್ನು ಕೇಳಿ ಪಿಂಗಲೆಯ ದುಃಖವು ಅಳತೆ ತಪ್ಪಿತು. ಭರ್ತರಿಯ ಗುಣವರ್ಣನವನ್ನು ಮಾಡಿಕೊಳ್ಳುತ್ತ ದೊಡ್ಡಧ್ವನಿಯಿಂದ ಅಳಹತ್ತಿದಳು. ಭರ್ತರಿಯಿಂದ ಒದಗಿದ ಪ್ರೇಮಜನ್ಯ ಮಾತನ್ನು ನೆನಪಿಗೆ ತಂದುಕೊಂಡು ತನ್ನ ದುಃಖಾಶ್ರುಗಳಿಂದ ಭೂಮಿಯನ್ನು ತೋಯಿಸಿ ಬಿಟ್ಟಳು. ಎಷ್ಟು ದುಃಖಿಸಿದರೂ ಭರ್ತರಿಯು ತಿರುಗಿ ಬರಲಾರ ನೆಂದು ತಿಳಿದು ಆ ಸಾಧ್ವಿಯಾದ ಪಿಂಗಲೆಯು ಸಹಗಮನಕ್ಕೆ ಸಿದ್ಧಳಾದಳು. ಆಕೆಯ ಉದ್ದೇಶವನ್ನು ಅರಿತು ಜನರು ದುಃಖ ಮತ್ತು ಆಶ್ಚರ್ಯಗಳಿಂದ ಯುಕ್ತರಾದರು. ಆ ಕಾಲಕ್ಕೆ ವಿಕ್ರಮರಾಜನು ಅವಂತಿನಗರದಲ್ಲಿ ಇದ್ದಿಲ್ಲ. ಅವನು ಊರಲ್ಲಿದ್ದರೆ ವಿಚಾರಮಾಡಿದ ಹೊರತು ಪಿಂಗಲೆಗೆ ಸಹ ಗಮನ ಹೋಗಗೊಡುತ್ತಿದ್ದಿಲ್ಲ. ಅರಮನೆಯೊಳಗಿನ ಉಳಿದ ಪರಿವಾರದ ವರು ಪಿಂಗಲೆಯ ಸಹಗಮನದ ಇಚ್ಛೆಗೆ ಒಪ್ಪಿಗೆಯನ್ನು ಕೊಟ್ಟರು. ಪಿಂಗ ಲೆಯು ಭರ್ತರಿಯ ವಸ್ತ್ರ, ಅಲಂಕಾರಗಳನ್ನು ಪರಿಧಾನ ಮಾಡಿದಳು. ತನ್ನ ಅನಂತ ಆಪ್ತಜನರೊಡನೆ ಸಹಗಮನಕ್ಕಾಗಿ ಸ್ಮಶಾನಕ್ಕೆ ಹೋದಳು. ಆ ಸ್ಥಳದಲ್ಲಿ ಸೇವಕರು ಒಂದು ಅಗ್ನಿಕುಂಡವನ್ನು ಸಿದ್ಧಮಾಡಿದ್ದರು. ಕುಂಡ ದೊಳಗಿನ ಅಗ್ನಿಯು ಪ್ರಜ್ವಲಿತವಾಗಿ ಆಕಾಶ ಮುಟ್ಟುವಂತೆ ತೋರಿತು. ಸಹಗಮನಕ್ಕಾಗಿ ಪತಿಯ ಪ್ರೇತವು ಅವಶ್ಯವಾಗಿ ಬೇಕಾದ್ದರಿಂದ ಆ ಕಾ- ಲಕ್ಕೆ ವಿಘ್ನವು ಉಂಟಾಯಿತು. ಆದರೆ ಭರ್ತರಿಯ ಶವವು ದೊರೆಯುವದು ಕಠಿಣವಾದ್ದರಿಂದ ಭರ್ತರಿಯ ಹೆಸರಿನಿಂದ ಒಂದು ಕಲ್ಲನ್ನು ಯೋಜಿಸಿ ಸತಿ ಹೋಗುವದನ್ನು ನಿರ್ಧರಿಸಿಕೊಂಡಳು. ಪಿಂಗಲೆಯು ಚಿತೆಯ ಮುಂದೆ ನಿಂತುಕೊಂಡು ಎಲ್ಲರ ಆಜ್ಞೆಯನ್ನು ಬೇಡಹತ್ತಿದಳು. ಎಲ್ಲರೂ ಶುಭದಾ ಯಕವಾದ ಆಶೀರ್ವಾದವನ್ನು ಕೊಡಲು ಪಿಂಗಲೆಯು ಅಗ್ನಿಯ ಮುಂದೆ ಕೈಜೋಡಿಸಿಕೊಂಡು ನಿಂತು ಪತಿಯನ್ನುದ್ದೇಶಿಸಿ—''ಹೇ ಪ್ರಿಯನಾಥ! ನಿನಗೆ ಜಯಜಯಕಾರವಿರಲಿ! ಈ ನನ್ನ ದೇಹವು ನಿನ್ನದೇ ಇರುವದು. ನಿನ್ನಿಂದಲೇ ಈ ದೇಹಕ್ಕೆ ಪವಿತ್ರತೆಯು ಉಂಟಾಗುವದು. ನಿನ್ನ ವಿರಹಿತ ದೇಹವು ಬರೇಪ್ರೇತವೆಂದು ತಿಳಿಯಬೇಕು! ಈ ನನ್ನ ದೇಹವನ್ನು ನಿನಗೆ ಚಿರ

ಕಾಲ ಅಪೇಕ್ಷಿಸುತ್ತೇನೆ? ಹೀಗೆಂದು ಆ ಸಾಧ್ವಿಯು ಕುಂಡದಲ್ಲಿ ಹಾರಿಕೊಂಡಳು! ಸರ್ವಭಕ್ಷಕನಾದ ಅಗ್ನಿಯು ಪಿಂಗಳೆಯ ದೇಹವನ್ನು ಭಸ್ಮ ಮಾಡಿದನು.

ಎಲ್ಲರೂ ಪಿಂಗಲೆಯನ್ನು ಕೊಂಡಾಡಿದರು. ಪಾತಿವ್ರತ್ಯದ ಎಲ್ಲ ಕುಲೀನ ಸ್ತ್ರೀಯರು ಪಿಂಗಲೆಯ ಸ್ತೋತ್ರವನ್ನು ಮಾಡಿದರು. ಔದಾರ್ಯದಲ್ಲಿ ಪ್ರಖ್ಯಾತಿಹೊಂದಿದ ಕರ್ಣನ ಕೀರ್ತಿಯು ಒಂದೇ ಬಗೆಯಾಗಿರುವದು; ಕರ್ಣನು ಉದಾರಬುದ್ಧಿಯಿಂದ ತನ್ನ ಕುಲವನ್ನು ಮಾತ್ರ ಉದ್ಧಾರಮಾಡಿಕೊಂಡನು; ಆದರೆ ಅನ್ಯರ ಕುಲವನ್ನು ಉದ್ಧರಿಸುವ ಯತ್ನ ಮಾಡಲಿಲ್ಲ. ಪಿಂಗಲೆಯು ತನ್ನ ಧೈರ್ಯ ಔದಾರ್ಯ ಗುಣಗಳಿಂದ ಉಭಯ ಕುಲಗಳನ್ನು ಉದ್ಧರಿಸಿದಳು. ಅಂದಬಳಿಕ ಪಿಂಗಲೆಯು ಕರ್ಣನಿಗಿಂತಲೂ ಬಹಳ ಶ್ರೇಷ್ಠಳೆಂದು ಸರ್ವರೂ ಆಕೆಯನ್ನು ಹೊಗಳಿದರು. ಕೆಲವು ಜನರು ಭರ್ತರಿಯ ಗುಣಾನುವಾದವನ್ನು ಮಾಡಿ ದುಃಖಿಸಿದರು. ಪಿಂಗಲೆಯು ಭಸ್ಮವಾಗಲು, ಎಲ್ಲ ಸಮುದಾಯವು ಮನೆಗೆ ಬಂದಿತು. ಪಿಂಗಲೆಗೆ ಭರ್ತರಿಯ ಮರಣದ ವಾರ್ತೆಯನ್ನು ತಿಳಿಸಿದ ದೂತನು ಅಲ್ಲಿ ಬಹಳ ಹೊತ್ತು ನಿಲ್ಲದೆ, ಕೂಡಲೆ ಭರ್ತರಿಯ ಕಡೆಗೆ ತಿರುಗಿ ಅರಣ್ಯದಲ್ಲಿ ಸಾಗಿದ್ದನು. ಅವನು ತನ್ನ ಕಾರ್ಯವನ್ನು ರಾಜನ ಅಪ್ಪಣೆಯಂತೆ ಮಾಡಿಕೊಂಡು ಬಂದು ಭರ್ತರಿಗೆ ತಿಳಿಸಿದನು. ಮೊದಲು ಭರ್ತರಿಗೆ ಹಿತವೆನಿಸಿತು: ಕೆಲವು ಹೊತ್ತಿನ ಮೇಲೆ ಪರಿವಾರ ಸಹವಾಗಿ ರಾಜಧಾನಿಯ ಕಡೆಗೆ ಹೋಗುವಾಗ ಅವನ ಮನಸ್ಸಿನಲ್ಲಿ ಅಸ್ವಸ್ಥತೆಯುಂಟಾಯಿತು. ಪರಿವಾರವು ತಿರುಗಿ ರಾಜಧಾನಿಗೆ ಬರುವಾಗ ಕತ್ತಲೆಯು ಬಹಳ ಬಿದ್ದದರಿಂದ ಹಿಲಾಲನ್ನು ಹಚ್ಚಿ ಬೆಳಕು ಮಾಡಿದ್ದರು. ಆ ಪ್ರಕಾಶದಲ್ಲಿ ಮಾರ್ಗಕ್ರಮಣ ಮಾಡುತ್ತಿರಲು ಮನಸ್ಸಿನಲ್ಲಿ ಯಾವಾಗಲೂ ಪಿಂಗಲೆಯ ಬಗ್ಗೆ ವಿಚಾರಿಸುತ್ತಿದ್ದನು. ತನ್ನ ನಿಧನದ ಸುದ್ದಿಯನ್ನು ಕೇಳಿ ಪಿಂಗಲೆಯು ಯಾವ ಪ್ರಕಾರ ಮಾಡಿದಳೋ ಹೇಗೆ ಎಂಬ ಬಗ್ಗೆ ಅನೇಕ ಕಲ್ಪನೆಗಳು ಮನಸ್ಸಿನಲ್ಲಿ ಬಂದು ತನ್ನ ಕಪಟಕೃತಿಯ ಬಗ್ಗೆ ಪಶ್ಚಾತ್ತಾಪ ಪಡುತ್ತಿದ್ದನು. ತನ್ನ ಪ್ರತಿಜ್ಞೆಯನ್ನು ನಿಜಮಾಡಿ ಆ ಸಾಧ್ವಿಯು ತನ್ನ ಯಶಸ್ಸನ್ನು ಹರಡಿದ್ದರೆ, ನನಗೆ ಬಹಳ ಕಠಿಣ ಪ್ರಸಂಗವು ಒದಗುವದೆಂದು ಮನಸ್ಸಿನಲ್ಲಿ ತಳಮಳಿಸುತ್ತಿದ್ದನು. ಈ ಸ್ಥಿತಿಯಲ್ಲಿ ಮಾರ್ಗಕ್ರಮಿಸುತ್ತಿರಲು, ಭರ್ತರಿಯ ಎಲ್ಲ ಸೈನ್ಯವು ನಗರದ ಬಾಗಿಲಿಗೆ ಬಂದು

ಮುಟ್ಟಿತು. ಭರ್ತರಿಯನ್ನು ಕಂಡು ದ್ವಾರಪಾಲಕರು ಆನಂದಾಶ್ಚರ್ಯ ಭರಿತರಾಗಿ ರಾಜನಿಗೆ ಮುಜುರೆಮಾಡಿ ಅಂದದ್ದೇನಂದರೆ, "ಮಹಾರಾಜ, ಇದೇನು ಅದ್ಭುತ ಚಮತ್ಕಾರವು! ತಾವು ಪುನಃ ಜೀವಂತ ಹೇಗೆ ಬಂದಿರಿ? ಯಾವನಾದರೂ ದುಷ್ಟನು ಕಪಟಕೃತ್ಯವನ್ನು ಮಾಡಿರುವನೋ ಹೇಗೆ ತಿಳಿಯದು! ಕೆಲಸವು ಕೆಟ್ಟುಹೋಯಿತು! ತಾವು ಬಂದದ್ದು ಒಳ್ಳೆಯದಾದರೂ ನಮ್ಮ ಸ್ವಾಮಿನಿಯಾದ ಪಿಂಗಲಾದೇವಿಯು ಮಾತ್ರ ತಿರುಗಿಬರುವದು ಶಕ್ಯವಿಲ್ಲ."

ದ್ವಾರಪಾಲಕರ ಶಬ್ದವನ್ನು ಕೇಳಿ ಭರ್ತರಿಯು ಕೈಕಾಲೇಹೋದವು. ಎಲ್ಲ ಸಂಗತಿಯನ್ನು ತಿಳಿಸಬೇಕೆಂದು ಭರ್ತರಿಯು ದ್ವಾರಪಾಲಕರಿಗೆ ಆಜ್ಞೆ ಮಾಡಿದನು. ಅದನ್ನು ಕೇಳಿ ದ್ವಾರಪಾಲಕರು ಪಿಂಗಲೆಯ ಸಂಬಂಧದಿಂದ ಎಲ್ಲ ವಾರ್ತೆಗಳನ್ನು ಹೇಳಿದರು. ಪಿಂಗಲೆಯು ಭಸ್ಮವಾಗಿ ಒಂದು ಪ್ರಹರವಾಗಿರುವದೆಂದು ದೂತರ ಮುಖದಿಂದ ಕೇಳಿ ಭರ್ತರಿಯು ದೊಡ್ಡಧ್ವನಿಯಿಂದ ಅಳಹತ್ತಿದನು. ಅವನು ಬಹಳ ಶೋಕಿಸಿ ಸ್ಮಶಾನದ ಕಡೆಗೆ ಸಾಗಿದನು. ಅವನ ಸೈನಿಕರೂ ಅವನ ಬೆನ್ನಹಿಂದೆ ಧಾವಿಸಿದರು. ಪಿಂಗಲೆಯ ಚಿತೆಯನ್ನು ನೋಡಿ ಭರ್ತರಿಗೆ ಪರಮಾವಧಿ ದುಃಖವಾಗಿ ಅವನು ತನ್ನ ಜೀವದಾಶೆಯನ್ನು ಬಿಟ್ಟನು. ತನ್ನ ಸಲುವಾಗಿ ಪಿಂಗಲೆಯು ತನ್ನ ದೇಹವನ್ನು ಭಸ್ಮಮಾಡಿಕೊಂಡಿರಲು, ಆಕೆಯ ಸಲುವಾಗಿ ತನ್ನ ದೇಹವನ್ನು ದಗ್ಧ ಮಾಡುವದು ವಿಹಿತವೆಂದು ತನ್ನ ಭಾರ್ಯೆಯ ಚಿತೆಯಲ್ಲಿ ಹಾರಿಕೊಳ್ಳುವಷ್ಟರಲ್ಲಿ ಅವನ ಸೈನಿಕರು ಆ ಸ್ಥಳಕ್ಕೆ ಬಂದರು. ಆ ಸೈನಿಕರೊಳಗೆ ಕೆಲ ಜನ ಸರದಾರರು ಧಾವಿಸಿ ಬಂದು ಭರ್ತರಿಯನ್ನು ಹಿಡಿದುಕೊಂಡರು. ಅವರ ಮುಂದೆ ತನ್ನ ಯತ್ನವು ಸಾಗದಾಗಲು, ಭೂಮಿಯಮೇಲೆ ಬಿದ್ದುಕೊಂಡನು. ವಕ್ಷಸ್ಥಳಕ್ಕೆ ಬಡಬಡಕೊಂಡು ಭೂಮಿಯಮೇಲೆ ಉರುಳಾಡಹತ್ತಿದನು. ಶೋಕಾತಿಶಯದಿಂದ ಅವನಿಗೆ ಮೇಲಿಂದಮೇಲೆ ಮೂರ್ಛೆಯು ಬರುತ್ತಿತ್ತು. ಹತ್ತರಿದ್ದವರನ್ನು ಸರಿಸಿ ತನ್ನ ಜೀವವನ್ನು ಕೊಡುವದಕ್ಕಾಗಿ ಯತ್ನಮಾಡಹತ್ತಿದನು. ಅವನನ್ನು ಹಿಡಿದುಕೊಂಡ ಸರದಾರರು ಸ್ವಲ್ಪ ಕೈಬಿಟ್ಟಿದ್ದರೆ ಭರ್ತರಿಯು ತನ್ನ ಕಾರ್ಯವನ್ನು ಸಾಧಿಸಿಕೊಂಡು ಬಿಡುತ್ತಿದ್ದನು; ಆದರೆ ಆ ಸಶಕ್ತ ಸರದಾರರಮುಂದೆ ಭರ್ತರಿಯ ಆಟವು ನಡೆಯ

ಲಿಲ್ಲ ಅವನು ನಿರಾಶೆಯಿಂದ ಒದರಾಡಹತ್ತಿದನು. ತಾನು ಕಪಟವಿನೋದ ದಿಂದ ಪಿಂಗಲೆಯ ವಧಮಾಡಿದ್ದು ನೆನಪಾಗಲು, ಅವನು ಶೋಕಮಾಡಹತ್ತಿ ದನು. "ಹೇ ಸತಿ ಪಿಂಗಲೆ! ನನ್ನನ್ನು ಪತಿಯೆಂದು ತಿಳಿದು ಕೇವಲ ಈಶ್ವರ ಭಾವನೆಯಿಂದ ನಡೆದುಕೊಳ್ಳುತ್ತಿದ್ದಿ. ಕಡೆಗೆ ನಾನು ನಿನಗೆ ಶತ್ರುವಾದೆನು. ಕಪಟಾಚರಣೆಯಿಂದ ನಿನ್ನನ್ನು ಭಸ್ಮ ಮಾಡಿದೆನು. ಸತಿಯೆಂದು ನಿನ್ನ ಮಾನವನ್ನು ಕಾಯ್ದುಕೊಂಡಂತೆ ನನ್ನ ಕರ್ತವ್ಯವಾಗಿದ್ದು, ದುಷ್ಟನಾದ ನಾನು ದುರಾಚರಣೆಯನ್ನು ಮಾಡಿ ನಿನ್ನ ಪ್ರಾಣವನ್ನು ವ್ಯರ್ಥವಾಗಿ ತೆಗೆದುಕೊಂಡೆನು. ಹೇ ಪಿಂಗಲೇ! ಕೃಪೆಮಾಡಿ ಒಂದುಸಾರೆಯಾದರೂ ನನಗೆ ಬೆಟ್ಟಿಯನ್ನು ಕೊಡು; ಪಿಂಗಲೇ! ನನ್ನನ್ನು ದುಃಖದಲ್ಲಿ ಕೆಡವಿ ನೀನು ಸ್ವರ್ಗಲೋಕಕ್ಕೆ ಹೇಗೆ ಹೊರಟುಹೋದೆ? ನೀನು ನನ್ನನ್ನು ಬಿಟ್ಟು ಒಂದು ದಿವಸವಾದರೂ ಅನ್ನವನ್ನು ತೆಗೆದುಕೊಳ್ಳುತ್ತಿದ್ದಿಲ್ಲ. ಹೀಗಿರಲು, ನೀನು ಪರಲೋಕದಲ್ಲಿ ನನ್ನನ್ನು ಬಿಟ್ಟು ಹೇಗೆ ವಾಸಿಸುತ್ತೀ? ನನಗೆ ತಿಳಿ ಯದು. ನಿನ್ನ ಹೊರತು ನನಗೆ ಎಲ್ಲ ದಿಕ್ಕು ಬೇಸರಾಗಿ ತೋರುತ್ತವೆ. ಪಿಂಗಲೇ! ನೀನು ಸ್ವರ್ಗಲೋಕಕ್ಕೆ ಹೋದರೆ ನನ್ನ ಪ್ರಾಣವು ಹೋಯಿ ತೆಂದು ತಿಳಿ. ಪಿಂಗಲೇ! ನಿನ್ನನ್ನು ಬಿಟ್ಟರೆ ಈ ಮಂದಿರವೆಲ್ಲ ಕೇವಲ ಸ್ಮಶಾನ ವೆಂದು ತಿಳಿಯುತ್ತೇನೆ ಪಿಂಗಲೇ! ನೀನೊಬ್ಬಳಿದ್ದರೆ, ನನಗೆ ಹಸಿವೆ ನೀರ ಡಿಕೆ ಆಗುತ್ತಿದ್ದಿಲ್ಲ. ಈ ಸಮಯದಲ್ಲಿ ನೀನು ಇಷ್ಟು ನಿಷ್ಠುರಳು ಯಾಕಾದೆ? ಪಿಂಗಲೇ! ಊರ್ವಶೀ ಸಮಾನವಾದ ನಿನ್ನ ರೂಪವನ್ನು ನೋಡಿ ಸಮಾಧಾನಗೊಳ್ಳುತ್ತಿದ್ದೆನು. ಇನ್ನು ಯಾರ ಕಡೆಗೆ ಹೋಗಿ ಸಮಾಧಾನ ಹೊಂದಬೇಕು? ಗಂಧದಂತೆ ಪರಿಮಳವುಳ್ಳ ನಿನ್ನ ದೇಹದಲ್ಲಿ ಭ್ರಮರದಂತೆ ಕ್ರೀಡಿಸುತ್ತಿದ್ದೆನು. ಇನ್ನು ನನಗೆ ಈ ಸುಖದ ಲಾಭವು ಹೇಗೆ ದೊರಕ ಬೇಕು? ಪಿಂಗಲೇ! ನಿನ್ನ ಗುಣವರ್ಣನವನ್ನು ಎಷ್ಟೆಂತ ಮಾಡಲಿ? ನಿನ್ನ ಅಂತಃಕರಣವೆಂದರೆ ದಯದ ಭಾಂಡಾರವೇ ಆಗಿತ್ತು. ನೀನು ಧರ್ಮಾನು ಕೂಲೆಯಾಗಿದ್ದು, ಎಲ್ಲರ ದಯೆಗೆ ಪಾತ್ರಳಾಗಿದ್ದಿ. ಪಿಂಗಲೇ! ನಿನಗೆ ಸರಿ ಯಾದ ಬುದ್ಧಿವಂತ ಪತ್ನಿಯ ಸಮಾಗಮದ ಲಾಭವನ್ನು ಹೊಂದಲಿಕ್ಕೆ ಇನ್ನು ಎಲ್ಲಿ ಹೋಗಲಿ?"

ಹೀಗೆ ವಿಲಾಪಿಸುತ್ತ ಭರ್ತರಿಯು ಭೂಮಿಯ ಮೇಲೆ ಉರುಳಾಡ ಹತ್ತಿದನು. ಅವನ ಶೋಕಸ್ವರವನ್ನು ಕೇಳಿ ಬಳಿಯಲ್ಲಿದ್ದ ಸರದಾರರಿಗೂ ದುಃಖವೆನಿಸಿತು. ಮೇಲಾದ ಚಂಗನದಿಂದ ಸುತ್ತುವರಿತ್ತಿರುವ ವೃಕ್ಷಗಳು ಸುಗಂಧಮಯವಾಗುವಂತೆ ಭರ್ತರಿಯ ಶೋಕದಿಂದ ಬಳಿಯಲ್ಲಿರುವ ಜನ ಸಮುದಾಯವು ಶೋಕಗ್ರಸ್ತವಾಯಿತು.

ಭರ್ತರಿಯ ಈ ಎಲ್ಲ ಸಂಗತಿಯು ಶಹರದಲ್ಲಿ ಗೊತ್ತಾಯಿತು. ಪಿಂಗಲೆಯ ಮರಣದಿಂದ ಶಹರದೊಳಗಿನ ಜನರು ಬಹಳ ದುಃಖಿತರಾಗಿದ್ದರು. ಆದರೆ ಭರ್ತರಿಯು ಜೀವಂತನಿದ್ದಾನೆಂದು ಕೇಳಿ ಅವರಿಗೆ ಸಮಾಧಾನವೆನಿಸಿತು. ಎಲ್ಲ ಗ್ರಾಮವಾಸಿಗಳು ಕಲೆತು ಸ್ಮಶಾನಕ್ಕೆ ಹೋದರು. ಮತ್ತು ಭರ್ತರಿಗೆ ಸಮಾಧಾನ ಹೇಳಿದರು. ಭರ್ತರಿಯು ಯಾರ ಮಾತೂ ಕೇಳದಾದನು. ಆಗ ಯತ್ನವಿಲ್ಲದಾಗಿ ಎಲ್ಲರು ಸ್ವಸ್ಥ ಕುಳಿತರು. ತಮ್ಮ ತಾತ್ವಿಕ ಉಪದೇಶದಿಂದ ಭರ್ತರಿಯು ತನ್ನ ಆಗ್ರಹವನ್ನು ಬಿಡುವದಿಲ್ಲೆಂದು ತಿಳಿದು ಅವರು ತಿರುಗಿ ಹೋದರು.

ಭರ್ತರಿಯು ಆ ರಾತ್ರಿಯಲ್ಲಿಯೂ ಸ್ಮಶಾನದಲ್ಲಿ ಉಳಿದನು. ಬೆಳಗಾಗಲು, ಪಿಂಗಲೆಯ ಬೂದಿಯನ್ನು ಒಗೆಯುವ ಸಲುವಾಗಿ ಆಕೆಯ ಆಪ್ತ ಜನರು ಪುನಃ ಸ್ಮಶಾನದಲ್ಲಿ ಪ್ರಾಪ್ತರಾದರು. ಆಕೆಯ ಚಿತೆಯು ಶಾಂತವಾಗಿರುವದನ್ನು ಕಂಡು ಆಕೆಯ ಅಸ್ಥಿಯನ್ನು ಕೂಡಿಸುವದಕ್ಕಾಗಿ ಪ್ರಾರಂಭಿಸಿದರು; ಅದನ್ನು ಕಂಡು ಭರ್ತರಿಯು ಅಡ್ಡಿಮಾಡಿದನು. ಪಿಂಗಲೆಯ ಚಿತೆಯೊಳಗಿನ ಬೂದಿಯಲ್ಲಿ ಹೋಗಿ ಕುಳಿತುಕೊಂಡನು. ಅವನು ಯಾರಿಗೂ ಚಿತೆಯ ಸ್ಪರ್ಶವನ್ನು ಮಾಡಗೊಡಲಿಲ್ಲ. ಅದನ್ನು ಕಂಡು ಆಪ್ತಜನರು ತಿರುಗಿ ಹೋದರು. ಭರ್ತರಿಯು ಮಾತ್ರ ಆ ಪಿಂಗಲೆಯ ನಾಮ ಜಪಿಸುತ್ತ ಅನ್ನ-ನೀರನ್ನು ಬಿಟ್ಟು ಅಲ್ಲಿಯೇ ಉಳಿದನು.

ಅವಂತೀನಗರದಲ್ಲಿ ಈ ಎಲ್ಲ ಸಂಗತಿಯು ಒದಗುವಾಗ ವಿಕ್ರಮರಾಜ ಮತ್ತು ಶುಭವಿಕ್ರಮ ಮೊದಲಾದ ಮಂಡಳಿಗಳಲ್ಲಿ ಒಬ್ಬರೂ ಅಲ್ಲಿ ಇದ್ದಿಲ್ಲ. ಆ ಎಲ್ಲ ಜನರು ಸತ್ಯವರ್ಮನ ಆಗ್ರಹಕ್ಕಾಗಿ ಮಿಥಿಲಾಪಟ್ಟಣಕ್ಕೆ ಹೋಗಿದ್ದರು. ಭರ್ತರಿಯ ಈ ಎಲ್ಲ ನಿರ್ವಾಣದ ಸಂಗತಿಯನ್ನು ದೂತನು ಮಿಥಿಲಾಪಟ್ಟಣಕ್ಕೆ ಹೋಗಿ ವಿಕ್ರಮನಿಗೆ ಹೇಳಿದನು. ಈ ಅದ್ಭುತಕೃತಿಯನ್ನು

ಕೇಳಿ ಅಲ್ಲಿಯ ಎಲ್ಲ ಮಂಡಳಿಯು ಶೋಕಿಸಹತ್ತಿತು. ಪಿಂಗಲೆಯ ತಂದೆಯಾದ ಸುಮಂತನು ಪಿಂಗಲೆಯ ಮೂರ್ತಿಯನ್ನು ಮನಸ್ಸಿನಲ್ಲಿ ತಂದು ಶೋಕಸಾಗರದಲ್ಲಿ ನಿಮಗ್ನನಾದನು. ವಿಕ್ರಮರಾಜನು ಎಲ್ಲರನ್ನು ಸಂಗಡ ಒರವಮಾಡಿಕೊಂಡು ಮೊದಲು ಸ್ಮಶಾನಕ್ಕೆ ಹೋದನು. ಪಿಂಗಲೆಯ ಚಿತೆ ಮತ್ತು ಭರ್ತರಿಯನ್ನು ನೋಡಿ ಅವನ ಕಂಠವು ಗದ್ಗದಿತವಾಯಿತು. ಪಿಂಗಲೆಯ ಗುಣಗಳನ್ನು ವರ್ಣಿಸುತ್ತ ಎಲ್ಲರೂ ದುಃಖಿಸಹತ್ತಿದರು. ಸುಮಂತನು ತನ್ನ ಭಾಗ್ಯವೇ ಹೋಯಿತೆಂದು ಹಂಬಲಿಸಿದನು. ವಿಕ್ರಮನಿಗೆ ತನ್ನ ಅರಮನೆಯೊಳಗಿನ ರತ್ನವೇ ಹೋಯಿತೆಂದು ಅನಿಸಿತು. ಅಂತಃಪುರದೊಳಗಿನ ಸ್ತ್ರೀ ಭಾಂಡಾರದಿಂದ ಪಿಂಗಲೆಯನ್ನೇ ಯಮನು ಒಯ್ದುದ್ದಕ್ಕಾಗಿ ವಿಕ್ರಮನು ದುಃಖಿಸಿ ಭರ್ತರಿಯನ್ನು ಸಮಾಧಾನಗೊಳಿಸುವದಕ್ಕಾಗಿ ತಾನು ಶೋಕವನ್ನು ತ್ಯಜಿಸಿ ಭರ್ತರಿಯ ಸಮೀಪಕ್ಕೆ ಹೋಗಿ ಅನೇಕ ಪ್ರಕಾರದಿಂದ ಸಮಾಧಾನಗೊಳಿಸಹತ್ತಿದನು. ಸರ್ವವಿಶ್ವವು ನಾಶವಂತವದೆ, ಜಗತ್ತಿನೊಳಗೆ ಯಾರೂ ಚಿರಂಜೀವರಿಲ್ಲ. ಅಶಾಶ್ವತ ವಸ್ತುವಿನ ಬಗ್ಗೆ ಚಿಂತಿಸುವದು ವ್ಯರ್ಥವು. ಆಗತಕ್ಕ ಸಂಗತಿಯು ಆಗೇ ತೀರುವದು. ಈ ಬಗ್ಗೆ ಮನುಷ್ಯನು ಸುಖ-ದುಃಖಗಳನ್ನು ಕಲ್ಪಿಸುವದು ಅಜ್ಞಾನವು. ಇಂದಿನ ವರೆಗೆ ನಮ್ಮ ಪೂರ್ವಜರೆಲ್ಲರೂ ಮೃತ್ಯುಮುಖದಲ್ಲಿ ಬಿದ್ದಿರುವರು. ಆ ಮೇರೆಗೆ ಪಿಂಗಲೆಯೂ ಕಾಲವಶಳಾದಳು. ನಮ್ಮ ವೇಳೆಯೂ ಬಂದರೆ ಒಂದು ಕ್ಷಣದಲ್ಲಿ ಈ ಲೋಕವನ್ನು ಬಿಟ್ಟು ಹೋಗುವೆವು. ನಾವು ಯಾರೂ ಚಿರಕಾಲ ಇರಲಾರೆವು. ಜಪಿ, ತಪಿ, ಸಾಧು, ಢೋಂಗಿ ಇವರಲ್ಲಿ ಯಾರನ್ನೂ ಮಹಾಕಾಲನು ಬಿಡುವದಿಲ್ಲ. ಕಣ್ಣಿಗೆ ಕಾಣಿಸುವದೆಲ್ಲ ನಾಶವಾಗುವದೆಂದು ತಿಳಿದು ಜ್ಞಾನಸಂಪನ್ನ ಜನರು ಯಾವ ಸಂಗತಿಯ ಒಗ್ಗೆಯೂ ದುಃಖ ಮಾಡುವದಿಲ್ಲ.'' ಈ ಪ್ರಕಾರ ಅನೇಕ ಉದಾಹರಣೆಗಳಿಂದ ಭರ್ತರಿಯ ಸಮಾಧಾನ ಮಾಡಹತ್ತಿದನು. ಆದರೆ ಏನು ಪ್ರಯತ್ನ ಮಾಡಿದರೂ ಭರ್ತರಿಯು ಹೆಂಡತಿಯ ಚಿತೆಯಿಂದ ಅಗಲದಾದನು. ಬಳಿಕ ವಿಕ್ರಮನು ಪಿಂಗಲೆಯ ಸರ್ವ ಉತ್ತರಕ್ರಿಯೆಯನ್ನು ಮಾಡಿದನು. ವೃಂದಾವನದಲ್ಲಿ ಶ್ರೀ ವಿಷ್ಣುವು ಅಚಲನಾಗಿ ಕುಳಿತಂತೆ ಭರ್ತರಿಯು ಪಿಂಗಲೆಯ ಚಿತೆಯ ಹತ್ತರ ಒಂದೇಸವನೆ ತಿರುಗುತ್ತಿದ್ದನು. ವಿಕ್ರಮರಾಜನು ತನ್ನ

ಕೆಲಸಬೊಗಸೆಗಳನ್ನು ತೀರಿಸಿ ನಿತ್ಯಸ್ಮಶಾನದಲ್ಲಿ ಹೋಗಿ ಭರ್ತರಿಗೆ ಬೋಧಿಸುತ್ತಿದ್ದನು. ಆದರೂ ಪ್ರಯೋಜನವಾಗಲಿಲ್ಲ. ಈ ಮೇರೆಗೆ ಹನ್ನೆರಡು ವರ್ಷಗಳು ಕಳೆದವು. ಭರ್ತರಿಯು ಸ್ಮಶಾನದಲ್ಲಿ ಶಾಶ್ವತವಾಗಿ ವಾಸ ಮಾಡಿದನು. ಆ ಸ್ಥಳದಲ್ಲಿ ಅವನು ಎಲಿ, ಹುಲ್ಲು ತಿಂದು ಹೊಟ್ಟೆತುಂಬಿಕೊಳ್ಳುತ್ತಿದ್ದನು ಒಮ್ಮೊಮ್ಮೆ ಬರೇ ನೀರಮೇಲಿಂದಲೇ ಇರುತ್ತಿದ್ದನು. ಎಷ್ಟು ದಿವಸಗಳಾದರೂ ಪಿಂಗಲೆಯು ಹಂಬಲವು ಹೋಗಲಿಲ್ಲ. ಅವನು ಅವಳ ಮರಣದ ಬಗ್ಗೆ ಪರಮೇಶ್ವರನನ್ನು ಜರೆಯುತ್ತ ಒಂದೇ ಸವನೇ ಚಿಂತಿಸುತ್ತಿದ್ದನು. ಈ ಮೇರೆಗೆ ಒಂದು ತಪಹೋಗಲು ಭರ್ತರಿಯು ಕೃಶನಾದನು. ಪುತ್ರನ ಕ್ಲೇಶವನ್ನು ನೋಡಿ ಭರ್ತರಿಯ ತಂದೆಯಾದ ಮಿತ್ರಾವರುಣನಿಗೆ ಬಹಳ ಆಶ್ಚರ್ಯವಾಯಿತು. ಅವನು ಕೂಡಲೆ ಶ್ರೀದತ್ತಾತ್ರಯನ ಭೆಟ್ಟಿಗೆ ಹೋದನು. ದತ್ತನು ಮಿತ್ರಾವರುಣನನ್ನು ಸನ್ಮಾನಿಸಿದನು. ಮತ್ತು ಬಂದ ಕಾರಣವನ್ನು ವಿಚಾರಿಸಿದನು. ದತ್ತನ ಮಾತನ್ನು ಕೇಳಿ ಮಿತ್ರಾವರುಣನು ಉತ್ತರಕೊಟ್ಟನೇನಂದರೆ—"ಹೇ ಗುರುಮಹಾರಾಜ, ತಾವು ಸರ್ವಜ್ಞರಿದ್ದು ನನಗೆ ಹೀಗೆ ಪ್ರಶ್ನಮಾಡಿದ್ದರಿಂದ ನನ್ನ ಉದ್ದೇಶವನ್ನು ತಿಳಿಸತ್ತೇನೆ ತಮ್ಮ ಶಿಷ್ಯನಾದ ಭರ್ತರಿಗೆ ಈಗ ಯಾವ ಅವಸ್ಥೆಯು ಪ್ರಾಪ್ತವಾಗಿರುವದೆಂಬುವದನ್ನು ತಾವು ಧ್ಯಾನದಲ್ಲಿ ತಂದುಕೊಳ್ಳಬೇಕು. ತಮಗೆ ಈ ಸಂಗತಿಯನ್ನು ತಿಳಿಸುವದಕ್ಕಾಗಿ ಇಲ್ಲಿಗೆ ಬಂದಿರುವೆನು.

ಇದನ್ನು ದತ್ತಾತ್ರಯನು ಜ್ಞಾನದೃಷ್ಟಿಯಿಂದ ವಿಚಾರಿಸಿ ಭರ್ತರಿಯ ಸ್ಥಿತಿಯನ್ನು ತಿಳಿದುಕೊಂಡನು. ವಿಪತ್ಕಾಲಕ್ಕೆ ಸಿಕ್ಕು ಶೋಕಮಗ್ನನಾಗಿದ್ದಾನೆಂದು ದತ್ತಾತ್ರಯನ ಚಿತ್ತವೆಂಬ ನದಿಯು ದಯೆಯೆಂಬ ಜಲದಿಂದ ತುಂಬಿಬಂತು. ಅವನು ಮಿತ್ರಾವರುಣನಿಗೆ—ನೀವು ನಿಮ್ಮ ಲೋಕಕ್ಕೆ ಹೋಗಬೇಕು. ನಾನು ಭರ್ತರಿಯ ಶೋಕವನ್ನು ಹರಣ ಮಾಡಿ ಅವನ ಕಲ್ಯಾಣವನ್ನು ಮಾಡುವೆನು. ನೀವು ಎಷ್ಟು ಮಾತ್ರವೂ ಚಿಂತಿಸುವ ಕಾರಣವಿಲ್ಲ. ನನ್ನ ಶಿಷ್ಯನ ಶಿಷ್ಯನಾದ ಗೋರಕ್ಷನು ಈಗ ತೀರ್ಥ-ಯಾತ್ರೆಗಳನ್ನು ಮಾಡುತ್ತ ತಿರುಗುತ್ತಾನೆ. ಸ್ವಲ್ಪ ದಿವಸಗಳಲ್ಲಿ ಗೋರಕ್ಷನಾಥನು ಇಲ್ಲಿಗೆ ಬರುವನು. ಅವನನ್ನು ಭರ್ತರಿಯ ಕಡೆಗೆ ಕಳಿಸಿಕೊಡುವೆನು.

ಆ ಗೋರಕ್ಷನಾಥನು ಕುಶಲನೂ, ಸಾಮರ್ಥ್ಯ ಸಂಪನ್ನನೂ ಇದ್ದಾನೆ. ಯುಕ್ತಿಪ್ರಯುಕ್ತಿಯಿಂದ ಭರ್ತರಿಯ ಮನಸ್ಸನ್ನು ಒಲಿಸಿ ಹಿತಕರವಾದ ಮಾರ್ಗಕ್ಕೆ ಹಚ್ಚುವನು.

ದತ್ತಾತ್ರಯನ ಮಾತನ್ನು ಕೇಳಿ ಮಿತ್ರಾವರುಣನಿಗೆ ಸಮಾಧಾನ ವಾಯಿತು. ತನ್ನ ವಚನದಂತೆ ದತ್ತಾತ್ರಯನು ಭರ್ತರಿಯ ದುಃಖವನ್ನು ನಾಶಗೊಳಿಸುವನೆಂದು ನಂಬಿ ಸಂತುಷ್ಟನಾಗಿ ದತ್ತನ ನಿರೋಪಹೊಂದಿ ತನ್ನ ಸ್ಥಾನಕ್ಕೆ ಹೊರಟು ಹೋದನು.

---

# ಅಧ್ಯಾಯ ೨೯

## ಭರ್ತರಿಗೆ ದತ್ತನ ಪ್ರಸಾದ.

ತನ್ನ ಗುರುವಾದ ಮಚ್ಛೇಂದ್ರನನ್ನು ಗರ್ಭಗಿರಿಯ ಮೇಲಿರಿಸಿ ಗೋರಕ್ಷನಾಥನು ತೀರ್ಥ-ಯಾತ್ರೆಗಾಗಿ ಹೋಗಿದ್ದನು. ಅನೇಕ ಯಾತ್ರೆಗಳನ್ನು ಮಾಡಿಕೊಂಡು ಅವನು ದತ್ತಾತ್ರಯರ ದರ್ಶನಕ್ಕಾಗಿ ಗಿರಿಗೆ ಬಂದನು. ಗೋರಕ್ಷನು ಬರಲು ದತ್ತನು ಆತನಿಗೆ ಆಲಿಂಗನವನ್ನು ಕೊಟ್ಟನು. ಮತ್ತು ಗೋರಕ್ಷನ ಮೈಮೇಲೆ ಕೈಯಾಡಿಸಿ ಬಳಿಯಲ್ಲಿ ಕುಳ್ಳಿರಿಸಿಕೊಂಡನು. ಗೋರಕ್ಷನಿಂದ ಮಚ್ಛೇಂದ್ರನ ಸಂಗತಿಯನ್ನು ತಿಳಿದುಕೊಂಡನು. ಮತ್ತು ತೀರ್ಥಾಟನದ ಸಂಗತಿಗಳನ್ನು ತಿಳಿದುಕೊಂಡು ದತ್ತನು ಆತನಿಗೆ ಭರ್ತರಿಯ ಎಲ್ಲ ಸಂಗತಿಯನ್ನು ಹೇಳಿದನು. ಭರ್ತರಿಯ ಎಲ್ಲ ಸಂಗತಿಯನ್ನು ಕೇಳಿ ಗೋರಕ್ಷನಿಗೆ ಆನಂದವಾಯಿತು. ಭರ್ತರಿಯನ್ನು ಶುದ್ಧಮಾರ್ಗಕ್ಕೆ ಹಚ್ಚುವದಕ್ಕೋಸ್ಕರ ದತ್ತಾತ್ರಯನ ಆಜ್ಞೆಯಾಗಲು ಗೋರಕ್ಷನು ಬಹಳ ಸಂಭ್ರಮದಿಂದ ಅಂದದ್ದೇನಂದರೆ—"ಮಹಾರಾಜ, ತಮ್ಮ ಕೃಪೆಯಿದ್ದರೆ ಎಂಥ ಕೆಲಸವನ್ನಾದರೂ ಮಾಡಿ ತೋರಿಸುವೆನು ನನ್ನ ಹತ್ತರ ತಮ್ಮ ಕೃಪಾ

ಪರಿಸವು ಇರುತ್ತಿರಲು ಭರ್ತರಿಯಂಥ ಕಬ್ಬಿಣವನ್ನು ಬಂಗಾರವನ್ನಾಗ ಮಾಡಿ ತೋರಿಸುವೆನು. ತಮ್ಮ ಇಚ್ಛೆಯಂತೆ ಎಲ್ಲ ಕಾರ್ಯಗಳನ್ನು ಸರಿಯಾಗಿ ಮಾಡುವೆನು. ಎಂದು ಹೇಳಿ ಗೋರಕ್ಷನು ದತ್ತನಿಗೆ ವಂದಿಸಿದನು. ಮತ್ತು ಭರ್ತರಿಯ ಕಡೆಗೆ ಹೋದನು. ಗೋರಕ್ಷನು ಪವನಾಸ್ತ್ರವನ್ನು ಜಪಿಸಿ ತನ್ನ ಹಣೆಗೆ ವಿಭೂತಿಯನ್ನು ಹಚ್ಚಿಕೊಂಡನು. ಅದರಿಂದ ಅವನ ಮೈಯೊಳಗೆ ವಾಯುವೇಗ ಉಂಟಾಗಿ ವಾಯುವೇಗದಿಂದ ನಡೆಯಹತ್ತಿದನು. ತೀರ ಸ್ವಲ್ಪ ವೇಳೆಯಲ್ಲಿ ಐವತ್ತು ಯೋಜನ ಭೂಮಿಯನ್ನು ನಡೆದು ಅವಂತೀನಗರಕ್ಕೆ ಸುಖರೂಪವಾಗಿ ಬಂದು ಮುಟ್ಟಿದನು. ಭರ್ತರಿಯು ಸ್ಮಶಾನದಲ್ಲಿ ಇರುವದನ್ನು ಕೇಳಿ ಗೋರಕ್ಷನು ಅಲ್ಲಿಗೆ ಹೋದನು. ಭರ್ತರಿಯು ತೀರ ಕೃಶನಾದದ್ದನ್ನು ನೋಡಿಯೂ ಅವನ ಬಾಯಿಂದ ಪಿಂಗಲೆಯ ಸಂಬಂಧದಿಂದ ಹೊರಡುವ ಶೋಕವನ್ನು ಕೇಳಿಯೂ ಗೋರಕ್ಷನಿಗೆ ಕೆಡಕೆನಿಸಿತು. ಹೆಂಡತಿಯ ಮೋಹದಿಂದ ಭರ್ತರಿಯು ದುಃಖಿಸುವದನ್ನೂ ಗಂಡನ ಮೋಹಕ್ಕಾಗಿ ಪಿಂಗಲೆಯು ಸಹಗಮನ ಮಾಡಿದ್ದನ್ನೂ ನೋಡಿದರೆ ಇವರಲ್ಲಿ ವ್ಯಾಮೋಹವು ಹೆಚ್ಚಿರುವದು. ಇಂಥ ಸಮಯದಲ್ಲಿ ಉಪದೇಶದಿಂದ ನನ್ನ ಕಾರ್ಯವು ಜರಗಲಾರದು ಇವನಿಗೆ ಬರಿಯ ಉಪದೇಶ ಮಾಡಹೋದರೆ ಹಂಚಿನ ಮೇಲೆ ಪರಿಸಮಣಿಯನ್ನು ತಿಕ್ಕಿದಂತೆ ವ್ಯರ್ಥವಾಗುವದು. ಮೂರ್ಖರಿಗೆ ಬೋಧಮಾಡಹೋಗುವದು ಅವ್ಯವಹಾರವಾಗುವದು. ಆದ್ದರಿಂದ ಈ ಭರ್ತರಿಯ ವಿಷಯದಲ್ಲಿ ಮನಸ್ಸಿಗೆ ನಡುವಂತೆ ವಿಚಾರವನ್ನು ಕೈಕೊಳ್ಳಬೇಕು. ನಾಯಿಯ ಬಾಲವನ್ನು ಸರಳ ಮಾಡುವ ಸಲುವಾಗಿ ನಳಿಕೆಯೊಳಗೆ ಹಾಕಿದರೂ ಅದು ಕಡೆಗೆ ತನ್ನ ವಕ್ರಗುಣವನ್ನು ಹೇಗೆ ಬಿಡುವದಿಲ್ಲವೋ ಅದರಂತೆ ಸ್ತ್ರೀ ಪ್ರೇಮದಿಂದ ಹುಚ್ಚನಾಗಿ ಹೋದ ಭರ್ತರಿಗೆ ಬರೇ ಶಬ್ದ ಬೋಧದಿಂದ ಉಪಯೋಗವಾಗುವದಿಲ್ಲ. ಹೇಗಾದರೂ ಅವನಿಗೆ ಅವನ ನಿಜಸ್ಥಿತಿಯ ಜ್ಞಾನವಾಗುವಂತೆ ಮಾಡಬೇಕು; ಮತ್ತು ಅವನ ಸಖ್ಯಬೆಳೆಸಿ ನನ್ನ ಕೆಲಸವನ್ನು ಸಾಧಿಸಿಕೊಳ್ಳಬೇಕು. ಭರ್ತರಿಯ ಮೂರ್ಖತನಕ್ಕೆ ಉಪದೇಶದಿಂದ ಉಪಯೋಗವಾಗಲಾರದು. ನಾನೂ ಅವನಂತೆ ಮೂರ್ಖನಾಗಿ ಕಾರ್ಯವನ್ನು ಸಾಧಿಸಿಕೊಳ್ಳಬೇಕು. ಯಾವನೊಬ್ಬನ ಕಡೆಯಿಂದ ಒಂದು ಕೆಲಸವನ್ನು ಸಾಧಿಸಿಕೊಳ್ಳುವದಿದ್ದರೆ ಮೊ-

ದಲು ಅವನ ಮನಸ್ಸನ್ನು ತನ್ನ ಕಡೆಗೆ ಎಳೆದುಕೊಳ್ಳಲಿಕ್ಕೆ ಬೇಕು. ಕೇವಲ ಮೂರ್ಖನಿಗೆ ಜ್ಞಾನೋಪದೇಶ ಮಾಡಿದರೆ ಉಪಯೋಗ ಬೀಳುವದಿಲ್ಲ. ಅಂಥ ಮೂರ್ಖನ ಮನಸ್ಸನ್ನು ಒಲಿಸಿಕೊಳ್ಳುವದಕ್ಕಾಗಿ ಮೊದಲು ತಾನೂ ಮೂರ್ಖನಾಗಬೇಕು. ಯಾವನಿಗೆ ಹೇಗೆ ಸಂತೋಷವಾಗುವದೋ ಅದರಂತೆ ನಡೆಯುವದು ಇಷ್ಟವಾದದ್ದು. ಮೂರ್ಖರ ಸ್ವಭಾವಕ್ಕೆ ಸರಿಯಾಗಿ ತಾನು ನಡೆದರೇ ಕಾರ್ಯವು ಸಾಧಿಸುವದು. ರಾಮನು ದಾನವರ ಶತ್ರುವಾಗಿದ್ದನು. ಶತ್ರುಭಾವದಿಂದ ರಾಮಚಂದ್ರನ ಕೂಡ ನಡೆದು ರಾವಣನು ನಾಶವಾದಂತೆ ವಿಭೀಷಣನು ಮಾಡಲಿಲ್ಲ. ರಾಮನ ಮನೋಭಾವನೆಯನ್ನು ಅರಿತು ತನ್ನ ಕೆಲಸವನ್ನು ಸಾಧಿಸಿಕೊಂಡನು. ವಾಮನನು ಬಲಿಯನ್ನು ಒಮ್ಮೆಲೆ ನಾಶಗೊಳಿಸದೆ ತಾನು ಭಿಕ್ಷುಕನಾಗಿ ಬಲಿಯನ್ನು ಪಾತಾಳಲೋಕಕ್ಕೆ ತುಳಿದು ಮಹತ್ಕಾರ್ಯವನ್ನು ಮಾಡಿದನು. ಅದರಂತೆ ಭರ್ತರಿಗೆ ಪ್ರಿಯವಾಗುವಂತೆ ಆಚರಿಸುವದೇ ಇಷ್ಟವಾದದ್ದು. ಮೋಹದಿಂದ ಭ್ರಮನಾದಂಥ ಭರ್ತರಿಗೆ ನಾನೂ ಭ್ರಮಚಿತ್ತನಾದಂತೆ ವೇಷಹಾಕಿಕೊಂಡರೆ ಭರ್ತರಿಯು ಎಳೆಗೆ ಬರುವನು, ಹೀಗೆ ವಿಚಾರಿಸಿ ಗೋರಕ್ಷನಾಥನು ಆ ಉದ್ಯೋಗಕ್ಕೆ ಹತ್ತಿದನು.

ಗೋರಕ್ಷನು ಭರ್ತರಿಯನ್ನು ನೋಡಿ ಯಾವದನ್ನೂ ಮಾತಾಡದೆ ಅವಂತೀನಗರಕ್ಕೆ ಹೋದನು. ಅವನು ಕುಂಬಾರಗೇರಿಯಲ್ಲಿ ಹೋಗಿ ಒಂದು ಮಡಿಕೆಯನ್ನು ಕ್ರಯಕ್ಕೆ ತೆಗೆದುಕೊಂಡನು. ಅದಕ್ಕೆ ಬಣ್ಣವನ್ನು ಕೊಟ್ಟು ಆ ಗಡಿಗೆಯನ್ನು ಚಿತ್ರವಿಚಿತ್ರವಾಗಿ ಮಾಡಿದನು. ಗೋರಕ್ಷನು ಆ ಮಡಿಕೆಗೆ 'ಬಾಟಲಿ' ಎಂದು ಹೆಸರಿಟ್ಟನು. ನಂತರ ಆ ತೇಜಃಪುಂಜ ಮಡಿಕೆಯನ್ನು ತೆಗೆದುಕೊಂಡು ಅವನು ಪುನಃ ಸ್ಮಶಾನಕ್ಕೆ ಹೋದನು. ಭರ್ತರಿಯ ಕಡೆಗೆ ಹೋಗಹೋಗುತ್ತ ಮಾರ್ಗದಲ್ಲಿ ಒಮ್ಮಿಂದೊಮ್ಮೆ ಎಡವಿದಂತೆ ನಟಿಸಿದನು. ಅದರಿಂದ ಮೂರ್ಛೆಬಂದು ಗೋರಕ್ಷನು ಭೂಮಿಗೆ ಬೀಳಲು, ಗಡಿಗೆಗೆ ಧಕ್ಕೆ ಹತ್ತಿ ಒಡೆದುಹೋಯಿತು. ಕೆಲವು ಹೊತ್ತಿನ ಮೇಲೆ ಆ ಚತುರನಾದ ಗೋರಕ್ಷನು ಎಚ್ಚರಹೊಂದಿದಂತೆ ಮಾಡಿ ಸಾವರಿಸಿಕೊಂಡು ಎದ್ದುನೋಡಲು, ತನ್ನ ಬಾಟಲಿಯು ಒಡೆದು ಚೂರು ಚೂರು ಆಗಿತ್ತು. ಬಾಟಲಿಯು ನಾಶವಾದದ್ದಕ್ಕಾಗಿ ಗೋರಕ್ಷನು ಶೋಕಮಾಡಹತ್ತಿದನು.

" ಹಾಯ್! ಹಾಯ್!! ನನ್ನ ಪ್ರೀತಿಯ ಬಾಟಲಿಯೇ! ಇಂದು ನೀನು ಹೀಗೇಕೆ ನಾಶಹೊಂದಿದೆ? ಇನ್ನು ನಾನು ತಾಯಿಯ ಸಮಾನಳಾದ ಬಾಟಲಿಯನ್ನು ಎಲ್ಲಿ ಶೋಧಮಾಡಲಿ? ಹೇ ಬಾಟಲಿ! ನೀನು ನನ್ನನ್ನು ಅಗಲಿ ಹೇಗೆ ಹೋದಿ? ಇನ್ನು ನಾನು ನಿನ್ನ ಸಲುವಾಗಿ ಪ್ರಾಣವನ್ನು ಕಳಕೊಳ್ಳುವೆನು. ಹೇ ವಿಧಿಯೇ! ಇಂದು ನನಗೆ ಎಂಥ ವಿಪತ್ಕಾಲವನ್ನು ತಂದೆ? ನನ್ನ ಪ್ರಿಯ ಬಾಟಲಿಯೇ! ನಿನ್ನನ್ನು ಬಿಟ್ಟರೆ ನನಗೆ ಹತ್ತುದಿಕ್ಕುಗಳು ಬೇಸರಾಗಿ ತೋರುತ್ತವೆ. ತಾಯಿಯಂತೆ ಇರುವ ಬಾಟಲಿಯೇ! ನಾನು ನಿನ್ನನ್ನು ಕೊಂದು ಜಗತ್ತಿನಲ್ಲಿ ಹೇಗೆ ಸುಖಿಯಾಗಿರಲಿ? " ಹೀಗೆ ವಿಲಾಪಿಸಿ ಗೋರಕ್ಷನು ಆ ಮಡಿಕೆಯ ಚೂರುಗಳನ್ನು ಆರಿಸಹತ್ತಿದನು. ಅವನ ದುಃಖದಿಂದ ಆ ಸ್ಮಶಾನವು ಬೇಸರಬಟ್ಟಿತು

ಗೋರಕ್ಷನ ಶೋಕಧ್ವನಿಯನ್ನು ಕೇಳಿ ಭರ್ತರಿಯು ನಗಹತ್ತಿದನು. ಗೋರಕ್ಷನು ಮಡಿಕೆಯ ಸಲುವಾಗಿ ಇಷ್ಟು ಅಟ್ಟಹಾಸ ಮಾಡುವದರಿಂದ ಅವನ ಮೂರ್ಖತನಕ್ಕೆ ಆಶ್ಚರ್ಯವೆನಿಸಿತು. ಭರ್ತರಿಯ ಲಕ್ಷ್ಯವು ತನ್ನ ಕಡೆಗೆ ಇರುವದನ್ನು ಕಂಡು ಗೋರಕ್ಷನು ಮತ್ತಿಷ್ಟು ಶೋಕ ಮಾಡಹತ್ತಿದನು. " ಹೇ ನನ್ನ ಭಗಿನಿಯಾದ ಬಾಟಲಿಯೇ! ನೀನು ಒಡೆದುಹೋದ್ದರಿಂದ ನನ್ನ ಹವ್ಯಾಸವು ಅಟ್ಟಿಸಿತು. ನನ್ನ ಭಾಗ್ಯವೆಂಬ ಸೂರ್ಯನು ಅಸ್ತವಾದನು. ಬಾಟಲಿರೂಪವಾದ ನನ್ನ ಧನವನ್ನು ಚೋರನು ಕಳಕೊಂಡು ಹೋದನು ಹೇ ಬಾಟಲಿ! ನನಗೆ ಒಂದು ಸಾರೆಯಾದರೂ ನಿನ್ನ ಸುಂದರ ಮುಖವನ್ನು ತೋರಿಸು. ಬಾಟಲಿಯೇ ನೀನು ನನಗೆ ಒಂದು ವೇಳೆಯಾದರೂ ಭೆಟ್ಟಿ ಕೊಡದಿದ್ದರೆ, ನನ್ನ ಪ್ರಾಣವು ಉಳಿಯಲಾರದು!

ಹೀಗೆ ಗೋರಕ್ಷನು ದುಃಖಿಸುತ್ತ ಭೂಮಿಯ ಮೇಲೆ ಬಿದ್ದು ಹೊರಳಾಡಹತ್ತಿದನು. ಅವನು ತನ್ನ ಹೃದಯವನ್ನು ಒಡಬಡಕೊಂಡು ಬಾಟಲೀ! ಬಾಟಲೀ!! ಎಂದು ಬಾಯಿಂದ ಉಚ್ಚರಿಸುತ್ತ ಒದರಹತ್ತಿದನು. ಅವನ ಶೋಕವನ್ನು ನೋಡಿ ಭರ್ತರಿಯು ಮನಸ್ಸಿನಲ್ಲಿ ಚಕಿತನಾದನು. ಈ ಆಶ್ಚರ್ಯದ ಭರದಲ್ಲಿ ಅವನು ಪಿಂಗಲೆಯ ದುಃಖವನ್ನು ಮರೆತನು. ಕಾಸಿನ ಬೆಲೆ ಬಾಳುವ ಮಡಿಕೆಯ ಸಲುವಾಗಿ ಗೋರಕ್ಷನು ದುಃಖಿಸುವದನ್ನು ಕಂಡು ತನ್ನ ಮನಸ್ಸಿನೊಳಗೆ ಬಾಟಲಿಯು ಹೇಗೆ ಒಡೆಯಿತೆಂಬುವದು ಈ

ನನ್ನ ಬಾಟಲಿಯು ಮಾತ್ರ ಸಿಗಲಾರದು. ನಿನ್ನ ಪಿಂಗಲೆಗೆ ಸಮಾನರಾದ ಲಕ್ಷಗಟ್ಟಲೆ ಸ್ತ್ರೀಯರನ್ನು ಒಂದು ಕ್ಷಣದಲ್ಲಿ ನಿನ್ನ ಮುಂದೆ ತಂದಿರಿಸು ವೆನು; ಆದರೆ ನನ್ನ ಬಾಟಲಿಯಂತೆ ಅನ್ಯ ಬಾಟಲಿಯು ತ್ರೈಲೋಕದಲ್ಲಿ ಹುಡುಕಿದರೂ ದೊರೆಯಲಾರದು.

ಈ ಪ್ರಕಾರ ವಾದದ ಭರದಲ್ಲಿ ಇಬ್ಬರೂ ಕ್ರುದ್ಧರಾದರು. ತಾನು ಗೋಸಾವಿಯು ಬಾಟಲಿಗೆ ಸರಿಯಾದ ಸಹಸ್ರಗಟ್ಟಲೆ ಬಾಟಲಿಗಳನ್ನು ತಂದು ಕೊಡುತ್ತೇನೆಂಬುವದು ಭರ್ತರಿಗೆ ನಂಬಿಗೆಯಿತ್ತು; ಆದರೆ ಗೋಸಾವಿಯು ಪಿಂಗಲೆಗೆ ಸಮಾನರಾದ ಸಹಸ್ರಗಟ್ಟಲೆ ಸ್ತ್ರೀಯರನ್ನು ತಂದುಕೊಡುತ್ತೇನೆಂ ದು ಅನ್ನುವ ಮಾತಿನಲ್ಲಿ ಭರ್ತರಿಯು ವಿಶ್ವಾಸವಿದ್ದಿಲ್ಲ. ಗೋಸಾವಿಯು ಮಾತು ವ್ಯರ್ಥವದೆ, ಎಂದು ಭಾವಿಸಿದನು ಹೀಗೆಂದು ಭರ್ತರಿಯು ಬಹಳ ಆವೇಶದಿಂದ ಗೋರಕ್ಷನಿಗೆ:—" ಗೋಸಾವೀ, ನೀನು ಈಗ ಹಿಮ್ಮೆಟ್ಟ ಬೇಡ. ಮಾತಾಡಿದಂತೆ ಕೃತಿಯನ್ನು ಮಾಡಿ ತೋರಿಸಬೇಕು. ಮೃಗ, ಜಲವು ಸಮುದ್ರದಂತೆ ತೋರುತ್ತದೆಂದು ನೀರು ಕುಡಿಯಲಿಕ್ಕೆ ಹೋದರೆ ಅಲ್ಲಿ ನೀರು ಸಿಗಲಾರದು. ಗರ್ಜನೆಯಿಂದ ಜನರಿಗೆ ತ್ರಾಸಕೊಡುವಂಥ ಹೋಪು ವು ಮಳೆಯಾಗದೆ ವ್ಯರ್ಥವಾಗುತ್ತದೆ. ಕತ್ತಲೊಳಗೆ ಪ್ರಕಾಶಿಸುವ ಕಾಜು ಸೂರ್ಯನ ಮುಂದೆ ಅಡಗಿಹೋಗುತ್ತದೆ. ಆದರಂತೆ ನೀವು ಮಾತ್ರ ಮಾಡ ಬೇಡಿರಿ. ತಮ್ಮ ಮಾತನ್ನು ವ್ಯರ್ಥವಾಗಿ ಹೋಗಗೊಡುವದು ಸರಿಯಲ್ಲ. ನೀವು ನಿಮ್ಮ ಮಾತಿನ ರಹಸ್ಯವನ್ನರಿತು ಲಕ್ಷಾವಧಿ ಪಿಂಗಲೆಯರನ್ನು ತೋರಿಸಿ ಕೊಡಿರಿ."

ತನ್ನ ಮಾತಿನಲ್ಲಿ ಭರ್ತರಿಯು ವಿಶ್ವಾಸವಿಲ್ಲದ್ದನ್ನು ಕಂಡು ಗೋರ ಕ್ಷನು ಪಿಂಗಲೆಯನ್ನು ತೋರಿಸುವಂಥ ಚಮತ್ಕಾರದ ಕಡೆಗೆ ಬಿದ್ದನು. ಈ ಮಾತನ್ನು ನಿಜವಾಗಿ ಮಾಡಿಕೊಟ್ಟರೆ ರಾಜ್ಯಪದವನ್ನು ಕೊಡುವದಾಗಿ ಭರ್ತರಿಯು ಗೋರಕ್ಷನಿಗೆ ವಚನ ಕೊಟ್ಟನು. ತನ್ನ ವಚನವು ನಿಜವೆಂದು ತೋರಿಸುವದಕ್ಕಾಗಿ ಭರ್ತರಿಯು ಪ್ರತಿಜ್ಞಾಪೂರ್ವಕವಾಗಿ ಹೇಳಿದ್ದೇನಂದರೆ " ಪಂಚತತ್ವದ ಸಾಕ್ಷಿಯಾಗಿ ನಿನಗೆ ರಾಜ್ಯಪದವನ್ನು ಕೊಡುವೆನು. ನಾನು ಈ ವಚನವನ್ನು ಉಲಕ್ಷ ಮಾಡಿದರೆ ನನ್ನ ಪೂರ್ವಜರು ನರಕದಲ್ಲಿ ಬೀಳಲಿ. ನಾನಂತೂ ನರಕವನ್ನು ಅನುಭವಿಸಿ ಈ ಪೃಥ್ವಿಯ ಮೇಲೆ

ನೂರು ಸಾರೆ ಜನ್ಮಗಳನ್ನು ತೆಗೆದುಕೊಂಡು ಯಾವಾಗಲೂ ದುಃಖವನ್ನು ಭೋಗಿಸುವೆನು. ನೀನು ನಿನ್ನ ವಚನವನ್ನು ಪೂರ್ಣಗೊಳಿಸು. ನನ್ನ ಕಡೆಯಿಂದ ಪ್ರಮಾಣವನ್ನು ಮಾಡಿಸಿಕೊಂಡು ಕಡೆಗೆ ನೀನು ಅಸತ್ಯಮಾಡಿದರೆ, ಸಾವಿರ ಜನ್ಮ ನರಕದಲ್ಲಿ ಬೀಳುವಿ."

ಭರ್ತರಿಯ ಎಲ್ಲ ಮಾತಿಗೆ ಗೋರಕ್ಷನು ಒಪ್ಪಿಕೊಂಡನು. ಅವನು ತನ್ನ ಮಾತನ್ನು ಸತ್ಯಮಾಡುವದಕ್ಕಾಗಿ ಪಿಂಗಲೆಯ ಹೆಸರನ್ನು ಉಚ್ಚರಿಸಿ, ಕಾಮಿನಿ ಅಸ್ತ್ರದ ಜಪವನ್ನು ಮಾಡಿದನು. ಮತ್ತು ಮಂತ್ರಪೂತ ವಿಭೂತಿಯನ್ನು ಆಕಾಶದಲ್ಲಿ ತೂರಲು, ಸ್ವರ್ಗದೊಳಗಿಂದ ಸಹಸ್ರಾವಧಿ ಪಿಂಗಲೆಯರು ಕೆಳಗೆ ಇಳಿದರು; ಮತ್ತು ಭರ್ತರಿಯ ಮುಂದೆ ನಿಂತುಕೊಂಡರು. ಭಸ್ಮೀಭೂತಳಾದ ಪಿಂಗಲೆಯಂತೆಯೇ ಇರುವ ಅನೇಕ ಸ್ತ್ರೀಯರು ಭರ್ತರಿಯ ಮುಂದೆ ನಿಂತುಕೊಳ್ಳಲು, ಅವನು ಭಾರ್ಯಾಮೋಹದಿಂದ ವ್ಯಾಪಿಸಿದನು. ಅವನು ಆ ಎಲ್ಲ ಜನರನ್ನು ತನ್ನ ಹತ್ತರ ಕುಳ್ಳಿರಿಸಿಕೊಂಡು ಸಂಸಾರದೊಳಗಿನ ಸುಖ-ದುಃಖಗಳನ್ನು ವಿಚಾರಿಸಿದನು. ಆ ಸದ್ಗುಣಸಂಪನ್ನರಾದ ಪಿಂಗಲೆಯರು ಆತನ ಎಲ್ಲ ಮಾತುಗಳಿಗೆ ಸರಿಯಾದ ಉತ್ತರವನ್ನು ಕೊಟ್ಟರು; ಆದರೆ ಆ ಸ್ತ್ರೀಯರೊಳಗೊಬ್ಬಳು ಭರ್ತರಿಗೆ ಉಪದೇಶಿಸಿದ್ದೇನಂದರೆ:—"ಹೇ ಪ್ರಾಣೇಶ್ವರಾ! ನೀನು ನನ್ನ ವಿರಹಕ್ಕಾಗಿ ಮೀನದಂತೆ ತಳಮಳಿಸುತ್ತಿರುವಿ. ಆದರೆ ಇದರಿಂದ ಏನು ಲಾಭವಾಗುವದು? ನನ್ನ ವಿರಹಕ್ಕಾಗಿ ತಲೆಯನ್ನು ಮಾತ್ರ ಒಡೆದುಕೊಂಡಿರಿ. ನಾನು ನಿಮ್ಮ ಮೇಲಿನ ಅನಿವಾರ ಮಮತೆಯಿಂದ ನನ್ನ ದೇಹವನ್ನು ದಗ್ಧಮಾಡಿ ದೇಹಸಾರ್ಥಕ ಮಾಡಿಕೊಂಡೆನು. ಈಗ ಈ ಗೋರಕ್ಷನ ಮಂತ್ರಪ್ರಭಾವದಿಂದ ನನ್ನ ಅನಂತರೂಪಗಳು ಪ್ರಕಟವಾಗಿವೆ. ಇನ್ನು ನಾನು ಮೊದಲಿನಂತೆ ನಿಮ್ಮೊಡನೆ ಪ್ರಪಂಚಸುಖವನ್ನು ಅನುಭೋಗಿಸಹತ್ತಿದರೆ, ಕಡೆಗೆ ಯಮನ ವಶವಾಗಿ ಕಷ್ಟಪಡಬೇಕಾಗುವದು. ಆದ್ದರಿಂದ ನೀವು ಈ ಅಶಾಶ್ವತ ದೇಹಕ್ಕೆ ಮೆಚ್ಚದೆ, ಮೋಕ್ಷಪ್ರಾಪ್ತಿಯ ಮಾರ್ಗಕ್ಕೆ ಹತ್ತುವದು ಯೋಗ್ಯವಾದದ್ದು. ಸಂಸಾರದಲ್ಲಿ ಮೋಹಚಿತ್ತರಾದರೆ, ಮೋಕ್ಷವೆಂಬ ನಿಧಿಯ ದರ್ಶನವು ಕೂಡ ಆಗಲಾರದು. ನಿಮ್ಮ ಪತ್ನಿಯಾದ ನಾನು ನಿಕಟವಾದ ಪಾತಿವ್ರತ್ಯದಿಂದ ಆಚರಿಸಿ ನನ್ನ ಹಿತವನ್ನು ಸಾಧಿಸಿಕೊಂಡೆನು. ನನ್ನ ಶುದ್ಧ ಆಚರಣಕ್ಕಾಗಿ ಭಗ

ವಾಗ್ ಎಷ್ಟೋ ಎಗೆ ಕೂಡ ವಂಧ್ಯಳಾಗಿದ್ದೇನೆ. ಇನ್ನು ತಾವು ತಮ್ಮ ಹಿತ ವನ್ನು ಸಾಧಿಸಿಕೊಳ್ಳಿರಿ. ಸ್ತ್ರೀಧರ್ಮಕ್ಕನುಸಾರವಾಗಿ ನಾನು ನಿಮ್ಮ ದಾಸಿ ಯಾಗಿದ್ದೇನೆ. ಧರ್ಮದ ಕೆಲಸದಲ್ಲಿ [illegible]ವಾಗಲೂ ಅನುಕೂಲಳಾಗಿರು ವದು ನನ್ನ ಆದ್ಯ ಕರ್ತವ್ಯವೇ ಆಗಿರುತ್ತದೆ.

ಈ ಮೇರೆಗೆ ಬೋಧಿಸಿ ಪಿಂಗಳೆಯು ಸ್ವಷ್ಟವಾಗಿ ಕುಳಿತಳು. ಇದನ್ನು ಕೇಳಿ ಭರ್ತರಿಯು ವಿಸ್ಮಯಾವಿಷ್ಟನಾದನು. ಅವನು ಒಮ್ಮೆಲೆ ಧಾವಿಸಿ ಬಂದು ಗೋರಕ್ಷನ ಕಾಲಿಗೆ ಬಿದ್ದನು. ಇದನ್ನು ಕಂಡು ಸರ್ವಜ್ಞನಾದ ಗೋರಕ್ಷನು ಅವನನ್ನು ಹಿಡಿದೆತ್ತಿ ಅಂದದ್ದೇನೆಂದರೆ- "ರಾಜಾ, ಈ ಮಾತು ನಿನಗೆ ಸರಿಯಾಗಲಾರದು. [illegible] ದತ್ತಾತ್ರೇಯರ ಶಿಷ್ಯನಾದ ಮಚ್ಛಿಂದ್ರನೆಂಬ ಒಬ್ಬ ಮಹಾತಪಸ್ವಿಯು [illegible]. ಅವನು ನನ್ನ ಗುರು ವಾಗಿದ್ದಾನೆ. ಬಹಳ ದಿವಸಗಳ ಹಿಂದೆ [illegible] ದತ್ತಾತ್ರೇ ಯನು ಅನುಗ್ರಹ ಮಾಡಿದ್ದಾನೆ. [illegible] ನನ್ನ ಗುರು ಬಂಧು ನಾಗಿರುವಿ. ಆದ್ದರಿಂದ ನೀನು ನನಗೆ ವಂದಿಸುವದು ಪ್ರಶಸ್ತವಲ್ಲ. ನಾನೇ ನಿನ್ನ ಚರಣಕ್ಕೆ ಶತಶಃ ಪ್ರಣಾಮ ಮಾಡುವದು ಯೋಗ್ಯವಾಗಿದೆ. ಹೇ ಸದ್ಗುರುಬಂಧುವೇ, ಈಗ ನಿನ್ನ ಮನಸ್ಸಿನಲ್ಲಿ ಯಾವ ವಾಸನೆಯು ವಾಸ ವಾಗಿರುವದೋ ಅದನ್ನು ಸ್ವಷ್ಟವಾಗಿ ಹೇಳು. ಸಂಸಾರ ಸುಖದಕಡೆಗೊ ಅಥವಾ ವೈರಾಗ್ಯದ ಕಡೆಗೊ ಇವುಗಳಲ್ಲಿ ಯಾವದರ ಕಡೆಗೆ ನಿನ್ನ ಮನ ಸ್ಸಿದೆಂಬುವದನ್ನು ಸ್ವಷ್ಟವಾಗಿ ಹೇಳು. ನಿನ್ನ ಇಚ್ಛೆಯಂತೆ ನಿನಗೆ ಫಲ ಪ್ರಾಪ್ತಿಯಾಗುವದು."

ಗೋರಕ್ಷನ ಮಾತಿಗೆ ಭರ್ತರಿಯು—"ಪಿಂಗಳೆಯ ಭೆಟ್ಟಿಯ ಆಶೆ ಗಾಗಿ ನಾನು ಹನ್ನೆರಡು ವರುಷ ಸ್ಮಶಾನದಲ್ಲಿ ಕಳೆದೆನು. ಇಷ್ಟು ಕಾಲವು ಗತಿಸಿದರೂ ನನ್ನ ತಳಮಳದಿಂದ ಪಿಂಗಳೆಯು ದರ್ಶನ ಘಟಿಸಲಿಲ್ಲ. ನನ್ನ ರಾಜಪದ, ವೈಭವ ಇವು ಮಾತ್ರ ನಿಜವಾಗಿದ್ದವು. ಆದರೆ ಈ ರಾಜಪದ, ವೈಭವ ಇವುಗಳಿಂದ ಪಿಂಗಳೆಯು ಲಾಭವು ಆಗಲಿಲ್ಲ. ನಿಮ್ಮ ಸಾಮರ್ಥ್ಯ ದಿಂದ ಮಾತ್ರ ಒಂದು ಕ್ಷಣದಲ್ಲಿ ಸಹಸ್ರಾವಧಿ ಪಿಂಗಳೆಯರು ಉತ್ಪನ್ನ ರಾದರು. ಇಂಥ ಅದ್ಭುತ ಸಾಮರ್ಥ್ಯವು ರಾಜಪದವಿಯಲ್ಲಿ ಇಲ್ಲ. ಇದು ಸತ್ಯವು. ಮೊದಲು ಶ್ರೀ ದತ್ತಾತ್ರೇಯರ ದರ್ಶನವಾಗ ಕಾಲಕ್ಕೆ

ಸಂಸಾರದ ಆಶೆಗಾಗಿ ಬಿದ್ದೆನು. ಇದರಿಂದ ದತ್ತಾತ್ರೇಯನ ಕೃಪೆಗೆ ಪಾತ್ರನಾಗಲಿಲ್ಲ. ಈ ಕಾಲಕ್ಕೆ ಮೂರ್ಖತನದಿಂದಲೇ ನನಗೆ ಸಂಸಾರ ತಾಪವಾಗಿ ಅತ್ಯಂತ ಕಷ್ಟವನ್ನು ಹೊಂದಿದೆನು. ಇನ್ನು ಮಾತ್ರ ನನಗೆ ಪ್ರಪಂಚದ ಸುಖವು ಬೇಡ. ನೀನು ಸಾಕ್ಷಾತ್ ಕೃಪೆಯ ಮೇಘವೇ ಆಗಿರುವಿ. ನಾನು ಚಾತಕಪಕ್ಷಿಯಾಗಿರುವೆನು. ಕೃಪೆಮಾಡಿ ಶ್ರೀ ದತ್ತನ ಪ್ರಸಾದವೆಂಬ ನೀರನ್ನು ಕುಡಿಸಿ ಸುಖಿಯಾಗಿ ಮಾಡು ಸಂಸಾರ, ಸುಖ, ವೈಭವ, ಇವುಗಳಲ್ಲಿ ಲೇಶಮಾತ್ರವಾದರೂ ಸ್ವಾದವಿಲ್ಲ. ಯೋಗದ ಮುಂದೆ ಈ ಎಲ್ಲ ಸುಖಗಳು ಕ್ಷುದ್ರವಾಗಿರುವವು. ಭಗವಾನ್ ವ್ಯಾಸಋಷಿಗಳು ಒಂದು ಕ್ಷಣದಲ್ಲಿ ಗಾಂಧಾರಿಗೆ ಮೃತಪಟ್ಟಂಥ ಕೌರವರನ್ನು ತೋರಿಸಿದಂತೆ ನೀನು ನನಗೆ ಅನೇಕ ಪಿಂಗಲೆಯರನ್ನು ತೋರಿಸಿದಿ. ಇದನ್ನು ನೋಡಿದರೆ ಯೋಗಸಾಮರ್ಥ್ಯವು ಅತರ್ಕ್ಯವಾದದ್ದು. ಇನ್ನು ನನ್ನ ಭ್ರಮವು ದೂರಾಯಿತು. ನಾನು ಸಂಸಾರದ ಸುಖದ ಭ್ರಾಂತಿಯಲ್ಲಿ ಬೀಳಲಾರೆನು. ಇನ್ನು ಮೇಲೆ ಪೂರ್ಣವಾಗಿ ಯೋಗಾಭ್ಯಾಸವನ್ನು ಮಾಡುವೆನು. ಕೃಪೆಮಾಡಿ ನನಗೆ ಶ್ರೀ ದತ್ತಾತ್ರೇಯ ಸ್ವಾಮಿಯ ದರ್ಶನ ಮಾಡಿಸು.''

ಭರ್ತರಿಯ ಮನಸ್ಸಿನಲ್ಲಿ ಎಷ್ಟರ ಮಟ್ಟಿಗೆ ವೈರಾಗ್ಯದ ಭಾವನೆಯು ಉಂಟಾಗಿರುವದೆಂಬದನ್ನು ನೋಡುವದಕ್ಕಾಗಿ ಗೋರಕ್ಷನು—ಒಂದು ಅದ್ಭುತ ವಿಚಾರವನ್ನು ಮನಸ್ಸಿನಲ್ಲಿ ತಂದು ಎಲೋ ನೀನು ವಿರಹದಿಂದ ಮುಕ್ತನಾಗಿರುವಿ. ಇಂದಿನ ವರೆಗೆ ನಿನಗೆ ಪಿಂಗಲೆಯ ಧ್ಯಾನವಿತ್ತು. ಈ ಕಾಲಕ್ಕೆ ನಿನಗೆ ಲಕ್ಷಾವಧಿ ಪಿಂಗಲೆಯರು ಪ್ರಾಪ್ತರಾಗಿದ್ದಾರೆ. ಅವರೊಡನೆ ನೀನು ಸುಖಿಯಾಗಿರು. ವೈರಾಗ್ಯದ ವಿಚಾರವನ್ನು ಸ್ವಲ್ಪಾದರೂ ಮನಸ್ಸಿನಲ್ಲಿ ತರಬೇಡ'' ಎಂದನು. ಗೋರಕ್ಷನ ಮಾತಿನೊಳಗಿನ ಮರ್ಮವನ್ನು ತಿಳಿದುಕೊಂಡು ಭರ್ತರಿಯು ಹೇಳಿದ್ದೇನಂದರೆ—''ಎಲೋ ಇನ್ನು ಮೇಲೆ ಸಂಸಾರದ ಹೆಸರನ್ನು ಸಹ ಎತ್ತಬೇಡ. ಒಬ್ಬ ಪಿಂಗಲೆಗಾಗಿ ಹನ್ನೆರಡು ವರ್ಷ ಕಷ್ಟವನ್ನು ಭೋಗಿಸಿದೆನು. ಇನ್ನು ಲಕ್ಷಾವಧಿ ಸ್ತ್ರೀಯರನ್ನು ಒರಿಸಿದರೆ ನನಗೆ ಎಷ್ಟು ದುಃಖವಾಗುವದೆಂಬದನ್ನು ಹೇಳಲಾರೆನು. ಈ ಕಷ್ಟವನ್ನು ಅನುಭವಿಸಲಿಕ್ಕೆ ಹಲವು ಜನ್ಮಗಳಾದರೂ ಸಾಲಲಾರವು.

ಇದರಿಂದ ನನ್ನ ಗತಿಯು ಏನಾಗುವದು. ಈಗ ನಾನು ಈ ಎಲ್ಲ ಪಿಂಗಲೆಯರನ್ನು ನಾಶಗೊಳಿಸುವದಕ್ಕಾಗಿ ಪ್ರಾರ್ಥಿಸುತ್ತೇನೆ. ನೀನು ನಿನ್ನ ಪ್ರತಿಜ್ಞೆಯನ್ನು ಪೂರ್ಣ ಗೊಳಿಸಿದ್ದರಿಂದ ನಿನಗೆ ನನ್ನ ಎಲ್ಲ ವೈಭವವನ್ನು ಅರ್ಪಿಸಿರುವೆನು. ಈಗ ನೀನು ನಿನ್ನ ಗುರುಗಳ ಚರಣಗಳಿಗೆ ಅರ್ಪಿಸಿ ನನ್ನನ್ನು ಶಾಶ್ವತಸುಖಿಯನ್ನಾಗ ಮಾಡು.

ಭರ್ತರಿಯ ಶುಭಇಚ್ಛೆಯನ್ನು ತಿಳಿದು ಗೋರಕ್ಷನು ಸಂತುಷ್ಟನಾದನು. ಭರ್ತರಿಯ ಅಭಿಪ್ರಾಯದಂತೆ ಅವನು ಎಲ್ಲ ಸ್ತ್ರೀಯರನ್ನು ನಾಶಗೊಳಿಸಿದನು. ಆ ಮೇಲೆ ಭರ್ತರಿಯ ಕೈ ಹಿಡಿದುಕೊಂಡು ನಗರದಲ್ಲಿ ಹೋದನು. ಗೋರಕ್ಷನು ಭರ್ತರಿಯನ್ನು ಸ್ವಸ್ಥಾನಕ್ಕೆ ತರಲು ಎಲ್ಲರಿಗೂ ಸಂತೋಷವಾಯಿತು. ವಿಕ್ರಮರಾಜನು ಗೋರಕ್ಷನಿಗೆ ವಂದಿಸಿ ಭರ್ತರಿಯ ಸಂಗತಿಯನ್ನು ವಿಚಾರಿಸಿದನು. ಗೋರಕ್ಷನು ಸ್ಮಶಾನದೊಳಗೆ ವರ್ತಿಸಿದ ಎಲ್ಲ ಸಂಗತಿಯನ್ನು ಹೇಳಿದನು. ಮತ್ತು ಭರ್ತರಿಗಾದ ವೈರಾಗ್ಯದ ಇಚ್ಛೆಯನ್ನು ಹೇಳಿದನು. ವಿಕ್ರಮರಾಜನೂ ಮರ್ಮಜ್ಞನಿದ್ದನು. "ಭರ್ತರಿಯ ಸಂಕೇತವು ಹೊರಬೀಳಲು,ಅವನು ಗೋರಕ್ಷನಿಗೆ ಕೈ ಜೋಡಿಸಿ—ತಾವು ಈಗಲೇ ಈ ನಗರವನ್ನು ತ್ಯಜಿಸಬಾರದು. ತಾವು ಭರ್ತರಿಯ ಸಲುವಾಗಿ ಆರುತಿಂಗಳವಾದರೂ ಈ ನಗರದಲ್ಲಿ ವಾಸ ಮಾಡಬೇಕು. ಹನ್ನೆರಡು ವರ್ಷಗಳಿಂದ ಅನುಭವಿಸಿದ ಕಷ್ಟದಿಂದ ನನ್ನ ಬಂಧುವಾದ ಭರ್ತರಿಯು ಕ್ಷೀಣನಾಗಿದ್ದಾನೆ. ಅವನು ಕಣ್ಣಲ್ಲಿ ಮಾತ್ರ ಜೀವ ಹಿಡಿದಿರುವನು. ನಾನು ನನ್ನ ಇಚ್ಛೆಯೆಂಬ ಅನ್ನವನ್ನು ಬಡಿಸಿರುವೆನು ತಾವು ಅದನ್ನು ಸ್ವೀಕರಿಸಿ ನನಗೆ ಸಂತೋಷ ಮಾಡಬೇಕು.

ವಿಕ್ರಮನ ವಿನಂತಿಯನ್ನು ಆಲಿಸಿ ಗೋರಕ್ಷನು—"ರಾಜಾ, ಈಗ ನೀನು ಇಲ್ಲಿ ನಮ್ಮನ್ನು ಇರಿಸಿಕೊಳ್ಳುವ ಹವ್ಯಾಸಕ್ಕೆ ಹೋಗಬೇಡ. ಭರ್ತರಿಗೆ ಮುಂದೆ ಯಾವ ಸ್ಥಿತಿಯಾಗುವದೆಂಬದನ್ನು ಯಾರು ಹೇಳಬೇಕು. ಮುಂದೆ ಅವನ ಮನಸ್ಸು ತಿರುಗಿದರೆ ಬಹಳ ಜಡವೆನಿಸುವದು. ತಪ್ತವಾದ ಕಾಲಕ್ಕೇ ಹಂಚಿನ ಮೇಲೆ ಭಕ್ಕರಿಯನ್ನು ಬೇಯಿಸುವದು ಹಿತಕರವಾದದ್ದು. ಈ ವೇಳೆಯು ಸಾಧಿಸಿದರೆ ಈ ಭರ್ತರಿಗೆ ನಿಜವಾದ ಹಿತವು ಪದರಿನಲ್ಲಿ ಬೀಳುವದು.

ವಿಕ್ರಮನು ಮತ್ತು ಗೋರಕ್ಷನು ಈ ಮೇರೆಗೆ ಮಾತಾಡಿದ್ದು ರಾಜವಾಡೆಯೊಳಗಿನ ಎಲ್ಲ ಸ್ತ್ರೀಯರಿಗೆ ಗೊತ್ತಾಯಿತು. ಅದರಿಂದ ಭರ್ತರಿಯ ಎಲ್ಲ ಸ್ತ್ರೀಯರು ತಳಮಳಿಸಹತ್ತಿದರು. ಶೋಕದಿಂದ ತಪ್ತರಾಗಿ ಗೋರಕ್ಷನನ್ನು ಬಯ್ಯಹತ್ತಿದರು. ಅವರು ಮ್ಲಾನಮುಖದಿಂದ ಒಂದೇಸವನೆ ಅಳಹತ್ತಿದರು. ಅವರ ದುಃಖವನ್ನು ಕಂಡು ಗೋರಕ್ಷನು ದಯದೋರಿ ವಿಕ್ರಮನ ವಿಶೇಷ ಆಗ್ರಹಕ್ಕಾಗಿ ಆ ಸ್ಥಳದಲ್ಲಿ ಮೂರು ದಿವಸ ವಾಸಮಾಡಿ ನಂತರ ಭರ್ತರಿಯನ್ನು ಕರೆದುಕೊಂಡು ಮನೆಯಿಂದ ಹೊರಬಿದ್ದನು ಭರ್ತರಿಯ ಸ್ತ್ರೀಯರು ಅವನ ಗುಣವರ್ಣನ ಮಾಡುತ್ತ ಭೂಮಿಯಮೇಲೆ ಹೊರಳಾಡುತ್ತ ಅಳಹತ್ತಿದರು. ಈ ಕಾಲಕ್ಕೆ ವಿಕ್ರಮನೂ ಕಣ್ಣುತುಂಬ ನೀರು ತಂದು ಅವರನ್ನು ಕಳಿಸಲಿಕ್ಕೆ ಊರಹೊರಗೆ ಹೋಗಿ ಅವರು ಕಾಣದಂತೆ ಆಗಲು, ಬಹಳ ದುಃಖದಿಂದ ತಿರುಗಿ ಬಂದನು.

ಕೆಲವು ಹಾದೀ ನಡೆದಮೇಲೆ ಗೋರಕ್ಷನು ಭರ್ತರಿಗೆ ಮತ್ತೆ ಪ್ರಶ್ನ ಮಾಡಿದ್ದೇನಂದರೆ:—“ ರಾಜ್ಯ, ವೈಭವ, ಸಂಪತ್ತು ಇವುಗಳನ್ನು ತ್ಯಜಿಸಿದ್ದಕ್ಕಾಗಿ ನಿನಗೆ ಅಸಮಾಧಾನವಾಗಿದ್ದರೆ, ನಾನು ನಿನ್ನನ್ನು ತಿರುಗಿ ರಾಜಧಾನಿಗೆ ಮುಟ್ಟಿಸುವೆನು. ನಿನ್ನ ನಿರ್ಧಾರವು ಬಲವತ್ತರವಿದ್ದರೆ, ಹೇಳು!” ಗೋರಕ್ಷನ ಮಾತಿಗೆ ಭರ್ತರಿಯು ಸಂಸಾರಸುಖಕ್ಕೆ ಪೂರ್ಣವಾಗಿ ಬಹಿಷ್ಕಾರಹಾಕಿದನು. ಅವನ ದೃಢನಿಶ್ಚಯವನ್ನು ಕಂಡು ಗೋರಕ್ಷನು ತನ್ನ ಹೆಗಲೊಳಗಿನ ಜೋಳಿಗೆಯನ್ನು ಅವನ ಕೊರಳಲ್ಲಿ ಹಾಕಿದನು. ತನ್ನ ಶೈಲಿಶಿಂಗಗಳನ್ನು ಅವನ ಕೊರಳಲ್ಲಿ ಹಾಕಿದನು. ಗೋರಕ್ಷನು ಅವನಿಗೆ ಯತಿಯದೀಕ್ಷೆಯನ್ನು ಕೊಟ್ಟನು. ತಿರುಗಿ ಅವನ ಅಂತಃಪುರಕ್ಕೇ ಭಿಕ್ಷೆ ಬೇಡುವದಕ್ಕಾಗಿ ಕಳಿಸಿದನು. ಅರಮನೆಯಲ್ಲಿ ಯಾವ ಸಂಗತಿಯು ಒದಗುತ್ತದೆಂಬದನ್ನು ನೋಡುವದಕ್ಕಾಗಿ ಗೋರಕ್ಷನೂ ಅವನ ಬೆನ್ನ ಹಿಂದೆ ನಡೆದನು. ಭರ್ತರಿಯು ಅಂತಃಪುರಕ್ಕೆ ಹೋಗಿ ಭಿಕ್ಷೆಯನ್ನು ಬೇಡಲು, ಅವನ ಸ್ತ್ರೀಯರು ಬಹಳ ಚಡಪಡಿಸಿದರು. ಅವರು ಅವನಿಗೆ ಬಹಳ ಪರಿಯಾಗಿ ಪ್ರಾರ್ಥನೆಮಾಡಿ ಜೋಳಿಗೆಯನ್ನು ತ್ಯಜಿಸುವದಕ್ಕಾಗಿ ಹೇಳಿಕೊಂಡರು. ಆದರೆ ಆ ವೈರಾಗ್ಯಪರನಾದ ಭರ್ತರಿಯು ಅವರ ಮೋಹಕ್ಕೆ ಒಳಗಾಗಲಿಲ್ಲ. ಆ ಸ್ಥಳದಲ್ಲಿ ಗೋಪೀಚಂದನಂತೆ ಭರ್ತರಿಯ ಸ್ಥಿತಿಯಾ

ಯಿತು. ಭರ್ತರಿಯು ಪ್ರಪಂಚದ ಮೋಹಕ್ಕೆ ಒಳಗಾಗುವದಿಲ್ಲೆಂದು ತಿಳಕೊಂಡು ಗೋರಕ್ಷನು ಅಲ್ಲಿ ಪ್ರಕಟನಾದನು. ಗೋರಕ್ಷನು ಭರ್ತರಿಯನ್ನು ವಿಕ್ರಮನ ಕಡೆಗೆ ಕರೆದೊಯ್ದನು. ವಿಕ್ರಮನ ಅಪ್ಪಣೆಯನ್ನು ಹೊಂದಿ ಅವರಿಬ್ಬರು ಪುನಃ ಮನೆಯಿಂದ ಹೊರಬಿದ್ದರು. ಇನ್ನು ಭರ್ತರಿಯು ಪುನಃ ಪ್ರಪಂಚದಲ್ಲಿ ಬರುವದು ಶಕ್ಯವಿಲ್ಲೆಂಬದು ಗೊತ್ತಾಗಲು ತಳಮಳಿಸುತ್ತಿರುವ ಭರ್ತರಿಯ ಸ್ತ್ರೀಯರಿಗೆ ವಿಕ್ರಮನು ಸಮಾಧಾನ ಹೇಳಿದನು. ಇದರಿಂದ ಆ ಸ್ತ್ರೀಯರು ತಮ್ಮ ದುಃಖವನ್ನು ಬಹಳ ಕಷ್ಟದಿಂದ ನುಂಗಿಕೊಂಡರು.

ಗೋರಕ್ಷ ಮತ್ತು ಭರ್ತರಿ ಇವರು ಅವಂತೀನಗರದಿಂದ ಹೊರಬಿದ್ದು, ಅರ್ಧ ಹರದಾರೀ ನಡೆದುಹೋದನಂತರ ಭರ್ತರಿಯು ದಣಿದನು. ಭರ್ತರಿಯು ಕೃಶನಾಗಿ ಶಕ್ತಿಯು ನಷ್ಟವಾದ್ದರಿಂದ ಅವನು ಒಂದು ಹೆಜ್ಜೆಯನ್ನು ಸಹ ಮುಂದೆ ನಡೆಯದಾದನು. ಅದನ್ನು ಕಂಡು ಗೋರಕ್ಷನು ಪ್ರಯಾಣಾಸ್ತ್ರದ ಜಪವನ್ನು ಮಾಡಿ ಭರ್ತರಿಯ ಹಣೆಗೆ ವಿಭೂತಿಯನ್ನು ಹಚ್ಚಿದನು. ಅದರ ಪ್ರಭಾವದಿಂದ ಭರ್ತರಿಯ ಅಶಕ್ತತೆಯು ದೂರಾಗಿ ಹಾದಿಯನ್ನು ನಡೆಯಲಿಕ್ಕೆ ವಿಲಕ್ಷಣವಾದ ಶಕ್ತಿಯು ಬಂದಿತು. ಅವರಿಬ್ಬರು ಆ ಅಸ್ತ್ರದೇವತೆಯ ಸಹಾಯದಿಂದ ಒಂದು ಕ್ಷಣದಲ್ಲಿ ಗಿರಿನಾರ ಪರ್ವತಕ್ಕೆ ಹೋಗಿ ತಲ್ಪಿದರು. ಅಲ್ಲಿ ದತ್ತಾತ್ರೇಯನ ದರ್ಶನ ಹೊಂದಿ ಅವರಿಬ್ಬರು ಗುರುಚರಣದಲ್ಲಿ ಮಸ್ತಕವನ್ನಿಟ್ಟರು. ದತ್ತಾತ್ರೇಯನು ಅವರಿಬ್ಬರನ್ನು ಎಬ್ಬಿಸಿ ಅಪ್ಪಿಕೊಂಡರು. ಮೈಮೇಲೆ ಕೈಯಾಡಿಸಿ ದತ್ತಗುರುಗಳು ಗೋರಕ್ಷನಿಗೆ:—"ಗೋರಕ್ಷಾ, ಈ ಭರ್ತರಿಯ ಸಲವಾಗಿ ನಿನಗೆ ಬಹಳ ತ್ರಾಸವಾಗಿರುವದು" ಎಂದು ನುಡಿದರು. ಇದನ್ನು ಕೇಳಿ ಗೋರಕ್ಷನು ನನ್ನಂತೆ ಭರ್ತರಿಗೂ ಬಹಳ ಶ್ರಮವಾಗಿರುವದೆಂದು ಹೇಳಿದನು. ಈ ಮೇರೆಗೆ ಕೆಲಹೊತ್ತು ಮಾತಾಡಿ ಗೋರಕ್ಷನು ದತ್ತಗುರುಗಳಿಗೆ ಎಲ್ಲ ಸಂಗತಿಯನ್ನು ಹೇಳಿದನು. ಭರ್ತರಿಯು ದತ್ತನ ಮುಖದಿಂದ ಗೋರಕ್ಷನ ಸಂಗತಿಯನ್ನು ತಿಳಿದುಕೊಂಡನು. ಒಬ್ಬರಿಗೊಬ್ಬರ ಇತಿಹಾಸದಿಂದ ಎಲ್ಲರಿಗೂ ಆನಂದವಾಯಿತು. ತನ್ನ ಇಚ್ಛೆಯ ಪ್ರಕಾರ ಗೋರಕ್ಷನು ತನಗೆ ದತ್ತದರ್ಶನ ಮಾಡಿಸಿದ್ದಕ್ಕಾಗಿ ಭರ್ತರಿಗೆ ಗೋರಕ್ಷನಲ್ಲಿ ಬಹಳ ಪ್ರೇಮವು

ಉತ್ಪನ್ನವಾಯಿತು ಇಬ್ಬರ ಚಿತ್ತವು ಉಲ್ಲಸಿತವಾಗಿ ಅವರು ಕೆಲಹೊತ್ತು ದತ್ತಚರಣದಲ್ಲಿ ಆಶ್ರಯವನ್ನು ಹೊಂದಿದರು.

---

# ಅಧ್ಯಾಯ ೨೦

## ಚೌರಂಗಿಯ ಚರಿತ್ರವು.



ಗಿರಿನಾರ ಪರ್ವತದಲ್ಲಿ ಮೂರು ದಿವಸಗಳ ವರೆಗೆ ನಿಂತುಕೊಂಡು ಗೋರಕ್ಷನಾಥನು ಶ್ರೀ ದತ್ತಾತ್ರೇಯನ ಆಜ್ಞೆಯನ್ನು ಹೊಂದಿ ಮಚ್ಛೇಂದ್ರನ ಕಡೆಗೆ ಹೋದನು. ಗೋರಕ್ಷನು ಹೋಗುವಾಗ ಶ್ರೀ ದತ್ತಾತ್ರೇಯನು ಮಚ್ಛೇಂದ್ರನನ್ನು ತಮ್ಮ ಭೆಟ್ಟಿಗಾಗಿ ಕಳುಹಿಕೊಡಲಿಕ್ಕೆ ತಿಳಿಸಿದನು. ಇತ್ತ ಗೋರಕ್ಷನು ಮಚ್ಛೇಂದ್ರನ ಕಡೆಗೆ ಹೋದ ಬಳಿಕ ದತ್ತನು ಭರ್ತರಿಗೆ ನಾಥ ಪಂಥದ ದೀಕ್ಷೆಯನ್ನು ಕೊಟ್ಟನು. ಅವನ ತಲೆಯ ಮೇಲೆ ವರದ ಹಸ್ತವನ್ನಿಟ್ಟು ಚಿರಂಜೀವ ಪದವನ್ನು ಕೊಟ್ಟನು. ಮತ್ತು ತನ್ನ ಮುಖದಿಂದ ಅನೇಕ ವಿದ್ಯೆಗಳನ್ನು ಕಲಿಸಿದನು. ಭವಿಷ್ಯಜ್ಞಾನ, ಶಸ್ತ್ರಜ್ಞಾನ ಇವುಗಳಲ್ಲಿ ಭರ್ತರಿಯು ಮೊದಲೇ ನಿಪುಣನಿದ್ದನು. ದತ್ತನು ಭರ್ತರಿಗೆ ಅಸ್ತ್ರ ವಿದ್ಯೆಯ ಉಪದೇಶ ಮಾಡಿದನು. ಕಾಮ, ಧರ್ಮ, ವಜ್ರ, ಪರ್ವತ, ವಾಸವ, ನಾಗ, ಇಂದ್ರ, ಬ್ರಹ್ಮ ಪಾಶ ನಿರ್ವಾಣ, ವಾತಾಕರ್ಷಣ, ಇತ್ಯಾದಿ ಸರ್ವ ಅಸ್ತ್ರಗಳ ವಿದ್ಯೆಯಲ್ಲಿ ಭರ್ತರಿಯು ನಿಷ್ಣಾತನಾದನು. ಜ್ಯೋತಿಷ್ಯ, ವ್ಯಾಕರಣ, ಜಲತರಣ, ವೈದ್ಯ, ಮೀಮಾಂಸ, ವೇದ ಇತ್ಯಾದಿ ವಿದ್ಯೆಗಳಲ್ಲಿಯೂ, ಶಾಸ್ತ್ರ, ಸಂಗೀತ ಈ ಕಲೆಗಳಲ್ಲಿಯೂ ಭರ್ತರಿಯು ಜಾಣನಾದನು. ಮಲಯ ಪರ್ವತದೊಳಗಿಂದ ಮೂಲೋತ್ಪತ್ತಿಯಾದ ಸುಗಂಧಿಕ ವಾಯುವಿನಲ್ಲಿ ಕೇಶರ, ಕಸ್ತೂರಿ, ಇವುಗಳ ಸುವಾಸ ಬೆರತರೆ ಅದರ ಪರಿಮಳದ ವರ್ಣನೆಯನ್ನು ಮಾಡುವದು ಅಶಕ್ಯವು; ಮೇಲಾದ ಸುವರ್ಣಕ್ಕೆ ಬಣ್ಣಕೊಟ್ಟು ಕುಂದಣದಲ್ಲಿ ಹಾಕಿದರೆ ಅದರ ಅಪೂರ್ವ

ತೆಯುನ್ನು ಬಣ್ಣಿಸುವದು ಸಾಧ್ಯವಿಲ್ಲ. ಅದರಂತೆ ಮಹಾಬುದ್ಧಿ ಸಂಪನ್ನ ಭರ್ತರಿಗೆ ದತ್ತನಂಥ ಗುರುರಾಜನು ದರ್ಶನಕೊಡಲು ಅವನಲ್ಲಿ ತೇಜ ಹಾಗು ಸಾಮರ್ಥ್ಯ ಇವುಗಳು ಅಮರ್ಯಾದಿತವಾದವು. ಸರ್ವವಿದ್ಯಾ, ಮತ್ತು ಶಾಂಬರಿಕಾವ್ಯ ಸಿದ್ಧವಾದ ಬಳಿಕ ದತ್ತನು ಅವನನ್ನು ನಾಗಅಶ್ವತ್ಥದ ಕಡೆಗೆ ಕಳಿಸಿದನು. ಭರ್ತರಿಯು ಅಲ್ಲಿ ಹೋಗಿ ಮಚ್ಛೇಂದ್ರನಂತೆ ಶ್ರಮಹೊಂದಿ ಅಲ್ಲಿಯ ಎಲ್ಲ ದೈವತೆಗಳನ್ನು ಪ್ರಸನ್ನಮಾಡಿಕೊಂಡನು. ದೈವತೆಗಳ ಕಡೆ ಯಿಂದ ವರಪ್ರದಾನ ಹೊಂದಿದ ಬಳಿಕ ದತ್ತಾತ್ರಯನು ಭರ್ತರಿಯನ್ನು ಬದರಿಕಾಶ್ರಮಕ್ಕೆ ಒಯ್ದು ಅಲ್ಲಿ ತಪಶ್ಚರ್ಯವನ್ನು ಮಾಡಲಿಕ್ಕೆ ಕುಳ್ಳಿರಿಸಿ ದನು. ಭರ್ತರಿಯು ತಪಸ್ಸನ್ನಾಚರಿಸಲಿಕ್ಕೆ ಹತ್ತಿದ ಬಳಿಕ ದತ್ತನು ಗಿರಿ ನಾರ ಪರ್ವತಕ್ಕೆ ಹೋಗಿ ಅಲ್ಲಿ ಮಚ್ಛೇಂದ್ರನ ಮಾರ್ಗವನ್ನು ನಿರೀಕ್ಷಿಸ ಹತ್ತಿದನು.

ದತ್ತಾತ್ರಯನ ಅಪ್ಪಣೆಯನ್ನು ಹೊಂದಿ ಗೋರಕ್ಷನು ಗರ್ಭಗಿರಿಯ ಪರ್ವತಕ್ಕೆ ಮುಟ್ಟಿದನು. ಅಲ್ಲಿ ಮಚ್ಛೇಂದ್ರನ ದರ್ಶನವಾಯಿತು. ಗುರು ಗಳ ಚರಣಗಳ ಮೇಲೆ ಮಸ್ತಕವನ್ನಿಟ್ಟು ಆಶೀರ್ವಾದ ಹೊಂದಿದ ಬಳಿಕ ದತ್ತಾತ್ರಯನ ಇಚ್ಛೆಯನ್ನು ಮಚ್ಛಿಂದ್ರನಿಗೆ ತಿಳಿಸಿದನು. ಮಚ್ಛೇಂದ್ರ ನಾಥನೂ ದತ್ತಾತ್ರಯನ ದರ್ಶನದ ಅಪೇಕ್ಷೆಯನ್ನು ಮಾಡುತ್ತಿದ್ದನು. ಕೆಲವು ದಿವಸಗಳು ಕಳೆದನಂತರ ಆ ಗುರು-ಶಿಷ್ಯರು ದತ್ತಾತ್ರಯನ ಭೆಟ್ಟಿ ಗಾಗಿ ಗಿರಿನಾರ ಪರ್ವತಕ್ಕೆ ಹೋದರು. ವೈದರ್ಭ ದೇಶದೊಳಗಿಂದ ಮಾರ್ಗಕ್ರಮಿಸುವಾಗ ಅವರು ಕೌಂಡಿಣ್ಯಪುರವೆಂಬ ಹೆಸರಿನ ಊರಲ್ಲಿ ಹೋಗಿ ಭಿಕ್ಷೆಯನ್ನು ಬೇಡಹತ್ತಿದರು. ಬೇಡಬೇಡುತ್ತ ಒಂದು ಧರ್ಮಸಾಲೆಯಲ್ಲಿ ಬಂದು ಇಳಿದರು. ಅಲ್ಲಿ ಕೈಕಾಲು ಹೋದ ಬಬ್ಬ ಮನುಷ್ಯನು ಅವರಿ ಬ್ಬರ ಕಣ್ಣಿಗೆ ಬಿದ್ದನು.

ಹೀಗೆ ಕ್ಲೇಶ ಪಡುವಂಥ ಮನುಷ್ಯನು ಯಾರು! ಅವನಿಗೆ ಇಂಥ ಕಠಿಣಪ್ರಸಂಗವು ಯಾಕೆ ಪ್ರಾಪ್ತವಾಯಿತು. ಇದನ್ನು ತಿಳುಕೊಳ್ಳುವ ದಕ್ಕಾಗಿ ನಾವು ಮೊದಲು ಪ್ರಯತ್ನಿಸೋಣ.

ಗುರು-ಶಿಷ್ಯರು ವಾಸಮಾಡಿದ ಕೌಂಡಿನೀಪುರದ ರಾಜನಿಗೆ ಶಶಾಂಗರ ನೆಂದು ಕರೆಯುತ್ತಿದ್ದರು. ಆ ಶಶಾಂಗರನು ಬುದ್ಧಿಮಾನನೂ ಹಾಗುಧಾರ್ಮಿಕ

ಕನೂ ಇದ್ದು ಧೈರ್ಯ,ಔದಾರ್ಯ,ಬಲ, ಸಂಪತ್ತು ಇವುಗಳಿಂದ ಯುಕ್ತನಾಗಿದ್ದನು. ಆತನ ಸತ್ವಗುಣವು ನಾಲ್ಕುಕಡೆಗೆ ಪಸರಿಸಿತ್ತು. ಅವನ ಕೀರ್ತಿಯೂ ಅಮರ್ಯಾದಿತವಾಗಿತ್ತು; ಆದರೆ ಅವನಿಗೆ ಸಂತತಿ ಇಲ್ಲದ್ದರಿಂದ ತನ್ನ ಮನಸ್ಸಿನಲ್ಲಿ ಯಾವಾಗಲೂ ಚಿಂತಿಸುತ್ತಿದ್ದನು. ಆ ವ್ಯಸನದಲ್ಲಿ ರಾಜಕಾರಣವು ಸಹ ಬೇಸರಾಯಿತು. ಛತ್ರ, ಸಿಂಹಾಸನ, ಅನ್ನ, ವಸ್ತ್ರ, ಕಲಾ, ಕೌಶಲ್ಯ ಇವುಗಳೆಲ್ಲ ಅವನಿಗೆ ಬೇಡಾದವು. ಆತನ ಚಿತ್ತವು ಯಾವಾಗಲೂ ಅಸ್ವಸ್ಥವಿದ್ದದರಿಂದ ಕಣ್ಣಿಗೆ ನಿದ್ದೆ ಸಹ ಹತ್ತುತ್ತಿದ್ದಿಲ್ಲ. ಅವನು ಯಾವಾಗಲೂ ಏಕಾಂತದಲ್ಲಿ ಕುಳಿತು ಚಿಂತೆಯಲ್ಲಿ ಮಗ್ನನಾಗಿರುತ್ತಿದ್ದನು.

ಆ ಶಶಾಂಗರ ರಾಜನ ರಾಣಿಯ ಹೆಸರು ಮಂದಾಕಿನಿ ಎಂದು ಇತ್ತು. ಶಶಾಂಗರರಾಜನು ಯಾವಾಗಲೂ ಏಕಾಂತದಲ್ಲಿ ಕುಳಿತು ಚಿಂತಿಸುವದನ್ನು ಕಂಡು ರಾಣಿಯಾದ ಮಂದಾಕಿನಿಯು ಒಂದು ದಿವಸ ಅಂದದ್ದೇನಂದರೆ:—"ಹೇ ನರವೀರಾ, ತಾವು ಸಂತತಿಯ ಸಲುವಾಗಿ ವ್ಯರ್ಥವಾಗಿ ಉದಾಸೀನರಾಗುವ ಕಾರಣವಿಲ್ಲ; ಬ್ರಹ್ಮದೇವನ ಬರಹದಂತೆ ಎಲ್ಲ ಕೆಲಸಗಳು ಜರುಗುವವು. ಈ ವಿಷಯದಲ್ಲಿ ವ್ಯರ್ಥವಾಗಿ ಚಿಂತಿಸುವ ಅವಶ್ಯವಿಲ್ಲ. ಚಿಂತೆಯಿಂದ ತಮ್ಮ ದೇಹವನ್ನು ಕೃಶಗೊಳಿಸಬೇಡಿರಿ. ಆನಂದವೃತ್ತಿಯನ್ನು ಹಿಡಿಯಿರಿ ಚಿಂತೆಯೆಂಬ ಅಗ್ನಿಯು ಶರೀರವನ್ನು ನಾಶಗೊಳಿಸುವದಲ್ಲದೆ, ಬುದ್ಧಿಯನ್ನೂ ಮಸಣಿಸುತ್ತದೆ. ಬುದ್ಧಿಯು ನಾಶವಾದ್ದರಿಂದಲೇ ತಮಗೆ ಸಂಸಾರವು ಬೇಸರವಾಗಿರುವದು. ಈ ಮಾತನ್ನು ಸ್ಮರಣದಲ್ಲಿ ತಂದುಕೊಳ್ಳಿರಿ."

ಮಂದಾಕಿನಿಯು ಈ ಮೇರೆಗೆ ರಾಜನಿಗೆ ಅನೇಕರೀತಿಯಿಂದ ಬೋಧಿಸಿದಳು; ಆದರೆ ರಾಜನ ಮನಸ್ಸಿನ ಮೇಲೆ ಏನೂ ಪರಿಣಾಮವಾಗಲಿಲ್ಲ. ಚಿತ್ತವೆಂಬ ಗುಹೆಯಲ್ಲಿ ಚಿಂತೆಯೆಂಬ ಹುಲಿಯು ದೃಢವಾಗಿ ವಾಸಮಾಡಿದ್ದರಿಂದ ಮಂದಾಕಿನಿಯ ಉಪದೇಶವು ಹ್ಯಾಗೆ ನಾಟಬೇಕು? ಅವನಲ್ಲಿ ಪುತ್ರಪ್ರಾಪ್ತಿಯ ಇಚ್ಛೆಯು ಎಷ್ಟು ಮಾತ್ರವೂ ಕಡಿಮೆಯಾಗಲಿಲ್ಲ. ರಾಜನ ಶರೀರವನ್ನು ಸುಡುವ ಮತ್ತು ಮನಸ್ಸಿಗೆ ತಾಪಕೊಡುವಂಥ ಚಿಂತಾರೂಪವಾದ ಅಗ್ನಿಯು ದಿವಸ ದಿವಸಕ್ಕೆ ಅಧಿಕವಾಗಿ ಬೆಳೆಯಿತು. ಒಂದು ದಿವಸ ಅವನಿಗೆ ಬಹಳ ಉದಾಸೀನವೆನಿಸಿ ತನ್ನ ಮಂತ್ರಿವರ್ಗದವರನ್ನು ಬರ

ಮಾಡಿಕೊಂಡನು. ಅವರಿಗೆ ಎಲ್ಲ ಅಧಿಕಾರ ಮತ್ತು ವೈಭವಗಳನ್ನು ಒಪ್ಪಿಸಿ, ತಾನು ಶಂಕರನ ಪ್ರೀತ್ಯರ್ಥವಾಗಿ ರಾಮೇಶ್ವರ ಯಾತ್ರೆಗೆ ಹೊರಟನು. ರಾಜನು ತನ್ನ ಸಂಗಡ ಕೆಲವು ಜನ ಸೇವಕರನ್ನೂ ಕರೆದುಕೊಂಡಿದ್ದನು. ಆ ಸೇವಕರೊಡನೆ ಮಾರ್ಗಕ್ರಮಿಸುತ್ತ ರಾಜನು ಕೃಷ್ಣಾ, ತುಂಗಾ ಇವುಗಳ ಸಂಗಮಕ್ಕೆ ಬಂದನು. ಅಲ್ಲಿ ಅವನು ಒಂದು ರಾತ್ರಿ ಮಲಗಿರಲು, ಒಂದು ಸ್ವಪ್ನವು ಬಿದ್ದಿತು. ಆ ಸ್ವಪ್ನದಲ್ಲಿ ಶಂಕರನು ದರ್ಶನವನ್ನು ಕೊಟ್ಟು ಹೇಳಿದ್ದೇನಂದರೆ:—ರಾಜಾ, ಸಂತತಿಯು ಇಚ್ಛೆಯಿಂದ ನೀನು ಚಿಂತಿಸುವಿ. ಇನ್ನು ನಿನ್ನ ವ್ಯಸನವನ್ನು ಬಿಡು. ನನ್ನ ಮೇಲೆ ವಿಶ್ವಾಸವಿದ್ದರೆ, ನಾನು ಹೇಳುವದನ್ನು ಲಾಲಿಸು. ಕೃಷ್ಣಾ, ತುಂಗಾ ಇವುಗಳ ಸಂಗಮ ಸ್ಥಳದಲ್ಲಿ ಒಂದು ದೊಡ್ಡ ಮಡುವು ಅದೆ. ಆ ಮಡುವಿನ ದಂಡೆಯ ಮೇಲೆ ಪಾರ್ವತೀಸಹವಾದ ನನ್ನ ಮೂರ್ತಿಯದೆ. ಆ ಮೂರ್ತಿಯನ್ನು ಭಕ್ತಿಪುರಸ್ಸರವಾಗಿ ಅರ್ಚಿಸಿದರೆ ನಿನ್ನ ಕಾಮನೆಯು ಸಫಲವಾಗುವದು. ನಿನಗೆ ಸಂತತಿಯಾಗಬೇಕಾದರೆ ಇದರ ಹೊರ್ತು ಬೇರೆ ಉಪಾಯವೇ ಇಲ್ಲ.

ಈ ಬಗೆಯ ಸ್ವಪ್ನವನ್ನು ಕೇಳಿ ಜಾಗರೂಕನಾದನು. ಆ ಸ್ವಪ್ನದಲ್ಲಿ ನಂಬಿಗೆಯನ್ನಿಟ್ಟು ಶಂಕರನ ಹೇಳಿಕೆಯಂತೆ ಹೋಗಿ ನೋಡಲು ಅಲ್ಲಿ ಮೂರ್ತಿಯು ವಿರಾಜಿಸುತ್ತಿತ್ತು. ಅದು ಬಹು ಪುರಾತನದ್ದಿದ್ದು ಅದಕ್ಕೆ ಇನ್ನೂ ಪ್ರಾಣಪ್ರತಿಷ್ಠಾಪನೆಯು ಆಗಿದ್ದಿಲ್ಲ. ಆದ್ದರಿಂದ ಅಲ್ಲಿ ಆ ಮೂರ್ತಿಯು ಅಸ್ತವ್ಯಸ್ತವಾಗಿ ಬಿದ್ದಿತ್ತು. ಆ ಮೂರ್ತಿಯನ್ನು ಕಂಡು ಶಶಾಂಗರ ರಾಜನಿಗೆ ಕೌತುಕವಾಯಿತು. ಕೂಡಲೆ ಯೋಗ್ಯ ಬ್ರಾಹ್ಮಣರನ್ನು ಕರೆಯಿಸಿ ಅಲ್ಲಿ ಆ ಮೂರ್ತಿಯನ್ನು ಶಾಸ್ತ್ರವಿಧಿಯಿಂದ ಸ್ಥಾಪಿಸಿ ಸಂಗಮೇಶ್ವರನೆಂದು ಹೆಸರಿಟ್ಟನು. ಅದರ ನಿಮಿತ್ಯ ಅಲ್ಲಿ ಸಮಾರಂಭವನ್ನು ನಡೆಸಿದನು. ಆ ಸ್ಥಾನದಲ್ಲಿ ನಡೆದ ಉತ್ಸವದಿಂದ ಅವನ ಕೀರ್ತಿಯು ನಾಲ್ಕೂ ಕಡೆಗೆ ಪಸರಿಸಿತು. ತನ್ನ ಬಯಕೆಯು ಪೂರ್ಣವಾಗುವದೆಂಬ ಆಶೆಯಿಂದ ರಾಜನು ಆ ಪಾರ್ವತಿ ಪರಮೇಶ್ವರರ ಆರಾಧನೆಯನ್ನು ಮಾಡತೊಡಗಿದನು.

ಆ ಸಂಗಮದ ಬಳಿಯಲ್ಲಿ ಭದ್ರಸಂಗಮವೆಂಬ ಒಂದು ಸಣ್ಣಗ್ರಾಮವಿತ್ತು. ಆ ಊರಲ್ಲಿ ವಿಶ್ರಾಚಾರ್ಯನೆಂಬ ಒಬ್ಬ ವಿದ್ವಾನ್ ಬ್ರಾಹ್ಮಣ

ನಿದ್ದನು. ಆ ಬ್ರಾಹ್ಮಣನಿಗೆ ಪತಿವ್ರತಾಸಂಪನ್ನಳಾದ ಶರಯೂ ಎಂಬ ಪತ್ನಿ ಇದ್ದಳು. ಆದಂಪತಿಗಳಲ್ಲಿಯೂ ಸಂತತಿ ಇಲ್ಲದ್ದರಿಂದ ಚಿಂತಾಮಗ್ನರಾಗಿದ್ದರು. ಶಶಾಂಗರರಾಜನು ಸಂತತಿಯ ಇಚ್ಛೆಗಾಗಿ ರಾಮೇಶ್ವರನನ್ನು ಸ್ಥಾಪಿಸಿದ್ದನ್ನು ಕೇಳಿ ಆ ಬ್ರಾಹ್ಮಣ ದಂಪತಿಗಳೂ ಅದೇ ಉದ್ದೇಶದಿಂದ ರಾಮೇಶ್ವರನನ್ನು ಅರ್ಚಿಸಲಿಕ್ಕೆ ಬರುತ್ತಿದ್ದರು.

ಕುಂಡಿಸೀಪುರದ ರಾಜನು ಮತ್ತು ಮಿತ್ರಾಚಾರ್ಯನೆಂಬ ಬ್ರಾಹ್ಮಣನು ಸಂತತಿಯ ಸಲುವಾಗಿ ಸಂಗಮೇಶ್ವರನನ್ನು ಪೂಜಿಸುತ್ತಿರಲು ಕೈಲಾಸದಲ್ಲಿ ಒಂದು ವಿಲಕ್ಷಣ ಪ್ರಕಾರವು ಘಟಿಸಿತು. ರತ್ನ ಮತ್ತು ಸುವರ್ಣ ಇವುಗಳಿಂದ ಸುಶೋಭಿತವಾದ ಮತ್ತು ವಜ್ರಪ್ರಕಾಶದಿಂದ ಹೊಳೆಯುವ ದಿವ್ಯಸಭೆಯಲ್ಲಿ ಆದಿನಾಥನಾದ ಶಂಕರನು ತನ್ನ ಅಸಂಖ್ಯಗಣ ಸಹಿತನಾಗಿ ಸಿಂಹಾಸನದ ಮೇಲೆ ವಿರಾಜಮಾನನಾಗಿದ್ದನು. ಶ್ರೀಶಂಕರನ ಆನಂದಕ್ಕಾಗಿ ಸುಲೋಚನೆಎಂಬ ದೇವಾಂಗನೆಯು ಅಪ್ರತಿಮ ಗಾಯನಮಾಡುತ್ತ ಕೌಶಲ್ಯದಿಂದ ನರ್ತನ ಮಾಡುತ್ತಿದ್ದಳು. ಕುಣಿ ಕುಣಿಯುತ್ತ ಈಶ್ವರನ ದಿವ್ಯ ರೂಪವನ್ನು ಕಂಡು ಆ ಅಪ್ಸರೆಗೆ ಶಂಕರನ ವಿವಾಹ ಮಾಡಿಕೊಳ್ಳುವ ಇಚ್ಛೆಯುಂಟಾಯಿತು. ಮನಸ್ಸಿನಲ್ಲಿ ಈ ಭಾವನೆಯು ಪ್ರಾಪ್ತವಾಗಲು, ಆಕೆಯ ನೃತ್ಯ, ಗಾಯನ ಇವುಗಳಲ್ಲಿ ಮೇಳುದಪ್ಪಿತು. ಹೀಗೆ ಆಗಲು ಶಂಕರನು ಅದರ ಕಾರಣವನ್ನು ವಿಚಾರಿಸಿದನು. ಅಂತರ್ಜ್ಞಾನದಿಂದ ಶಂಕರನಿಗೆ ಅಪ್ಸರೆಯ ಭಾವನೆಯು ಗೊತ್ತಾಯಿತು. ಆಗ ಶಂಕರನು ಅಪ್ಸರೆಯನ್ನು ಕುರಿತು ಗಾಯನವನ್ನು ಮುಗಿಸಲಿಕ್ಕೆ ಸೂಚಿಸಿ ಹೇಳಿದ್ದೇನಂದರೆ:—" ಹೇ ಸ್ವರ್ಗವಾಸಿನಿಯಾದ ದೇವಾಂಗನೇ, ನಾನು ನಿನ್ನ ಅಂತಭಾ೯ವವನ್ನು ಅರಿತಿದ್ದೇನೆ. ನಿನ್ನ ಮನಸ್ಸಿನಲ್ಲಿ ಕೆಲವೊಂದು ಭ್ರಷ್ಟವಿಚಾರವು ಉಂಟಾಗಿದೆ. ಇದರಿಂದ ನೀನು ತೀವ್ರ ಸ್ವರ್ಗಚ್ಯುತಳಾಗಿ ಭೂಲೋಕಕ್ಕೆ ಹೋಗುವಿ. ಭದ್ರಸಂಗಮವಾಸಿಗಳಾದ ಮಿತ್ರಾಚಾರ್ಯ ಮತ್ತು ಶರಯು ಇವರ ಉದರದಲ್ಲಿ ನೀನು ಕನ್ಯೆಯಾಗಿ ಜನ್ಮವೆತ್ತುವಿ. " ಶಂಕರನ ಮುಖದಿಂದ ಹೊರಟ ಈ ಉದ್ಗಾರಗಳನ್ನು ಕೇಳಿ ಸುಲೋಚನೆಯು ಹೆದರಿದಳು. ವಜ್ರವನ್ನು ಹುಡುಕಹೋಗಲು ಕಾಜು ಸಿಕ್ಕಂತೆಯೂ, ದ್ರವ್ಯವನ್ನು ತೆಗೆಯ ಹೋಗಲು, ಹಾವು ಕಡಿದಂತೆಯೂ ಸುಲೋಚನೆಯ ಸ್ಥಿತಿಯಾಗಿ ಅವಳ

ಮೋರೆಯು ಬಾಡಿತು. ಇನ್ನು ತಾನು ಸ್ವರ್ಗಭ್ರಷ್ಟಳಾಗುವೆನೆಂಬ ಚಿಂತೆ ಯಿಂದ ಶಂಕರನನ್ನು ಸ್ತುತಿಸಹತ್ತಿದಳು:—

"ಹೇ ನಂದಿವಾಹನಾ, ಕೈಲಾಸಪತಿಯೇ ವ್ಯಕ್ತ ಮತ್ತು ಅವ್ಯಕ್ತ ಈ ಎರಡೂ ಪ್ರಕಾರಗಳಲ್ಲಿ ನೀನೇ ಇರುತ್ತೀ; ತ್ರಿಶೂಲ, ಡಮರು, ನರಕಪಾಲ ಇತ್ಯಾದಿ ಆಯುಧಗಳಿಂದ ನಿನ್ನ ಹಸ್ತವು ಶೋಭಿಸುತ್ತದೆ. ಭಸ್ಮದಿಂದ ನಿನ್ನ ದೇಹವು ಶೋಭಿಸುತ್ತದೆ. ಚಂದ್ರ ಮತ್ತು ಗಂಗಾ ಇವುಗಳಿಂದ ನಿನ್ನ ಮಸ್ತಕವು ಅಪೂರ್ವವಾಗಿ ಶೋಭಿಸುತ್ತದೆ. ಹಿಮಾಲಯದ ಮಧ್ಯ ದಲ್ಲಿ ನೀನು ಸದೈವ ಯೋಗಾಭ್ಯಾಸವನ್ನು ಮಾಡುತ್ತೀ. ನೀನು ಉಮಾ ಕಾಂತನೂ, ದೇವಶ್ರೇಷ್ಠನೂ ಇರುವಿ. ಹೇ ಕೃಪಾಮೂರ್ತಿಯೇ, ನೀನು ಅಂತಃಕರಣದಿಂದ ನನಗೆ ಉಶ್ಶಾಪವನ್ನು ಕೊಡು."

ಸುಲೋಚನೆಯ ದೀನ ವಾಣಿಯನ್ನು ಕೇಳಿ ಶಂಕರನಿಗೆ ಸಂತೋಷ ವಾಯಿತು. ಆವನು ಉಶ್ಶಾಪವಾಣಿಯಿಂದ—"ಸುಲೋಚನೆ; ನೀನು ಮೃತ್ಯುಲೋಕದಲ್ಲಿ ಜನ್ಮವನ್ನು ಹೊಂದುವದು ಅಸತ್ಯವಾಗಲಾರದು. ಆದರೆ ಅಲ್ಲಿ ನೀನು ನನ್ನನ್ನು ಭಕ್ತಿಯಿಂದ ಆರಾಧಿಸಿದರೆ ನಿನಗೆ ನಾನು ಪ್ರತ್ಯಕ್ಷ ದರ್ಶನಕೊಡುವೆನು. ನಿನ್ನ ಎಲ್ಲ ಮನೋರಥಗಳನ್ನು ಪೂರ್ಣಗೊಳಿಸು ವೆನು. ನನ್ನ ಸ್ಪರ್ಶದಿಂದ ನೀನು ಶಾಪಮುಕ್ತಳಾಗಿ ಪುನಃ ಸ್ವರ್ಗಕ್ಕೆ ಬರುವಿ ಎಂದನು, ಅದನ್ನು ಕೇಳಿ ಸುಲೋಚನೆಯು ಅಲ್ಲಿಂದ ಹೊರಟಳು.

ಇತ್ತ ಮಿತ್ರಾಚಾರ್ಯ, ಶರಯು ಈ ದಂಪತಿಗಳು ಸಂಗಮೇಶ್ವರ ನನ್ನು ಸೇವಿಸುತ್ತಿರಲು ಅವರಿಗೆ ಈಶ್ವರೀ ಸೇವೆಯು ಫಲದ್ರೂಪವಾಗುವ ಸಮಯವು ಬಂದಿತು. ಶಂಕರನ ಕೃಪೆಯಿಂದ ಶರಯು ಗರ್ಭವತಿಯಾ ದಳು. ನವಮಾಸವು ಪೂರ್ಣವಾಗಲು ಅವಳು ಕನ್ಯಾರತ್ನವನ್ನು ಹಡೆ ದಳು. ಸುಲೋಚನೆ ಎಂಬ ಹೆಸರಿನ ಅಪ್ಸರೆಯೇ ಆ ಕನ್ಯೆಯ ರೂಪದಿಂದ ಭೂಮಿಯ ಮೇಲೆ ಅವತರಿಸಿದ್ದರಿಂದ ಆ ಶರಯು ಸ್ತ್ರೀಯ ಮಗಳು ಬಾಲ ಸೂರ್ಯನಂತೆ ತೇಜಃಪುಂಜಳಾಗಿದ್ದಳು. ಅವಳ ಮುಖವು ಚಂದ್ರಕಾಂತಿ ಯಿಂದ ಯುಕ್ತವಾಗಿತ್ತು. ಅವಳ ನೇತ್ರಗಳು ಕಮಲದಂತೆ ಒಪ್ಪುತ್ತಿದ್ದವು. ಸೌಂದರ್ಯದಿಂದ ರತಿಯನ್ನು ನಾಚಿಸುತ್ತಿದ್ದಳು. ಅವಳು ಹಾಸ್ಯವದನ ದಿಂದ ಮುಖವನ್ನು ತೆರೆಯಲು ಮುಖದಲ್ಲಿ ವಜ್ರ ಪ್ರಕಾಶ ಬಿದ್ದಂತೆ ಭಾಸ

ವಾಗುತ್ತಿತ್ತು. ಅವಳ ಕುಟಿಯು ಮಾಣಿಕ ವರ್ಣದಂತೆ ಇತ್ತು. ಅವಳ ಮೂಗು ಸರಳವಾಗಿತ್ತು; ಆ ಕೂಸಿನ ಮುಖದ ತೇಜಸ್ಸು ಪ್ರಸನ್ನತೆ ಇವು ಗಳನ್ನು ನೋಡಿ ಚಂದ್ರನು ಲಜ್ಜಾಯಮಾನನಾಗಿದ್ದನು. ಚಂಪಕ, ಮಾಲತಿ, ಮಲಯ ಪರ್ವತದೊಳಗಿನ ಚಂದನ, ಇವುಗಳ ಸುಗಂಧ ಕ್ಕಿಂತಲೂ ಅವಳ ದೇಹವು ಸುವಾಸಿಕವಾಗಿತ್ತು. ಅವಳ ಶ್ವಾಸೋ ಚ್ಛ್ವಾಸದ ಪರಿಮಳಕ್ಕೆ ಲುಬ್ಧವಾಗಿ ಭ್ರಮರಗಳು ಅವಳ ಸುತ್ತುವರೆದು ಭೋರ್ಗರೆಯುತ್ತಿದ್ದವು. ಈ ಪ್ರಕಾರದ ಆ ಸೌಂದರ್ಯ ಸಂಪನ್ನಳಾದ ಕನ್ಯೆಯು ದಿನದಿನಕ್ಕೆ ಬೆಳೆಯುತ್ತ ಹನ್ನೆರಡು ವರ್ಷಗಳನ್ನು ಕಳೆದಳು. ಕನ್ಯೆಗೆ ಕದಂಬಾ ಎಂಬ ಹೆಸರಿಟ್ಟಿದ್ದರು. ಅವಳು ಲಗ್ನಕ್ಕೆ ತಕ್ಕ ವಳಾಗಲು ತಾಯಿ-ತಂದೆಗಳು ವಿವಾಹದ ಬಗ್ಗೆ ಯತ್ನಿಸಹತ್ತಿದರು. ಆದರೆ ಅವಳು ಲಗ್ನಮಾಡಿಕೊಳ್ಳಲಿಕ್ಕೆ ಒಪ್ಪಲಿಲ್ಲ. ಅವಳು ವಿರಕ್ತಿಯನ್ನು ಅವ ಲಂಬಿಸಿ ಯಾವಾಗಲೂ ಶಿವಧ್ಯಾನದಲ್ಲಿ ಮುಳುಗಿದ್ದಳು. ಮಲಗುವಾಗ ಕೂಡುವಾಗ ಕೆಲಸ ಮಾಡುವಾಗ ಕೂಡ ಶಿವಸ್ಮರಣೆಯು ಹೊರತಾಗಿ ಬೇರೆ ಯಾವದನ್ನೂ ಸ್ಮರಿಸುತ್ತಿರಲಿಲ್ಲ. ಅವಳು ತನ್ನ ತಾಯಿ-ತಂದೆಗಳೊಡನೆ ಸಂಗಮೇಶ್ವರ ದರ್ಶನಕ್ಕೆ ಹೋಗಿ ಬರುತ್ತಿದ್ದಳು. ಕದಂಬೆಯು ಒಂದು ದಿನ ಒಬ್ಬಳೇ ಸಂಗಮೇಶ್ವರನ ದರ್ಶನಕ್ಕೆ ಹೋಗಿದ್ದಳು. ಆ ಕಾಲಕ್ಕೆ ಗುಡಿಯೊಳಗೆ ಯಾರೂ ಇದ್ದಿಲ್ಲ; ಅವಳು ಈಶ್ವರನ ಹೆಸರಿನಿಂದ ಜಯ ಜಯಕಾರವನ್ನು ಮಾಡಿ ಶಂಕರನಿಗೆ ನಮಸ್ಕಾರ ಮಾಡಿದಳು. ಯಾರೂ ಇಲ್ಲದ್ದನ್ನು ಕಂಡು ಶಂಕರನು ಅಲ್ಲಿ ಪ್ರಕಟನಾದನು. ಅದನ್ನು ಕಂಡು ಕದಂಬೆಯು ಚಕಿತಳಾದಳು. ಶಂಕರನು ಆಕೆಗೆ ಸನ್ನಿಧಿಯಲ್ಲಿ ಬರ ಹೇಳಿದನು. ಕದಂಬೆಯು ಮಾತ್ರ ಶಂಕರನಿಂದ ದೂರ ಓಡ ಹತ್ತಿ ದಳು. ಅದನ್ನು ಕಂಡು ಶಂಕರನು ಅವಳ ಮುಂದೆ ನಿಂತುಕೊಂಡನು. ಆಗ ಕದಂಬೆಯು ಭಯಗೊಂಡು ಗುಡಿಯಿಂದ ಹೊರಬಿದ್ದಳು ಕದಂ ಬೆಯು ಮುಂದೆ, ಹರನು ಹಿಂದೆ ಈ ಪ್ರಕಾರ ಅವರಿಬ್ಬರು ಓಡುತ್ತ ಓಡುತ್ತ ಶಂಕರನು ಚಪಲತನದಿಂದ ಕದಂಬೆಯನ್ನು ಹಿಡಿದುಕೊಂಡನು. ಶಂಕರನ ಹಸ್ತಸ್ಪರ್ಶದಿಂದ ಕದಂಬೆಗೆ ಮಾನವ ದೇಹವು ನಷ್ಟವಾಗಿ ಅವಳಿಗೆ ಅಪ್ಸ ರೆಯ ಸ್ವರೂಪವು ಪ್ರಾಪ್ತವಾಯಿತು. ಮತ್ತು ಅವಳು ಸ್ವರ್ಗಲೋಕಕ್ಕೆ ಹೊರಟು ಹೋದಳು.

ಶಂಕರನ ಮನಸ್ಸಿನಲ್ಲಿ ಕದಂಬೆಯು ವಿವಾಹ ಮಾಡಿಕೊಳ್ಳುವದಿತ್ತು. ಕದಂಬೆಯು ಈ ಪ್ರಕಾರ ಇಲ್ಲದಂತಾಗಲು ಶಂಕರನಿಗೆ ವಿರಹದ ಬಾಧೆ ಯುಂಟಾಯಿತು. ನನಗೆ ಆ ಸುಂದರ ಸ್ತ್ರೀಯು ಲಗ್ನವಾಗಿದ್ದರೆ ಓವಳ ಸುಂದರನಾದ ಪುತ್ರನು ಪ್ರಾಪ್ತನಾಗುತ್ತಿದ್ದನು, ಎಂಬ ಯೋಜನೆ ಯಿಂದ ಶಂಕರನು ತಳಮಳಿಸ ಹತ್ತಿದನು. ಅವನ ನೇತ್ರವು ಜಲಯುಕ್ತ ವಾಗಿ ಅಶ್ರುಧಾರೆಗಳು ಹರಿಯಹತ್ತಿದವು. ಆ ಅಶ್ರು ಬಿಂದುಗಳಲ್ಲಿ ಕೆಲವು ಅಶ್ರುಬಿಂದುಗಳು ಕೃಷ್ಣೆಯ ನೀರೊಳಗೆ ಬಿದ್ದುಕೊಂಡವು. ಅದೇ ಸುಮಾ ರಕ್ಕೆ ಶಶಾಂಗರ ರಾಜನು ಕೃಷ್ಣೆಯಪಾತ್ರಯಲ್ಲಿ ಸ್ನಾನಮಾಡಿ ನದಿಯತಟಾಕ ದಲ್ಲಿ ಕುಳಿತು ಸಂಧ್ಯಾವಂದನೆಮಾಡುತ್ತಿದನು. ಅರ್ಘ್ಯಪ್ರದಾನ ಕೊಡು ವದಕ್ಕಾಗಿ ಅವನು ಕೃಷ್ಣೆಯ ನೀರನ್ನು ತನ್ನ ಬೊಗಸೆಯಲ್ಲಿ ತೆಗೆದುಕೊಂಡಿ ದ್ದನು. ಅವನ ಕೈಯೊಳಗಿನ ನೀರು ದಿನದಂತೆ ಸಹಜವಾಗಿ ಇದ್ದಿಲ್ಲ. ಅವು ಶಂಕರನ ಅಶ್ರುಬಿಂದುಗಳಿಂದ ಪವಿತ್ರವಾಗಿದ್ದವು ನದಿಯೊಳಗೆ ಬಿದ್ದ ಅಶ್ರು ನೀರಲ್ಲಿ ಕೂಡಿ ಹರಿಯುತ್ತಿರಲು ಶಶಾಂಗರ ರಾಜನ ಬೊಗಸೆಯೊಳಗೆ ಹೋಗಿ ಸ್ಥಿರವಾದವು. ಪುತ್ರಪ್ರಾಪ್ತಿಯ ದೃಢಭಾವನೆಯಿಂದ ಬಿದ್ದಂಥ ಶಿವನೇತ್ರ ದೊಳಗಿನ ಅಶ್ರುಗಳಿಂದ ಆ ಜಲವು ಸಾಮರ್ಥ್ಯ ಸಂಪನ್ನವಾಗಿತ್ತು. ಆ ಜಲಕ್ಕೆ ಮನುಷ್ಯ ಹಸ್ತದ ಸ್ಪರ್ಶವಾಗಲು ಅದಕ್ಕೆ ನರ ದೇಹವು ಪ್ರಾಪ್ತ ವಾಯಿತು. ಅದನ್ನು ಕಂಡು ರಾಜನಿಗೆ ಬಹಳ ಆಶ್ಚರ್ಯವಾಯಿತು. ಅವನು ಸುಜ್ಞಾನಸಂಪನ್ನನಿದ್ದದರಿಂದ ಈ ಹುಡುಗನು ಶಂಕರನ ವರಪ್ರಸಾ ದದಿಂದ ದೊರೆತನು. ಇವನು ಶಂಕರನ ಮಾನಸ ಪುತ್ರನಾಗಿದ್ದಾನೆ ಎಂದು ನುಡಿದು ಆ ಶಶಾಂಗರ ರಾಜನು ಆ ಕೂಸನ್ನು ತೆಗೆದುಕೊಂಡು ತನ್ನ ಮನೆಗೆ ಹೋದನು.

ಸಂಗಮೇಶ್ವರ ಸ್ಥಾಪನೆ ಮಾಡುವ ಕಾಲಕ್ಕೆ ಮಂದಾಕಿನಿಯು ಉತ್ಸವದ ಸಲುವಾಗಿ ಅಲ್ಲಿಗೆ ಬಂದಿದ್ದಳು. ಅಂದಿನಿಂದ ಇಂದಿನವರೆಗೆ ಮಂದಾಕಿನಿಯು ಸಂಗಮೇಶ್ವರನ ಸೇವೆಯನ್ನು ಏಕನಿಷ್ಠೆಯಿಂದ ಮಾಡು ತ್ತಿದ್ದಳು. ರಾಜನು ಮನೆಗೆ ಹೋಗಿ ಆ ಕೂಸನ್ನು ಮಂದಾಕಿನಿಯ ಸ್ವಾಧೀನಗೊಳಿಸಿದನು. ಆ ಪುತ್ರನ ಸುಂದರ ಮುಖವನ್ನು ನೋಡಿ ಆ ಪತಿವ್ರತೆಗೆ ಆನಂದವಾಯಿತು. ಆವಳು ಬಹಳ ಉತ್ಸುಕತೆಯಿಂದ ತನ್ನ

ಪತಿಯನ್ನು ಕುರಿತು—ಆ ಬಾಲಕನ ಇತಿಹಾಸವನ್ನು ಕೇಳಿದಳು. ಶಶಾಂ ಗರ ರಾಜನು ಅವಳಿಗೆ ಎಲ್ಲ ಸಂಗತಿಯನ್ನು ತಿಳಿಸಿ, ನಮಗೆ ಶಂಕರನ ಪ್ರಸಾ ದದಿಂದ ಪುತ್ರನು ದೊರೆತಿದ್ದಾನೆಂದು ಹೇಳಿದನು. ಮಂದಾಕಿನಿಯು ಕೂಸನ್ನು ನೋಡಿ ಪುತ್ರಭಾವನೆಯಿಂದ ನಡೆಯಹತ್ತಿದಳು. ಪತಿಯ ಮುಖ ದಿಂದ ಕೆಲ ಸಂಗತಿಯನ್ನು ಕೇಳಿ ಮಾತೃಭಾವನೆಯು ಮಂದಾಕಿನಿಯಲ್ಲಿ ಅಧಿಕವಾಗಹತ್ತಿತು. ಪತಿಯ ಆಜ್ಞೆಯಂತೆ ಅವಳು ಆ ಕೂಸನ್ನು ಎದೆಗೆ ಅವಚಿಕೊಂಡಳು. ಹನ್ನೆರಡು ದಿವಸವಾಗಲು ಆ ಕೂಸಿಗೆ ಕೃಷ್ಣಾಂಗರ ನೆಂಬ ನಾಮಕರಣವನ್ನು ಮಾಡಿದರು. ತಮ್ಮ ಇಚ್ಛೆಯಂತೆ ಶಂಕರನು ಪುತ್ರನನ್ನು ಕೊಟ್ಟದ್ದಕ್ಕಾಗಿ ಆ ದಂಪತಿಗಳಿಗೆ ಬಹಳ ಆನಂದವಾಯಿತು. ಮುಂದೆ ಆ ರಾಜ ದಂಪತಿಗಳು ಕುಂಡಿನೀ ಪುರಕ್ಕೆ ಹೊರಟು ಹೋದರು. ಕಾಲಕ್ರಮದಂತೆ ಆ ಕೃಷ್ಣಾಂಗರನು ಬೆಳೆದು ದೊಡ್ಡವನಾದನು. ಅವನ ಲಗ್ನಮಾಡುವ ಇಚ್ಛೆಯಿಂದ ರಾಜನು ಉತ್ತಮ ಕನ್ಯೆಯನ್ನು ಶೋಧಿಸುವ ದಕ್ಕಾಗಿ ಪುರೋಹಿತನನ್ನು ಬೇರೆ ದೇಶಕ್ಕೆ ಕಳಿಸಿಕೊಟ್ಟನು. ಕೃಷ್ಣಾಂಗ ರನು ಸ್ವರೂಪದಿಂದ ಬಹಳ ಸುಂದರನಾಗಿದ್ದನು; ಅವನಿಗೆ ತಕ್ಕಂತೆ ಸೌಂದರ್ಯ ಸಂಪನ್ನಳಾದ ವಧುವನ್ನು ಶೋಧಿಸುವದಕ್ಕಾಗಿ ರಾಜನು ಅನೇಕ ಸ್ಥಳಗಳಿಗೆ ಪುರೋಹಿತನನ್ನು ಕಳಿಸಿಕೊಟ್ಟನು. ಎಷ್ಟು ಕನ್ಯೆಗ ಳನ್ನು ಶೋಧಿಸಿದರೂ ಕೃಷ್ಣಾಂಗರನಿಗೆ ಕೂಡಿಬರದ್ದಕ್ಕಾಗಿ ನಿರಾಶೆಯಿಂದ ಪುರೋಹಿತನು ರಾಜನ ಕಡೆಗೆ ತಿರುಗಿ ಬಂದನು ಕೃಷ್ಣಾಂಗರನಿಗೆ ತಕ್ಕಂತೆ ಕನ್ಯೆಯು ದೊರೆಯದ್ದಕ್ಕಾಗಿ ರಾಜನು ವ್ಯಸನಪಡಹತ್ತಿದನು. ಮಂದಾ ಕಿನಿಯು ಶರೀರಕ್ಕೆ ಅಸ್ವಸ್ಥತೆಯುಂಟಾಗಿ ಕಡೆಗೆ ಮೃತಪಟ್ಟಳು. ಪತ್ನಿಯ ವಿಯೋಗದಿಂದ ರಾಜನು ಅತಿ ದುಃಖಿತನಾದನು. ಮಂತ್ರಿವರ್ಗದವರು ಅನೇಕ ಪ್ರಕಾರದಿಂದ ಬೋಧಿಸಿ ರಾಜನನ್ನು ಸಮಾಧಾನಗೊಳಿಸಹತ್ತಿದರು. ನರದೇಹದವು ನಾಶವಂತವಾಗಿರುವದನ್ನು ನೋಡಿ ರಾಜನು ಶೋಕವನ್ನು ಕಡಿಮೆ ಮಾಡಿದನು.

ಶಶಾಂಗರರಾಜನು ಆಚಾರದಿಂದ ಪರಿಶುದ್ಧನಾಗಿದ್ದನು. ಮಂದಾ ಕಿನಿಯು ಸತ್ತು ಒಂದು ವರ್ಷವು ಕಳೆಯಿತು. ಭಾರ್ಯೆಯ ವಿಯೋಗ ದಿಂದ ರಾಜನು ಮನಸ್ಸಿನಲ್ಲಿ ತಳಮಳಿಸಹತ್ತಿದನು. ಅವನಿಗೆ ಎರಡನೆ ಲಗ್ನ

ಮಾಡಿಕೊಳ್ಳುವ ಇಚ್ಛೆಯಾಯಿತು. ತನ್ನ ಇಚ್ಛೆಯನ್ನು ಪುರೋಹಿತನ ಮುಂದೆ ಆಡಿ ತೋರಿಸಿದನು. ಪುರೋಹಿತನು ಕೃಷ್ಣಾಗರನಿಗೆ ಕನ್ಯೆಯನ್ನು ಶೋಧಿಸುವಾಗ ಕೆಲವು ಕನ್ಯೆಯರ ಟಿಪ್ಪಣಿಯನ್ನು ಮಾಡಿಕೊಂಡಿದ್ದನು. ಅವುಗಳಲ್ಲಿ ಕೆಲವು ಕನ್ಯೆಯರ ರಾಶಿನಕ್ಷತ್ರಗಳನ್ನು ರಾಜನ ರಾಶಿನಕ್ಷತ್ರ ಗಳಿಗೆ ಘಟಿತಾರ್ಥ ನೋಡಲು ಭುಜಾವಂತಿ ಎಂಬ ಕನ್ಯೆಯ ರಾಶಿ ನಕ್ಷತ್ರಗಳು ಕೂಡಿ ಬಂದವು. ಅವಳು ಭುಜಧ್ವಜರಾಜನ ಮಗಳಾಗಿ ದ್ದಳು. ಆ ಭುಜಧ್ವಜನು ಚಿತ್ರಕೂಟದ ರಾಜನಾಗಿದ್ದನು. ಶಶಾಂಗರ ರಾಜನು ತನ್ನ ಮಂತ್ರಿ-ಪುರೋಹಿತರನ್ನು ಚಿತ್ರಕೂಟಕ್ಕೆ ಕನ್ಯಾರ್ಥಿಯಾಗಿ ಕಳಿಸಿಕೊಟ್ಟನು. ಭುಜಧ್ವಜರಾಜನಿಗೂ ಕನ್ಯೆಯನ್ನು ಕೊಡುವ ಇಚ್ಛೆ ಯುಂಟಾಯಿತು. ಅವನು ತನ್ನ ಕನ್ಯೆಯಾದ ಭುಜಾವಂತಿಯನ್ನು ಶಶಾಂ ಗರ ರಾಜನಿಗೆ ಕೊಡುವದಕ್ಕಾಗಿ ನಿಶ್ಚಯಿಸಿದನು. ಲಗ್ನದ ತಿಥಿಯನ್ನು ಗೊತ್ತುಪಡಿಸಿದನು. ಪುರೋಹಿತನು ಆ ಸಂಗತಿಯನ್ನು ಶಶಾಂಗರರಾಜ ನಿಗೆ ಹೇಳಿದನು. ರಾಜನಿಗೆ ಬಹಳ ಸಂತೋಷವಾಗಿ ತನ್ನ ಸರಂಜಾಮು ದೊಡನೆ ಚಿತ್ರಕೂಟಕ್ಕೆ ಹೋದನು. ಅಲ್ಲಿ ಶಶಾಂಗರ ಮತ್ತು ಭುಜಾ ವಂತಿ ಇವರ ವಿವಾಹವಾಯಿತು. ಸಮಾರಂಭವು ಮುಗಿಯಲು ಶಶಾಂಗ ರನು ತನ್ನ ಹೊಸಪತ್ನಿಯೊಡನೆ ರಾಜಧಾನಿಯಾದ ಕುಂಡಿನೀಪುರಕ್ಕೆ ತಿರುಗಿ ಬಂದನು.

ಲಗ್ನಸಮಾರಂಭವು ಮುಗಿದು ಕೆಲವು ದಿವಸಗಳಾದ ಬಳಿಕ ಭುಜಾ ವಂತಿಗೆ ಹದಿಮೂರನೇ ವರ್ಷವು ಪ್ರಾರಂಭಿಸಿತು. ಆ ಕಾಲಕ್ಕೆ ಕೃಷ್ಣಾ ಗಾರನಿಗೆ ಹದಿನೇಳನೇ ವರ್ಷ ಪ್ರಾರಂಭವಾಗಿತ್ತು. ರಾಜನಿಗೆ ಒಬ್ಬ ಮಲಮಗನಿದ್ದಾನೆಂಬ ಸಂಗತಿಯು ಭುಜಾವಂತಿಯ ಕಿವಿಯ ಮೇಲೆ ಹೋಯಿತು. ತನ್ನ ತಂದೆಯು ಎರಡನೆ ಲಗ್ನವನ್ನು ಮಾಡಿಕೊಂಡು ತನಗೆ ಮಲತಾಯಿಯನ್ನು ಉಂಟುಮಾಡಿದನೆಂದು ತಿಳಿದು ಕೃಷ್ಣಾಗರನು ತನ್ನ ತಾಯಿಯ ದರ್ಶನಕ್ಕೆ ಹೋದನು. ಭುಜಾವಂತಿಗೂ ಕೃಷ್ಣಾಗರನಿಗೂ ಭೆಟ್ಟಿಯಾದದ್ದು ಇದೇ ಮೊದಲು.

ಶಶಾಂಗರರಾಜನು ಭುಜಾವಂತಿಯನ್ನು ಅಧಿಕವಾಗಿ ಪ್ರೀತಿಸುತ್ತಿ ದ್ದನು. ಭುಜಾವಂತಿಯ ಮನಸ್ಸನ್ನು ಆನಂದಗೊಳಿಸುವದಕ್ಕಾಗಿ ಅವನು

ಯಾವಾಗಲೂ ಎಚ್ಚರಪಡುತ್ತಿದ್ದನು. ಅನೇಕ ಪ್ರಕಾರದ ಮೋಹಕವಾದಂಥ ಮತ್ತು ಮೂಲ್ಯವುಳ್ಳಂಥ ವಸ್ತುಗಳನ್ನು ತನ್ನ ಪ್ರೀತಿಯ ಭುಜಾವಂತಿಗೆ ಅರ್ಪಿಸುತ್ತಿದ್ದನು. ರಾಜನು ಭುಜಾವಂತಿಯ ಪ್ರೀತಿಗಾಗಿ ಬೇರೊಂದು ಹೊಸಮಂದಿರವನ್ನು ಸಿದ್ಧಗೊಳಿಸಿದನು. ಆ ಮಂದಿರದಲ್ಲಿ ಭುಜಾವಂತಿಯು ಯಾವಾಗಲೂ ಆನಂದದಿಂದ ಕುಳಿತುಕೊಳ್ಳುತ್ತಿದ್ದಳು. ಒಂದುದಿವಸ ಶಶಾಂಗರರಾಜನು ಅಂತಃಪುರದೊಳಗೆ ಒಂದು ವಿಲಕ್ಷಣ ಪ್ರಕಾರವು ಒದಗಿತು. ಶಶಾಂಗರರಾಜನಿಗೆ ಶಿಕಾರಿಯ ಹಂಬಲವು ಇದ್ದದರಿಂದ ಅಂದು ಮೃಗಗಳ ಬೇಟೆಗಾಗಿ ಅರಣ್ಯದಲ್ಲಿ ಹೋಗಿದ್ದನು. ಭುಜಾವಂತಿಯು ತನ್ನ ಮಂದಿರದ ಕಿಡಿಕಿಯೊಳಗೆ ನಿಂತುಕೊಂಡಿದ್ದಳು. ಈ ಸಮಯದಲ್ಲಿ ಅವಳ ಮಲಮಗನಾದ ಕೃಷ್ಣಾಗರನು ಹಾದಿಯಲ್ಲಿ ಪಟವನ್ನು ಆಡಿಸುತ್ತಿದ್ದನು. ಭುಜಾವಂತಿಯು ಹಾದಿಯ ಕಡೆಗೆ ನೋಡುತ್ತನೋಡುತ್ತ ಅವಳ ದೃಷ್ಟಿಯು ಆ ಪತಂಗದ ಕಡೆಗೆ ಹೋಯಿತು. ಕೃಷ್ಣಾಗರನ ಅಪ್ರತಿಮ ಸೌಂದರ್ಯವನ್ನು ನೋಡಿ ಅವಳು ಪಾಪಯುಕ್ತ ಮೋಹದಿಂದ ವ್ಯಾಪ್ತಳಾದಳು. ಆ ಚಂಡಾಲಿನಿಯು ಕೂಡಲೆ ತನ್ನ ಒಬ್ಬ ವಿಶ್ವಾಸುಕ ದಾಸಿಯನ್ನು ಕರೆದು ಕೃಷ್ಣಾಗರನನ್ನು ಮಂದಿರಕ್ಕೆ ಕರೆತರುವ ವಿಷಯವಾಗಿ ಹೇಳಿಕಳಿಸಿದಳು. ಕೃಷ್ಣಾಗರನು ತನ್ನ ತಾಯಿಯ ಇಚ್ಛೆಯನ್ನು ತಿಳಿದು ಪತಂಗದ ಹುರಿಯನ್ನು ತನ್ನ ಮಿತ್ರರಿಗೆ ಒಪ್ಪಿಸಿ ರಾಣಿಯ ಮಂದಿರದ ಕಡೆಗೆ ಹೋದನು. ದಾಸಿಯು ಕೃಷ್ಣಾಗರನ ಜೊತೆಯಲ್ಲಿದ್ದಳು. ಕೃಷ್ಣಾಗರನು ರಾಣಿಯ ಮಂದಿರಕ್ಕೆ ಹೋದನು. ಕೃಷ್ಣಾಗರನು ಬರಲು ರಾಣಿಯು ಎದ್ದು ನಿಂತಳು. ಅವನು ಮಾತೃಭಾವದಿಂದ ರಾಣಿಗೆ ನಮಸ್ಕಾರ ಮಾಡಿದನು. ಆದರೆ ಅವಳು ಕೃಷ್ಣಾಗರನ ನಮಸ್ಕಾರದ ಕಡೆಗೆ ಲಕ್ಷ್ಯವನ್ನು ಕೊಡಲಿಲ್ಲ. ಅವಳ ಚಿತ್ತವು ಕ್ಷುದ್ರತನದಿಂದ ತುಂಬಿಕೊಂಡಿತ್ತು. ಅವಳ ಈ ಚಂಚಲ ವೃತ್ತಿಯನ್ನು ಕಂಡು ಕೃಷ್ಣಾಗರನು ಅಲ್ಲಿಂದ ಹೊರಹೊರಟನು. ಅದನ್ನು ಕಂಡು ಆ ಮೂರ್ಖ ಸಾಹಸೀ ಸ್ತ್ರೀಯು ಅವನ ಶರಗನ್ನು ಹಿಡಿದು ನಿಲ್ಲಿಸುವ ಪ್ರಯತ್ನ ಮಾಡಿದಳು. ಕೃಷ್ಣಾಗರನು ಕೊಸರಿಕೊಂಡು ಅವಳಿಂದ ಮುಕ್ತನಾದನು. ಅವಳ ದಿಟ್ಟತನ, ಈ ಪಶುವತ್ ಆಚರಣೆಯನ್ನು ಕಂಡು ಆ ಪವಿತ್ರ ರಾಜಪುತ್ರನು ಅಲ್ಲಿಂದ ಒಮ್ಮೆಲೆ ಹೊರಬಿದ್ದನು.

ರಾಜಪುತ್ರನು ಹೊರಟುಹೋಗುವಾಗ ನಿಂದಾಯುಕ್ತ ಮಾತಿನಿಂದ ರಾಣಿಯನ್ನು ನೋಯಿಸಿದನು. ಕೆಲವು ಹೊತ್ತಿನ ಮೇಲೆ ರಾಣಿಯ ಕಾಮ ವಾಸನೆಯು ತಗ್ಗಿತು. ಆಗ ಅವಳಿಗೆ ಬಹಳ ಪಶ್ಚಾತ್ತಾಪವಾಯಿತು. ಅವಳು ತನ್ನ ದಾಸಿಯನ್ನು ಕರೆದು ಎಲ್ಲ ಸಂಗತಿಯನ್ನು ತಿಳಿಸಿದಳು. ಈ ವೃತ್ತಾಂತವು ಶಶಾಂಗರರಾಜನಿಗೆ ತಿಳಿದರೆ ತನ್ನ ಪ್ರಾಣವೇ ಹೋಗುವದೆಂದು ಅವಳು ಥರಥರ ನಡುಗಹತ್ತಿದಳು. ಈ ಕೃತಿಯ ಬೊಬ್ಬಾಟವು ಜನರ ಕಿವಿಯ ಮೇಲೆ ಹೋದರೆ ತನ್ನ ಮಾನವು ಮಣ್ಣುಗೂಡುವದು. ಮತ್ತು ಎಲ್ಲರೂ ತನ್ನ ಕಡೆಗೆ ಬೊಟ್ಟುಮಾಡಿ ತಿರಸ್ಕರಿಸುವರು. ಇದೆಲ್ಲವನ್ನು ವಿಚಾರಿಸಿ ಅವಳು ಘಾಬರಿಯಾದಳು. ಮರಣದ ಹೊರತು ತನ್ನ ಪರಿಣಾಮವು ಆಗಲಾರದೆಂದು ತಿಳಿದು ತನ್ನ ಎಲ್ಲ ಮನೋಬಯಕೆಯನ್ನು ಆ ದಾಸಿಗೆ ತಿಳಿಸಿದಳು.

---

# ಅಧ್ಯಾಯ ೩೧

## ಚೌರಂಗೀನಾಥನ ತಪಸ್ಸು.



ತನ್ನ ಸ್ವಾಮಿನಿಯಾದ ಭುಜಂಗವತಿಯ ದುಃಖದ ಸ್ಥಿತಿಯನ್ನೂ, ಮತ್ತು ಭಯಂಕರವಾದ ಸಾಹಸವನ್ನೂ ಕಂಡು ಚತುರಳಾದ ಆ ದಾಸಿಯು ಹೇಳಿದ್ದೇನಂದರೆ:—" ರಾಣಿಯವರೇ! ತಮ್ಮ ಪ್ರಾರಬ್ಧದಲ್ಲಿದ್ದಂತೆ ಆಗುವದು. ವ್ಯರ್ಥವಾಗಿ ಯಾಕೆ ಶೋಕಮಾಡುತ್ತೀರಿ? ಕೃಷ್ಣಾಗರನು ನಿಮ್ಮನ್ನು ಧಿಃಕರಿಸಿದನೆಂದು ನೀವು ಪ್ರಾಣಘಾತ ಮಾಡಿಕೊಳ್ಳುವ ಸಾಹಸಕ್ಕೆ ಹೋಗಬೇಡಿರಿ. ಈ ಸಂಕಟದೊಳಗಿಂದ ಪಾರಾಗುವ ಒಂದು ಯುಕ್ತಿಯನ್ನು ಹೇಳುತ್ತೇನೆ; ಆದರಂತೆ ವರ್ತಿಸಿರಿ. ಈಗ ಶಯನಮಂದಿರದಲ್ಲಿ

ಸ್ವಸ್ಥವಾಗಿ ಮಲಗಿಕೊಳ್ಳಿರಿ ರಾಜನು ಬೇಟೆಯಿಂದ ನಿಮ್ಮ ಭೆಟ್ಟಿಗೆ ಬಂದರೂ ಏಳಬೇಡಿರಿ. ರಾಜನು ನಿಮ್ಮನ್ನು ಎಬ್ಬಿಸುವ ಯತ್ನ ಮಾಡಿದರೆ, ಶೋಕಿಸುವದಕ್ಕೆ ಪ್ರಾರಂಭಿಸಿರಿ. ರಾಜನು ಶೋಕದ ಕಾರಣವನ್ನು ವಿಚಾರಿಸಿದಾಗ ನೀವು ಸ್ಪಷ್ಟವಾಗಿ ಹೀಗೆ ಹೇಳಬೇಕು:—"ನಿಮ್ಮ ಪ್ರೀತಿಯ ಮಗನು ಮನೆಯೊಳಗೆ ಇದ್ದರೆ, ನಾನು ಇಲ್ಲಿ ಇರಲಾರೆನು. ಆ ದುಷ್ಟ ಹುಡುಗನ ಸಹವಾಸದಿಂದ ಯಾವ ಕಾಲಕ್ಕೆ ನನ್ನ ಮರ್ಯಾದೆಗೆ ಭಂಗ ಬಂದೀತೆಂದು ಹೇಳಲಿಕ್ಕಾಗುವದಿಲ್ಲ." ಹೀಗೆ ಅನೃತವನ್ನು ನುಡಿದು ಆ ಕೃಪ್ಣಾಗರನ ಕೊರಳಿಗೆ ಪಾಪಕರ್ಮದ ಗುದ್ದಿಯನ್ನು ಹಾಕಿರಿ. ಈ ಯುಕ್ತಿಯನ್ನು ಮಾಡಿದರೆ, ರಾಜನ ಮನಸ್ಸಿನಲ್ಲಿ ಕ್ರೋಧ ಉತ್ಪನ್ನವಾಗುವದು. ಕೃಪ್ಣಾಗರನ ದುಷ್ಟತನಕ್ಕೆ ರಾಜನು ಸಂತಪ್ತನಾಗಿ ಅವನನ್ನು ಹೊರದೂಡಲಿಕ್ಕೆ ಸಿದ್ಧನಾಗುವನು. ಇಲ್ಲದಿದ್ದರೆ ಕೃಷ್ಣಾಗರನನ್ನು ಕೊಂದುಹಾಕುವನು. ಈ ರೀತಿಯಿಂದ ಕೃಪ್ಣಾಗರನ ನಾಶವಾದರೆ, ಕಂಟಕವು ದೂರಾಗುವದು."

ಈ ಮೇರೆಗೆ ಕಪಟ ವಿದ್ಯೆಯಲ್ಲಿ ನಿಷ್ಣಾತಳಾದ ದಾಸಿಯು ಉಪದೇಶಿಸಲು, ಆಕೆಯ ಯುಕ್ತಿಯು ರಾಣಿಯ ಮನಸ್ಸಿಗೆ ಬಂದಿತು. ಅವಳು ಅದರಂತೆ ಆಚರಿಸಿದಳು. ಶಶಾಂಗರರಾಜನು ಮನೆಗೆ ಬಂದು ಹೆಂಡತಿಯನ್ನು ಕಾಣದೆ ವ್ಯಸನಪಟ್ಟು ಆಕೆಯ ಶೋಧಹಚ್ಚಿ ಅವಳಿದ್ದಲ್ಲಿಗೆ ಹೋದನು; ಮತ್ತು ಅವಳು ಹೇಳಿದ ಸಂಗತಿಯಿಂದ ಸಂತಪ್ತನಾದನು. ಸ್ತ್ರೀಚರಿತ್ರವು ಹ್ಯಾಗೆ ಇರುತ್ತದೆಂಬದು ಆ ಮೂರ್ಖ ರಾಜನಿಗೆ ಗೊತ್ತಾಗಲಿಲ್ಲ. ಅವನು ದರ್ಬಾರಕ್ಕೆ ಬಂದು ಮಗನನ್ನು ಕೊಲ್ಲಲು ಅಪ್ಪಣೆ ಮಾಡಿದನು. ಕೊಲೆಗಡಕರು ಕೃಪ್ಣಾಗರನನ್ನು ವಧಸ್ಥಳಕ್ಕೆ ಕರೆದೊಯ್ದು ನಿಲ್ಲಿಸಿದರು; ಆದರೆ ರಾಜನ ಸಿಟ್ಟು ಶಾಂತವಾಗಿ ರಾಜಪುತ್ರನನ್ನು ಕ್ಷಮಿಸಿಬಿಡಬಹುದೆಂದು ಪುನಃ ಅವನೆಡೆಗೆ ಹೋಗಿ ವಿಚಾರಿಸಿದರು. ರಾಜನ ಸಿಟ್ಟು ಯಥಾಪ್ರಕಾರವಾಗಿಯೇ ಇತ್ತು. ಅವನು ಕೊಲೆಗಡಕರನ್ನು ಗದ್ದರಿಸಿ ಕಳಿಸಿದನು. ಆದರೂ ಆ ಕೊಲೆಗಡಕರಿಂದ ರಾಜಪುತ್ರನನ್ನು ಕೊಲ್ಲಲಿಕ್ಕೆ ಆಗಲಿಲ್ಲ. ಅವರು ಹಲವುಸಾರೆ ರಾಜನೆಡೆಗೆ ಬಂದು ಕೇಳಿದರು. ರಾಜನು ಸಂತಾಪಗೊಂಡು ನೀವು ಕೊಲ್ಲದಿದ್ದರೆ ನಾನೇ ಕೊಲ್ಲುವೆನು, ಎಂದು ನುಡಿದನು. ಕೊಲೆಗಡಕರು ನಿರು

ಪಾಯರಾಗಿ ವಧಸ್ಥಳಕ್ಕೆ ಹೋಗಿ ರಾಜಪುತ್ರನನ್ನು ಒಂದು ಚೌರಂಗದ ಮೇಲೆ ಕುಳ್ಳಿರಿಸಿ ಅವನ ಎರಡೂ-ಕೈ ಎರಡೂ-ಕಾಲುಗಳನ್ನು ತುಂಡರಿಸಿದರು. ಆ ಆಘಾತದಿಂತ ರಾಜಪುತ್ರನು ಬವಳಿಬಂದು ಬಿದ್ದನು. ರಾಜಪುತ್ರನ ಈ ಸ್ಥಿತಿಯನ್ನು ನೋಡುವದಕ್ಕೆ ಗ್ರಾಮವಾಸಿಗಳನೇಕರು ಬಂದರು. ಕೆಲವರು ರಾಜನಿಗೆ ದೂಷಣೆ ಕೊಟ್ಟರು; ಕೆಲವರು ರಾಜಪುತ್ರನಿಗೆ ದೂಷಣೆ ಕೊಟ್ಟರು. ಹೀಗೆ ತಮ್ಮ ತಮ್ಮ ಮನಸ್ಸಿಗೆ ಬಂದಂತೆ ಮಾತಾಡಿದರು.

ಈ ಸಂಧಿಯಲ್ಲಿ ಗೋರಕ್ಷ ಮಚ್ಛಿಂದ್ರರು ಅಲ್ಲಿಗೆ ಬಂದರು. ಹಿಂದೆ ಹೇಳಿದಂತೆ ಅವರ ಕಣ್ಣಿಗೆ ಬಿದ್ದ ಕೈ-ಕಾಲುಗಳಿಲ್ಲದ ಪುರುಷನು ಆ ರಾಜಪುತ್ರನೇ ಆಗಿದ್ದನು. ಮಚ್ಛಿಂದ್ರ-ಗೋರಕ್ಷರು ಅವನ ಸ್ಥಿತಿಯ ಬಗ್ಗೆ ಜನರನ್ನು ವಿಚಾರಿಸಿದರು; ಆದರೆ ನಿಜವಾದ ಸಂಗತಿಯು ಜನರಿಗೇ ಗೊತ್ತಿರದ್ದರಿಂದ ಆ ಬಗ್ಗೆ ಇವರಿಗೆ ಯಾರೂ ಹೇಳಲಿಲ್ಲ. ಮಚ್ಛಿಂದ್ರನು ಜ್ಞಾನದೃಷ್ಟಿಯಿಂದ ನೋಡಿ ಹೆಂಡತಿಯ ಕಪಟದಮಾತಿಗೆ ಮರುಳಾಗಿ ರಾಜನು ಈ ರೀತಿ ಮಗನನ್ನು ಶಿಕ್ಷಿಸಿರುವನೆಂದು ತಿಳಿದುಕೊಂಡನು. ಕೂಡಲೆ ರಾಜನನ್ನು ಭಸ್ಮೀಭೂತನನ್ನಾಗಮಾಡಬೇಕೆಂದು ಮಚ್ಛಿಂದ್ರನು ಯೋಚಿಸಿದನು; ಆದರೆ ಈ ಮಾತು ಗೋರಕ್ಷನ ಮನಸ್ಸಿಗೆ ಬರಲಿಲ್ಲ. ರಾಜಕುಮಾರನಿಗೆ ನಾಥದೀಕ್ಷೆಯನ್ನು ಕೊಟ್ಟು, ಅವನಿಂದಲೇ ಈ ದುಷ್ಟರಾಜ ಹಾಗು ರಾಣಿಯರ ಶಾಸನಮಾಡಿಸಬೇಕೆಂದು ನುಡಿದನು. ಬಳಿಕ ಮಚ್ಛಿಂದ್ರ-ಗೋರಕ್ಷರು ನೆಟ್ಟಗೆ ರಾಜಮಂದಿರಕ್ಕೆ ಹೋಗಿ ರಾಜನಿಂದ ಆ ಅಪರಾಧೀ ಹುಡುಗನನ್ನು ಕೇಳಿಕೊಂಡರು. ರಾಜನು ಮಚ್ಛಿಂದ್ರ-ಗೋರಕ್ಷರನ್ನು ಬಹಳವಾಗಿ ಆದರಿಸಿ ಅವರ ಇಚ್ಛೆಗೆ ತನ್ನ ಸಮ್ಮತಿಯನ್ನು ಕೊಟ್ಟನು. ಬಳಿಕ ಅವರು ಅಲ್ಲಿಂದ ಹೊರಟು ಆ ಹುಡುಗನಿದ್ದಲ್ಲಿಗೆ ಹೋದರು. ಆತನ ಹೆಸರು ಗೊತ್ತಿಲ್ಲದ್ದರಿಂದ ಗೋರಕ್ಷನು ಅವನಿಗೆ ಚೌರಂಗಿ ಎಂದು ಅಂದನು. ಅದೇ ಹೆಸರೇ ಅವನಿಗೆ ಮುಂದೆ ಬಿದ್ದಿತು.

ಗೋರಕ್ಷನು ಚೌರಂಗೀ ರಾಜಪುತ್ರನನ್ನು ತನ್ನ ಹೆಗಲಮೇಲೆ ಕುಳ್ಳಿರಿಸಿಕೊಂಡು ನಡೆದನು. ಅವರು ನೆಟ್ಟಗೆ ಬದರಿಕಾಶ್ರಮಕ್ಕೆ ಹೋದರು. ಅಲ್ಲಿ ಒಂದು ಏಕಾಂತ ಗುಹೆಯನ್ನು ನೋಡಿ ಚೌರಂಗಿಯನ್ನು ಕೂಡ್ರಿಸಿ ಅವನಿಗೆ ಗೋರಕ್ಷನು ಮಂತ್ರೋಪದೇಶ ಮಾಡಿದನು. ಮತ್ತು ಈ ಮಂತ್ರ

ದಿಂದ ತಪಸ್ಸು ಮಾಡಬೇಕೆಂದು ಕಟ್ಟಪ್ಪಣೆ ಮಾಡಿದನು. ತಿನ್ನಲಿಕ್ಕೆ ಅವನಿಗೆ ಕೆಲವು ಫಲಗಳನ್ನು ತಂದುಕೊಟ್ಟನು. ಮತ್ತು ಚಾಮುಂಡಿಗೆ ಪ್ರತಿನಿತ್ಯ ಫಲಗಳನ್ನು ತಂದುಕೊಡಲು ಆಜ್ಞೆ ಮಾಡಿದನು. ಚೌರಂಗಿಯು ತಪಸ್ಸಿಗೆ ಕುಳಿತನು. ತಪಸ್ಸಿಗೆ ಲಕ್ಷ್ಯ ತಪ್ಪಿದರೆ ಗುಹೆಯ ಮೇಲಿನ ಕಲ್ಲು ಬಿದ್ದು ನಿನ್ನ ಪ್ರಾಣಹರಣವಾಗುವದೆಂದು ಗೋರಕ್ಷನು ಹೇಳಿದ್ದರಿಂದ ಅದನ್ನೇ ಚೌರಂಗಿಯು ಲಕ್ಷಿಸುತ್ತಿದ್ದನು. ಈ ಹೆದರಿಕೆಯಿಂದ ಅವನು ಫಲಗಳನ್ನು ಸಹ ತಿನ್ನದಾದನು. ಅವನ ತಪಸ್ಸು ಏಕಪ್ರಕಾರವಾಗಿ ನಡೆಯಿತು. ಬರಬರುತ್ತ ಅವನ ಶರೀರವು ಸೊರಗಿ ಕಡ್ಡಿಯಾಯಿತು. ಕೇವಲ ಅಸ್ಥಿಚರ್ಮಗಳೆರಡು ಉಳಿದವು. ಮೈಮೇಲೆ ಗೆದ್ದಲಿಯು ಬೆಳೆದು ದೇಹವು ಮಣ್ಣುಮಯವಾಯಿತು. ಆದರೂ ಅವನ ತಪಸ್ಸು ನಡೆದೇ ಇತ್ತು. ಅವನ ಗುರುನಿಷ್ಠೆಯು ಅಪ್ರತಿಮವಾಯಿತು.

---

# ಅಧ್ಯಾಯ ೩೩

## ಮಚ್ಛೀಂದ್ರನ ಪರಕಾಯ ಪ್ರವೇಶ.

ಚೌರಂಗೀನಾಥನನ್ನು ತಪಶ್ಚರ್ಯಕ್ಕೆ ಕೂಡ್ರಿಸಿದ ಬಳಿಕ ಮಚ್ಛೀಂದ್ರ-ಗೋರಕ್ಷನಾಥರು ಅಲ್ಲಿಂದ ಹೊರಟು ಶ್ರೀ ದತ್ತಾತ್ರೇಯನ ದರ್ಶನಕ್ಕೆ ಹೋದರು. ಶ್ರೀ ದತ್ತನು ಮಚ್ಛೀಂದ್ರ-ಗೋರಕ್ಷರನ್ನು ನೋಡಿ ಸಂತೋಷಪಟ್ಟು ಅವರನ್ನು ಆಲಿಂಗಿಸಿದನು. ತಾಯಿಯು ಮಕ್ಕಳನ್ನು ನೋಡಿ ಸಂತೋಷ ಪಡುವಂತೆ ಅಂದು ಶ್ರೀ ದತ್ತನಿಗೆ ಸಂತೋಷವಾಯಿತು. ಮೂವರೂ ಭೋಜನ ಮಾಡಿದರು. ಬಳಿಕ ದತ್ತನು ಮಚ್ಛೀಂದ್ರ-ಗೋರಕ್ಷರ ಯೋಗಕ್ಷೇಮವನ್ನು ವಿಚಾರಿಸಿದನು. ಆ ತ್ರಿವರ್ಗರು ಕೆಲವು ದಿನ ಆನಂದದಿಂದ ಕಾಲಕಳೆದರು. ಬಳಿಕ ಗೋರಕ್ಷನು ಲೋಕೋಪಕಾರಕ್ಕಾಗಿ ತೀರ್ಥಾಟನ ಮಾಡಲು ದತ್ತನ ಅಪ್ಪಣೆಯನ್ನು ಕೇಳಿಕೊಂಡನು. ಸಾಧು

ಸಜ್ಜನರ ದರ್ಶನದಿಂದ ತೀರ್ಥ-ಕ್ಷೇತ್ರಗಳು ಪಾವನವಾಗುತ್ತವೆಂದು ತಿಳಕೊಂಡು ದತ್ತನು ಅವರಿಗೆ ತೀರ್ಥಾಟನಕ್ಕೆ ಅಪ್ಪಣೆ ಕೊಟ್ಟನು. ಮಚ್ಛಿಂದ್ರ ಗೋರಕ್ಷರು ಗಿರಿನಾರ ಪರ್ವತವನ್ನು ಇಳಿದು ತೀರ್ಥಾಟವಕ್ಕೆ ಹೊರಟರು. ಮೊದಲು ಅವರು ಪ್ರಯಾಗಕ್ಕೆ ಬಂದರು. ಅಲ್ಲಿ ತ್ರಿವಿಕ್ರಮನೆಂಬ ಅರಸನು ಇದ್ದನು. ಅವನು ಪ್ರಜಾವತ್ಸಲನೂ, ಪರಮಧಾರ್ಮಿಕನೂ ಆಗಿದ್ದನು. ಆತನಿಗೆ ಸಂತತಿ ಇದ್ದಿಲ್ಲ; ಇಂಥ ಸ್ಥಿತಿಯಲ್ಲಿ ಅವನು ವೃದ್ಧಾಪ್ಯದಿಂದ ಮರಣಹೊಂದಿದನು. ರಾಜಭಾರ್ಯೆಗೆ ರೇವತಿಯೆಂಬ ನಾಮಾಭಿಧಾನವಿತ್ತು. ಅವಳು ಅತ್ಯಂತ ದುಃಖಾಕುಲಳಾದಳು. ಪ್ರಜಾವತ್ಸಲನಾದ ರಾಜನು ಸತ್ತದ್ದರಿಂದ ಇಡೀ ಪ್ರಯಾಗವೇ ಶೋಕಸಾಗರದಲ್ಲಿ ಮುಳುಗಿತು. ಮಚ್ಛಿಂದ್ರ-ಗೋರಕ್ಷರು ಪ್ರಯಾಗದಲ್ಲಿ ಸೇರಲು, ಪ್ರತಿಯೊಂದು ಮನೆಯೊಳಗಿನ ಜನರೂ ದುಃಖಮಗ್ನರಾಗಿರುವದು ಅವರಿಗೆ ಕಂಡುಬಂತು. ಅದರಿಂದ ಅವರು ಆಶ್ಚರ್ಯಕ್ಕೊಳಗಾಗಿ ಒಂದು ಮನೆಯೊಳಗೆ ಹೋಗಿ ವಿಚಾರಿಸಿದರು. ತ್ರಿವಿಕ್ರಮರಾಜನು ದೇಹಬಿಟ್ಟದ್ದರಿಂದ ಹೀಗೆ ಅಳುತ್ತೇವೆಂದು ಹೇಳಿದರು. ಸದ್ಧರ್ಮಪರಿಪಾಲಕನಾದ ರಾಜನು ನಿಪುತ್ರಿಕನಾಗಿ ತೀರಿಕೊಂಡನೆಂಬದನ್ನು ಕೇಳಿ ಮಚ್ಛಿಂದ್ರ-ಗೋರಕ್ಷರಿಗೂ ಬಹಳ ದುಃಖವಾಯಿತು. ಆಗ ಮಚ್ಛಿಂದ್ರನು ರಾಜನು ಸತ್ತ ಕಾರಣವನ್ನು ಜ್ಞಾನದೃಷ್ಟಿಯಿಂದ ನೋಡಿ ತಿಳಿದನು. ರಾಜನು ಅಕಾಲಮೃತ್ಯುವಿಗೀಡಾಗದೆ ಕಾಲಮೃತ್ಯುವಶವಾಗಿರುವನೆಂತಲೂ ಅವನು ಸದ್ಧರ್ಮಪರಾಯಣನಿದ್ದದರಿಂದ ಪರಬ್ರಹ್ಮದಲ್ಲಿ ಐಕ್ಯವಾಗಿರುವನೆಂತಲೂ ತಿಳಿದುಬಂದಿತು. ಈ ಸಂಗತಿಯಿಂದ ರಾಜನನ್ನು ಬದುಕಿಸುವದು ಶಕ್ಯವಿಲ್ಲವೆಂದು ತಿಳಿದು ಮಚ್ಛಿಂದ್ರನು ಅಸಮಾಧಾನದಿಂದ ಊರಹೊರಕ್ಕೆ ಹೋದನು. ಅವನ ಬೆನ್ನಹಿಂದಿನಿಂದ ಗೋರಕ್ಷನೂ ಹೋದನು. ಆಗ ಗೋರಕ್ಷನಿಗೆ ತುಂಬಾ ಅಸಂತೋಷವಾಗಿತ್ತು. ಗ್ರಾಮವಾಸಿಗಳೆಲ್ಲರೂ ದುಃಖಿಸುವದನ್ನು ಕಂಡು ಅವನೂ ದುಃಖಿಸುತ್ತಿದ್ದನು.

ಇಂತು ಆ ಗುರು-ಶಿಷ್ಯರು ಅಸಮಾಧಾನದಿಂದ ಊರಹೊರಗಿರುವ ಒಂದು ಶಿವಾಲಯಕ್ಕೆ ಹೋದರು. ಅದು ನಿರ್ಜನಪ್ರದೇಶವಾಗಿತ್ತು. ಮಚ್ಛಿಂದ್ರ-ಗೋರಕ್ಷರು ಆ ಶಿವಾಲಯದಲ್ಲಿ ಆಲೋಚಿಸುತ್ತ ಕುಳಿತುಕೊಂ

ಡರು. ಆ ಶಿವಾಲಯದ ಸಮೀಪದಲ್ಲಿಯೇ ಸ್ಮಶಾನಭೂಮಿಯಿದ್ದದರಿಂದ ಸ್ವಲ್ಪ ಹೊತ್ತಿನಲ್ಲಿ ರಾಜನ ಶವವನ್ನು ಅಲ್ಲಿಗೆ ತಂದರು. ಅಸಂಖ್ಯ ಜನರು ರಾಜನ ಪ್ರೇತಯಾತ್ರೆಯ ಸಂಗಡ ಬಂದಿದ್ದರು. ಶವವನ್ನು ನೋಡಿ ಗೋರಕ್ಷನು ಮಚ್ಛೇಂದ್ರನನ್ನು ಕುರಿತು:—ಮಹಾರಾಜ, ತಾವು ಸಮರ್ಥರಾಗಿರು ವಿರಿ. ಈ ಪರೋಪಕಾರಿಯಾದ ರಾಜನನ್ನು ಬದುಕಿಸಬೇಕು, ಎಂದನು. ಆಗ ಮಚ್ಛೇಂದ್ರನು ಸುಮ್ಮನಿರು, ಎಂದು ನುಡಿದನು. ಅದರಿಂದ ಗೋರಕ್ಷನಿಗೆ ಸಮಾಧಾನವಾಗಲಿಲ್ಲ. ಮತ್ತೆ ಗುರುಗಳಿಗೆ ದುಂಬಾಲಬಿದ್ದನು. ಈತನನ್ನು ಬದುಕಿಸುವುದು ಶಕ್ಯವಿಲ್ಲವೆಂದು ಮಚ್ಛೇಂದ್ರನು ಅಂದನು. ಆಗ ಗೋರಕ್ಷನು—ಮಹಾರಾಜ, ತಮಗೆ ಮನಸ್ಸಿಲ್ಲದಿದ್ದರೆ ಉಪಾಯವಿಲ್ಲ. ನಾನು ನನ್ನ ಶಕ್ತಿಯಿಂದ ರಾಜನನ್ನು ಬದುಕಿಸಿ ಈ ಪ್ರಜೆಗಳಿಗೆ ಆನಂದವನ್ನುಂಟುಮಾಡುವೆನು, ಎಂದನು. ಅದನ್ನು ಕೇಳಿ ಮಚ್ಛೇಂದ್ರನು:—ತಮ್ಮಾ, ಹೀಗೆ ಹುಡುಗನಂತೆ ಮಾತಾಡಬೇಡ. ನೀನು ಸಾಮರ್ಥ್ಯವಂತನಿರುವದೇನೋ ನಿಜ; ಆದರೆ ಈ ರಾಜನ ಮೇಲೆ ನಿನ್ನ ಸಾಮರ್ಥ್ಯವು ನಡೆಯಲಾರದು, ಎಂದನು.

ಗುರುಗಳು ಹೀಗೆ ತನ್ನನ್ನು ನಿರಾಕರಿಸಿ ಮಾತಾಡಲು ಗೋರಕ್ಷನಿಗೆ ಆ ರಾಜನ ಶವವನ್ನು ಎಬ್ಬಿಸಿಯೇ ತೀರಬೇಕೆಂಬ ಹುಚ್ಚು ಹೊಕ್ಕಿತು. ಎದ್ಯಾ ಮದವು ಎಂಥವರನ್ನಾದರೂ ಬಿಡದು. ಆಗ ಗೋರಕ್ಷನು ಮಹಾರಾಜ, ನಾನು ಈ ರಾಜನನ್ನು ಬದುಕಿಸದಿದ್ದರೆ, ಸ್ವತಃ ನನ್ನ ದೇಹವನ್ನು ಆಹುತಿ ಕೊಡುವೆನು; ಮತ್ತು ಸಹಸ್ರ ವರುಷ ಪರಿಯಂತರ ನರಕವಾಸವನ್ನು ಅನುಭವಿಸುವೆನು, ಎಂದು ಪ್ರತಿಜ್ಞೆಯನ್ನು ಮಾಡಿದನು. ಗೋರಕ್ಷನ ಈ ಅಪ್ರಾಸಂಗಿಕ ಪ್ರತಿಜ್ಞೆಯನ್ನು ನೋಡಿ ಮಚ್ಛೇಂದ್ರನು ಕಳವಳಪಟ್ಟು "ಗೋರಕ್ಷಾ, ನೀನು ಸಂಜೀವಿನೀ ಮಂತ್ರಬಲದಿಂದ ಇವನನ್ನು ಬದುಕಿಸುವ ಪ್ರಯತ್ನ ಮಾಡಬಹುದೆಂಬುದು ನನಗೆ ಗೊತ್ತಿಲ್ಲವೆಂತಲ್ಲ; ನೀನು ರಾಜನ ಸ್ಥಿತಿಯನ್ನು ತಿಳಕೊಂಡಿಲ್ಲವೆಂಬಂತೆ ತೋರುತ್ತದೆ. ರಾಜನು ಬ್ರಹ್ಮೈಕ್ಯನಾಗಿರುವನು. ಆದ್ದರಿಂದ ವ್ಯರ್ಥವಾಗಿ ಪ್ರತಿಜ್ಞೆಯನ್ನು ಮಾಡಿದೆ, ಎಂದನು. ಆಗ ಗೋರಕ್ಷನು ಜ್ಞಾನದೃಷ್ಟಿಯಿಂದ ನೋಡಿ, ಮಚ್ಛೇಂದ್ರನ ಮಾತು ಸತ್ಯವೆಂಬುದನ್ನು ಮನಗಂಡನು. ತಾನು ಪ್ರತಿಜ್ಞೆ

ಮಾಡಿದ್ದು ನಿರರ್ಥಕವಿದ್ದು, ರಾಜನು ಬದುಕುವ ಆಶೆಯಿಲ್ಲೆಂಬದು ಅವನಿಗೆ ಸ್ಪಷ್ಟವಾಗಿ ಕಂಡುಬಂದಿತು. ಕೂಡಲೆ ಅವನು ತನ್ನ ಪ್ರತಿಜ್ಞೆಯಂತೆ ತಾನು ಅಗ್ನಿಕಾಷ್ಠ ಭಕ್ಷಣಮಾಡಿ ಪ್ರಾಣಕೊಡಲು ಉದ್ಯೋಗ ನಡಿಸಿದನು. ಇದನ್ನು ಮಚ್ಛಿಂದ್ರನು ತಿಳಿದನು. ಗೋರಕ್ಷನು ನಿಶ್ಚಯಿಸಾ ಮನುಷ್ಯನಾದ್ದರಿಂದ ಪ್ರಾಣಕೊಡುವದಕ್ಕೆ ಹಿಂದೆಮುಂದೆ ನೋಡುವದಿಲ್ಲೆಂದು ತಿಳಿದು ಮಚ್ಛಿಂದ್ರನು ಒಂದು ಹಂಚಿಕೆಯನ್ನು ತೆಗೆದು ನುಡಿದನೇನಂದರೆ:—ಗೋರಕ್ಷಾ, ನೀನು ಪ್ರಾಣಕೊಡುವ ಸಾಹಸಕ್ಕೆ ಬೀಳಬೇಡ; ನೀನು ಈಗ ಪ್ರತಿಜ್ಞೆ ಮಾಡಿರುವದಾದರೂ ಪರೋಪಕಾರಕ್ಕಾಗಿಯೇ ಆಗಿರುವದು. ರಾಜನನ್ನು ಬದುಕಿಸುವದಕ್ಕೆ ಒಂದು ಉಪಾಯುವಿರುವದು. ಅದು ನಿನ್ನ ಮನಸ್ಸಿಗೆ ಬಂದರೆ ನೋಡು. ನಾನು ನನ್ನ ದೇಹವನ್ನು ಬಿಟ್ಟು ಈ ರಾಜನ ದೇಹದಲ್ಲಿ ಪ್ರವೇಶ ಮಾಡುವೆನು. ಹನ್ನೆರಡು ವರುಷಗಳವರೆಗೆ ರಾಜನ ದೇಹದಲ್ಲಿದ್ದು, ಪುನಃ ನನ್ನ ದೇಹದಲ್ಲಿ ಬರುವೆನು. ಅಲ್ಲಿಯುವರೆಗೆ ನೀನು ನನ್ನ ದೇಹವನ್ನು ಸಂರಕ್ಷಿಸಬೇಕು. ಇದು ನಿನಗೆ ಶಕ್ಯವಿದ್ದರೆ ಹೇಳು." ಎಂದು ನುಡಿದನು.

ಮಚ್ಛೀಂದ್ರನ ಈ ಯೋಚನೆಯು ಗೋರಕ್ಷನ ಮನಸ್ಸಿಗೆ ಬಂದಿತು. ಬಳಿಕ ಮಚ್ಛೀಂದ್ರನು ತನ್ನ ದೇಹಬಿಟ್ಟು ರಾಜನ ದೇಹದಲ್ಲಿ ಪ್ರವೇಶ ಮಾಡಿದನು. ಕೂಡಲೆ ರಾಜನು ಮಲಗಿದವನು ಏಳುವಂತೆ ಎದ್ದು ಕುಳಿತನು. ರಾಜನಿಗೆ ಜೀವ ತಿರುಗಿತೆಂದು ಜನರಿಗೆ ತುಂಬಾ ಸಂತೋಷವಾಯಿತು. ದುಃಖಾಶ್ರುಗಳಿಂದ ತುಂಬಿದ ಜನರ ಕಣ್ಣುಗಳು ಆನಂದಾಶ್ರುಗಳನ್ನು ತಾಳಿದವು. ಬಳಿಕ ರಾಜನ ಹೆಸರಿನಿಂದ ಒಂದು ಸುವರ್ಣದ ಮೂರ್ತಿಯನ್ನು ಮಾಡಿ ಅದರ ದಹನ ವಿಧಿಯನ್ನು ತೀರಿಸಿ, ಬಂದ ಜನರು ರಾಜನೊಡನೆ ಉತ್ಸವದಿಂದ ಊರೊಳಗೆ ಹೋದರು. ರೇವತೀ ರಾಣಿಯು ರಾಜನು ಬದುಕಿ ಬಂದದ್ದಕ್ಕೆ ತುಂಬಾ ಆನಂದಪಟ್ಟಳು. ಅವಳು ರಾಜನಿಗೆ ಅಭ್ಯಂಗನ ಸ್ನಾನಮಾಡಿಸಿ ಷಡ್ರಸಾನ್ನವನ್ನು ಊಟಕ್ಕೆ ಹಾಕಿದಳು. ಬಳಿಕ ಕೆಲಹೊತ್ತು ವಿಶ್ರಾಂತಿಯನ್ನು ಹೊಂದಿದ ಬಳಿಕ ಅವನೊಡನೆ ಸುಖಸಲ್ಲಾಪಗಳನ್ನು ಆಡುತ್ತ ಕುಳಿತಳು. ರಾಣಿಯು ಕೇಳುವ ಎಲ್ಲ ಸಂಗತಿಗಳಿಗೆ ಮಚ್ಛಿಂದ್ರನು ನಿಜವಾದ ತ್ರಿವಿಕ್ರಮನಂತೆ ಸಮರ್ಪಕ ಉತ್ತರ

ಕೊಟ್ಟನು. ಬಳಿಕ ಅವನು ರಾಜ್ಯಕಾರಭಾರದಲ್ಲಿಯೂ ತ್ರಿವಿಕ್ರಮನಂತೆ ಕೆಲಸನಡಿಸಿ ಪ್ರಜೆಗಳಿಗೆ ಆನಂದವನ್ನುಂಟು ಮಾಡಿದನು. ರಾಜನು ಬದುಕಿ ಬಂದ ನಿಮಿತ್ಯವಾಗಿ ಅರಮನೆಯಲ್ಲಿ ಉತ್ಸವಗಳು ನಡೆದವು.

ಇತ್ತ ಶಿವಮಂದಿರದಲ್ಲಿದ್ದ ಮಚ್ಛಿಂದ್ರನ ದೇಹವನ್ನು ಎಲ್ಲಿ ಇಡಬೇಕೆಂದು ಗೋರಕ್ಷನು ಚಿಂತಿಸತೊಡಗಿನು. ಅಷ್ಟರಲ್ಲಿ ಆ ದೇವಾಲಯದ ಪೂಜಾರಿಣಿಯು ಅಲ್ಲಿಗೆ ಬಂದಳು. ಅವಳನ್ನು ಕಂಡು ಗೋರಕ್ಷನು ಹತ್ತರ ಕರೆದು ನಡೆದ ಎಲ್ಲ ಪ್ರಕಾರವನ್ನು ಅವಳಿಗೆ ತಿಳಿಸಿ ಈ ದೇಹವನ್ನು ಹನ್ನೆರಡುವರ್ಷಗಳ ವರೆಗೆ ಗುಪ್ತವಾಗಿ ಇಡಬೇಕಾಗಿದೆ. ಗುಪ್ತವಾದ ಸ್ಥಳವು ನಿನಗೆ ಗೊತ್ತಿದ್ದರೆ ಹೇಳು ಎಂದು ಕೇಳಿದನು. ಗೋರಕ್ಷನು ಹೇಳಿದ ಸಂಗತಿಯಿಂದ ಪೂಜಾರಿಣಿಗೆ ಬಹಳ ಕೌತುಕವಾಯಿತು. ಅವಳು ಈ ಪರೋಪಕಾರ ಕಾರ್ಯದಲ್ಲಿ ಸಹಾಯ ಮಾಡಲು ಒಪ್ಪಿ ಶಿವಾಲಯದಲ್ಲಿದ್ದ ಒಂದು ಗುಪ್ತಗುಹೆಯನ್ನು ಗೋರಕ್ಷನಿಗೆ ತೋರಿಸಿದಳು. ತನಗೆ ಬೇಕಾದಷ್ಟು ಏಕಾಂತವೂ ಗೌಪ್ಯವೂ ಆ ಗುಹೆಯಿಂದ ಸಾಧಿಸುತ್ತದೆಂದು ತಿಳಿದುಬರಲು ಗೋರಕ್ಷನು ಗುರುದೇಹವನ್ನು ಎತ್ತಿ ಆ ಗುಹೆಯಲ್ಲಿರಿಸಿ ಗುಹೆಯ ಮುಖವನ್ನು ಭದ್ರಗೊಳಿಸಿದನು. ಬಳಿಕ ಅವನು ಈ ಸಂಗತಿಯಲ್ಲಿ ಒಂದು ಶಬ್ದವನ್ನಾದರೂ ಹೊರಗೆ ಆಡಬೇಡವೆಂದು ಆ ಪೂಜಾರಿಣಿಗೆ ಕಟ್ಟಪ್ಪಣೆ ಮಾಡಿದನು. ಆಗ ಪೂಜಾರಿಣಿಯು—ಮಹಾರಾಜ, ತಾವು ೧೨ ವರ್ಷಗಳ ವರೆಗೆ ಈ ದೇಹವನ್ನು ಇಲ್ಲಿ ಇಟ್ಟರೆ ಅದರ ಗತಿ ಏನು ಎಂದು ಕೇಳಿದಳು. ಅದಕ್ಕೆ ಗೋರಕ್ಷನು ಈ ದೇಹವು ಸಾಮಾನ್ಯ ಪುರುಷನದಲ್ಲ. ಮಚ್ಛಿಂದ್ರನಾಥನೆಂಬ ಯೋಗೀಶ್ರೇಷ್ಠನದು. ಸಾವಿರಾರು ವರ್ಷಗಳ ವರೆಗೆ ಇಟ್ಟರೂ ಅದು ಕೆಡಲಾರದು ಎಂದು ಉತ್ತರ ಕೊಟ್ಟು ಈ ಸುದ್ದಿಯನ್ನು ಯಾರ ಮುಂದೂ ಹೇಳಬೇಡವೆಂದು ಪುನಃ ಹೇಳಿದನು. ಅದಕ್ಕೆ ಒಪ್ಪಿಕೊಂಡು ಪೂಜಾರಿಣಿಯು ಹೊರಟು ಹೋದಳು.

ಗುರುಗಳ ದೇಹರಕ್ಷಣೆಯ ನಿಮಿತ್ತವಾಗಿ ಗೋರಕ್ಷನಾಥನು ಅಲ್ಲಿಯೇ ಉಳಿದನು. ಸಂಜೆಯ ಮುಂದೆ ರಾಜನು ಶಿವದರ್ಶನಕ್ಕೆ ಪರಿವಾರದೊಡನೆ ಬಂದನು. ಅವನು ಶಿವದರ್ಶನ ಹೊಂದಿ ಹೋಗುವಾಗ ಗೋರಕ್ಷನನ್ನು ನೋಡಿದನು. ತನಗೂ-ಅವನಿಗೂ ಏನೂ ಸಂಬಂಧವಿಲ್ಲದಂತೆ ನಟಿಸಿ ಪ್ರ-

ಸಂಗಳಕ್ಕೆ ತಕ್ಕ ಹಾಗೆ ಮಾತನಾಡಿ ರಾಜನು ತನ್ನ ದೇಹವನ್ನಿಟ್ಟ ಸ್ಥಳವನ್ನು ಅರಿತುಕೊಂಡು ರಾಜಮಂದಿರಕ್ಕೆ ಹೊರಟು ಹೋದನು.

ದಿನಾಲು ರಾಜನು ಶಿವದರ್ಶನಕ್ಕೆ ಬರುತ್ತಿದ್ದನು. ತನ್ನ ದೇಹವನ್ನಿಟ್ಟ ಸ್ಥಳವು ಆವನಿಗೆ ಚನ್ನಾಗಿ ಗೊತ್ತಾಯಿತು. ಆವನು ದಿನಾಲು ಅದರ ಭದ್ರತೆಯನ್ನು ನೋಡಿ ಹೋಗುತ್ತಿದ್ದನು. ಹೀಗೆ ನಾಲ್ಕು ತಿಂಗಳು ಕಳೆಯಲು ಗೋರಕ್ಷನು ಮನಸ್ಸಿನಲ್ಲಿ ಹೀಗೆ ವಿಚಾರ ಮಾಡಿದನು —"ರಾಜನಿಗೆ ತನ್ನ ದೇಹವಿರುವ ಸ್ಥಳವು ಗೊತ್ತಾಗಿರುವದು. ಅದರ ರಕ್ಷಣ ಮಾಡಿಕೊಳ್ಳಲು ಆವನಿಗೆ ಶಕ್ಯವಿರುವದು. ನಾನು ಇನ್ನು ತೀರ್ಥಯಾತ್ರೆಗೆ ಹೊರಡಬೇಕು.

ಈ ಮೇರೆಗೆ ಯೋಚಿಸಿ ಈ ಸಂಗತಿಯನ್ನು ರಾಜನ ಕಿವಿಯ ಮೇಲೆ ಹಾಕಿದನು. ಅದಕ್ಕೆ ರಾಜನೂ ಸಮ್ಮತಿಸಿದನು. ಒಳಿತು ಒಂದು ದಿನ ಗೋರಕ್ಷನು ಆ ಶಿವಾಲಯವನ್ನು ಬಿಟ್ಟು ತೀರ್ಥಾಟನಕ್ಕೆ ಹೊರಟುಹೋದನು. ಇತ್ತ ರಾಜನು ದಿನಾಲು ಶಿವದರ್ಶನಕ್ಕೆ ಬಂದು ತನ್ನ ದೇಹವಿದ್ದ ಸ್ಥಳವನ್ನು ನೋಡಿ ಹೋಗುತ್ತಿದ್ದನು. ಈ ಕ್ರಮವು ಹಾಗೇ ಸಾಗಿತು. ರೇವತೀ ರಾಣಿಯು ಗರ್ಭ ಧರಿಸಿದಳು. ಕಾಲಕ್ರಮದಿಂದ ಅವಳು ಒಂದು ಸುಂದರವಾದ ಗಂಡುಕೂಸನ್ನು ಹೆತ್ತಳು. ಪ್ರಜೆಗಳಿಗೆಲ್ಲ ತುಂಬಾ ಆನಂದವಾಯಿತು. ರಾಣಿಗಂತೂ ಹೇಳಕೂಡದಷ್ಟು ಆನಂದವಾಯಿತು. ಹನ್ನೆರಡನೆಯ ದಿನಕ್ಕೆ ಆ ಹುಡುಗನಿಗೆ ಧರ್ಮನಾಥನೆಂಬ ಹೆಸರಿಟ್ಟರು. ರಾಜನು ಅನಂತ ಉತ್ಸವಗಳನ್ನು ನಡಿಸಿ ಯಾಚಕರನ್ನು ತೃಪ್ತಿಗೊಳಿಸಿದನು.

ಹೀಗೆ ಆನಂದದಲ್ಲಿ ಕೆಲವು ದಿವಸಗಳು ಕಳೆಯುತ್ತಿರಲು, ಒಂದುದಿನ ರಾಜ್ಞಿಯಾದ ರೇವತಿಯು ಶಿವಾಲಯಕ್ಕೆ ಹೋಗಿ ಈಶ್ವರನ ದರ್ಶನಹೊಂದಿ ಸದ್ಭಾವನೆಯಿಂದ:—" ಪ್ರಭೋ ಸದಾಶಿವನೇ, ನನ್ನ ಮುತ್ತೈದೆತನವನ್ನು ಕಾಪಾಡು. ನನ್ನಪತಿಗಿಂತ ಮೊದಲು ನನಗೇ ಮರಣವನ್ನುಂಟುಮಾಡಿ ನನ್ನ ಸೌಭಾಗ್ಯವನ್ನು ಸಂರಕ್ಷಿಸು." ಎಂದು ಬೇಡಿಕೊಂಡಳು. ಹೀಗೆ ರಾಜ್ಞಿಯು ಬೇಡಿಕೊಳ್ಳುವಾಗ ಅಲ್ಲಿ ಪೂಜಾರಿಣಿಯು ನಿಂತುಕೊಂಡಿದ್ದಳು. ಅದನ್ನು ಕೇಳಿ ಆಕೆಗೆ ನಗೆ ಬಂದಿತು. ಆವಳ ಈ ನಗೆಯನ್ನು ರಾಣಿಯು ನೋಡಿ ಯಾಕೆ ನಗುತ್ತೀಯೆಂದು ಪ್ರಶ್ನೆ ಮಾಡಿದಳು. ಆದರೆ ಅದಕ್ಕೆ ಆ

ಪೂಜಾರಿಣಿಯು ಸರಿಯಾದ ಉತ್ತರವನ್ನು ಕೊಡಲಿಲ್ಲ ರಾಜ್ಞಿಯು ಜಿಜ್ಞಾಸೆಯು ಹೆಚ್ಚಿ ಅವಳು ಪುನಃ ಪುನಃ ಕೇಳಲು ಪೂಜಾರಿಣಿಯು:—ಅವ್ವನವರೇ, ನಾನು ಬಡವಿಯು; ನಾನು ನಕ್ಕ ಕಾರಣವನ್ನು ತಮಗೆ ಹೇಳಿದರೆ ನನ್ನ ಶಿರಚ್ಛೇದವಾಗದೆ ಇರದು. ದೊಡ್ಡವರು ಸಿಟ್ಟಿಗೆದ್ದರೆ ಬಡವರ ಮರಣಕ್ಕೆಷ್ಟು ವೇಳೆ ಹಿಡಿಯುವದು? ಪತಂಗದ ಮರಣಕ್ಕೆ ಅಗ್ನಿಯ ಸ್ವಲ್ಪ ಝಳವು ತಾಕಿದರೂ ಸಾಕಾಗುವದು. ಆದ್ದರಿಂದ ಈ ವಿಷಯದಲ್ಲಿ ಹೆಚ್ಚು ಆಗ್ರಹಮಾಡಬೇಡಿರಿ, ಎಂದು ನುಡಿದಳು.

ಪೂಜಾರಿಣಿಯು ಹೆದರುವಳೆಂದು ತಿಳಿದು ರಾಣಿಯು ದಾಸಿಯನ್ನು ಹೊರಗೆ ಕಳುಹಿಸಿ ಏಕಾಂತದಲ್ಲಿ ಆಕೆಗೆ ಅಭಯವನ್ನು ಕೊಟ್ಟು ಕೇಳಿದಳು. ಆಗ ಪೂಜಾರಿಣಿಯು ನುಡಿದಳೇನಂದರೆ:—"ಮಹಾರಾಣಿಯವರೇ, ಈಗ ಇರುವ ರಾಜರು ತ್ರಿವಿಕ್ರಮರಾಜರಲ್ಲ ತ್ರಿವಿಕ್ರಮರಾಜರು ಸತ್ತವರು ಸತ್ತೇಹೋದರು; ಆದರೆ ಅವರ ಶವದಲ್ಲಿ ಮಚ್ಛೇಂದ್ರಯೋಗಿಗಳು ಪ್ರವೇಶ ಮಾಡಿರುವರು. ಮಚ್ಛೇಂದ್ರಯೋಗಿಗಳ ದೇಹವು ಈ ದೇವಾಲಯದಲ್ಲಿರುವ ಗುಹೆಯಲ್ಲಿರುವದು. ಹನ್ನೆರಡು ವರುಷಗಳನಂತರ ಆ ಮಚ್ಛೇಂದ್ರಯೋಗಿಗಳು ಪುನಃ ತಮ್ಮ ದೇಹದಲ್ಲಿ ಪ್ರವೇಶಮಾಡತಕ್ಕವರಿರ.ತ್ತಾರೆ. ಈ ಬಗ್ಗೆ ಅವರ ಶಿಷ್ಯನಾದ ಗೋರಕ್ಷನಿಗೂ ಅವರಿಗೂ ಮಾತುಕಥೆಗಳಾಗಿವೆ. ನೀವು ನಿಜವಾದ ಮುತ್ತೈದೆಯರಿರುವಂತೆ ಬೇಡಿಕೊಂಡದ್ದರಿಂದ ನನಗೆ ನಗೆಯು ಬಂದಿತು."

ರಾಣಿಗೆ ಪೂಜಾರಿಣಿಯ ಮಾತು ಕೇಳಿ ಸ್ವಲ್ಪ ದುಃಖವಾಯಿತು. ಆದರೂ ಅವಳು ಇದ್ದದ್ದರಲ್ಲಿ ಸಮಾಧಾನ ಹಚ್ಚಿಕೊಂಡು ಮಚ್ಛೇಂದ್ರನ ದೇಹವಿರುವ ಗುಹೆಯನ್ನು ನೋಡಿ ಮನೆಗೆ ಬಂದಳು. ಹನ್ನೆರಡು ವರುಷಗಳ ಮೇಲೆ ಮಚ್ಛೇಂದ್ರನು ರಾಜದೇಹವನ್ನು ಬಿಟ್ಟುಹೋದರೆ, ತನ್ನ ಗತಿ ಏನೆಂದು ತಿಳಿದು ಅವಳು ಮಚ್ಛೇಂದ್ರನ ದೇಹವನ್ನು ನಾಶಗೊಳಿಸಿಬಿಟ್ಟರೆ, ಅವನು ರಾಜದೇಹದಲ್ಲಿ ಕೊನೆಯವರೆಗೂ ಇರುವನೆಂದು ಗೊತ್ತುಮಾಡಿ ಒಂದು ದಿನ ರಾತ್ರಿಯಲ್ಲಿ ಇಬ್ಬರು ವಿಶ್ವಾಸುಕದಾಸಿಯರನ್ನೂ, ಕಾಮಾಠಿಯವನನ್ನೂ ಕರೆದುಕೊಂಡು ಗುಡಿಗೆ ಹೋದಳು. ಕಾಮಾಠಿಯವರು ಗುಹೆಯ ಮುಖವನ್ನು ಅಗಿದು ಒಳಹೊಕ್ಕರು. ಮಚ್ಛೇಂದ್ರನ ದೇಹವು

ದಿವ್ಯಕಾಂತಿಯಿಂದ ಒಪ್ಪುತ್ತಿತ್ತು. ರಾಜ್ಞಿಗೆ ಅದನ್ನು ಕಂಡು ಆಶ್ಚರ್ಯ ವಾಯಿತು. ಕಾವಲಿಗರು ಆ ದೇಹವನ್ನು ಚೂರು ಚೂರು ಮಾಡಿ ಆ ಅರಣ್ಯದಲ್ಲಿ ಚಲ್ಲಿಕೊಟ್ಟರು, ತನ್ನ ಕೆಲಸವಾಯಿತೆಂದು ಹಿಗ್ಗಿ ರಾಣಿಯು ಅರಮನೆಗೆ ಹೋಗಿ ರಾಜನೊಡನೆ ಸುಖಸಲ್ಲಾಪಗಳನ್ನು ನಡಿಸಿದಳು.

ಇತ್ತ ಶಿವಾಲಯದಲ್ಲಿ ಮಚ್ಛಿಂದ್ರನ ದೇಹವು ನಷ್ಟವಾಗಲು ಶ್ರೀ ಜಗದಂಬೆಯು ಶಿವನನ್ನು ಎಚ್ಚರಿಸಿದಳು. ಮಚ್ಛಿಂದ್ರನು ತನ್ನ ಭಕ್ತನಿದ್ದು ಅವನ ದೇಹವು ನಾಶವಾದದ್ದಕ್ಕೆ ಶಿವನಿಗೆ ಖೇದವಾಯಿತು. ಆಗ ಅವನು ಆ ಚೂರುಗಳನ್ನು ಒಟ್ಟುಗೂಡಿಸಿ ಕೈಲಾಸಕ್ಕೆ ಕಳಿಸಲು ಜಗದಂಬೆಗೆ ಹೇಳಿ ದನು. ಜಗದಂಬೆಯು ಯಕ್ಷಿಣಿಯನ್ನು ಕರೆದು ಆ ಕೆಲಸವನ್ನು ಆಕೆಗೆ ಒಪ್ಪಿಸಿದಳು. ಯಕ್ಷಿಣಿಯು ಮಚ್ಛಿಂದ್ರನ ದೇಹದ ತುಂಡುಗಳನ್ನು ಆರಿಸಿ ಅದರಿಂದ ಮಚ್ಛಿಂದ್ರನ ದೇಹವನ್ನು ನಿರ್ಮಿಸಿ ಅದನ್ನು ಕೈಲಾಸಕ್ಕೆ ಒಯ್ದು ವೀರಭದ್ರನ ವಶಕ್ಕೆ ಒಪ್ಪಿಸಿ ನುಡಿದಳೇನಂದರೆ—ವೀರಭದ್ರನೇ, ಇದು ನಿನ್ನ ಶತ್ರುವಾದ ಮಚ್ಛಿಂದ್ರನ ದೇಹವು; ಅನಾಯಾಸವಾಗಿ ಸಿಕ್ಕಿ ರುವದು. ಇವನು ನಮಗೂ, ನಿನಗೂ, ಅಷ್ಟ ಭೈರವರಿಗೂ ಬಹಳ ತೊಂ ದರೆ ಕೊಟ್ಟಿರುವನು. ಈ ದೇಹವನ್ನು ಬಲವಾಗಿ ರಕ್ಷಿಸು.''

ವೀರಭದ್ರನು ಆ ದೇಹವನ್ನು ಗೌಪ್ಯವಾಗಿಟ್ಟನು. ಅಷ್ಟ-ಭೈರವರು ಕಾಯತೊಡಗಿದರು.



# ಅಧ್ಯಾಯ ೩೩

## ವೀರಭದ್ರನ ಹನನ ಹಾಗು ಗುರುಶವಪ್ರಾಪ್ತಿ.

ಗೋರಕ್ಷನಾಥನು ಮಚ್ಛಿಂದ್ರನನ್ನು ಅಗಲಿ ತೀರ್ಥಾಟನಕ್ಕೆ ಹೊರಟವನು ಆಕಸ್ಮಾತ್ ಗೋದಾವರೀತೀರಕ್ಕೆ ಬಂದನು. ಗೋದಾವರಿಯ ದಂಡೆಯ ಮೇಲೆ ಭಾಮಾ ಎಂಬ ಹೆಸರಿನ ಒಂದು ಪಟ್ಟಣವಿತ್ತು. ಆ ನಗರದಿಂದ ಕೆಲವು ಅಂತರದ ಮೇಲೆ ಒಂದು ಅರಣ್ಯವಿತ್ತು. ಗೋರಕ್ಷನು ನದಿಯ ದಂಡೆಯನ್ನು ಬಿಟ್ಟು ಆ ಅರಣ್ಯದಲ್ಲಿ ಸೇರಿದನು. ಬಹಳ ಹೊತ್ತು ಸಂಚರಿಸಲು ಗೋರಕ್ಷನಿಗೆ ಹಸಿವೆ, ನೀರಡಿಕೆಗಳಾದವು. ಅವನು ಆ ಅರಣ್ಯದಲ್ಲಿ ನೀರನ್ನು ಶೋಧಿಸಹತ್ತಿದನು. ಸುತ್ತುಮುತ್ತು ಐದುಹರದಾರಿಗಳ ವರೆಗೆ ನೀರು ಇದ್ದಿಲ್ಲ ನೀರಿಲ್ಲದಂತಾಗಲು ಗೋರಕ್ಷನ ಕಂಠವು ಒಣಗಿ ಹೋಯಿತು. ಯಾವದೊಂದು ಊರಿಗೆ ಹೋದ ವಿನಃ ನೀರು ಸಿಗುವದಿಲ್ಲೆಂದು ಊರಮಾರ್ಗವನ್ನು ಹಿಡಿದನು. ಕೆಲವು ದಾರಿಯನ್ನು ಕ್ರಮಿಸುತ್ತಿರಲು ಅವನಿಗೆ ಪೀಕುಳ್ಳ ಹೊಲಗಳು ಹತ್ತಿದವು. ಅವುಗಳಲ್ಲಿ ಒಂದು ಹೊಲದಲ್ಲಿ ಮಾಣಿಕನೆಂಬ ಒಬ್ಬ ಹುಡುಗನು ರೊಟ್ಟಿಯನ್ನು ತಿನ್ನುತ್ತ ಕುಳಿತಿದ್ದನು. ಅವನ ವಯಸ್ಸು ಹತ್ತುವರ್ಷ ಇರಬಹುದು. ಆ ಮಾಣಿಕನೆಂಬ ಹುಡುಗನು ರೊಟ್ಟಿಯನ್ನು ಮುರಿದು ಬಾಯಿಯೊಳಗೆ ಹಾಕಿಕೊಳ್ಳುವ ಕಾಲಕ್ಕೆ ಗೋರಕ್ಷನು ಅವನ ಹತ್ತರ ಹೋಗಿ "ಅಲಖ" ಎಂದು ಉಚ್ಚರಿಸಿದನು. ಗೋರಕ್ಷನ ವೇಷವನ್ನು ಕಂಡು ಮಾಣಿಕನು ಎದ್ದು ವಂದಿಸಿದನು. ಗೋರಕ್ಷನು ಯಾರೆಂಬದನ್ನು ತಿಳಿದುಕೊಳ್ಳುವದಕ್ಕಾಗಿ ಮಾಣಿಕನು ಗೋರಕ್ಷನಿಗೆ—'ನೀವು ಯಾರು' ಇಲ್ಲಿಗೆ ಯಾಕೆ ಬಂದಿರುವಿರಿ? ಎಂದು ಪ್ರಶ್ನಮಾಡಿದನು. ಅವನ ಪ್ರಶ್ನೆಗೆ ಗೋರಕ್ಷನು—ನಾನು ಒಬ್ಬ ತಪಸ್ವಿ ಇದ್ದೇನೆ. ನನಗೆ ಹಸಿವೆ ನೀರಡಿಕೆಗಳಾದ್ದರಿಂದ

ಇಲ್ಲಿಗೆ ಬಂದಿದ್ದೇನೆ. ನೀನು ನನಗೆ ಅನ್ನವನ್ನು ನೀಡಿ ನೀರನ್ನು ಕುಡಿಯು ಲಿಕ್ಕೆ ಕೊಡು. ಎಂದು ನುಡಿದನು.

ಆ ಯತಿಯ ಇಚ್ಛೆಯನ್ನರಿತು ಮಾಣಿಕನು ಬೇರೆ ರೊಟ್ಟಿಗಳನ್ನು ತಂದು ಯತಿಯು ಜೋಳಿಗೆಯಲ್ಲಿ ಹಾಕಿ ನೀರು ತುಂಬಿದ ಒಂದು ಮಡಿಕೆ ಕೊಟ್ಟನು ನಾಥನು ಆ ನೀರಿನಿಂದ ಕೈಕಾಲುಗಳನ್ನು ತೊಳೆದುಕೊಂಡು ರೊಟ್ಟೀತಿಂದು ನೀರನ್ನು ಕುಡಿದು ಶಾಂತನಾದನು. ದರಿದ್ರನಿಗೆ ಧನಪ್ರಾಪ್ತಿ ಯಾದಂತೆ, ಭೂಮಿಯ ಮೇಲೆ ಬಿದ್ದ ಮೀನಕ್ಕೆ ನೀರು ದೊರೆದಂತೆ, ಗೋರಕ್ಷನಿಗೆ ತೃಪ್ತಿಯಾಯಿತು. ಆಗ ಅವನು—ಮಾಣಿಕನನ್ನು ಅನುಗ್ರ ಹಿಸಲಿಕ್ಕೆ ಸಿದ್ಧನಾಗಿ ವಿಚಾರಿಸಿದವೇನಂದರೆ—"ಬಾಲಕಾ, ನೀನು ಯಾರು? ಯಾರ ಮಗನ ? ನಿನ್ನ ಹೆಸರು ಏನು? ಊರು ಯಾವದು? ಮಾಣಿಕನು— "ಹೇ ತಪೋನಾಥ ತಪಸ್ವಿಯೇ, ಇದರ ವಿಚಾರವನ್ನು ಮೊದಲಿಗೇ ಮಾಡ ತಕ್ಕದ್ದಿತ್ತು. ಈಗ ಶೋಧ ಮಾಡುವದರಿಂದ ಪ್ರಯೋಜನವೇನು? ನಿಮ್ಮ ಕೆಲಸವು ಆಯಿತು. ನನ್ನ ಹೆಸರನ್ನು ವಿಚಾರ ಮಾಡಿ ನಿಮಗಾವ ಪ್ರಯೋ ಜನ? ಎಂದನು.

ಮಾಣಿಕನ ಮಾತನ್ನು ಕೇಳಿ ಗೋರಂಕ್ಷನಿಗೆ ಸೋಜಿಗವೆನಿಸಿತು. ಗೋರಕ್ಷನು ಪುನಃ ಅಂದದ್ದೇನಂದರೆ—"ಹುಡುಗಾ; ನಿನ್ನ ಮಾತು ಸತ್ಯ ವದೆ. ನೀನು ಅನ್ನ ಕೊಟ್ಟದ್ದರಿಂದ ನನ್ನ ಮನಸ್ಸು ಪ್ರಸನ್ನವಾಗಿದೆ. ನಿನ್ನದೇನಾದರೂ ಇಚ್ಛೆಯಿದ್ದರೆ ನನಗೆ ಹೇಳು. ನಾನು ನಿನ್ನ ಇಚ್ಛೆಯನ್ನು ಪೂರ್ಣ ಮಾಡುವೆನು.

ನಾಥನ ಮಾತಿಗೆ ಮಾಣಿಕನು—"ಮಹಾರಾಜ, ತಾವು ಬಹಳ ಬುದ್ಧಿವಂತರಿರುವಿರಿ! ನನಗೆ ನಿಮ್ಮ ಮಾತು ಸೋಜಿಗವೆನಿಸುತ್ತದೆ. ಇರಲಿ; ಅನ್ನವಿಲ್ಲದೆ ಸಂಕಟಪಟ್ಟು ನೀವೇ ನನ್ನ ಬಳಿಯಲ್ಲಿ ಅನ್ನಕ್ಕೆ ಬಾಯಿ ತೆರೆದಿರಿ, ಇಂಥ ನೀವು ನನ್ನ ಇಚ್ಛೆಯನ್ನು ಏನು ಪೂರ್ಣ ಮಾಡುವಿರಿ? ಶಿವರಾತ್ರಿಯು ಬಳಿಗೆ ಗೋಕುಲಪ್ಪಿಮೆ ಹೋದರೆ ಏನು ಉಪಯೋಗವಾಗುವದು. ನಿನ್ನಂಥ ಕಂಗಾಲ ಭಿಕ್ಷುಕನಿಂದ ನನಗೆ ಏನು ಉಪಯೋಗವಾಗುವದು? ಎಂದನು. ಅದಕ್ಕೆ ಗೋರಕ್ಷನು—ನಿನಗೆ ಬೇಕಾದದ್ದನ್ನು ಬೇಡಿಕೋ ಎಂದು ಆಗ್ರಹ ಮಾಡಿದನು. ಅದಕ್ಕೆ ಮಾಣಿಕನು—"ಎಲೋ ಗೋಸಾವಿ, ನಿನಗೆ ಕೊಡು

ಕೊಳ್ಳುವ ಶಕ್ತಿಯಿದ್ದದ್ದಾದರೆ ಹೆಗಲಿಗೆ ಜೋಳಿಗೆಯನ್ನು ಹಾಕಿಕೊಂಡು ಯಾಕೆ ತಿರುಗುತ್ತೀ? ನಿನಗೆ ಮತ್ತೇನಾದರೂ ಬೇಕಾಗಿದ್ದರೆ ನನಗೇಬೇಡು ಎಂದನು. ವಾದವಿವಾದದಿಂದ ಇಬ್ಬರೂ ಬೇಸತ್ತರು. ಗೋರಕ್ಷನ ಮನಸ್ಸಿನಲ್ಲಿ ಬಾಲಕನಿಗೆ ಯಾವದಾದರೊಂದು ಉಪಕಾರವನ್ನು ಮಾಡಬೇಕೆಂಬದಾಗಿ ಇತ್ತು; ಆದರೆ ಮಾಣಿಕನು ಮೂರ್ಖನಿದ್ದದರಿಂದ ಅವನಿಗೆ ಗೋರಕ್ಷನ ಮಾತು ಸತ್ಯವಾಗಿ ತೋರಲಿಲ್ಲ. ಆದರೂ ಗೋರಕ್ಷನು ಮಾಣಿಕನಿಗೆ—ಹೇ ಹುಡುಗಾ, ನಾನು ನಿನ್ನ ಮಾತಿಗೆ ಒಪ್ಪಿಕೊಳ್ಳುತ್ತೇನೆ. ನೀನು ನನಗೆ ವರದಾನ ಬೇಡಿಕೊಳ್ಳಲಿಕ್ಕೆ ಹೇಳುವಿ. ಆದರೆ ನಾನು ನೀನು ಬೇಡಿದ್ದನ್ನು ಕೊಡುವೆನು ಎಂದನು. ಅದಕ್ಕೆ ಮಾಣಿಕನು—"ಎಲೋ ತಾಪಸೀ, ನೀನು ಬಹಳ ಮೂರ್ಖನಾಗಿ ತೋರುವಿ! ನೀನು ನಿನಗೆ ಏನಾದರೂ ಬೇಕಾಗಿದ್ದರೆ ಹೇಳು. ಶೀತಗುಣದಿಂದ ಯುಕ್ತನಾದ ಚಂದ್ರನೂ ಒಂದುವೇಳೆ ತಪ್ತನಾಗಬಹುದು. ಆದರೆ ನಾನು ಮಾತ್ರ ನನ್ನ ವಚನವನ್ನು ಸುಳ್ಳು ಮಾಡಲಾರೆನು. ಸೂರ್ಯನು ಕತ್ತಲೆಯಲ್ಲಿ ಮುಳುಗಬಹುದು, ನಾನು ಮಾತ್ರ ಔದಾರ್ಯಗುಣಕ್ಕೆ ವಿಮುಖನಾಗುವದಿಲ್ಲ. ವಿಷ್ಣುವು ಬಲಿಯನ್ನು ಪಾತಾಳಲೋಕಕ್ಕೆ ತುಳಿಯುವ ಸಾಹಸವನ್ನು ಮಾಡಿದರೂ ಆ ಬಲಿಯಲ್ಲಿ ಹೇಗೆ ಕೃಪಣತನವು ಉದ್ಭವಿಸಲಿಲ್ಲವೋ ಅದರಂತೆ ನಾನೂ ಔದಾರ್ಯದಿಂದ ವಿಮುಖನಾಗುವದಿಲ್ಲ. ನಿನಗೆ ಬೇಕಾದದ್ದನ್ನು ಹೇಳು. ಇದರಲ್ಲಿ ನನ್ನ ನಿಶ್ಚಯವನ್ನಾದರೂ ನೋಡು.

ಮಾಣಿಕನ ಪ್ರತಿಜ್ಞೆಯನ್ನು ಕೇಳಿ ಗೋರಕ್ಷನು—"ಬಾಲಕಾ, ನಿನಗೆ ಏನು ಮಾಡಬೇಕೆಂದು ಮನಸ್ಸಿನೊಳಗೆ ಬರುವದೋ ಅದನ್ನು ಮಾತ್ರ ನೀನು ಮಾಡಬೇಡ. ಇಷ್ಟು ಮಾತ್ರ ನನಗೆ ವಚನಕೊಡು. ಅಂದರೆ ನನಗೆ ಸಂತೋಷವಾಗುವದು."

ಗೋರಕ್ಷನ ಮಾತಿಗೆ ಆ ಹುಡುಗನು ಸಮ್ಮತಿಸಿದನು. ಸೂರ್ಯನು ಲಯವಾಗುವವರೆಗೆ ತಾನು ಗೋರಕ್ಷನ ಮಾತಿನಂತೆ ವರ್ತಿಸುವೆನೆಂದು ಅಭಿವಚನಕೊಟ್ಟನು. ಬಳಿಕ ಗೋರಕ್ಷನು ಹೊರಟು ಹೋದನು.

ಗೋರಕ್ಷನು ಹೋದ ಬಳಿಕ ಮಾಣಿಕನು ಎತ್ತಿನ ಕೊಳ್ಳನ್ನು ಹರಿದನು. ಮತ್ತು ಆ ಎತ್ತುಗಳನ್ನು ಮನೆಯ ಕಡೆಗೆ ಹೊಡೆದನು. ಜತಿಗೆ

ಮೊದಲಾದ ಒಕ್ಕಲತನದ ಸಾಮಾನುಗಳನ್ನು ಹೆಗಲಮೇಲೆ ಹೊತ್ತುಕೊಂಡು ಹೊರಡತಕ್ಕವನು, ಅಷ್ಟರಲ್ಲಿ ಅವನಿಗೆ ಗೋರಕ್ಷನು ಹೇಳಿದ ಮಾತು ನೆನಪಿಗೆ ಬಂತು. ಅವನು ಮನೆಗೆ ಹೋಗುವದನ್ನು ಬಿಟ್ಟುಕೊಟ್ಟು ಅಲ್ಲಿಯೇ ನಿಂತುಕೊಂಡನು. ಅವನ ಮನಸ್ಸು ಚಿಂತೆಯಿಂದ ವ್ಯಾಪಿಸಿತು. ಕೆಲವು ಹೊತ್ತಿನ ಮೇಲೆ ಅವನಿಗೆ ನಿದ್ದೆ ಬರಹತ್ತಿತು. ಅದರಿಂದ ಅವನು ಅತ್ತಿತ್ತ ತಿರುಗಾಡಬೇಕೆಂದು ಪ್ರಯತ್ನಿಸಿದನು. ಕೂಡಲೆ ತನ್ನ ವಚನದ ಸ್ಮರಣವಾಗಿ ಅವನು ಸ್ವಸ್ಥವಾಗಿ ನಿಂತುಕೊಳ್ಳುವನು; ಅವನ ಮೈಮೇಲೆ ಸಣ್ಣ-ದೊಡ್ಡ ಎಲೆಗಳು ಗಾಳಿಯಿಂದ ಹಾರಿಬೀಳಲು ಅವನ್ನೇ ತಿನ್ನಹತ್ತಿದನು. ಈ ಪ್ರಕಾರ ಅವನು ಆ ಅಡವಿಯಲ್ಲಿಯೇ ಗಿಡದಂತೆ ನಿಂತುಬಿಟ್ಟನು. ಗಾಳಿಯಿಂದಲೇ ತನ್ನ ಆಹಾರವನ್ನು ಸಾಗಿಸಿಕೊಳ್ಳಹತ್ತಿದನು. ಹಸಿವೆಯಾಗಲು ಗಿಡದ ಎಲೆಗಳನ್ನು ಹರಿದುಕೊಂಡು ತಿನ್ನಬೇಕೆಂದು ಮನಸ್ಸಿನೊಳಗೆ ಬರಲು ತನ್ನ ಪ್ರತಿಜ್ಞೆಯನ್ನು ಸ್ಮರಿಸಿ ವಿಚಾರದಿಂದ ಪರಾವೃತ್ತನಾಗುತ್ತಿದ್ದನು. ಅವನ ಮನೆಯವರು ಅವನ ಶೋಧಕ್ಕಾಗಿ ಒರಲು ಅವನ ಕಾಲುಗಳು ಮನೆಯ ಕಡೆಗೇ ಜಗ್ಗಹತ್ತಿದವು. ಆದರೆ ಮನಸಿನೊಳಗೆ ಯಾವದು ಮಾಡಬೇಕೆಂದು ಇಚ್ಛೆಯು ಬಂದರೂ ಅದನ್ನು ಮಾಡಬಾರದಾಗಿದ್ದದರಿಂದ ನಿರುಪಾಯನಾಗುತ್ತಿದ್ದನು. ಈ ಭಯಂಕರ ಪ್ರತಿಜ್ಞೆಯಿಂದ ಮಾಣಿಕನು ಬಹಳ ಕಷ್ಟಪಡುತ್ತಿರಲು, ಅವನ ಶರೀರವು ಕೃಶವಾಗಹತ್ತಿತು. ಅವನ ಮೈಯೊಳಗಿನ ಮಾಂಸವು ಹೋಗಿ ರಕ್ತವು ಆಟ್ಟಿಸಿತು. ಹೀಗೆ ಅವನ ಹೊಟ್ಟೆ-ಬೆನ್ನು ಒಂದೇ ಆಗಿದ್ದರೂ ಬಾಯಿಂದ ಹರಿನಾಮವನ್ನು ಸ್ಮರಿಸುತ್ತಿದ್ದನು.

ಇತ್ತ ಗೋರಕ್ಷನು ಮಾಣಿಕನನ್ನು ಬಿಟ್ಟು ಬಳಿಕ ಬದರೀ ಕೇದಾರಕ್ಕೆ ಹೋದನು. ಕೇದಾರನಾಥನ ದರ್ಶನವನ್ನು ತೆಗೆದುಕೊಂಡು ಅವನು ಚೌರಂಗಿಯ ಕಡೆಗೆ ಹೋದನು. ಬಾಗಿಲಿಗೆ ಇಟ್ಟ ಕಲ್ಲನ್ನು ತೆಗೆದು ಚೌರಂಗಿಯನ್ನು ನೋಡಿದನು. ಅವನ ವಿಲಕ್ಷಣ ಸ್ಥಿತಿಯನ್ನು ನೋಡಿ ಗೋರಕ್ಷನು ಹಳಹಳಿಸಹತ್ತಿದನು. ಅವನ ತಲೆಯ ಮೇಲೆ ಬೆಳೆದ ಹುತ್ತನ್ನು ದೂರಮಾಡಿದನು. ಅವನ ದೃಷ್ಟಿಯು ಕಲ್ಲಿನ ಕಡೆಗೇ ಇದ್ದು ಬಾಯಿಂದ ರಾಮನಾಮವನ್ನು ಉಚ್ಚರಿಸುತ್ತಿದನು. ತಪಸ್ಸಿನ ಯೋಗದಿಂದ ಅವನ

ಕೈಕಾಲು ಚಿಗಿತಿದ್ದವು. ಗೋರಕ್ಷನು ಒದರಿ ಚೌರಂಗಿಯನ್ನು ಎಚ್ಚರಗೊ ಳಿಸಿದನು. ಮತ್ತು ಗುಹೆಯಿಂದ ಹೊರಗೆ ಕರೆತಂದನು. ಮತ್ತು ಕೃಪಾ ದೃಷ್ಟಿಯಿಂದ ನೋಡಿದ ಕೂಡಲೆ ಚೌರಂಗಿಯ ಮೈಯಲ್ಲಿ ವಿಲಕ್ಷಣವಾದ ಶಕ್ತಿಯು ಬಂತು. ಗೋರಕ್ಷನು ಚೌರಂಗಿಯನ್ನು ಅಪ್ಪಿಕೊಂಡು ತಪಸ್ಸಿಗೆ ಕುಳಿತಾಗ ನಡೆದ ಚರಿತಾರ್ಥದ ವಿಷಯವಾಗಿ ವಿಚಾರಿಸಿದನು. ಅದಕ್ಕೆ ಚೌರಂಗಿಗೆ ಉತ್ತರ ಕೊಡಲಿಕ್ಕೆ ಬಾರದಾಗಲು, ಗೋರಕ್ಷನು ಚಾಮುಂ ಡಾ ದೇವತೆಯನ್ನು ಕರೆದು ವಿಚಾರಿಸಿದನು. ಅದಕ್ಕೆ ಚಾಮುಂಡೆಯು— ನಿಮ್ಮ ಆಜ್ಞೆಯ ಪ್ರಕಾರ ನಾನು ನಿತ್ಯದಲ್ಲಿ ಹೊಸ ಹಣ್ಣುಗಳನ್ನು ತಂದು ಕೊಡುತ್ತಿದ್ದೆನು. ಆದರೆ ಚೌರಂಗಿಯು ಆ ಫಲಗಳ ಕಡೆಗೆ ನೋಡುತ್ತಿ ದ್ದಿಲ್ಲ. ಅವನ ಲಕ್ಷವು ನೀವು ಹೇಳಿದ ಕಲ್ಲಿನ ಕಡೆಗೇ ಇತ್ತು ಎಂದು ಹೇಳಿದಳು.

ಚೌರಂಗಿಯ ತಪಸ್ಸಿನ ವಿಷಯವಾಗಿ ಗೋರಕ್ಷನಿಗೆ ಬಹಳ ಕೌತುಕ ವಾಯಿತು. ಅವನು ಚೌರಂಗಿಯ ತಲೆಯಮೇಲೆ ವರದ ಹಸ್ತವನ್ನಿಟ್ಟನು. ಈ ಮೇರೆಗೆ ಅನುಗ್ರಹಿಸಿ ಚೌರಂಗಿಯನ್ನು ಬ್ರಹ್ಮಜ್ಞಾನವನ್ನಾಗಮಾಡಿದನು. ಬಳಿಕ ಚೌರಂಗಿಯೊಡನೆ ಕೇದಾರನಾಥನ ದರ್ಶನಕ್ಕೆ ಹೋದನು. ಶ್ರೀ ಶಂಕರನನ್ನು ಸಮಾಧಿಯಿಂದ ಎಚ್ಚರಗೊಳಿಸಿ ಚೌರಂಗಿಯ ಭೆಟ್ಟಿಯನ್ನು ಮಾಡಿಸಿದನು. ಅವರಿಬ್ಬರು ಆರು ತಿಂಗಳವರೆಗೆ ಅಲ್ಲಿಯೇ ಇದ್ದರು. ಗೋರ ಕ್ಷನು ಚೌರಂಗಿಗೆ ಎಲ್ಲ ವಿದ್ಯೆಯ ಅಭ್ಯಾಸವನ್ನು ಮಾಡಿಸಿದನು. ಚೌರಂ ಗಿಯು ಶಸ್ತ್ರಾಸ್ತ್ರವಿದ್ಯೆಯಲ್ಲಿ ಪ್ರವೀಣನಾದನು. ಬಳಿಕ ತಪಃಸಾಮರ್ಥ್ಯ ದಿಂದ ಅವನು ಎಲ್ಲ ದೇವತೆಗಳನ್ನು ಬಶಮಾಡಿಕೊಂಡನು. ಅವರು ಚೌರಂ ಗಿಗೆ ವರಪ್ರದಾನವನ್ನು ಮಾಡಿದರು. ಬಳಿಕ ಗೋರಕ್ಷನು ಚೌರಂಗಿಯೊ ಡನೆ ಪ್ರವಾಸಕ್ಕೆ ಹೊರಟನು. ಮೊದಲು ವಿದರ್ಭದೇಶದೊಳಗಿನ ಕೌಂಡಿಣ್ಯ ಪುರಕ್ಕೆ ಹೋಗಿ:—" ಈ ಸ್ಥಳದಲ್ಲಿಯೇ ನಿನ್ನ ತಾಯಿ ತಂದೆಗಳು ಇದ್ದದ್ದು ನಿನಗೆ ಗೊತ್ತಿರುವದು, ನಿನ್ನ ತಂದೆಯು ನಿನ್ನ ಮಲತಾಯಿಯ ಮಾತು ಕೇಳಿ ನಿನ್ನ ಕೈ-ಕಾಲುಗಳನ್ನು ಕಡಿಸಿದ್ದೂ ನಿನ್ನ ಸ್ಮರಣದಲ್ಲಿರಬಹುದು. ಈಗ ಆ ಸೇಡನ್ನು ತೀರಿಸಿಕೋ;" ಎಂದು ಹೇಳಿದನು.

ಗೋರಕ್ಷನ ಮಾತನ್ನು ಚೌರಂಗಿಯು ಮಾನ್ಯಮಾಡಿದನು. ಅವನು ಕೂಡಲೆ ಭಸ್ಮವನ್ನು ಅಭಿಮಂತ್ರಿಸಿ ರಾಜನ ಭವ್ಯವಾದ ಉಪವನದಲ್ಲಿ ತೂರಿದನು. ಆ ಕಾಲಕ್ಕೆ ಅವನು ವಾತಾಸ್ತ್ರದ ಪ್ರಯೋಗವನ್ನು ಮಾಡಿದ್ದನು. ಅದರಿಂದ ಭಯಂಕರವಾದ ಗಾಳಿಯು ಬಿಟ್ಟು, ಉಪವನದೊಳಗಿನ ಹದಿನಾರು ನೂರು ಜನ ರಕ್ಷಕರು ಆಕಾಶದಲ್ಲಿ ಭ್ರಮಣಮಾಡಹತ್ತಿದರು. ಇಷ್ಟರಲ್ಲಿ ಚೌರಂಗಿಯು ವಾತಾಸ್ತ್ರವನ್ನು ತೆಗೆದುಕೊಂಡದ್ದರಿಂದ ಆ ಎಲ್ಲ ಜನರು ಭೂಮಿಯಮೇಲೆ ಬಿದ್ದರು. ಅದರಿಂದ ಕೆಲವು ಜನರಿಗೆ ಮೂರ್ಛೆಬಂತು. ಕೆಲವರು ಹಾಗೆಯೇ ರಾಜಮಂದಿರದ ಕಡೆಗೆ ಓಡಿಹೋದರು. ಅವರು ಎಲ್ಲ ಸಂಗತಿಯನ್ನು ರಾಜನ ಕಿವಿಯಮೇಲೆ ಇಟ್ಟರು. ಈ ವಿಪರೀತ ಕೃತಿಯನ್ನು ಕೇಳಿ ರಾಜನು ಬಹಳ ಚಿಂತೆಯಲ್ಲಿ ಮಗ್ನನಾದನು. ಹೀಗಾಗಲಿಕ್ಕೆ ಕಾರಣವೇನೆಂದು ವಿಚಾರಿಸಹತ್ತಿದನು. ಉಪವನವನ್ನು ವಿಧ್ವಂಸಗೊಳಿಸುವ ತಾಪಸಿಯು ಯಾರಿರಬಹುದೆಂಬದನ್ನು ಶೋಧಿಸುವದಕ್ಕಾಗಿ ಕಳಿಸಿದ ದೂತರು ತಿರುಗಿ ಬಂದು ರಾಜನಿಗೆ:—ಬಾವಿಯ ಮೇಲೆ ಯಾರೋ ಇಬ್ಬರು ತಪಸ್ವಿಗಳು ಕುಳಿತು ಈ ವಿಚಿತ್ರಸ್ಥಿತಿಯನ್ನು ಮಾಡಹತ್ತಿರುವರು. ವಿಲಕ್ಷಣವಾದ ತೇಜದಿಂದ ಅವರು ಬಹಳ ವಿದ್ಯಾಸಂಪನ್ನರೂ, ಪರಾಕ್ರಮಿಗಳೂ ಇರುವದಾಗಿ ತೋರುತ್ತದೆ; ಎಂದು ನುಡಿದರು.

ಸೇವಕರ ಮಾತನ್ನು ಕೇಳಿ ರಾಜನು ತನ್ನ ಮನಸ್ಸಿನಲ್ಲಿ ಕೆಲಹೊತ್ತು ವಿಚಾರಿಸಿದನು. ಅವನ ಸ್ವರೂಪವರ್ಣನೆಯಿಂದ ಅವರು ಯಾರಾದರೂ ನಾಥಪಂಥದವರಿರಲಿಕ್ಕೇಬೇಕು. ತನ್ನ ಪುತ್ರನಾದ ಕೃಷ್ಣಾಗರನನ್ನು ಛಲಿಸಿದ್ದೂ, ಅವನನ್ನು ಗೋರಕ್ಷ ಮಚ್ಛಿಂದ್ರ ಇವರು ಒತ್ತಾಯದಿಂದ ಕರೆದುಕೊಂಡು ಹೋದದ್ದೂ ಅವನ ಮನಸ್ಸಿನಲ್ಲಿ ಕಟಿಯುತ್ತಿತ್ತು. ಆ ಪುತ್ರನು ನಾನು ಛಲಿಸಿದ್ದಕ್ಕಾಗಿ ಕ್ಷೋಭಿಸಿ ಆ ಸೇಡನ್ನು ತೀರಿಸಿಕೊಳ್ಳುವದಕ್ಕಾಗಿ ಬಂದಿರಬಹುದೆಂದು ಅವನಿಗೆ ತೋರಿತು. ಮತ್ತು ಇದೇ ಕ್ಷೋಭವು ಸತ್ಯವಾಗಿದ್ದರೆ, ನನ್ನ ಪಟ್ಟಣವನ್ನು ಬುಡಮೇಲು ಮಾಡದೆ ಬಿಡಲಾರರೆಂದು ತಿಳಿದು ರಾಜನು ಅವರಿಗೆ ಶರಣುಹೋಗಬೇಕೆಂದು ನಿರ್ಧರಿಸಿದನು. ಕೂಡಲೆ ಅವನು ಆನೆ, ಕುದುರೆ, ರಥ, ಪಲ್ಲಕ್ಕಿಗಳನ್ನು ಸಿದ್ಧಪಡಿಸಿ ಸನ್ನಾಹದೊಡನೆ ಆ ನಾಥದ್ವಯರ ಎದುರಿಗೆ ಹೊರಟನು. ಆ ರಾಜಪರಿವಾರವು ಊರ

ಹೊರಗೆ ಬರಲು, ಗೋರಕ್ಷನು ಆ ಪರಿವಾರಕ್ಕೆ ಏನಾದರೂ ಚಮತ್ಕಾರ ತೋರಿಸೆಂದು ಹೇಳಿದನು. ಕೂಡಲೆ ಚೌರಂಗಿನಾಥನು ವಾತಾಸ್ತ್ರವನ್ನು ಜಪಿಸಿದನು. ಆದರ ಪ್ರಭಾವದಿಂದ ರಾಜನು ತನ್ನ ಪರಿವಾರ ಸಮೇತನಾಗಿ ಆಕಾಶದಲ್ಲಿ ಭ್ರಮಿಸಹತ್ತಿದನು. ಆಕಾಶದಲ್ಲಿ ರಾಜನೂ ಅವನ ಸೈನಿಕರೂ ತಳವಳಗೊಳ್ಳಲು ಗೋರಕ್ಷನಿಗೆ ದಯ ಹುಟ್ಟಿತು.

ಚೌರಂಗಿಯು ಕೂಡಲೆ ಪರ್ವತಾಸ್ತ್ರವನ್ನು ಬಿಟ್ಟು ಅವರನ್ನು ರಕ್ಷಿಸಿದನು. ರಾಜನೂ ಅವನ ಸೈನಿಕರೂ ಪರ್ವತದ ಮೇಲಿಂದ ಕೆಳಗಿಳಿದರು. ಚೌರಂಗಿಯು ಗೋರಕ್ಷನ ಸೂಚನೆಯಂತೆ ರಾಜನ ಚರಣಗಳ ಮೇಲೆ ಬಿದ್ದು, ತಾನು ಯಾರೆಂಬದನ್ನು ತಿಳಿಸಿದನು. ತನ್ನ ಮಗನಾದ ಕೃಷ್ಣಾಗರನೇ ಇವನೆಂದು ತಿಳಿದು ರಾಜನಿಗೆ ಸಂತೋಷವಾಯಿತು. ಬಳಿಕ ರಾಜನು ಗೋರಕ್ಷನ ಚರಣಗಳನ್ನು ಹಿಡಿದು ತನ್ನ ಮಗನಲ್ಲಿ ಅದ್ಭುತ ಸಾಮರ್ಥ್ಯವನ್ನು ತಂದು ಕೊಟ್ಟದ್ದಕ್ಕೆ ಅವನನ್ನು ಕೊಂಡಾಡಿದನು. ಬಳಿಕ ರಾಜನು ಗೋರಕ್ಷನಿಗೂ-ಚೌರಂಗಿಗೂ ಪಲ್ಲಕ್ಕಿಯಲ್ಲಿ ಕುಳಿತು ರಾಜಮಂದಿರಕ್ಕೆ ಬರಲು ಪ್ರಾರ್ಥಿಸಿದನು. ಆಗ ಹಿಂದೆ ನಡೆದ ಎಲ್ಲ ಸಂಗತಿಯನ್ನು ಚೌರಂಗಿಯು ಹೇಳಿದನು. ಅದನ್ನು ಕೇಳಿ ರಾಜನು ಸಂತಪ್ತನಾಗಿ ರಾಣಿಯನ್ನು ಹಿಡಿದು ತರುವಂತೆ ಆಜ್ಞಾಪಿಸಿದನು. ಆದರೆ ಹಾಗೆ ಮಾಡುವದು ನಿನ್ನ ಮರ್ಯಾದೆಗೇ ಕುಂದುಕವೆಂದು ಚೌರಂಗಿಯು ಹೇಳಿ ರಾಜನ ಸಿಟ್ಟು ಶಾಂತ ಮಾಡಿ ಎಲ್ಲರೊಡನೆ ರಾಜಮಂದಿರಕ್ಕೆ ಹೋದನು. ರಾಜನು ರಾಣಿಯನ್ನು ಚನ್ನಾಗಿ ಶಿಕ್ಷಿಸಿ ಹೊರದೂಡಲು ಪ್ರಯತ್ನಿಸಿದನು. ಆದರೆ ಗೋರಕ್ಷನು ಹಾಗೆ ಮಾಡದೆ ಮತ್ತೊಂದು ಲಗ್ನ ಮಾಡಿಕೊಳ್ಳಲು ರಾಜನಿಗೆ ಪ್ರಸಾದ ಕೊಟ್ಟನು. ಬಳಿಕ ಗೋರಕ್ಷನು ಅಲ್ಲಿ ಒಂದು ತಿಂಗಳು ಇದ್ದು, ಅಲ್ಲಿಂದ ಚೌರಂಗಿಯೊಡನೆ ಪ್ರಯಾಗಕ್ಕೆ ಹೋದನು. ಹನ್ನೆರಡುವರ್ಷಗಳು ತುಂಬುತ್ತ ಬಂದದ್ದರಿಂದ ತನ್ನ ಗುರುಗಳು ದಾರೀನೋಡುತ್ತಿರಬಹುದೆಂದು ಭಾವಿಸಿ ಮೊದಲು ಗುರುಗಳ ದೇಹವಿದ್ದೆಡೆಗೆ ಹೋದನು. ಅಲ್ಲಿ ಪೂಜಾರಿಣಿಯು ಭೆಟ್ಟಿಯಾದಳು. ಅವಳು ಗೋರಕ್ಷನನ್ನು ನೋಡಿ ನಡುಗಿ—ಸ್ವಾಮಿಾ ನನ್ನಿಂದ ಆ ಸಂಗತಿಯನ್ನು ಗುಪ್ತವಾಗಿರಿಸಲಿಕ್ಕಾಗಲಿಲ್ಲ. ಹೆಂಗಸರ ಸ್ವಭಾವವು ಬಹಳ ಚಂಚಲವಿರುತ್ತದೆ. ಆ ಗುಪ್ತ

ಸಂಗತಿಯು ರಾಣಿಗೆ ಗೊತ್ತಾಯಿತು. ನೀವೇ ಆ ಗುಹೆಗೆ ಹೋಗಿ ನಿಮ್ಮ ಗುರುಗಳ ದೇಹವು ಇರುವದೇ ಹೇಗೆಂಬದನ್ನು ನೋಡಬೇಕು ಎಂದಳು. ಗೋರಕ್ಷನು ಗಾಬರಿಯಾಗಿ ಗುಹೆಯ ಮುಖವನ್ನು ತೆಗೆದು ಒಳಹೊಕ್ಕನು. ಅಲ್ಲಿ ಗುರುಗಳ ದೇಹವಿದ್ದಿಲ್ಲ. ಆಗ ಅವನು ದೊಡ್ಡ ಧ್ವನಿಯಿಂದ ಅಳಹತ್ತಿದನು. ಮತ್ತು ಗುರುಗಳ ದೇಹವು ಎಲ್ಲಿ ಹೋಗಿರುವದೆಂಬದನ್ನು ಶೋಧಿಸಲಿ? ಎಂದು ಚಿಂತಿಸಿದನು. ಪೂಜಾರಿಣಿಯು ರಾಣಿಯ ಬಳಿಗೆ ಹೋಗಿ ಯುಕ್ತಿಯಿಂದ ಆ ಸಂಗತಿಯನ್ನು ತಿಳಿದುಬಂದು ಗೋರಕ್ಷನಿಗೆ ಹೇಳಿದಳು. ಆಗ ಗೋರಕ್ಷನು ಗುರುಗಳದೇಹವನ್ನು ಸೂಕ್ಷ್ಮದೇಹಧಾರಿಯಾಗಿ ಗೊತ್ತು ಹಚ್ಚಬೇಕೆಂದು ಭಾವಿಸಿ ತನ್ನ ದೇಹವನ್ನು ಕಾಯಲಿಕ್ಕೆ ಚೌರಂಗಿಗೆ ಹೇಳಿ ದೇಹವನ್ನು ಬಿಟ್ಟು ಸೂಕ್ಷ್ಮರೂಪದಿಂದ ನಡೆದನು. ಅವನು ಸಮಸ್ತ ಪೃಥ್ವಿಯನ್ನೂ, ಸಮಸ್ತ ಪ್ರಾಣಿಗಳನ್ನೂ ನೋಡಿದನು. ಬಳಿಕ ಸ್ವರ್ಗ-ಪಾತಾಳ ವಿಷ್ಣುಲೋಕಗಳನ್ನು ಶೋಧಿಸಿ ಕೈಲಾಸಕ್ಕೆ ಹೋದನು. ಚಾಮುಂಡಿಗಳ ಕಾವಲಿನಲ್ಲಿ ಗುರುಗಳ ದೇಹವಿರುತ್ತದೆಂಬದು ಅವನಿಗೆ ಗೊತ್ತಾಯಿತು. ಅದಕ್ಕೆ ವೀರಭದ್ರನು ಬಲವಾದ ಕಾವಲವನ್ನಿರಿಸಿರುವನೆಂಬದನ್ನು ತಿಳಿದು, ತಿರುಗಿ ತನ್ನ ದೇಹಕ್ಕೆ ಬಂದನು.

ಗೋರಕ್ಷನು ಎದ್ದು ಕುಳಿತುಕೊಳ್ಳಲು, ಚೌರಂಗಿಗೆ ಸಂತೋಷವಾಯಿತು. ಬಳಿಕ ಅವರಿಬ್ಬರು ಗುಹೆಯಿಂದ ಹೊರಬಿದ್ದು, ಮೊದಲು ಸೂರ್ಯಮಾರ್ಗವನ್ನು ನಿರೋಧಮಾಡಿ ಅವನನ್ನು ತಮ್ಮೆಡೆಗೆ ಬರಮಾಡಿಕೊಂಡರು. ಬಳಿಕ ಗೋರಕ್ಷನು ಸೂರ್ಯನನ್ನು ವೀರಭದ್ರನ ಕಡೆಗೆ ಶಿಷ್ಟಾಯಿಗಾಗಿ ಕಳಿಸಿದನು. ವೀರಭದ್ರನು ಮಚ್ಛಿಂದ್ರನ ದೇಹವನ್ನು ಗೋರಕ್ಷನಿಗೆ ಒಪ್ಪಿಸಲು ಒಡಂಬಡಲಿಲ್ಲ.

ವೀರಭದ್ರ ಗೋರಕ್ಷರ ನಡುವೆ ಘನಘೋರ ಯುದ್ಧವು ನಡೆಯಿತು. ಗೋರಕ್ಷನ ಅಸ್ತ್ರಕ್ಕೆ ಪ್ರತಿ ಅಸ್ತ್ರ ಬಿಟ್ಟು ತನ್ನ ಪಕ್ಷವನ್ನು ವೀರಭದ್ರನು ಕಾಯ್ದುಕೊಂಡನು. ಬಳಿಕ ಗೋರಕ್ಷನು ಸಂಜೀವಿನೀ ಮಂತ್ರದಿಂದ ಅಸಂಖ್ಯಜನ ರಾಕ್ಷಸರನ್ನು ನಿರ್ಮಿಸಿದನು. ಆ ರಾಕ್ಷಸರು ಅಸ್ತ್ರಜನ್ಯರಾಗದ್ದರಿಂದ ಅವರನ್ನು ಸಂಹರಿಸುವದು ವೀರಭದ್ರನಿಗೆ ಅಶಕ್ಯವಾಯಿತು. ರಾಕ್ಷಸರು ಪ್ರಬಲರಾಗಿ ಕೈಲಾಸವಲ್ಲದೆ ಸಮಸ್ತ ದೇವಲೋಕವನ್ನೂ

ವ್ಯಾಪಿಸಿದರು. ಆಗ ಭಗವಾನ್ ಶ್ರೀ ವಿಷ್ಣುವಿಗೆ ಚಿಂತೆಯುತ್ಪನ್ನವಾಗಿ ಶಂಕರನನ್ನು ಅಲ್ಲಿಗೆ ಬರಮಾಡಿಕೊಂಡು ವೀರಭದ್ರನ ಮೂರ್ಖತನವನ್ನು ಅವನಿಗೆ ಶ್ರುತಗೊಳಿಸಿದನು. ಶಂಕರನು ಚಾಮುಂಡಿಗಳಿಂದ ಮಚ್ಛಿಂದ್ರನ ದೇಹವನ್ನು ಗೋರಕ್ಷನ ವಶಕ್ಕೆ ಕೊಡಿಸಿ ರಾಕ್ಷಸರನ್ನು ಉಪಸಂಹರಿಸಲು ಗೋರಕ್ಷನಿಗೆ ಹೇಳಿದನು. ಆಗ ಗೋರಕ್ಷನು:—ಮಹಾರಾಜ, ಈ ರಾಕ್ಷಸರು ಅಸ್ತ್ರಜನ್ಯರಲ್ಲ; ಸಂಜೀವಿನೀ ಮಂತ್ರದಿಂದ ಹುಟ್ಟಿದಂಥವರು. ಆದ್ದರಿಂದ ಇವರನ್ನು ಕೊಲ್ಲುವದು ಅಶಕ್ಯವಿರುವದು. ನೀವು ವೀರಭದ್ರನ ಆಶೆಯನ್ನು ಬಿಟ್ಟರೆ ಈ ರಣಾಂಗಣದಲ್ಲಿರುವ ಎಲ್ಲರನ್ನು ಸಂಹರಿಸುತ್ತೇನೆಂದು ಹೇಳಿದನು. ಜಗತ್ತಿನ ಹಿತದ ಕಡೆಗೆ ಲಕ್ಷ್ಯಕೊಟ್ಟು ಶಂಕರನು ವೀರಭದ್ರನ ಆಶೆಯನ್ನು ಬಿಟ್ಟನು. ಗೋರಕ್ಷನು ವಾತಾಕರ್ಷಕ ಅಸ್ತ್ರದಿಂದ ಎಲ್ಲ ದೈತ್ಯರನ್ನು ನಿರ್ವೀರ್ಣ್ಣರನ್ನಾಗಮಾಡಿದನು. ಅದರಲ್ಲಿ ವೀರಭದ್ರನೂ ನಿರ್ವೀರ್ಣ್ಣನಾದನು. ಬಳಿಕ ಗೋರಕ್ಷನು ಅಗ್ನ್ಯಸ್ತ್ರವನ್ನು ಪ್ರಯೋಗಿಸಿ ವೀರಭದ್ರನೊಡನೆ ಎಲ್ಲ ದೈತ್ಯರನ್ನೂ ಭಸ್ಮೀಭೂತರನ್ನಾಗಮಾಡಿದನು.

---

# ಅಧ್ಯಾಯ ೩೪

## ರೇವಣನಾಥನಿಗೆ ಸಿದ್ಧಿಲಾಭ.

ತನ್ನ ಮಗನಾದ ವೀರಭದ್ರನು ಮರಣ ಹೊಂದಲು ಶಂಕರನಿಗೆ ಅಪಾರವಾದ ದುಃಖವಾಯಿತು. ಅವನು ಅತ್ಯಂತ ಖಿನ್ನನಾದನು. ಇದನ್ನು ಗೋರಕ್ಷನು ತಿಳಿದು ಮನಸ್ಸಿನಲ್ಲಿ—ಹಾಯ್! ಘಾತವಾಯಿತು. ಶಂಕರನು ನನ್ನನ್ನು ಹಲವು ರೀತಿಯಿಂದ ಸಂರಕ್ಷಣೆಮಾಡಿರುವನು. ಅವನು ನನ್ನ ತಾಯಿ-ತಂದೆಗಳಂತಿರುವನು. ಇಂಥವನಿಗೆ ದುಃಖಕೊಡುವದು ಉಚಿತವಲ್ಲವೆಂದು ಯೋಚಿಸಿ ಶಂಕರನ ಬಳಿಗೆ ಹೋಗಿ ಅವನ ಕ್ಷಮೆಯನ್ನು ಬೇಡಿ ವೀರಭದ್ರನ ಅಸ್ಥಿಗಳನ್ನು ಹುಡುಕಿಕೊಡಬೇಕೆಂದು ಪ್ರಾರ್ಥಿಸಿದನು. ಶಿವ

ಗಣವೆಲ್ಲ ಶಿವನಾಮ ಸ್ಮರಣೆಯಲ್ಲಿ ಮಗ್ನವಾಗಿರುವದರಿಂದ ಯಾವ ಅಸ್ಥಿಯು ಶಿವನಾಮಗರ್ಜನೆ ಮಾಡುವದೋ ಆ ಅಸ್ಥಿಯೇ ವೀರಭದ್ರನದೆಂದು ಶಂಕರನು ಹೇಳಿದನು. ಕೂಡಲೆ ಆ ಗುಡ್ಡೆಯಿಂದ ವೀರಭದ್ರನ ಅಸ್ಥಿಗಳನ್ನು ಹುಡುಕಿ ತೆಗೆದು ಗೋರಕ್ಷನು ಅದಕ್ಕೆ ಸಂಜೀವಿನೀ ಮಂತ್ರವನ್ನು ಪ್ರಯೋಗಿಸಿದನು. ಕೂಡಲೆ ವೀರಭದ್ರನು ಎದ್ದು ಕುಳಿತು ಗೋರಕ್ಷನೊಡನೆ ಯುದ್ಧಮಾಡಲು ಪ್ರಾರಂಭಿಸಿದನು. ಆಗ ಶಂಕರನು ವೀರಭದ್ರನನ್ನು ಅಪ್ಪಿಕೊಂಡು ಗೋರಕ್ಷನ ಸಂಗತಿಯನ್ನು ಹೇಳಿ ಅವನೊಡನೆ ಸಖ್ಯಮಾಡಿಸಿದನು. ವೀರಭದ್ರನು ಗೋರಕ್ಷನನ್ನು ಅಪ್ಪಿಕೊಂಡನು.

ಬಳಿಕ ಗೋರಕ್ಷನು ಗುರುದೇಹವನ್ನು ತಕ್ಕೊಂಡು ಗುಹೆಗೆ ಬಂದು ಅದನ್ನು ಸಂರಕ್ಷಿಸಹತ್ತಿದನು. ಒಂದು ದಿನ ರಾಜನು ಶಿವಾಲಯಕ್ಕೆ ಬಂದಾಗ ಗೋರಕ್ಷನನ್ನು ನೋಡಿ ಸಂತೋಷಹೊಂದಿ ತನ್ನ ಪರಿವಾರವನ್ನೆಲ್ಲ ಮುಂದೆ ಕಳುಹಿಸಿ ಏಕಾಂತದಲ್ಲಿ ಆತನನ್ನು ಆಲಿಂಗಿಸಿದನು. ಗೋರಕ್ಷನು ಗುರುದೇಹದ ವಿಷಯವಾಗಿ ನಡೆದ ಎಲ್ಲ ಸಂಗತಿಗಳನ್ನು ನಿವೇದಿಸಿ ಬೇಗನೆ ರಾಜ ದೇಹವನ್ನು ತ್ಯಜಿಸಬೇಕೆಂದು ಪ್ರಾರ್ಥಿಸಿದನು. ಆಗ ರಾಜನು—ಸ್ವಲ್ಪ ತಡೆ, ಧರ್ಮನಾಥನನ್ನು ಪಟ್ಟಕ್ಕೆ ಕುಳ್ಳಿರಿಸಿ ರಾಜದೇಹವನ್ನು ತ್ಯಜಿಸುವೆನು ಎಂದು ನುಡಿದು ರಾಜನು ಹೊರಟು ಹೋದನು.

ರಾಜಮಂದಿರಕ್ಕೆ ಹೋದ ಬಳಿಕ ರಾಜನು ಧರ್ಮನಾಥನಿಗೆ ರಾಜ್ಯಾಭಿಷೇಕ ಮಾಡುವ ಏರ್ಪಾಡು ಮಾಡಿದನು. ಒಂದು ಶುಭಮುಹೂರ್ತದಲ್ಲಿ ಅವನನ್ನು ಪಟ್ಟಕ್ಕೆ ಕುಳ್ಳಿರಿಸಿದನು. ಆ ನಿಮಿತ್ಯವಾಗಿ ಅನೇಕ ಜನ ಯಾಚಕರಿಗೆ ದಾನಕೊಟ್ಟನು. ಈ ಮಾತಿಗೆ ಒಂದು ತಿಂಗಳು ಕ್ರಮಿಸಲು ಒಂದು ದಿನ ರಾತ್ರಿ ರಾಜನು ಮಲಗಿದಲ್ಲಿಯೇ ದೇಹಬಿಟ್ಟನು. ಬೆಳಗುಮುಂಜಾನೆ ರೇವತಿ ರಾಣಿಯು ನೋಡಿ ಶೋಕಮಾಡಹತ್ತಿದಳು. ಧರ್ಮನಾಥನೂ ಶೋಕಿಸುತ್ತ ತಾಯಿಯ ಕೊರಳಿಗೆ ಬಿದ್ದನು.

ಇತ್ತ ಗುಹೆಯಲ್ಲಿ ಮಚ್ಛೇಂದ್ರನು ಎದ್ದು ಕುಳಿತು ತನ್ನ ಶಿಷ್ಯನನ್ನು ಆಲಿಂಗಿಸಿದನು. ಗೋರಕ್ಷ-ಚೌರಂಗೀನಾಥರಿಗೆ ತುಂಬಾ ಸಂತೋಷವಾಯಿತು. ಅವರು ಗುಹೆಯನ್ನು ಬಿಟ್ಟು ಹೊರಗೆ ಬಂದು ಕುಳಿತರು. ಅಷ್ಟರಲ್ಲಿ ರಾಜನ ದೇಹವು ಸ್ಮಶಾನ ಭೂಮಿಗೆ ಬಂದಿತು. ರೇವತೀ ರಾಣಿಯು

ಮಚ್ಛೇಂದ್ರನನ್ನು ನೋಡಿ ಅಚ್ಚರಿಗೊಂಡು ಈತನು ಹ್ಯಾಗೆ ಬಂದನು? ಎಂದು ಚಕಿತಳಾಗಿ ಪೂಜಾರಿಣಿಯನ್ನು ಕೇಳಿ ಎಲ್ಲ ಸಂಗತಿಯನ್ನು ತಿಳಿದು ನಿರುಪಾಯಳಾದಳು. ರಾಜನ ದೇಹವು ಸಂಸ್ಕಾರಹೊಂದಲು ಎಲ್ಲರೂ ಮನೆಗೆ ಹೋದರು. ಆದರೆ ಧರ್ಮನಾಥನು ಪಿತೃಶೋಕದಿಂದ ಮನೆಗೆ ಹೋಗಲಿಲ್ಲ. ರಾಜನ ಉತ್ತರ ಕ್ರಿಯೆಗಳು ಆಗಿಹೋದರೂ ಧರ್ಮನಾಥನ ಶೋಕವು ಕಡಿಮೆಯಾಗಲಿಲ್ಲ. ಆಗ ರೇವತೀ ರಾಣಿಯು ಏಕಾಂತದಲ್ಲಿ ಧರ್ಮನಾಥನಿಗೆ ವಿಕ್ರಮ ಹಾಗು ಮಚ್ಛೇಂದ್ರರ ಎಲ್ಲ ಸಂಗತಿಗಳನ್ನು ನಿವೇದಿಸಿದಳು. ಆಗ ಧರ್ಮನಾಥನಿಗೆ ಸಮಾಧಾನವಾಗಿ ಅವನು ಶಿವಾಲಯಕ್ಕೆ ಬಂದು ಮಚ್ಛೇಂದ್ರ-ಗೋರಕ್ಷ-ಚೌರಂಗೀನಾಥರನ್ನು ಪ್ರಾರ್ಥಿಸಿ ರಾಜಮಂದಿರಕ್ಕೆ ಕರೆದೊಯ್ದನು. ಧರ್ಮನಾಥನ ಆಗ್ರಹದಿಂದ ಮಚ್ಛೇಂದ್ರನು ಅಲ್ಲಿ ಒಂದು ವರ್ಷದವರೆಗೆ ಇದ್ದನು. ಬಳಿಕ ಅವನು ಹನ್ನೆರಡು ವರುಷಗಳನಂತರ ಪುನಃ ಬರುತ್ತೇನೆಂದು ಹೇಳಿ ಶಿಷ್ಯರೊಡನೆ ತೀರ್ಥಾಟನಕ್ಕೆ ಹೊರಟನು.

ಗೋರಕ್ಷನು ಮಚ್ಛೇಂದ್ರ-ಚೌರಂಗೀನಾಥರೊಡನೆ ಗೋದಾ ತೀರಕ್ಕೆ ಬಂದನು. ಅಲ್ಲಿ ಆತನಿಗೆ ಮಾಣಿಕನ ಸ್ಮರಣವಾಯಿತು. ಅವನ ಎಲ್ಲ ವೃತ್ತಾಂತವನ್ನು ಗುರುಗಳಿಗೆ ನಿವೇದಿಸಿದನು. ಮಚ್ಛೇಂದ್ರನು ಮಾಣಿಕನ ಭೆಟ್ಟಿಯ ಅಪೇಕ್ಷೆಯನ್ನು ಮಾಡಲು ಎಲ್ಲರೂ ಅವನನ್ನು ಹುಡುಕಹತ್ತಿದರು. ಮಾಣಿಕನು ಒಂದು ಹೊಲದಲ್ಲಿ ಕಂಬದಂತೆ ನಿಂತುಬಿಟ್ಟಿದ್ದನು. ಅವನ ದೇಹವೆಲ್ಲ ಕ್ಷೀಣಿಸಿ ಹೋಗಿತ್ತು. ಅವನ ತಪಸ್ಸನ್ನು ನೋಡಿ ಗೋರಕ್ಷನಿಗೆ ಸಂತೋಷವಾಯಿತು. ಆಗ ಮಚ್ಛೇಂದ್ರನು ತಪಸ್ಸನ್ನು ಬಿಡಲಿಕ್ಕೆ ಮಾಣಿಕನಿಗೆ ಹೇಳಿದನು. ಆದರೆ ಮಾಣಿಕನು ಹುಂಬನಿದ್ದುದರಿಂದ ಅವನ ಮಾತಿಗೆ ಮನಸ್ಸಿಗೆ ಬಂದಂತೆ ಉತ್ತರ ಕೊಟ್ಟನು. ಆಗ ಗೋರಕ್ಷನು ಈತನು ಹೀಗೆ ಹಾದಿಗೆ ಬರುವದಿಲ್ಲೆಂದು ತಿಳಿದು ಒಂದು ಯುಕ್ತಿಯನ್ನು ಮಾಡಿದನು. ಮಚ್ಛೇಂದ್ರನೂ ಚೌರಂಗಿಯೂ ದೂರ ಹೋಗಿ ಕುಳಿತರು. ಗೋರಕ್ಷನು ಮಾಣಿಕನಿಗೆ ನಮಸ್ಕರಿಸಿ—ಅಹಾ! ಏನು ಯೋಗಿಗಳಿವರು? ಮಹಾರಾಯನೇ ನನಗೆ ಗುರುವಾಗಬಾರದೇ ಎಂದು ನುಡಿದನು. ಅದನ್ನು ಕೇಳಿ ಮಾಣಿಕನು—ಮೂರ್ಖನೇ ಇಷ್ಟು ದೊಡ್ಡವನಾಗಿರುವಿ; ನನಗೆ ಗುರು

ವಾಗೆಂದು ಅನ್ನುವದಕ್ಕಿಂತ ನೀನೇ ನನಗೆ ಗುರುವಾಗಬಾರದೇ ಎಂದನು. ಆ ಸಮಯವನ್ನು ಸಾಧಿಸಿ ಗೋರಕ್ಷನು ಮಾಣಿಕನ ಕಿವಿಯಲ್ಲಿ ಮಂತ್ರೋಪದೇಶ ಮಾಡಿದನು. ಆ ಮಂತ್ರಪ್ರಭಾವದಿಂದ ಮಾಣಿಕನು ಹಾದಿಗೆ ಬಂದು ಗೋರಕ್ಷನಿಗೆ ನಮಸ್ಕರಿಸಿದನು. ಗೋರಕ್ಷನು ಅವನೊಡನೆ ಮಚ್ಛಿಂದ್ರನ ಬಳಿಗೆ ಹೋದನು. ಗೋರಕ್ಷನ ಉಪದೇಶದಿಂದ ಮಾಣಿಕನು ಮಹಾಜ್ಞಾನಿಯಾದನು. ಅವನಿಗೆ ಮಚ್ಛಿಂದ್ರನು ಅಡಬಂಗವೆಂಬ ಹೆಸರನ್ನಿಟ್ಟನು. ಅಡಬಂಗನು ಸರ್ವವಿದ್ಯಾವಿಶಾರದನಾದನು. ಬಳಿಕ ಆ ನಾಲ್ವರೂ ಸೇರಿ ತೀರ್ಥ-ಯಾತ್ರೆ ಮಾಡುತ್ತ ಪ್ರಯಾಗಕ್ಕೆ ಹೋದರು. ಅಲ್ಲಿಯ ರಾಜನಾದ ಧರ್ಮನಾಥನು ಮಚ್ಛಿಂದ್ರ ಮೊದಲಾದ ನಾಲ್ವರು ನಾಥರು ಬಂದದ್ದನ್ನು ಕೇಳಿ ಆದರದಿಂದ ಅವರನ್ನು ರಾಜಮಂದಿರಕ್ಕೆ ಕರೆದೊಯ್ದನು. ಈ ಅವಧಿಯಲ್ಲಿ ಧರ್ಮನಾಥನಿಗೆ ಒಬ್ಬ ಗಂಡು ಮಗನು ಹುಟ್ಟಿದ್ದು ಅವನು ದೊಡ್ಡವನಾಗಿದ್ದನು. ಮಚ್ಛಿಂದ್ರನು ಧರ್ಮನಾಥನ ಮಗನಾದ ತ್ರಿವಿಕ್ರಮನನ್ನು ಪಟ್ಟಕ್ಕೆ ಕುಳ್ಳಿರಿಸಿ ಧರ್ಮನಾಥನಿಗೆ ಯತಿಯ ವೇಷವನ್ನು ಕೊಟ್ಟನು. ಬಳಿಕ ಅವರೆಲ್ಲರು ಬದರೀನಾಥಕ್ಕೆ ಹೋದರು. ಅಲ್ಲಿ ಧರ್ಮನಾಥನನ್ನು ತಪಸ್ಸಿಗೆ ಕುಳ್ಳಿರಿಸಿದರು. ಅವನ ತಪಸ್ಸು ಪೂರ್ಣವಾಗಲು ಅವನಿಗೆ ಸಮಸ್ತ ಶಾಬರೀ ವಿದ್ಯೆಯನ್ನು ಕಲಿಸಿ ಎಲ್ಲ ದೇವತೆಗಳ ಕಡೆಯಿಂದ ಅನುಗ್ರಹ ಮಾಡಿಸಿದರು.

ಧರ್ಮನಾಥನ ತಪಸ್ಸಿನ ಸಮಾರೋಪಣೆಯ ಸಮಾರಂಭಕ್ಕೆ ಬ್ರಹ್ಮದೇವನೂ ಬಂದಿದ್ದನು. ಆತನ ಮನಸ್ಸಿನಲ್ಲಿ ತನಗೊಬ್ಬ ಮಾನಸಪುತ್ರನು ಆಗಬೇಕೆಂಬ ಇಚ್ಛೆಯುಂಟಾಯಿತು. ಅವನು ಪುತ್ರೇಚ್ಛೆಯಿಂದ ರೇವತೀ ನದಿಯ ಉಸುಕಿನ ಕಡೆಗೆ ನೋಡಿದನು. ಬ್ರಹ್ಮದೇವನ ದೃಷ್ಟಿಪಾತದಿಂದ ಆ ಉಸುಕಿನಲ್ಲಿ ಒಬ್ಬ ಪುತ್ರನು ಉತ್ಪನ್ನನಾದನು.

ಒಬ್ಬ ಒಕ್ಕಲಿಗನು ನದಿಗೆ ನೀರಿಗೆ ಹೋದಾಗ ಆ ಪುತ್ರನನ್ನು ನೋಡಿ ಮನೆಗೆ ಕರೆದೊಯ್ದನು. ರೇವಾತೀರದಲ್ಲಿ ಉತ್ಪನ್ನನಾದ ಆ ಶಿಶುವಿಗೆ ರೇವಣನೆಂಬ ಹೆಸರನ್ನಿಟ್ಟರು. ರೇವಣನು ಸಾಮಾನ್ಯನಿರದೆ ಚಮಸನಾಮಕ ನಾರಾಯಣನ ಅವತಾರಿಕನಾಗಿದ್ದನು. ಆದರೆ ಆ ಒಕ್ಕಲಿಗನ ಮನೆಯಲ್ಲಿ ಬೆಳೆದು ದೊಡ್ಡವನಾಗಲು ಅವನಿಗೆ ಪ್ರಾಪಂಚಿಕ ಉಪಾಧಿಯು ಹತ್ತಿತು.

ಅವನ ಹರಗುವದು, ಬಿತ್ತುವದು ಮೊದಲಾದ ಕೌಬಾಡಕಷ್ಟಗಳನ್ನು ಮಾಡು ತ್ತಿದ್ದನು. ಒಂದು ದಿನ ಅವನು ಎತ್ತುಗಳನ್ನು ಹೊಡಕೊಂಡು ಹೊಲಕ್ಕೆ ಹೋಗುವಾಗ ದಾರಿಯಲ್ಲಿ ದತ್ತಾತ್ರೇಯರು ಅವನಿಗೆ ಭೆಟ್ಟಿಯಾದರು. ಅವ ನನ್ನು ಎಚ್ಚರಗೊಳಿಸಬೇಕೆಂದು ದತ್ತನು ಎಡವಿಬಿದ್ದಂತೆ ನಟಿಸಿ ರೇವಣನಮೇಲೆ ಬಿದ್ದನು. ದತ್ತನ ಆಘಾತಕ್ಕೆ ರೇವಣನೂ ಬಿದ್ದನು. ಆದರೆ ದತ್ತನ ಮೈಸ್ಪರ್ಶದಿಂದ ರೇವಣನಲ್ಲಿ ತಾನು ಯಾರೆಂಬ ತಿಳುವಳಿಕೆಯುಂಟಾಯಿತು. ಆ ಕೂಡಲೆ ಆತನು ಶ್ರೀ ದತ್ತನಿಗೆ ನಮಸ್ಕರಿಸಿದನು. ಆಗ ದತ್ತನು ನೀನಾ ರೆಂದು ಕೇಳಲು, ಭಗವನ್ ನನ್ನಲ್ಲಿ ತಮ್ಮ ಅಂಶವೇ ಇರುತ್ತಿರಲು, ಕೇಳು ವದೇನು? ತಾವು ತ್ರಿಮೂರ್ತಿಗಳ ಅವತಾರಿಕರು. ನಾನು ಶುದ್ಧ ಸ್ವಭಾ ವದ ಚಮಸನಾಮಕವಿಷ್ಣುವಿನ ಅವತಾರಿಕನು ಎಂದು ರೇವಣನು ಹೇಳಿದನು. ಆಗ ದತ್ತನು ಸಂತೋಷಬಟ್ಟು ಅವನಿಗೆ ತಾತ್ಪೂರ್ತಿಕವಾಗಿ ಅನುಗ್ರಹಿಸಿ ಅವನ ನಿಷ್ಠೆಯನ್ನು ನೋಡುವದಕ್ಕೋಸ್ಕರ ಒಂದು ಸಿದ್ಧಿಯನ್ನು ಅವ ನಿಗೆ ಕೊಟ್ಟು ಹೊರಟು ಹೋದನು.

---

# ಅಧ್ಯಾಯ ೩೫

## ವಿಪ್ರಬಾಲಕರ ಸಂಜೀವನದ ಪ್ರಯತ್ನ.



ರೇವಣನು ದತ್ತಾತ್ರಯನು ಹೋದಬಳಿಕ ಹೊಲದಲ್ಲಿ ಗಳೇ ಹೂಡಿ ದನು. ಎತ್ತುಗಳನ್ನು ಹೊಡೆಯುವಾಗ ಅವನಿಗೆ ದತ್ತನು ಹೇಳಿದ ಸಿದ್ಧಿಯ ಮಂತ್ರವು ನೆನಪಾಗಲು ಉಚ್ಚಸ್ವರದಿಂದ ಹಾಡಹತ್ತಿದನು. ಆ ಮಂತ್ರ ವನ್ನು ರೇವಣನು ಪಠಣ ಮಾಡಲು 'ಮಹಿಮಾ' ಎಂಬ ಸಿದ್ಧಿಯು ಮೂರ್ತಿ ಮಂತಾಗಿ ಅವನೆದುರಿಗೆ ಬಂದು ನಿಂತಿತು. ರೇವಣನು ನೀನಾರೆಂದು ಕೇಳಿದನು. ಆಗ ಆ ಸಿದ್ಧಿಯು ತನ್ನ ಸಂಗತಿಯನ್ನು ಹೇಳಿತು. ರೇವ

ಣನು ದತ್ತಾತ್ರೇಯನ ವರವಿನಿಂದ ಮೊದಲೇ ಉಬ್ಬಿದ್ದನು. ಸಿದ್ಧಿಯು ಕೈ ಜೋಡಿಸಿಕೊಂಡು ನಿಂತಬಳಿಕ ಕೇಳುವದೇನು? ಅವನು ಆ ಸಿದ್ಧಿಗೆ ತನ್ನ ಧಾನ್ಯದ ರಾಶಿಯನ್ನೂ ಹೊಲವನ್ನೂ ಸುವರ್ಣಮಯವಾಗ ಮಾಡಲು ಅಜ್ಞಾಪಿಸಿದನು. ಕೂಡಲೆ ಸಿದ್ಧಿಯು ಆ ಪ್ರಕಾರ ಮಾಡಿತು. ಅದನ್ನು ಕಂಡು ಸಿದ್ಧಿಯು ನಿಜವಾಗಿರುವದೆಂಬದನ್ನು ನಂಬಿಗೆ ಮಾಡಿಕೊಂಡನು. ಬಳಿಕ ಅವನು ಆ ಸಿದ್ಧಿಗೆ ತನ್ನ ಬಳಿಯಲ್ಲಿರ ಹೇಳಿ ಹೊಲವನ್ನೂ-ಧಾನ್ಯದ ರಾಶಿಯನ್ನೂ ಮೊದಲಿನಂತೆ ಮಾಡಲು ತಿಳಿಸಿದನು. ಸಿದ್ಧಿಯು ಅಪರಂತೆ ವರ್ತಿಸಿತು.

ಬಳಿಕ ರೇವಣನು ಗಳೇಬಿಟ್ಟು ಮನೆಗೆ ಹೋದನು. ಅವನ ಮನಸ್ಸಿನಲ್ಲಿ ಇನ್ನು ಹೊಲಕ್ಕೆ ಹೋಗಿ ಯಾಕೆ ಕಷ್ಟಪಡಬೇಕೆಂಬ ವಿಚಾರ ಬಂದಿತು. ಅದರಂತೆ ಅವನು ಮರುದಿನ ಮೂರು ತಾಸು ಏರಿದರೂ ಹಾಸಿಗೆ ಬಿಟ್ಟು ಏಳಲಿಲ್ಲ. ರೇವಣನ ತಂದೆಯು ಮಗನಿಗೆ ಹೀಗೇಕೆ ಮಾಡಿದಿ? ಎಂದನು. ಆಗ ರೇವಣನು ನಮಗೇನು ಕಡಿಮೆಯಾಗಿದೆ? ಯಾಕೆ ಕಷ್ಟಪಡಬೇಕೆಂದು ಅಂದನು. ಆ ಮುದುಕನಿಗೆ ಆಶ್ಚರ್ಯವಾಯಿತು. ಅವನು:--ತಮ್ಮಾ ಹೀಗೆಂದರೇನು? ನಾವೇನು ಜಹಾಗೀರದಾರರೇ? ಅಂಬಲಿ ರೊಟ್ಟಿ ಸಹ ನಮಗೆ ಹೊತ್ತಿಗೆ ಸಿಗದಿರಲು, ದುಡಿಯುವದನ್ನು ಬಿಟ್ಟರೆ ಮುಂದೆ ಗತಿಯೇನು? ಹೊಲದೊಳಗಿನ ಪೈರು ಕೆಟ್ಟುಹೋದರೆ, ಮುಂದೆ ಹೊಟ್ಟೆಗೆ ಕೇರು ಹಾಕಿಕೊಳ್ಳುವಿಯಾ? ಎಂದನು. ಆಗ ರೇವಣನು ನುಡಿದನೇನಂದರೆ:—ಅಪ್ಪಾಜಿಯವರೇ, ಮನೆಯಲ್ಲಿ ಏನು ಕಡಿಮೆಯಾಗಿದೆ? ನೋಡಿರಿ. ಧಾನ್ಯದ ಗಳಿಗೆಗಳ ತುಂಬ ಹೊನ್ನು ತುಂಬಿರುವದು. ಪ್ರತ್ಯಕ್ಷ ನೋಡಿ ಮಾತಾಡಿರಿ.

ರೇವಣನ ಈ ಮಾತುಗಳನ್ನು ಕೇಳಿ ಆ ಸಹನಸಾರು ಮುದುಕನು ಆಶ್ಚರ್ಯಪಟ್ಟು ಮನೆಯೊಳಗಿನ ಗಳಿಗೆಗಳನ್ನು ನೋಡಿದನು. ಅವುಗಳೆಲ್ಲ ರೇವಣನ ಹೇಳಿಕೆಯಂತೆ ನಿಜವಾಗಿ ಹೊನ್ನುಗಳಿಂದ ತುಂಬಿದ್ದವು. ಸಹನಸಾರು ಮುದುಕನು ತನ್ನ ಮಗನು ಅವತಾರಿಕನಿರುವನೆಂದು ತಿಳಿದನು. ಬಳಿಕ ರೇವಣನು ಬಡಬಗ್ಗರಿಗೆ ಯಾಚಕರಿಗೆ ದಾನ-ಧರ್ಮ ಮಾಡಲಾರಂಭಿಸಿದನು. ಬಂದವರಿಗೆ ಊಟಕ್ಕೆ ಹಾಕಹತ್ತಿದನು. ಸೀದಾಸಾಮಗ್ರಿಗಳನ್ನು ಕೊಡಲಾರಂಭಿಸಿದನು.

ರೇವಣನು ಇದ್ದ ಗ್ರಾಮದ ಹೆಸರು ಬಂಧಲವೆಂಬದಾಗಿತ್ತು. ಆ ಊರು ದೊಡ್ಡದಿದ್ದು, ಹೋಗಿ ಬರುವ ದೊಡ್ಡ ಹಾದಿಯು ಮೇಲಿತ್ತು. ಆದ್ದರಿಂದ ಆ ಊರಿಗೆ ಬಹು ಜನರು ಬರುತ್ತಿದ್ದರು. ಅವರೆಲ್ಲರೂ ರೇವಣನ ಕೀರ್ತಿಯನ್ನು ಕೇಳಿ ಅವನ ಬಳಿಗೆ ಬರಹತ್ತಿದರು. ಅವರೆಲ್ಲರ ಯೋಗಕ್ಷೇಮವನ್ನು ರೇವಣನು ತಕ್ಕೊಳ್ಳುತ್ತಿದ್ದನು. ರೋಗಿಗಳು ಆದರೂ ದುಃಖಮುಕ್ತರಾಗಹತ್ತಿದರು. ಇದರಿಂದ ಜನರು ರೇವಣನಿಗೆ ರೇವಣಸಿದ್ಧನೆಂದು ಕರೆಯಲಾರಂಭಿಸಿದರು.



ಬರಬರುತ್ತ ರೇವಣಸಿದ್ಧನ ಕೀರ್ತಿಯು ಹೆಚ್ಚಾಯಿತು. ಹೀಗಿರಲು ಒಂದು ದಿನ ಆ ಊರಿಗೆ ಮಚ್ಛಿಂದ್ರನು ಬಂದನು. ಅವನು ಒಂದು ಧರ್ಮಶಾಲೆಯಲ್ಲಿಳಿದುಕೊಂಡನು. ಜನರು ಅವನಿಗೆ ಇಲ್ಲಿ ಯಾಕೆ ಇಳಿದುಕೊಂಡೆ ರೇವಣಸಿದ್ಧನ ಕಡೆಗೆ ಹೋದರೆ ನಿನಗೆ ಬೇಕಾದ ಸೀದಾಸಾಮುಗ್ರಿ ಸಿಗುವದೆಂದು ಹೇಳಿ ರೇವಣನ ಮಹಿಮೆಯನ್ನು ವರ್ಣಿಸಿದರು. ಆಗ ಮಚ್ಛಿಂದ್ರನು ಇಂಥ ಮಹಿಮಾಪುರುಷನು ಯಾರೆಂದು ನೋಡುವದಕ್ಕಾಗಿ ಬುದ್ಧಿಪೂರ್ವಕವಾಗಿ ರೇವಣಸಿದ್ಧನ ಬಳಿಗೆ ಹೋದನು. ಮತ್ತು ಆತನನ್ನು ಸೂಕ್ಷ್ಮವಾಗಿ ನೋಡಿದನು. ಈತನು ಚಮಸನಾರಾಯಣನ ಅವತಾರಿಕನೆಂಬದು ಅವನಿಗೆ ಗೊತ್ತಾಯಿತು. ಮಚ್ಛಿಂದ್ರನು ಹಾಗೇ ತಿರುಗಿ ಬಂದು ರೇವಣಸಿದ್ಧನ ಗುರುಯಾರೆಂಬದನ್ನು ವಿಚಾರಿಸಿದನು. ಆದರೆ ಜನರಿಗೆ ಅವನ ಗುರುಯಾರೆಂಬದು ಹ್ಯಾಗೆ ಗೊತ್ತಿರಬೇಕು? ಯಾರೂ ಹೇಳಲಿಲ್ಲ. ಆಗ ಮಚ್ಛಿಂದ್ರನು ಒಂದು ಯುಕ್ತಿಯನ್ನು ತೆಗೆದನು. ಅವನು ತನ್ನ ಸಾಮರ್ಥ್ಯದಿಂದ ಅರಣ್ಯದೊಳಗಿನ ಪಕ್ಷಿಗಳನ್ನೆಲ್ಲ ಬರಮಾಡಿಕೊಂಡು ಅವುಗಳಿಗೆ ಯಥೇಷ್ಟ ಕಾಳುಗಳನ್ನು ಹಾಕಿದನು. ಆ ಪಕ್ಷಿಗಳು ಮಚ್ಛಿಂದ್ರನೊಡನೆ ಯಾವ ಅಂಜಿಕೆಯಿಲ್ಲದೆ ಆಟವಾಡುತ್ತಿದ್ದವು. ಪಕ್ಷಿಗಳು ತೃಪ್ತವಾಗಲು ಶ್ವಾಪದಗಳನ್ನು ಬರಮಾಡಿಕೊಂಡನು. ಹುಲಿ-ಸಿಂಹ-ಕರಡಿ ಮೊದಲಾದ ಹಿಂಸ್ರಪಶುಗಳು ಅಸಂಖ್ಯಾಕವಾಗಿ ಬಂದವು. ಅವು ಮಚ್ಛಿಂದ್ರನ ಬಳಿಯಲ್ಲಿ ಕೇವಲ ಸಾಧುಪ್ರಾಣಿಗಳಂತೆ ಕುಳಿತುಕೊಂಡವು. ಜನರಿಗೆ ಇದೊಂದು ಅತ್ಯದ್ಭುತವಾಗಿ ತೋರಿತು. ಮಚ್ಛಿಂದ್ರನು ಸಾಕ್ಷಾತ್ ಈಶ್ವರನಿರುವನೆಂದು ಅಂದರು. ಈ ಸುದ್ದಿಯು ರೇವಣಸಿದ್ಧನ ಕಿವಿಯ

ವರೆಗೆ ಹೋಯಿತು. ಈ ಆಶ್ಚರ್ಯವನ್ನು ನೋಡುವದಕ್ಕೆ ರೇವಣಸಿದ್ಧನು ಸ್ವತಃ ಬಂದನು. ಶಾಪದಗಳು ಮಚ್ಛಿಂದ್ರನ ಬಳಿಯಲ್ಲಿ ಕುಳಿತದ್ದನ್ನು ನೋಡಿ ಆಶ್ಚರಿಗೊಂಡನು. ಅವನು ಹಾಗೇ ತಿರುಗಿ ಮನೆಗೆ ಹೋಗಿ ತನ್ನ ಸಿದ್ಧಿಯನ್ನು ಬರಮಾಡಿಕೊಂಡನು. ಸಿದ್ಧಿಯು ಮೂರ್ತಿಮಂತಾಗಿ ನಿಂತುಕೊಂಡು ಏನಪ್ಪಣೆ ಎಂದು ಕೇಳಿತು. ಆಗ ರೇವಣಸಿದ್ಧನು ಮಚ್ಛಿಂದ್ರನಂತೆ ತನಗೆ ಎಲ್ಲ ಪ್ರಾಣಿಗಳ ಸಖ್ಯವುಂಟಾಗುವಂತೆ ಮಾಡೆಂದು ಹೇಳಿದನು. ಅದಕ್ಕೆ ಸಿದ್ಧಿಯು—ಇದು ನನ್ನ ಕೆಲಸವಲ್ಲ. ಬ್ರಹ್ಮಜ್ಞಾನಿಗಳಿಗೆ ಇದು ಸಾಧ್ಯವಾಗುವದು. ಯಾರು ಬ್ರಹ್ಮಾಂಡವನ್ನು ಬ್ರಹ್ಮಸ್ವರೂಪವೆಂದು ಭಾವಿಸುವರೋ ಅವರಿಗೆ ಮಾತ್ರ ಎಲ್ಲ ಪ್ರಾಣಿಗಳನ್ನು ಒಲಿಸಿಕೊಳ್ಳಲಿಕ್ಕೆ ಬರುತ್ತದೆ. ನಿಮಗೆ ಹಾಗೆ ಮಾಡಬೇಕೆಂಬ ಇಚ್ಛೆಯಿದ್ದರೆ ದತ್ತಗುರುಗಳಿಗೆ ಶರಣುಹೋಗಿ ಬ್ರಹ್ಮಜ್ಞಾನವನ್ನು ಸಂಪಾದಿಸಿರಿ ಎಂದು ಹೇಳಿತು.

ರೇವಣಸಿದ್ಧನಿಗೆ ಬ್ರಹ್ಮಜ್ಞಾನ ಸಂಪಾದಿಸಬೇಕೆಂಬ ಅಪೇಕ್ಷೆಯು ಬಹಳವಾಯಿತು. ಅವನು ಎಲ್ಲವನ್ನು ಬಿಟ್ಟುಕೊಟ್ಟು ದತ್ತನ ದರ್ಶನಕ್ಕೋಸ್ಕರ ಅರಣ್ಯಕ್ಕೆ ಹೋದನು. ಮತ್ತು ದತ್ತನ ನಾಮಘೋಷ ಮಾಡುತ್ತ ದೇಹವನ್ನು ಕೃಶಗೊಳಿಸಲಾರಂಭಿಸಿದನು. ಮುಂದೆ ಕೆಲ ದಿನಗಳ ಮೇಲೆ ಮಚ್ಛಿಂದ್ರನು ವಿಚಾರ ಮಾಡಲು ರೇವಣಸಿದ್ಧನು ಅರಣ್ಯವನ್ನು ಸೇರಿ ಕಷ್ಟಪಡುತ್ತಿರುವನೆಂಬದು ತಿಳಿಯಿತು. ಆಗ ಅವನು ಅಷ್ಟಸಿದ್ಧಿಗಳನ್ನು ಬರಮಾಡಿಕೊಂಡು ರೇವಣಸಿದ್ಧನಲ್ಲಿ ಯಾವ ಸಿದ್ಧಿಯು ಇತ್ತೆಂದು ವಿಚಾರಿಸಿದನು. ಆಗ ಮಹಿಮಾನಾಮಕ ಸಿದ್ಧಿಯು ಮುಂದೆ ಬಂದು ಸ್ವಾಮಿಾ ನಾನೇ ಶ್ರೀದತ್ತಗುರುಗಳ ಆಜ್ಞೆಯಿಂದ ರೇವಣಸಿದ್ಧರನ್ನು ಸೇವಿಸುತ್ತಿದ್ದೆನು. ಎಂದು ನುಡಿದು ಆತನು ಅರಣ್ಯಕ್ಕೆ ಹೋದ ಕಾರಣವನ್ನು ಹೇಳಿತು. ಮಚ್ಛಿಂದ್ರನಿಗೆ ರೇವಣಸಿದ್ಧನ ಗುರುಸಾಂಪ್ರದಾಯವು ತಿಳಿದು ಸಂತೋಷವಾಯಿತು. ಕೂಡಲೆ ಅವನು ಗಿರಿನಾರಪರ್ವತಕ್ಕೆ ಹೋಗಿ ದತ್ತಗುರುಗಳಿಗೆ ಭೆಟ್ಟಿಯಾಗಿ ರೇವಣಸಿದ್ಧನ ಎಲ್ಲ ಸಂಗತಿಯನ್ನು ಹೇಳಿದನು. ಮತ್ತು ರೇವಣಸಿದ್ಧನು ಈಗ ನಿಮ್ಮ ದರ್ಶನಕ್ಕಾಗಿ ಅಡವಿಯಲ್ಲಿ ಕಷ್ಟ ಪಡುತ್ತಿರುವನೆಂದು ಹೇಳಿದನು. ಆಗ ದತ್ತಗುರುಗಳು

ಮಚ್ಛೇಂದ್ರನೊಡನೆ ರೇವಣಸಿದ್ಧನಲ್ಲಿಗೆ ದಯಮಾಡಿಸಿದರು. ಮತ್ತು ರೇವಣ ಸಿದ್ಧನ ಅಧಿಕಾರವನ್ನು ತಿಳಿದು ಅವನನ್ನು ಅನುಗ್ರಹಿಸಿದರು. ರೇವಣ ಸಿದ್ಧನು ಮಹಾಜ್ಞಾನಿಯಾದನು. ಅವನು ದತ್ತಗುರುಗಳೊಡನೆ ಬದರೀ ಕೇದಾರಕ್ಕೆ ಹೋದನು. ದತ್ತಗುರುಗಳು ಅವನಿಗೆ ಸಮಸ್ತ ವಿದ್ಯೆಯನ್ನು ಕಲಿಸಿದರು. ಶಾಬರಿವಿದ್ಯೆಯಲ್ಲಿ ರೇವಣಸಿದ್ಧನು ಪ್ರವೀಣನಾದನು. ಅವ ನಿಗೆ ನಾಥದೀಕ್ಷೆಯು ಕೊಡಲ್ಪಟ್ಟಿತು. ಎಲ್ಲ ದೇವತೆಗಳೂ ರೇವಣನಾಥ ನಿಗೆ ವರಪ್ರದಾನ ಮಾಡಿದವು.

ಬಳಿಕ ರೇವಣನಾಥನು ತೀರ್ಥ-ಯಾತ್ರೆಗೆ ಹೊರಟನು. ಅವನು ತಿರುಗುತ್ತ ವಿಟಗ್ರಾಮಕ್ಕೆ ಬಂದನು. ಅಲ್ಲಿ ಸರಸ್ವತಿ ಎಂಬ ಹೆಸರಿನ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ಜಾನ್ಹವಿಯೆಂಬ ಹೆಸರಿನ ಸುಂದರಿ ಯಾದ ಹೆಂಡತಿಯಿದ್ದಳು. ಬ್ರಾಹ್ಮಣನಿಗೆ ಮಕ್ಕಳು ಬದುಕುತ್ತಿದ್ದಿಲ್ಲ. ಅವನ ಹೆಂಡತಿಯು ಹಡೆದ ಆರು ಜನ ಮಕ್ಕಳು ಹುಟ್ಟಿದ ಹತ್ತು ದಿನಗಳ ಲ್ಲಿಯೇ ಸತ್ತುಹೋಗಿದ್ದವು. ಆದರೆ ಏಳನೆಯ ಶಿಶುವು ಹತ್ತು ದಿನಗಳಲ್ಲಿ ಸಾಯಲಿಲ್ಲ. ಆದ್ದರಿಂದ ಆ ಕೂಸಿನ ತಾಯಿ-ತಂದೆಗಳು ಕೂಸು ಬದುಕಿ ತೆಂದು ತಿಳಿದರು; ಮತ್ತು ಹನ್ನೆರಡನೆಯ ದಿವಸ ತೊಟ್ಟಿಲಲ್ಲಿ ಹಾಕುವ ಸಮಾ ರಂಭವನ್ನು ಮಾಡಿದರು. ಅಂದು ಆ ಬ್ರಾಹ್ಮಣನು ಒಂದು ಸಮಾರಾಧನೆ ಯನ್ನು ಮಾಡಿದನು. ಬ್ರಾಹ್ಮಣ ಸುವಾಸಿನಿಯರು ಊಟಕ್ಕೆ ಬಂದಿದ್ದರು. ಆ ಹೊತ್ತಿಗೆ ರೇವಣನಾಥನು ಅವರ ಮನೆಗೆ ಭಿಕ್ಷೆಗೆ ಹೋದನು. ರೇವಣ ನಾಥನ ದಿವ್ಯಕಾಂತಿಯನ್ನು ನೋಡಿ ಸರಸ್ವತಿ ಬ್ರಾಹ್ಮಣನಿಗೆ ಭಕ್ತಿಯು ಹುಟ್ಟಿತು. ಅವನು ಯಾರೋ ಮಹಾತ್ಮರೆಂದು ತಿಳಿದು ಅವನಿಗೆ ಭಕ್ತಿ ಪೂರ್ವಕವಾಗಿ ನಮಿಸಿ ಊಟಕ್ಕೆ ಬರಲು ಪ್ರಾರ್ಥಿಸಿದನು. ಬ್ರಾಹ್ಮ ಣನ ಭಕ್ತಿಯನ್ನು ನೋಡಿ ರೇವಣನಾಥನು ಊಟಕ್ಕೆ ಕುಳಿತನು. ಸರಸ್ವತೀ ಬ್ರಾಹ್ಮಣನು ರೇವಣನಾಥನ ಎದುರಿಗೆ ಕುಳಿತು ಅವನಿಗೆ ಎಲ್ಲ ಪದಾರ್ಥಗಳನ್ನು ಭಕ್ತಿಯಿಂದ ಹಾಕಿಸಿದನು. ಊಟವಾದ ಬಳಿಕ ರೇವಣ ನಾಥನು ತನ್ನ ಸ್ಥಳಕ್ಕೆ ಹೊರಟನು; ಆದರೆ ಸರಸ್ವತೀ ಬ್ರಾಹ್ಮಣನು ಈ ದಿನ ಇಲ್ಲಿಯೇ ಇದ್ದು, ಮುಂಜಾನೆ ಹೋಗಬೇಕೆಂದು ಬೇಡಿಕೊಂಡನು. ರೇವಣನಾಥನು ಅವನ ಆಗ್ರಹ ಮೀರಲಾರದೆ ಅಲ್ಲಿಯೇ ಉಳಿದನು.

ರಾತ್ರಿಯಲ್ಲಿ ಒಂದು ಏಕಾಂತ ಕೋಣೆಯಲ್ಲಿ ರೇವಣನಾಥನನ್ನು ಮಲಗಿಸಿದರು. ಬ್ರಾಹ್ಮಣನು ಅವನ ಪಾದಸೇವೆ ಮಾಡುತ್ತ ಕುಳಿತನು. ಮಧ್ಯರಾತ್ರಿಯ ಸಮಯವಾಯಿತು. ಜಾನ್ಹವಿಯು ಒಳಗೆ ಮಲಗಿ ಕೊಂಡಿದ್ದಳು. ಆಕೆಯ ಮಗನನ್ನು ಕೊಲ್ಲುವ ಸಟವಿಯು ಬಂದಳು. ಹುಡುಗನು ಕಣ್ಣು ಬೆಳ್ಳಗೆ ಮಾಡಿತು. ಆಗ ಜಾನ್ಹವಿಯು ಗಾಬರಿಯಾಗಿ ಗಂಡನನ್ನು ಒದರಿದಳು. ಆದರೆ ಆತನು ರೇವಣನಾಥನ ಪಾದಸೇವೆಯಲ್ಲಿ ತೊಡಗಿದ್ದರಿಂದ ಅವನು ಒಳಗೆ ಹೋಗದೆ ಅಲ್ಲಿಂದಲೇ ಹೆಂಡತಿಯನ್ನು ಕುರಿತು ನುಡಿದನೇನಂದರೆ:—ದೈವದಲ್ಲಿದ್ದದ್ದು ಆಗುವದು; ಚಿಂತೆ ಮಾಡ ಬೇಡ; ನಾವು ಹಿಂದಿನ ಜನ್ಮದಲ್ಲಿ ಘೋರ ಪಾತಕ ಮಾಡಿರುವೆವು. ಅದರ ಫಲವನ್ನು ಈ ಜನ್ಮದಲ್ಲಿ ಅನುಭವಿಸುವೆವು. ಆದರೆ ಸುಮ್ಮನೆ ಒದರಿ ಈಗ ಈ ಸತ್ಪುರುಷರ ನಿದ್ದೆ ಕೆಡಿಸಬೇಡ. ಇದರಿಂದ ಮತ್ತೆ ನಮಗೆ ಪಾಪಸಂಗ್ರಹ ವಾದೀತು. ''

ಗಂಡನ ಮಾತು ಕೇಳಿ ಜಾನ್ಹವಿಯು ಸುಮ್ಮನಾದಳು. ಮುಂದೆ ಒಂದು ತಾಸಿನ ಮೇಲೆ ಆ ಕೂಸು ಸತ್ತಿತು. ಜಾನ್ಹವಿಯು ಅಳಲಾರಂಭಿ ಸಿದಳು. ಆದರೂ ಆ ಬ್ರಾಹ್ಮಣನು ಆ ಸ್ಥಳವನ್ನು ಬಿಟ್ಟು ಏಳಲಿಲ್ಲ. ಬೆಳ ಗಾಯಿತು. ರೇವಣನಾಥನು ಎದ್ದು ಕುಳಿತನು; ಒಳಗೆ ಅಳುವ ಸಪ್ಪಳವು ಕೇಳಲು, ಅದು ಏನೆಂದು ಕೇಳಿದನು. ಆಗ ಬ್ರಾಹ್ಮಣನು ಕೂಸಿಗೆ ಜಡ್ಡು ಆಗಿರುವದರಿಂದ ಹೆಂಡತಿಯು ಅಳುವಳೆಂದು ಹೇಳಿದನು. ಆಗ ನಾಥನು ಆ ಕೂಸನ್ನು ಹೊರಗೆ ತರಲು ಹೇಳಿದನು. ಬ್ರಾಹ್ಮಣನು ಒಳಗೆ ಹೋಗಲು, ಕೂಸು ಸತ್ತ ಸಂಗತಿಯು ಅವನಿಗೆ ಗೊತ್ತಾಯಿತು. ಇದನ್ನು ಕೇಳಿ ರೇವಣ ನಾಥನು:—ಕೂಸು ಸತ್ತಿತೋ? ದತ್ತಗುರುಗಳ ಶಿಷ್ಯನಾದ ನಾನು ಈ ಮನೆಯಲ್ಲಿ ಮಲಗಿರಲು, ಯಮನ ಪ್ರವೇಶವು ಹ್ಯಾಗೆ ಆಯಿತು? ಎಂದು ನುಡಿದು ಬ್ರಾಹ್ಮಣನನ್ನು ಕುರಿತು:—ಬ್ರಾಹ್ಮಣನೇ, ನೀನು ಚಿಂತೆಮಾಡ ಬೇಡ; ನಿನಗೆ ಮತ್ತೆ ಮಕ್ಕಳಿರುವರೋ ಹ್ಯಾಗೆಂದು ಕೇಳಿದನು. ಬ್ರಾಹ್ಮ ಣನು ತನ್ನ ಆರು ಮಕ್ಕಳೂ ಸತ್ತದ್ದನ್ನು ಹೇಳಲು, ರೇವಣನಾಥನು:—ಈ ಕೂಸನ್ನು ಹಾಗೇ ಇಡಿರಿ; ನಾನು ಯಮಲೋಕಕ್ಕೆ ಹೋಗಿ ನಿಮ್ಮ ಏಳೂ ಮಕ್ಕಳನ್ನು ತಕ್ಕೊಂಡು ಬರುವೆನು. ಕೊಡದಿದ್ದರೆ ಯಮಲೋಕವನ್ನು

ಸುಡುವೆನು. ಮೂರು ದಿನಗಳವರೆಗೆ ಈ ಕೂಸನ್ನು ಹಾಗೇ ಇಡಿರಿ. ಎಂದು ಆ ಕೂಸಿಗೆ ವಿಭೂತಿಯನ್ನು ಅಭಿಮಂತ್ರಿಸಿ ಹಚ್ಚಿ ನಾಥನು ವ್ಯಾನಾಸ್ತ್ರವನ್ನು ಜಪಿಸಿ ಯಮಲೋಕಕ್ಕೆ ಹೊರಟುಹೋದನು.

ರೇವಣನಾಥನು ಬಂದದ್ದನ್ನು ಕಂಡು ಯಮನು ಬಹಳ ಮನ್ನಣೆ ಮಾಡಿ ಏನು ಕಾರಣ ಬರೋಣವಾಯಿತೆಂದು ಕೇಳಿದನು. ಆಗ ರೇವಣನಾಥನು ನಾನು ಸರಸ್ವತೀನಾಮಕ ಬ್ರಾಹ್ಮಣನ ಮನೆಯಲ್ಲಿ ಮಲಗಿರಲು, ನೀನು ಆವನ ಮಗನನ್ನು ಹ್ಯಾಗೆ ಸಂಹರಿಸಿದೆ? ಎಂದು ಗದ್ದರಿಸಿ, ಆ ಕೂಸು ಕೊಡುವದಲ್ಲದೆ, ಆವನ ಆರೂ ಜನ ಮಕ್ಕಳನ್ನು ಕೊಡಬೇಕೆಂದು ನುಡಿದನು, ಯಮನು ಯುಕ್ತಿಯಿಂದ ಇವನನ್ನು ದಾಟಿಹಾಕಬೇಕೆಂದು ಹಂಚಿಕೆ ಮಾಡಿ:—ಸ್ವಾಮಿ, ನಾನು ಲಯಕರ್ತನ ದಾಸನು. ನೀವು ಕೇಳುವ ಹುಡುಗರ ವಿಷಯವಾಗಿ ಶಂಕರನನ್ನು ಕೇಳಬೇಕು. ನಾನು ಅವನು ಹೇಳಿದಷ್ಟು ಮಾಡುವೆನು. ಹೆಚ್ಚಿಗೆ ನನ್ನ ಕೈಯಲ್ಲಿ ಏನು ಅಧಿಕಾರವಿದೆ? ಎಂದು ನುಡಿದನು.

---

# ಅಧ್ಯಾಯ ೩೮

## ವಟಸಿದ್ಧ ನಾಗನಾಥನ ವೃತ್ತ.

ಯಮಧರ್ಮನು ವಿನಯದಿಂದ ಹೇಳಿದ ಮಾತನ್ನು ಕೇಳಿ ಶಂಕರನನ್ನು ಕಂಡುಕೊಳ್ಳುವದಕ್ಕಾಗಿ ರೇವಣನಾಥನು ಕೈಲಾಸಕ್ಕೆ ಹೋದನು. ವ್ಯಾನ ಅಸ್ತ್ರದ ಸಹಾಯದಿಂದ ಕೈಲಾಸಕ್ಕೆ ಸ್ವಲ್ಪಕಾಲದಲ್ಲಿ ಮುಟ್ಟಿದನು. ಸಹಸ್ರ ಸೂರ್ಯನಂತೆ ತೋರುವ ರೇವಣನನ್ನು ನೋಡಿ ಶಿವಗಣಗಳ ನೇತ್ರಗಳು ಮಿಂಚಿದವು. ಗಣಗಳು ದಿಟ್ಟತನದಿಂದ:—ರೇವಣನಾಥನಿಗೆ ಬಂದ ಕಾರಣವನ್ನು ವಿಚಾರಿಸಿದರು. ತಾನು ಶಂಕರನ ಭೆಟ್ಟಿಗಾಗಿ ಬಂದಿರುವೆನೆಂದು ಹೇಳಿದನು. ಮತ್ತೆ ಶಿವಗಣಗಳು ಶಂಕರನನ್ನು ಭೆಟ್ಟಿಯಾಗುವ

ಕಾರಣವೇನೆಂದು ಕೇಳಲು, ರೇವಣನಾಥನು:—" ಸರಸ್ವತಿ ಎಂಬ ಬ್ರಾಹ್ಮಣನ ಹುಡುಗನನ್ನು ಶಂಕರನು ಕದ್ದುಕೊಂಡು ಬಂದಿರುವನು. ಆದ್ದರಿಂದ ಆ ಚೋರನನ್ನು ಶಿಕ್ಷಿಸಿ ಆ ಹುಡುಗನನ್ನು ತೆಗೆದುಕೊಂಡು ಹೋಗಬೇಕಾಗಿದೆ." ಎಂದನು. ರೇವಣನ ಉದ್ಧಟತನದ ಮಾತುಗಳನ್ನು ಕೇಳಿ ಶಿವಗಣಗಳು:—ಬಾವಾಜೀ, ನೀನಾಡುವ ಉದ್ಧಟತನದ ಮಾತನ್ನು ವಿಚಾರಿಸಲು ನೀವು ಗಂಧರ್ವರ ಶಿಷ್ಯರಿರಲಿಕ್ಕೆಬೇಕು. ಗಂಧರ್ವರ ಪರಾಕ್ರಮವನ್ನು ನಾವು ಅರಿತಿದ್ದೇವೆ. ಗಂಧರ್ವರ ಪರಾಕ್ರಮದ ಜಂಭವನ್ನು ಗಂಧರ್ವಲೋಕದಲ್ಲಿಯೇ ತೋರಿಸತಕ್ಕದ್ದು; ಈ ಶಿವಲೋಕದಲ್ಲಿ ನಡೆಯಲಾರದು. ನೀವು ಇಲ್ಲಿಂದ ಸುಮ್ಮನೆ ಹೊರಟು ಹೋಗಿರಿ, ಎಂದರು.

ಗಣಗಳ ಮಾತನ್ನು ಕೇಳಿ ರೇವಣನಾಥನು ಸಂತಪ್ತನಾದನು. ನಾನು ಯಾರ ಶಿಷ್ಯನಿರುವೆನೆಂಬದನ್ನು ನಿಮಗೆ ಈಗ ತೋರಿಸುತ್ತೇನೆ; ಹೀಗೆಂದು ನುಡಿದು ನಾಥನು ಸ್ಪರ್ಶ ಅಸ್ತ್ರದ ಜಪವನ್ನು ಮಾಡಿ ಅವರ ಮೇಲೆ ವಿಭೂತಿಯನ್ನು ತೂರಿದನು. ಅದರ ಯೋಗದಿಂದ ಶಂಕರನ ಹದಿಮೂರುನೂರು ಗಣಗಳು ಭೂಮಿಗೆ ಅಂಟಿಕೊಂಡರು. ಅವರು ತಮ್ಮ ಕೈ-ಕಾಲುಗಳನ್ನು ಚಲಿಸುವದಕ್ಕಾಗಿ ಎಷ್ಟು ಪ್ರಯತ್ನ ಮಾಡಿದರೂ ಅದರಿಂದ ಉಪಯೋಗವಾಗಲಿಲ್ಲ. ಇದನ್ನು ಕಂಡು ನಾಥನು ಶಿವಗಣಗಳಿಗೆ:—ಈಗ ನಾನು ಯಾರ ಶಿಷ್ಯನಿರುವೆನೆಂಬದು ನಿಮಗೆ ಗೊತ್ತಾಗಿದ್ದರೆ ಹೇಳಿರಿ; ಎಂದನು. ಅದಕ್ಕೆ ಗಣಗಳು ಏನೂ ಉತ್ತರವನ್ನು ಕೊಡಲಿಲ್ಲ. ಗಣಗಳ ಮೇಲೆ ಭಯಂಕರ ಪ್ರಸಂಗವು ಒದಗಿದ್ದು ಶಂಕರನಿಗೆ ಗೊತ್ತಾಯಿತು. ನಾಥನಿಂದಾದ ವಿಪರೀತ ಕೆಲಸವನ್ನು ಕಂಡು ಶಂಕರನು ನಾಥನ್ನು ಶಿಕ್ಷಿಸುವದಕ್ಕಾಗಿ ಭೈರವರ ಯೋಜನೆಯನ್ನು ಮಾಡಿದನು. ಶಂಕರನ ಆಜ್ಞೆಯಮೇರೆಗೆ ಎಂಟು ಮಂದಿ ಭೈರವರು ಮತ್ತು ಶತಕೋಟಿ ಶಿವಗಣಗಳು ಪ್ರಾಪ್ತರಾದರು. ಮತ್ತು ತಮ್ಮ ಬಾಣಕ್ಕೆ ಅಸ್ತ್ರವನ್ನು ಹೂಡಿದರು. ನಾಥನು ಚಪಲತನದಿಂದ ಸ್ಪರ್ಶ ಅಸ್ತ್ರವನ್ನು ಜಪಿಸಿ ಬಿಡಲು, ಸರ್ವಗಣಗಳ ಸ್ಥಿತಿಯೂ ಮೊದಲಿನಂತೆ ಆಯಿತು. ಭೈರವರು ಮಾತ್ರ ಆ ಅಸ್ತ್ರವನ್ನು ಲೆಕ್ಕಿಸಲಿಲ್ಲ. ಅವರು ನಾಥನ ಮೇಲೆ ತೀವ್ರವಾಗಿ ಅಸ್ತ್ರಗಳನ್ನು ಬಿಡಲಿಕ್ಕೆ ಪ್ರಾರಂಭಿಸಿದರು. ವಾತ, ಅಗ್ನಿ, ನಾಗ, ಧೂಮ್ರ, ದಾನವ, ಬ್ರಹ್ಮ, ವಜ್ರ, ವಿಭಕ್ತ ಈ ಪ್ರಕಾರ ಎಂಟು ಅಸ್ತ್ರಗಳನ್ನು ಎಂಟು ಮಂದಿ ಭೈರವರು ಬಿಟ್ಟರು.

ಭೈರವರ ಅಸ್ತ್ರಗಳನ್ನು ನೋಡಿ ನಾಥನು ಮಂತ್ರಬಲದಿಂದ ಎಂಟೂ ಅಸ್ತ್ರಗಳನ್ನು ಹಾರಿಸಿಬಿಟ್ಟು ಪರ್ವತ, ಜಲ, ಗರುಡ, ಆದಿತ್ಯ, ಕಾಲಿಕಾ, ಸ್ತವನ, ಶಕ್ರ ಮತ್ತು ಮೋಹನ ಎಂಬ ಎಂಟು ಅಸ್ತ್ರಗಳನ್ನು ಬಿಟ್ಟ ಕೂಡಲೆ ಭೈರವರು ಜರ್ಜರರಾದರು. ಈ ಸಂಗತಿಯು ಶಂಕರನಿಗೆ ಗೊತ್ತಾಗಲು ತ್ರಿಶೂಲ, ಡಮರು, ಚಕ್ರ, ಖಡ್ಗ, ಅಂಕುಶ ಇತ್ಯಾದಿ ಆಯುಧಗಳನ್ನು ಧರಿಸಿ ಸ್ವತಃ ತಾನೇ ನಂದಿಯಮೇಲೆ ಹತ್ತಿ ನಾಥನ ಸಮಾಚಾರಕ್ಕಾಗಿ ಹೊರಟನು. ಬಹಳ ಕ್ರುದ್ಧನಾದ ಶಂಕರನನ್ನು ಕಂಡು ರೇವಣನಾಥನು ಈ ಯುದ್ಧವನ್ನು ಬಹಳ ಬೆಳೆಸುವದು ಉಪಯೋಗದ್ದಲ್ಲವೆಂದು ತಿಳಿದು ವಾತಾಕರ್ಷಣವೆಂಬ ನಿರ್ವಾಣಾಸ್ತ್ರವನ್ನು ಜಪಿಸಿದನು. ಅದರ ಯೋಗದಿಂದ ಶಂಕರನಿಗೆ ಶಕ್ತಿಗುಂದಿ ಕೈಯೊಳಗಿನ ಆಯುಧಗಳು ಕಳಚಿ ಬಿದ್ದವು. ಮತ್ತು ಶಂಕರನ ಶ್ವಾಸವು ಕುಂಠಿಸಿತು. ಉಮಾಪತಿಯು ಶಕ್ತಿಗುಂದಿ ನಂದಿಯ ಮೇಲಿಂದ ಭೂಮಿಗೆ ಬಿದ್ದನು. ಬಾಯೊಳಗಿಂದ ರಕ್ತವು ಹರಿಯಹತ್ತಿತು. ಎಂಟೂ ಮಂದಿ ಭೈರವರು ಜರ್ಜರರಾಗಿ ಕೆಳಗೆ ಬಿದ್ದರು. ಎಲ್ಲ ಭೈರವರು ಮೂರ್ಛಿತರಾಗಿ ಬಿದ್ದ ಕೂಡಲೆ ನಾಥನ ಅಸ್ತ್ರವು ಗುಪ್ತವಾಯಿತು. ಅಂತರಿಕ್ಷದೊಳಗೆ ವಿಮಾನದಲ್ಲಿ ಕುಳಿತು ನೋಡುತ್ತಿದ್ದ ದೇವತೆಗಳು ಇದನ್ನೆಲ್ಲ ನೋಡಿ ವೈಕುಂಠಲೋಕಕ್ಕೆ ಹೋಗಿ ಶ್ರೀ ವಿಷ್ಣುವಿಗೆ ಈ ಸಂಗತಿಯನ್ನು ತಿಳಿಸಿದರು. ಶಂಕರನ ಮೇಲೆ ಒದಗಿದ ಕಠಿಣ ಸಮಯವನ್ನು ಕೇಳಿ ಶ್ರೀವಿಷ್ಣುವು ವಾಯುವೇಗದಿಂದ ಕೈಲಾಸಕ್ಕೆ ಬಂದನು. ರೇವಣನಾಥನನ್ನು ಕಂಡು ಆತನಿಗೆ ಆಲಿಂಗನವನ್ನು ಕೊಟ್ಟನು. ಮತ್ತು ಇದೇನೆಂದು ವಿಚಾರಿಸಿದನು. ನಾಥನು ದಿಟ್ಟತನದಿಂದ—ನಾನು ಸರಸ್ವತಿ ಎಂಬ ಬ್ರಾಹ್ಮಣನ ಮನೆಯಲ್ಲಿ ಇರುತ್ತಿರಲಾಗಿ ಶಂಕರನು ಯಮನ ಕಡೆಯಿಂದ ಆ ಬ್ರಾಹ್ಮಣ ಪುತ್ರನ ಪ್ರಾಣವನ್ನು ಹರಣ ಮಾಡಿಸಿರುವನು. ಆದಕ್ಕಾಗಿ ನಾನು ಶ್ರೀ ಶಂಕರನ ಪ್ರಾಣವನ್ನು ಹರಣ ಮಾಡುವೆನು. ಮತ್ತು ಸಂಜೀವಿನೀ ವಿದ್ಯೆಯಿಂದ ಆ ಬ್ರಾಹ್ಮಣನ ಪುತ್ರರನ್ನು ಎಬ್ಬಿಸುವೆನು! ಶಂಕರನ ಪ್ರಾಣವು ಉಳಿಯಬೇಕೆಂಬ ಇಚ್ಛೆ ಇದ್ದರೆ ಆ ಸರಸ್ವತಿ ಬ್ರಾಹ್ಮಣನ ಏಳು ಜನ ಪುತ್ರರನ್ನು ನನ್ನ ಸ್ವಾಧೀನಗೊಳಿಸಬೇಕು ಎಂದನು.

ನಾಥನ ಈ ಮಾತುಗಳನ್ನು ಭಗವಾನ್ ವಿಷ್ಣುವು ಕೇಳಿ—ಆ ಬ್ರಾಹ್ಮಣನ ಏಳೂ ಜನ ಮಕ್ಕಳು ಜೀವದೆಶೆಯಲ್ಲಿ ನನ್ನ ಬಳಿಯಲ್ಲಿರುವರು. ಅವರನ್ನು ನಿನ್ನ ಸ್ವಾಧೀನ ಮಾಡುತ್ತೇನೆ. ಆ ಜೀವಗಳನ್ನು ನಿನ್ನ ಸ್ವಾಧೀನ ಪಡಿಸಿಕೊಂಡು ಅವರ ದೇಹಗಳನ್ನು ಮಾತ್ರ ನಿನ್ನ ಸಾಮರ್ಥ್ಯದಿಂದ ನಿರ್ಮಾಣಮಾಡು.

ಶ್ರೀ ವಿಷ್ಣುವಿನ ಈ ಮಾತು ನಾಥನಿಗೆ ಸರಿದೋರಿತು. ಅವನು ಕೂಡಲೆ ವಾತಪ್ರೇರಕ ಅಸ್ತ್ರದ ಜಪವನ್ನುಮಾಡಿ ಶಂಕರನನ್ನು ಎಚ್ಚರಗೊಳಿಸಿದನು. ವಿಭಕ್ತ ಅಸ್ತ್ರವನ್ನು ತೆಗೆದು, ಎಲ್ಲ ಗಣಗಳನ್ನೂ ಮುಕ್ತ ಮಾಡಿದನು. ಸ್ಥಿತಿಮಂತ್ರದಿಂದ ತುಂಬಿದ ವಿಭೂತಿಯನ್ನು ಭೈರವರ ಹಣೆಗೆ ಸವರಲು, ಅವರೂ ಎಚ್ಚರಾದರು. ಎಲ್ಲರೂ ಜಾಗೃತರಾಗಿ ಯೋಗಪತಿ ರೇವಣಸಿದ್ಧನಿಗೆ ನಮಸ್ಕಾರವನ್ನು ಮಾಡಿದರು. ವಿಷ್ಣುವು ಏಳು ಜೀವಗಳನ್ನು ರೇವಣನಿಗೆ ಒಪ್ಪಿಸಿದನು.

ಬಳಿಕ ರೇವಣನು ಸರಸ್ವತಿಯ ಮನೆಗೆ ಬಂದು ಹೇಳಿದ್ದೇನಂದರೆ:— “ನಿನ್ನ ಮೃತಪುತ್ರನ ದೇಹವನ್ನು ಕುಟ್ಟಿ ಮೇಣದಂತೆ ಮಾಡು.” ರೇವಣನ ಆಜ್ಞೆಯಮೇರೆಗೆ ಆ ಬ್ರಾಹ್ಮಣನು ಆ ಪ್ರೇತವನ್ನು ಕುಟ್ಟಿ ಮೇಣದಂತೆ ಮಾಡಿದನು. ನಾಥನು ಏಳು ಭಾಗಗಳನ್ನು ಮಾಡಿ, ಏಳು ಸಣ್ಣ ಸಣ್ಣ ಗೊಂಬೆಗಳನ್ನು ಮಾಡಿದನು. ಮತ್ತು ಅವುಗಳ ಮೇಲೆ ಸಂಜೀವಿನೀ ವಿದ್ಯೆಯ ಪ್ರಯೋಗವನ್ನು ಮಾಡಿ ಅವುಗಳಲ್ಲಿ ಆ ಏಳೂ ಜೀವಗಳನ್ನು ಹಾಕಿದನು. ಅದರ ಯೋಗದಿಂದ ಆ ಏಳೂ ಹುಡುಗರು ಅಳಹತ್ತಿದರು. ನಾಥನು ಆ ಹುಡುಗರನ್ನು ಜಾನ್ಹವಿಯ ಉಡಿಯಲ್ಲಿ ಹಾಕಿ ಪಾಲನ ಮಾಡಲಿಕ್ಕೆ ಹೇಳಿದನು. ಹನ್ನೆರಡು ದಿವಸಗಳು ಆಗಲು, ಅವರೆಲ್ಲರಿಗೆ ನಾಮಕರಣವು ಮಾಡಲ್ಪಟ್ಟಿತು; ಸಾರಂಗೀನಾಥ, ಜೋಗೀನಾಥ, ದೀನಾನಾಥ, ನಯನನಾಥ, ಯದುನಾಥ, ನಿರಂಜನನಾಥ, ಗಹಿನೀನಾಥ ಹೀಗೆ ಹೆಸರುಗಳನ್ನು ಇಟ್ಟರು. ಆ ಏಳೂ ಪುತ್ರರು ಮುಂದೆ ಸಿದ್ಧರೆಂಬ ಹೆಸರಿನಿಂದ ಪ್ರಖ್ಯಾತರಾದರು. ಅವರೆಲ್ಲರಿಗೆ ಹನ್ನೆರಡು ವರ್ಷಗಳು ಆಗಲು, ರೇವಣನಾಥನು ಅವರನ್ನು ಅನುಗ್ರಹಿಸಿದನು. ರೇವಣನ ಕೃಪೆಯಿಂದ ಅವರು ವಿದ್ಯೆಯಲ್ಲಿ ನಿಪುಣರಾದರು. ರೇವಣನು ಅವರಿಂದ ಸೇವೆಯನ್ನು ತೆಗೆದುಕೊಳ್ಳುತ್ತ ಆ ವೀಟಗ್ರಾಮದಲ್ಲಿಯೇ ಶಾಶ್ವತವಾಗಿ ನಿಂತುಕೊಂಡನು.

ಬ್ರಹ್ಮದೇವನು ಅತ್ಯಂತ ಕೃಪೆಯಿಂದ ಒಂದು ಸರ್ಪಿಣಿಯನ್ನು ಅನುಗ್ರಹಿಸಿದನು. ವಿಧಿಯ ವರಪ್ರಸಾದದಿಂದ ಆ ಸರ್ಪಿಣಿಯು ಗರ್ಭವತಿಯಾದಳು. ಆ ಗರ್ಭವು ಬೆಳೆಯುಹತ್ತಲು, ಅದು ಆಸ್ತೀಕಮುನಿಗಳಿಗೆ ಗೊತ್ತಾಯಿತು. ಆ ಗರ್ಭದಲ್ಲಿ ಯಾವನಾದರೂ ಮಹಾಪುರುಷನು ವಾಸವಾಗಿರಲಿಕ್ಕೆ ಬೇಕೆಂದು ಆಸ್ತೀಕಋಷಿಯು ಅಂತರ್ಜ್ಞಾನದಿಂದ ತಿಳಿದನು. ಮತ್ತು ಸರ್ಪಿಣಿಯನ್ನು ಹತ್ತರ ಕರೆದು:—"ನಿನ್ನ ಉದರದಲ್ಲಿ ಅವಿಹೋತ್ರನೆಂಬ ಹೆಸರಿನ ನಾರಾಯಣನು ಜನ್ಮವನ್ನು ಎತ್ತತಕ್ಕವನಿದ್ದಾನೆ. ನೀನು ಗರ್ಭವನ್ನು ಚನ್ನಾಗಿ ಸಂಗೋಪನೆ ಮಾಡು. ನಿನಗೆ ಹೀಗೆ ಹೇಳತಕ್ಕ ಕಾರಣವೇನಂದರೆ:—ಜನಮೇಜಯರಾಯನು ಸರ್ಪಸತ್ರದಲ್ಲಿ ಅಸಂಖ್ಯಾಕವಾದ ಸರ್ಪಗಳ ಹೋಮವನ್ನು ಮಾಡುತ್ತಾನೆ. ಋಷಿಗಳ ಮಂತ್ರಶಕ್ತಿಯಿಂದ ಇತರ ಸರ್ಪಗಳೊಡನೆ ನೀನು ಆ ಯಜ್ಞಕುಂಡದಲ್ಲಿ ಹೋಗಿ ಬಿದ್ದರೆ, ನೀನು ನಾಶವಾಗುವಿಯಲ್ಲದೆ ನಿನ್ನ ಹೊಟ್ಟೆಯೊಳಗೆ ಇರುವ ಸಿದ್ಧಪುರುಷನೂ ನಾಶವಾಗುವನು. ಆದ್ದರಿಂದ ನೀನು ಸುರಕ್ಷಿತವಾದ ಸ್ಥಳದಲ್ಲಿ ವಾಸಮಾಡು."

ಇದನ್ನು ಕೇಳಿ ಸರ್ಪಿಣಿಯು ಹೆದರಿದಳು. ಅವಳು ಆಸ್ತಿಕಮುನಿಯನ್ನು ವಂದಿಸಿ ತಾನು ಸಂರಕ್ಷಣೆಯಾಗುವ ಬಗೆಯನ್ನು ಕೇಳಿದಳು. ಆಸ್ತಿಕನು ಅವಳಿಗೆ ಒಂದು ವಿಸ್ತೀರ್ಣವಾದ ವಟವೃಕ್ಷದ ಹೊದರಿನಲ್ಲಿ ಸೇರಲಿಕ್ಕೆ ಹೇಳಿದನು. ಯಜ್ಞಕುಂಡದಲ್ಲಿ ಆಹುತಿ ಹಾಕಲಿಕ್ಕೆ ಉಚ್ಚರಿಸುವ ಋಷಿಗಳ ಮಂತ್ರಶಕ್ತಿಯು ಆ ವೃಕ್ಷದ ಮೇಲೆ ನಾಟಬಾರದೆಂದು ಆಸಿಕ್ತನು ಆ ಗಿಡದ ಸುತ್ತುಮುತ್ತು ವಜ್ರಾಸ್ತ್ರವನ್ನು ನಿರ್ಮಿಸಿದನು. ಬಳಿಕ ಆ ಮುನಿಯು ಸರ್ಪಸತ್ರವನ್ನು ಮಾಡಿಸುವ ಋಷಿಯ ಕಡೆಗೆ ಹೋಗಿ ಅವನಿಗೆ ಸರ್ಪಿಣಿಯ ವೃತ್ತಾಂತವನ್ನು ಹೇಳಿದನು. ಆಸ್ತಿಕನ ಆಗ್ರಹದಿಂದ ಅವನು ವಟವೃಕ್ಷದ ಮೇಲಿರುವ ಸರ್ಪಿಣಿಯ ಮೇಲೆ ಮಂತ್ರಪ್ರಯೋಗವನ್ನು ಮಾಡಲಿಲ್ಲ.

ಆ ಸರ್ಪಿಣಿಯ ಹೆಸರು ಪದ್ಮಿಣಿ ಎಂಬದಾಗಿತ್ತು. ಅವಳು ತಕ್ಷಕನ ಕನ್ಯೆಯಾಗಿದ್ದನು. ಅವಳಿಗೆ ನವಮಾಸವು ಪೂರ್ಣವಾದ ಕೂಡಲೆ ಆ ವಟವೃಕ್ಷದ ಹೊದರಿನಲ್ಲಿ ಒಂದು ತತ್ತಿಯನ್ನು ಹಾಕಿದಳು. ಆ ತತ್ತಿ

ಯಲ್ಲಿಯೇ ಪರಮಾತ್ಮನಾದ ಅವಿಹೋತ್ರ ನಾರಾಯಣನು ಪ್ರವೇಶಮಾಡಿ ದನು. ಕೆಲವು ಕಾಲದ ನಂತರ ಆ ಶಕ್ತಿಯು ಒಡೆದು ಒಬ್ಬ ಬಾಲಕನು ಉತ್ಪನ್ನನಾದನು. ಮತ್ತು ಆ ಹೋರಿನಲ್ಲಿಯೇ ರೋದನ ಮಾಡಹತ್ತಿ ದನು. ಶಕ್ತಿಯನ್ನು ಹಾಕಿದ ಕೂಡಲೆ ಆ ಪದ್ಮಿಣಿಯು ಪಾತಾಳಲೋ-ಕಕ್ಕೆ ಹೊರಟು ಹೋಗಿದ್ದಳು. ಆದ್ದರಿಂದ ಆ ಬಾಲಕನ ರಕ್ಷಣ ಮಾಡ ಲಿಕ್ಕೆ ಯಾರೂ ಇಲ್ಲದಂತಾಯಿತು. ನೀರೊಳಗಿನ ಮೀನವು ಕಡೆಗೆ ಬಂದರೆ ಜಡಪಡಿಸುವಂತೆ ಆ ಬಾಲಕನು ಹೊದರಿನಲ್ಲಿ ಜಡಪಡಿಸಹತ್ತಿದನು. ಈ ಮೇರೆಗೆ ಆ ಬಾಲಕನು ಅಟ್ಟಹಾಸದಿಂದ ಅಳುತ್ತಿರಲು ಅಲ್ಲಿಗೆ ಕೋಶಧರ್ಮ ನೆಂಬ ಹೆಸರಿನ ಒಬ್ಬ ಪವಿತ್ರ ಬ್ರಾಹ್ಮಣನು ಎಲದ ಎಲೆಗಾಗಿ ಅಲ್ಲಿಗೆ ಪ್ರಾಪ್ತನಾದನು. ಅವನು ಗೌಡಬ್ರಾಹ್ಮಣನಿದ್ದು ಅಥರ್ವಣವೇದವನ್ನು ಪಠಿಸುತ್ತಿದ್ದನು. ಅವನು ದರಿದ್ರನಾಗಿದ್ದನು. ಎಲೆಗಳನ್ನು ಹರಿಯುವ ಉದ್ದೇಶದಿಂದ ಆ ಬ್ರಾಹ್ಮಣನು ಗಿಡದ ಬುಡಕ್ಕೆ ಬರಲು ಅವನಿಗೆ ಮಂಜು ಳವಾದ ರೋದನಸ್ವರವು ಕೇಳಬಂತು. ಬ್ರಾಹ್ಮಣನು ಸ್ವರವು ಕೇಳಬರುವ ಸ್ಥಳವನ್ನು ಶೋಧಿಸುವದಕ್ಕಾಗಿ ಅತ್ತಿತ್ತ ನೋಡಹತ್ತಿದನು. ಆದರೂ ಗೊತ್ತಾಗಲಿಲ್ಲ. ಕಡೆಗೆ ಅವನು ಸಂಶಯಗ್ರಸ್ತನಾಗಿ ಗಿಡದ ಬುಡದಲ್ಲಿ ಹುಚ್ಚನಂತೆ ನಿಂತುಕೊಂಡನು. ಅದನ್ನು ಕಂಡು ಸ್ವರ್ಗದೊಳಗಿನ ದೇವ ಗಣಗಳು ಅವನಿಗೆ ಹೇಳಿದ್ದೇನಂದರೆ—"ಹೇ ಸತ್ಪಾತ್ರ ಬ್ರಾಹ್ಮಣನೇ ಯಾವ ಕಡೆಗೆ ಶೋಧಮಾಡುತ್ತೀ, ಆ ಗಿಡದಲ್ಲಿಯೇ ದಿವ್ಯವಾದ ಬಾಲಕನ ರೂಪದಿಂದ ನಾರಾಯಣನು ಉತ್ಪನ್ನನಾಗಿದ್ದಾನೆ. ನಾವು ಆ ಬಾಲಕ ನನ್ನು ಕಡೆಗೆ ತಂದುಕೊಡುತ್ತೇವೆ ನೀನು ಆ ಬಾಲಕನನ್ನು ಮನೆಗೆಒಯ್ದು ಚನ್ನಾಗಿ ಸಂರಕ್ಷಣೆ ಮಾಡು. ಆ ಬಾಲಕನಿಂದ ನಿನ್ನ ಭಾಗ್ಯೋದಯ ವಾಗುವದು. ಆ ಬಾಲಕನು ನಿನ್ನ ಪಾಮರತ್ವವನ್ನು ಹೋಗಲಾಡಿಸು ವನು. ಪರಿಸವು ಕಬ್ಬಿಣಕ್ಕೆ ಹತ್ತಲು ಕೂಡಲೆ ಅದು ಸುವರ್ಣತ್ವವನ್ನು ಹೊಂದುವಂತೆ ಈ ಬಾಲಕನಿಂದ ನೀನು ಪವಿತ್ರನಾಗುವಿ. ಈ ಬಾಲಕನು ಸಾಮಾನ್ಯ ಮನುಷ್ಯರಂತೆ ಇರದೆ ಸಾಕ್ಷಾತ್ ಅವಿಹೋತ್ರ ನಾರಾಯಣ ನೇ ಈ ರೂಪದಿಂದ ಭೂಲೋಕಕ್ಕೆ ಅವತರಿಸಿದ್ದಾನೆ" ಹೀಗೆ ನುಡಿದು ದೇವತೆಗಳು ಆ ಗಿಡಕ್ಕೆ ಒಂದು ಬಾಣವನ್ನು ಬಿಟ್ಟರು. ಆ ಬಾಣದ

ಪೆಟ್ಟಿನಿಂದ ಆ ಗಿಡವು ಮುರಿದು ಬಿದ್ದು ಅವರೊಳಗಿಂದ ಆ ಬಾಲಕನು ಹೊರಬಿದ್ದನು.

ಆಗ ಕೋಶಧರ್ಮನು ಆನಂದದಿಂದ ಆ ಬಾಲಕನನ್ನು ಎತ್ತಿಕೊಂಡು ಮನೆಗೆ ಹೋಗಿ ತನ್ನ ಹೆಂಡತಿಯ ಕೈಯಲ್ಲಿ ಕೊಟ್ಟನು.

ಆ ಬ್ರಾಹ್ಮಣನ ಪತ್ನಿಯ ಹೆಸರು ಸುರಾದೇವಿ ಎಂದು ಇತ್ತು. ಅವಳು ಸುಶೀಲಳೂ ಬುದ್ಧಿವಂತಳೂ ಇದ್ದಳು. ಧೈರ್ಯ, ಔದಾರ್ಯ, ಸತ್ಯ ಈ ಗುಣಗಳಿಂದ ಅವಳು ಮಂಡಿತಳಾಗಿದ್ದಳು. ಅವಳಿಗೆ ಆ ದಿವ್ಯ ಬಾಲಕನನ್ನು ಕಂಡು ಹರ್ಷವಾಯಿತು. ಈ ಬಾಲಕನು ಸಾಮಾನ್ಯನಿರದೆ ಸಾಕ್ಷಾತ್ ಸೂರ್ಯನೇ ಈ ಹುಡುಗನ ರೂಪದಿಂದ ಬಂದಿರುವನೆಂದು ತಿಳಿದಳು. ಅವಳು ತನ್ನ ಪತಿಯಿಂದ ಎಲ್ಲ ಸಂಗತಿಗಳನ್ನು ತಿಳಿದು ಆ ಹುಡುಗನನ್ನು ತೊಟ್ಟಿಲದಲ್ಲಿ ಮಲಗಿಸಿ ತೂಗಹತ್ತಿದಳು. ಕೆಲಹೊತ್ತಿನ ಮೇಲೆ ಆ ಕೂಸಿಗೆ ಎರೆದು ಮೊಲೆಯುಣಿಸಿ ಪುನಃ ತೊಟ್ಟಿಲಲ್ಲಿ ಮಲಗಿಸಿದಳು. ಮತ್ತು ಆ ಕೂಸಿಗೆ ನಾಗನಾಥನೆಂಬ ಹೆಸರನ್ನಿಟ್ಟಳು.

ಸುರಾದೇವಿಗೆ ನಾಗನಾಥನಲ್ಲಿ ಮಿತಿಮೀರಿದ ಪ್ರೇಮವು ಉಂಟಾಯಿತು. ಅವಳು ಆ ಕೂಸಿನ ಮೇಲೆ ಪಂಚಪ್ರಾಣ ಮಾಡಹತ್ತಿದಳು. ಅವಳಲ್ಲಿ ಪುತ್ರನ ಒಗ್ಗೆ ಭೇದಬುದ್ಧಿ ಇದ್ದಿಲ್ಲ. ಸೂರ್ಯನ ಮನೆಯಲ್ಲಿ ಕತ್ತಲೆಯು ಹೇಗೆ ಇರಲಾರದೋ ಅಥವಾ ಕಾಮಧೇನುವಿನ ಕೆಚ್ಚಲದೊಳಗೆ ಕ್ಷುಧೆಯು ಹೇಗೆ ಇರುವದಿಲ್ಲವೋ ಹಾಗೆ ಆ ಬ್ರಾಹ್ಮಣ ಸ್ತ್ರೀಯಲ್ಲಿ ಭಿನ್ನಭಾವವು ಅಳಿದು ಹೋಯಿತು.

ಈ ಪ್ರಕಾರ ಕೋಶಧರ್ಮನ ಮನೆಯಲ್ಲಿ ನಾಗನಾಥನು ಬೆಳೆಯಹತ್ತಿದನು. ಅವನಿಗೆ ಏಳು ವರ್ಷಗಳು ಆಗಲು ಮೌಂಜೀಬಂಧನ ಮಾಡಿದರು. ಕೋಶಧರ್ಮನು ಕಾಶೀಕ್ಷೇತ್ರದಲ್ಲಿ ಇರುತ್ತಿದ್ದನು. ಉಪನಯನ ಸಂಸ್ಕಾರವು ಆದ ಬಳಿಕ ಕೆಲವು ದಿವಸಗಳ ಮೇಲೆ ಎರಡು ಪ್ರಹರದ ಸುಮಾರಕ್ಕೆ ನಾಥನು ಭಾಗೀರಥಿಯ ತೀರಕ್ಕೆ ಪ್ರಾಪ್ತನಾದನು. ಕಾಶೀವಿಶ್ವೇಶ್ವರನ ಎದುರಿಗೆ ಆ ಬಾಲಕನು ಕ್ರೀಡಿಸುತ್ತಿರಲು ಅಲ್ಲಿಗೆ ಭಗವಾನ್ ದತ್ತಗುರುಗಳು ಪ್ರಾಪ್ತರಾದರು. ಆ ಕಾಲಕ್ಕೆ ನಾಗನಾಥನೊಡನೆ ಬೇರೆ ಹಲವು ಹುಡುಗರು ನೆರೆದಿದ್ದರು. ಅವರು ಸುಳ್ಳು ಪ್ರಯೋಜನವನ್ನು ಮಾಡಿ ಆ

ಹುಡುಗರಿಗೆ ಅನ್ನವನ್ನು ನೀಡುತ್ತಿದ್ದರು. ಮತ್ತು ಓರಿಗೆಯ ಹುಡುಗರಿಗೆ ಅನ್ನವನ್ನು ಉಣ್ಣಲಿಕ್ಕೆ ಆಗ್ರಹವನ್ನು ಮಾಡುತ್ತಿದ್ದರು. ಕೆಲವರು ಅನ್ನವು ಸಾಕೆಂದು ಅಡ್ಡಬೀಳುತ್ತಿದ್ದರು. ನಾಗನಾಥನು ಅದನ್ನು ಲೆಕ್ಕಿಸದೆ ತೆಗೆದುಕೊಳ್ಳಿರಿ ಎಂದು ಮತ್ತೆ ಮತ್ತೆ ಬಡಿಸುತ್ತಿದ್ದನು. ಈ ಎಲ್ಲ ಲೀಲೆಯನ್ನು ಕಂಡು ದತ್ತನು ನಗಹತ್ತಿದನು. ಮತ್ತು ಬಾಲಕನ ವೇಷದಿಂದ ದತ್ತಗುರುಗಳು ಆ ಹುಡುಗರಿಗೆ—"ನಾನು ಈಗ ಬಂದಿದ್ದೇನೆ. ನನಗೆ ಹಸಿವೆಯಾಗಿದೆ. ಸ್ವಲ್ಪ ಅನ್ನವನ್ನು ಬಡಿಸಿ ತೃಪ್ತಿಗೊಳಿಸಿರಿ ಎಂದನು.

ಆ ಬಾಲಕರು ಅತಿಥಿಯ ಮಾತನ್ನು ಕೇಳಿ ಭಿಕ್ಷುಕನೆಂದು ಬೆದರಿಸಿಬಿಟ್ಟರು. ಕೆಲವರು ಅವನಿಗೆ ಹೊಡೆಯಹೋದರು. ಕೆಲವರು ಕಲ್ಲನ್ನು ಒಗೆಯ ಹತ್ತಿದರು. ಈ ಹುಡುಗರ ಈ ಕೃತಿಯನ್ನು ಕಂಡು ನಾಗನಾಥನು ಹುಡುಗರಿಗೆ—ಹೀಗೆ ಮಾಡುವದು ಸರಿಯಲ್ಲ. ಹಸಿದು ಬಂದ ಅತಿಥಿಯನ್ನು ಹೀಗೆ ಮಾಡುವದು ಉಚಿತವಲ್ಲ. ನಮ್ಮ ಮನೆಯ ಹಿರಿಯರು ಅತಿಥಿಯನ್ನು ಹೊಡೆದಟ್ಟುವರೋ ಇಲ್ಲ. ಹಾಗೆಯೇ ನಾವೂ ನಡೆಯಲಿಕ್ಕೆ ಬೇಕು. ನಾವು ಭೋಜನಕ್ಕೆ ಕೊಡ್ರುವ ವೇಳೆಗೆ ಈ ಹುಡುಗನು ಬಂದಿದ್ದಾನೆ. ಆದ್ದರಿಂದ ಇವನಿಗೆ ಯೋಗ್ಯವಾಗಿ ಉಪಚರಿಸಬೇಕು. ಹೀಗೆಂದು ನಾಗನಾಥನು ಆ ಪಾಂಥಸ್ಥನಿಗೆ ಊಟಕ್ಕೆ ಕೊಡ್ರಹೇಳಿದನು. ಅವನು ಸುಳ್ಳುನೀರಿನಿಂದ ಅತಿಥಿಗೆ ಸ್ನಾನ ಮಾಡಿಸಿದನು. ತನ್ನ ಮೈಮೇಲಿನ ವಸ್ತ್ರವನ್ನು ಉಡಲಿಕ್ಕೆ ಕೊಟ್ಟನು. ಗಂಧ, ಪುಷ್ಪ, ದೀಪ, ಆರತಿ ಇತ್ಯಾದಿ ಎಲ್ಲವನ್ನು ಅರ್ಪಿಸಿ ನಾಗನಾಥನು ಅತಿಥಿಯನ್ನು ಸತ್ಕರಿಸಿದನು. ನಾಗನಾಥನ ಭಾವಯುಕ್ತ ಆದರವನ್ನು ಕಂಡು ದತ್ತನು ತುಷ್ಟನಾದನು. ಮತ್ತು ತನ್ನಲ್ಲಿ ಅಂದದ್ದೇನಂದರೆ—ಈ ಹುಡುಗನು ಬಹಳ ಬುದ್ಧಿವಂತನೂ ಮತ್ತು ಸುಶೀಲನೂ ಇದ್ದಾನೆ. ಈ ಪ್ರಕಾರ ಉದಾರತನವು ಈ ಹುಡುಗನಿಗೆ ಬರಬೇಕಾದರೆ ಪೂರ್ವಜನ್ಮದಲ್ಲಿ ಯೋಗವನ್ನು ಆಚರಿಸಿದ ಪುಣ್ಯವು ಇರಲಿಕ್ಕೆ ಬೇಕು. ಸೌಜನ್ಯ, ವಿವೇಕ, ಶಾಂತಿ ಈ ಗುಣಗಳು ಯೋಗದ ವಿನಃ ಪ್ರಾಪ್ತವಾಗಲಿಕ್ಕೆ ಶಕ್ಯವಿಲ್ಲ. ಶುದ್ಧ ಆಚಾರ, ಶುದ್ಧ ವಿಚಾರ, ಯಾಚಕಪ್ರೇಮ, ಅಪೂರ್ವ ಚಾತುರ್ಯ ಈ ಗುಣಗಳು ಯೋಗದಿಂದಲೇ ಲಭಿಸುತ್ತವೆ. ಔದಾರ್ಯ, ಧರ್ಮಪ್ರೇಮ, ಭೂತದಯಾ, ಪರೋಪಕಾರ

ಈ ಸದ್ಗುಣಗಳು ಬರಬೇಕಾದರೆ ಯೋಗವೇ ಕಾರಣವಾಗಿರುತ್ತದೆ. ಈ ಎಲ್ಲ ಸದ್ಗುಣಗಳು ಈ ಬಾಲಕನನ್ನು ಆಶ್ರಯಿಸಬೇಕಾದರೆ ಇವನು ಪೂರ್ವ ಜನ್ಮದಲ್ಲಿ ಯೋಗಭ್ರಷ್ಟನಾಗಿರಲಿಕ್ಕೆ ಬೇಕು. ಅಂತಜ್ಞಾನದಿಂದ ವಿಚಾರಿಸಿ ನೋಡಲು ದತ್ತನಿಗೆ ಆ ಬಾಲಕನು ಅವಿಹೋತ್ರ ನಾರಾಯಣನ ಅಂಶ ಸಂಭೂತನಿರುವನೆಂದು ಕಂಡಬಂತು. ದತ್ತನು ಅವನನ್ನು ಅನುಗ್ರಹಿಸಬೇಕೆಂದು ಆ ಹುಡುಗನನ್ನು ಬೇರೆ ಕರೆದು—ನೀನು ಮಾಡುವ ಅತಿಥಿ ಪ್ರೇಮವನ್ನು ಕಂಡು ಸಂತುಷ್ಟನಾದೆನು. ನಾನು ನಿನಗೊಂದು ಮಂತ್ರೋಪದೇಶ ಮಾಡುತ್ತೇನೆ. ಅದರಿಂದ ಸಿದ್ಧಿಯು ಪ್ರಾಪ್ತವಾಗುವದು. ಅದರ ಯೋಗದಿಂದ ನಿನಗೆ ಇಷ್ಟವಾದ ಪದಾರ್ಥಗಳು ಬೇಕಾದಾಗ ತನ್ನಿಂದ ತಾನೇ ಉತ್ಪನ್ನವಾಗುವವು. ಅತಿಥಿಗಳಿಗೆ ಅನ್ನವನ್ನು ನೀಡು. ಆದರೆ ಆ ಅನ್ನವನ್ನು ನೀನು ಮಾತ್ರ ಗ್ರಹಿಸಕೂಡದು.

ಹೀಗೆ ದತ್ತನು ನಾಗನಾಥನಿಗೆ ಸಿದ್ಧಿಮಂತ್ರವನ್ನು ಅರ್ಪಿಸಿ ತನ್ನ ಹೆಸರು ದತ್ತನೆಂದು ಹೇಳಿದನು; ಮತ್ತು ಆ ಬಾಲಕನ ಹೆಸರನ್ನು ತಾನು ಕೇಳಿ ಹೊರಟುಹೋದನು.

ನಾಗನಾಥನು ತನ್ನ ಓರಿಗೆಯವರೊಡನೆ ನಿತ್ಯದಲ್ಲಿ ಭಾಗೀರಥಿಗೆ ಹೋಗಿ ಬರುತ್ತಿದ್ದನು. ಅವನು ಸಿದ್ಧಿಯ ಬಲದಿಂದ ಊಟದ ಪದಾರ್ಥಗಳನ್ನು ನಿರ್ಮಿಸಿ ತನ್ನ ಓರಿಗೆಯವರಿಗೆ ಉಣ್ಣಿಸುತ್ತಿದ್ದನು. ಈ ಕ್ರಮದಂತೆ ಬಹು ದಿವಸಗಳು ಕಳೆದವು. ನಾಥನ ಓರಿಗೆಯವರು ಇಷ್ಟವಾದ ಅನ್ನವನ್ನು ಹೊಟ್ಟೆತುಂಬ ಉಂಡು ಮನೆಗೆ ಹೋಗುತ್ತಿದ್ದದರಿಂದ ಅವರು ಮನೆಯೊಳಗೆ ಉಣ್ಣುತ್ತಿದ್ದಿಲ್ಲ. ಮನೆಯವರು ಆಗ್ರಹದಿಂದ ಊಟಕ್ಕೆ ಬಡಿಸಲು ಮೂಗು ಮುರಿಯುತ್ತಿದ್ದರು. ಬ್ರಹ್ಮರಸವನ್ನು ಸೇವಿಸಿ ತೃಪ್ತಿಹೊಂದಿದ ಆ ಬಾಲಕರಿಗೆ ಮನೆಯೊಳಗಿನ ಅನ್ನವು ರುಚಿಸುತ್ತಿದ್ದಿಲ್ಲ. ಸುವರ್ಣ ಮತ್ತು ರತ್ನಗಳ ಆಭರಣಗಳನ್ನು ಹಾಕಿಕೊಂಡರೆ ಹೇಗೆ ಭೂಷಣವಾಗುವದೋ, ಹಾಗೆ ಕಾಜಿನ ಆಭರಣದಿಂದ ಭೂಷಣವಾಗಲಾರದು. ಯಾವನೊಬ್ಬನಿಗೆ ಶುಶೋಭಿತವಾದ ಮನೆ ಮತ್ತು ಸುಗಂಧಯುಕ್ತವಾದ ಹಾಸಿಗೆ ಇವುಗಳು ಪ್ರಾಪ್ತವಾಗಿರಲು, ಅವನು ಹೊಲಸಾದ ಮನೆಯಲ್ಲಿ ದುರ್ಗಂಧಯುಕ್ತ ಹಾಸಿಗೆಯ ಮೇಲೆ ಮಲಗಲಿಕ್ಕೆ ಯಾಕೆ ಒಪ್ಪುವನು? ಈ ನ್ಯಾಯದಂತೆ

ಎಲ್ಲ ಹುಡುಗರು ಉತ್ತಮವಾದ ಸಿದ್ಧಿಯ ಅನ್ನವನ್ನು ಬಿಟ್ಟು, ಮನೆಯೊಳಗಿನ ಕದನ್ನವನ್ನು ಹೇಗೆ ಉಣ್ಣುವರು? ಇದನ್ನು ಕಂಡು ಆ ಹುಡುಗರ ತಾಯಿ-ತಂದೆಗಳು ಉಣ್ಣದಿದ್ದ ಕಾರಣವನ್ನು ವಿಚಾರಿಸಿದರು. ಹುಡುಗರು ಗಂಗಾತೀರದೊಳಗೆ ನಡೆಯುವ ಸಂಗತಿಗಳನ್ನು ಹೇಳಿದರು. ಹುಡುಗರ ಮಾತು ಅವರಿಗೆ ನಿಜವೆನಿಸಲಿಲ್ಲ. ಆಗ ಹುಡುಗರ ಮನೆಯವರೆಲ್ಲರೂ ಕೂಡಿ ಗುಪ್ತರೀತಿಯಿಂದ ಗಂಗಾತೀರಕ್ಕೆ ಹೋದರು. ಅಲ್ಲಿಯ ಸಂಗತಿಯನ್ನು ನೋಡಿ ಅವರಿಗೆ ನಿಜ ಕಾಣಿಸಿತು. ಅವರು ಅಲ್ಲಿ ಆದ ಎಲ್ಲ ವೃತ್ತಾಂತವನ್ನು ಕೋಶಧರ್ಮ ಬ್ರಾಹ್ಮಣನ ಮುಂದೆ ಹೇಳಿದರು. ಈ ಸಂಗತಿಯನ್ನು ಕೇಳಿ ಕೋಶಧರ್ಮನಿಗೆ ಸುರವರರು ಹೇಳಿದ ಮಾತು ಸ್ಮರಣಕ್ಕೆ ಬಂದಿತು. ಒಂದು ದಿವಸ ಕೋಶಧರ್ಮನು ನಾಗನಾಥನನ್ನು ಕರೆದು, ಬಳಿಯಲ್ಲಿ ಕುಳ್ಳಿರಿಸಿಕೊಂಡು ಹೇಳಿದ್ದೇನಂದರೆ:—" ಬಾಳಾ, ಗಂಗಾತೀರದ ಮೇಲೆ ನೀನು ನಿನ್ನ ಓರಿಗೆಯವರಿಗೆ ಊಟಕ್ಕೆ ಹಾಕುವದನ್ನು ನಾನು ಕೇಳಿದ್ದೇನೆ. ನೀನು ಹೀಗೆ ಮಾಡುವದರಿಂದ ಜನರು ನಮಗೆ ತ್ರಾಸ ಕೊಡುವರು. ಆದ್ದರಿಂದ ಇಂಥ ಅಲೌಕಿಕಗಳನ್ನು ಈ ಭೂತಲದ ಮೇಲೆ ಮಾಡಬೇಡ. "

ತಂದೆಯ ಮಾತನ್ನು ಕೇಳಿ ನಾಗನಾಥನು:—" ಅಪ್ಪಾ, ನೀನು ಅನ್ನುವದು ಸತ್ಯವದೆ. ನಾನು ಇಲ್ಲಿಂದ ಇಲ್ಲಿಯೇ ನಿನಗೆ ಪ್ರತೀತಿಯನ್ನು ತೋರಿಸುತ್ತೇನೆ." ಹೀಗೆಂದು ನಾಗನಾಥನು ಕೋಶಧರ್ಮನ ತೊಡೆಯ ಮೇಲಿಂದ ಕೆಳಗಿಳಿದು ಭೂಮಿಯ ಮೇಲೆ ಕೈಯ್ಯನ್ನೂರಿ "ಪಾತ್ರೆಯು ಬರಲಿ" ಎಂದನು ಕೂಡಲೆ ಸುಗ್ರಾಸದಿಂದ ತುಂಬಿದ ತಾಟು ಅಲ್ಲಿ ಉತ್ಪನ್ನವಾಯಿತು. ಅದನ್ನು ಕಂಡು ಕೋಶಧರ್ಮನಿಗೆ ಆಶ್ಚರ್ಯವಾಯಿತು. ಇವನಿಗೆ ಯಾವ ದೇವರಾದರೂ ಅನುಗ್ರಹಿಸಿರಲಿಕ್ಕೆಬೇಕೆಂದು ವಿಚಾರಿಸಿದನು:—" ಬಾಲಕಾ, ನಿನಗೆ ಯಾವ ದೈವತವಾದರೂ ಪ್ರಾಪ್ತವಾಗಿರಲಿಕ್ಕೆ ಬೇಕು. ಇದ್ದರೆ ನನಗೆ ಹೇಳು " ಎಂದನು.

ತಂದೆಯ ಮಾತನ್ನು ಕೇಳಿ ನಾಗನಾಥನು ಗಂಗಾತೀರದ ಮೇಲೆ ವರ್ತಿಸಿದ ಆದ್ಯಂತ ಸಂಗತಿಯನ್ನು ಹೇಳಿದನು. ಅತಿಥಿಯ ಸತ್ಕಾರದಿಂದಲೇ ನಾಗನಾಥನಿಗೆ ಸಿದ್ಧಿಯ ಲಾಭವಾಗಿದೆಯೆಂದು ತಾನು ಅಥಿತಿ ಪೂಜೆಯ ನಿಯಮವನ್ನು ಹಿಡಿದನು. ಯಾರಾದರೂ ಅತಿಥಿ, ಅಭ್ಯಾಗತರು ಬಂದರೆ

ನಾಗನಾಥನು ಸ್ವಹಸ್ತದಿಂದ ಪೂಜಿಸಿ ಆದರಸತ್ಕಾರವನ್ನು ಮಾಡುತ್ತಿದ್ದನು. ಅವನ ಮನೆಯಲ್ಲಿ ಪ್ರತಿದಿವಸ ಅತಿಥಿಗಳ ಗದ್ದಲವು ನೆರೆಯಹತ್ತಿತು. ಅದನ್ನು ಕಂಡು ಶ್ರೀ ದತ್ತನಿಗೆ ಆನಂದವಾಯಿತು. ಸರ್ವ ಕ್ಷೇತ್ರಗಳಲ್ಲಿ ಇಷ್ಟೇ ಅಲ್ಲ; ಸರ್ವದೇಶಗಳಲ್ಲಿ ಕೂಡ ನಾಗನಾಥನ ಕೀರ್ತಿಯು ಹಬ್ಬಿತು. ಧನ, ಧಾನ್ಯ, ವಸ್ತ್ರ, ಅಲಂಕಾರ ಇವುಗಳಿಂದ ಸರ್ವ ಅತಿಥಿಗಳು ಸಂತುಷ್ಟರಾಗಿ ನಾಗನಾಥನನ್ನು ಭಜಿಸಹತ್ತಿದರು. ತನ್ನನ್ನು ಜನರು ಪ್ರೀತಿಸುವದನ್ನು ಕಂಡು ನಾಗನಾಥನಿಗೂ ಕೌತುಕವಾಯಿತು.

ಹೀಗಾಗಿ ನಾಗನಾಥನ ಮೈಯಲ್ಲಿ ವಿಲಕ್ಷಣವಾದ ಚಾತುರ್ಯವು ಉತ್ಪನ್ನವಾಯಿತು. ಅವನಲ್ಲಿ ಅಜ್ಞಾನವು ತೊಲಗಿ ಜಾಣನಾಗುತ್ತ ನಡೆದನು. ಒಂದಾನೊಂದು ದಿವಸ ನಾಗನಾಥನು ಕೋಶಧರ್ಮನ ಬಳಿಯಲ್ಲಿ ಕುಳಿತಿರಲು ತಂದೆಯನ್ನು ಕುರಿತು—ಅಪ್ಪಾ, ನನ್ನ ಕೈಯಿಂದ ಇಂದಿನ ವರೆಗೆ ಎಷ್ಟು ಅದ್ಭುತ ಕಾರ್ಯವು ಆಗಿದೆ. ಇದರ ಇಂಗಿತವೇನು? ನನ್ನಲ್ಲಿ ಇಷ್ಟು ಸಾಮರ್ಥ್ಯ ಬರಲಿಕ್ಕೆ ಏನು ಕಾರಣವಿರಬಹುದು? ಚಿಕ್ಕಂದಿನಲ್ಲಿ ನನಗೆ ದತ್ತನೆಂಬ ಹೆಸರಿನ ಹುಡುಗನು ಈ ಮಂತ್ರವನ್ನು ಉಪದೇಶಿಸಿದನು. ಆ ದತ್ತನೂ ಈಗ ದೊಡ್ಡವನಾಗಿರಲಿಕ್ಕೆ ಬೇಕು. ಅವನಿಗಾದರೂ ಇಂಥ ಮಂತ್ರವು ಹೇಗೆ ಗೊತ್ತಾಗಿರಬೇಕು? ಎಂದನು.

ಮಗನ ಈ ಮಾತನ್ನು ಕೇಳಿ ಬ್ರಾಹ್ಮಣನು—ಆ ದತ್ತನೆಂಬ ಹುಡುಗನು ಸಾಮಾನ್ಯ ಮನುಷ್ಯನೆಂದು ತಿಳಿಯಬೇಡ. ಮೂರು ರೂಪಗಳ ಅವತಾರವನ್ನು ಧರಿಸಿದ ದತ್ತನು ಬಾಲರೂಪದಿಂದ ದರ್ಶನ ಕೊಟ್ಟಿರುವನು! ಆ ಮುನಿಯು ಎಲ್ಲ ಸಿದ್ಧಿಗಳ ಒಡೆಯನು ಇದ್ದಾನೆ. ಅವನು ಸರ್ವ ಸಾಮರ್ಥ್ಯಸಂಪನ್ನನಿದ್ದು ಅವನ ಸತ್ತೆಯಿಂದಲೇ ಎಲ್ಲ ಜಗತ್ತು ನಡೆದದೆ ಎಂದನು. ಆಗ ನಾಗನಾಥನಿಗೆ ದತ್ತದರ್ಶನದ ಇಚ್ಛೆಯಾಯಿತು. ಅವನು ಕೊಲ್ಹಾಪುರಕ್ಕೆ ಬಂದು ಮನೆಮನೆಗೆ ದತ್ತನನ್ನು ಕೇಳತೊಡಗಿದನು.

ನಾಗನಾಥನ ಪ್ರಶ್ನೆಯನ್ನು ಕೇಳಿ ಜನರು:—ನಿನಗೆ ಹುಚ್ಚು ಹಿಡಿದಿರುವದೇನು? ಎಲೋ, ದತ್ತನು ಈ ಕ್ಷೇತ್ರಕ್ಕೆ ಬಂದದ್ದು ಯಾರಿಗೂ ಕಾಣಿಸುವದಿಲ್ಲ. ಅವನು ಯಾವದಾದರೊಂದು ರೂಪದಿಂದ ಬಂದು ಭಿಕ್ಷೆಯನ್ನು ಬೇಡಿಕೊಂಡು ಹೊರಟುಹೋಗುತ್ತಾನೆ. ಶ್ರೀ ದತ್ತನು

ಈ ಕ್ಷೇತ್ರವನ್ನು ಬಿಟ್ಟು ಎಲ್ಲಿಯೂ ಅನ್ನಗ್ರಹಣ ಮಾಡುವದಿಲ್ಲ. ಈ ಕ್ಷೇತ್ರದ ಅನ್ನವನ್ನು ಗ್ರಹಿಸುವದು ಪ್ರಸಿದ್ಧವಾಗಿದೆ. ಈ ಸ್ಥಳದಲ್ಲಿ ಅನ್ನವು ದೊರೆಯದಿದ್ದರೆ, ಉಪವಾಸವಿರುವನು. ಎರಡನೆಯ ಕಡೆಗೆ ಅನ್ನವನ್ನು ಸೇವಿಸುವದಿಲ್ಲ. ಬೇರೆ ಕಡೆಯಲ್ಲಿಯ ಪಕ್ವಾನ್ನವನ್ನು ನಿರಾಕರಿಸುತ್ತಾನೆ. ಬ್ರಾಹ್ಮಣನ ಕದನ್ನವನ್ನು ಬಿಟ್ಟು ಶೂದ್ರನ ಷಡ್ರಸಾನ್ನವನ್ನು ಸ್ವೀಕರಿಸುವದು ಶುದ್ಧಬ್ರಾಹ್ಮಣನಿಗೆ ಪ್ರಶಸ್ಥವಾಗುವದೋ? ಅದರಂತೆ ದತ್ತಾತ್ರಯನು ಈ ಕ್ಷೇತ್ರಕ್ಕೆ ಮಹತ್ವವನ್ನು ಕೊಟ್ಟಿರುವನು.''

ಜನರ ಮಾತನ್ನು ಕೇಳಿ ನಾಗನಾಥನಿಗೆ:—ಆನಂದವಾಯಿತು. ಶ್ರೀ ದತ್ತಾತ್ರಯನನ್ನು ಹುಡುಕಲಿಕ್ಕೆ ಒಳ್ಳೇ ಯುಕ್ತಿಯು ದೊರೆಯಿತು. ಈ ಗ್ರಾಮದಲ್ಲಿ ನಾನು ಒಲೆ ಹೊತ್ತಿಸದಂತೆ ಮಾಡಿಬಿಟ್ಟರೆ, ದತ್ತನಿಗೆ ಬೇರೆ ಕಡೆಗೆ ಅನ್ನವು ದೊರೆಯುವದಿಲ್ಲ. ಊರೊಳಗಿನ ಎಲ್ಲ ಜನರಿಗೆ ಎರಡೂ ಹೊತ್ತು ಊಟಕ್ಕೆ ಹಾಕುವ ಕ್ರಮವನ್ನು ಇಟ್ಟರೆ, ದತ್ತಾತ್ರಯನು ನನ್ನ ಕಡೆಗೆ ತಪ್ಪದೆ ಬರುವನು; ಮತ್ತು ನನಗೆ ಸಿದ್ಧ ಅನ್ನವನ್ನು ಉಣ್ಣಬಾರದೆಂದು ಹೇಳಿದ್ದರಿಂದ ತಾನೂ ಆ ಅನ್ನವನ್ನು ಸೇವಿಸಲಾರನು. ಯಾವನು ಅತಿಥಿಯಾಗಿ ಬಂದು ಸಿದ್ಧ ಅನ್ನವನ್ನು ಮುಟ್ಟುವದಿಲ್ಲವೋ, ಅವನೇ ದತ್ತನೆಂದು ತಿಳಿಯಬೇಕು. ಹೀಗೆ ವಿಚಾರಿಸಿ ನಾಗನಾಥನು ಲಕ್ಷ್ಮಿಯ ದೇವಸ್ಥಾನಕ್ಕೆ ಹೋದನು. ಅಲ್ಲಿಯ ಪೂಜಾರರ ಗುರ್ತನ್ನು ಮಾಡಿಕೊಂಡು ಅವರಿಂದ ದೇವಾಲಯದೊಳಗಿನ ಒಂದು ಕೋಣೆಯನ್ನು ಪಡೆದು ಅಲ್ಲಿ ಕೆಲ ದಿವಸ ಇರಲು ಪೂಜಾರಿಗಳ ಸ್ನೇಹವು ಮಿತಿಮೀರಿ ಬೆಳೆಯಿತು. ಬಳಿಕ ಒಂದು ದಿವಸ ನಾಗನಾಥನು ಪೂಜಾರಿಗೆ:—"ನನ್ನ ಮನಸ್ಸಿನಲ್ಲಿ ನಿತ್ಯದಲ್ಲಿ ಗ್ರಾಮಭೋಜನವನ್ನು ಮಾಡಿಸುವ ಇಚ್ಛೆಯದೆ. ಆದ್ದರಿಂದ ನೀವು ಮನಸ್ಸಿನ ಮೇಲೆ ತೆಗೆದುಕೊಂಡು ಈ ಕೆಲಸಕ್ಕೆ ಸಹಾಯ ಮಾಡಬೇಕು.'' ಎಂದನು. ಅದಕ್ಕೆ ಪೂಜಾರಿಯು:—ನಾವು ಮಾಡತಕ್ಕದ್ದೇನು? ಆದರೆ ಪ್ರಯೋಜನಕ್ಕೆ ಉಳಿದ ಸಹಾಯ ಮಾಡಬಹುದು. ಪ್ರಯೋಜನವೆಂದರೆ ಸಾಧಾರಣ ಕೆಲಸವಲ್ಲ! ಸಾಮಾನುಗಳನ್ನು ಎಲ್ಲಿಂದ ತರುವಿರಿ? ಎಂದನು. ನಾಗನಾಥನು ಪೂಜಾರಿಗಳಿಗೆ:—"ನಾನು ಸರ್ವ ಸಿದ್ಧತೆಯನ್ನು ಮಾಡಿ ಇಟ್ಟಿರುವೆನು. ನೀವು ನನಗೆ ಇತರ ರೀತಿಯಿಂದ ಸಹಾಯಮಾಡಿದರೆ ಸಾಕು''

ಎಂದನು. ಇದನ್ನು ಕೇಳಿ ಪೂಜಾರಿಯು ಅಗತ್ಯವಾಗಿ ಸಹಾಯ ಮಾಡು ವೆನು ಎಂದು ಹೇಳಿ ತನ್ನ ಕೆಲಸಕ್ಕೆ ಹೋದನು.

ಪೂಜಾರಿಯು ಹೋದಬಳಿಕ ಭೂಮಿಯ ಮೇಲೆ ಕೈಯನ್ನು ಇಟ್ಟು ಆಹಾರಸಾಮಗ್ರಿಯ ಹೆಸರನ್ನು ತೆಗೆದುಕೊಂಡನು. ಕೂಡಲೆ ಆ ಸ್ಥಳದಲ್ಲಿ ಪರ್ವತಪ್ರಾಯವಾದ ಧಾನ್ಯದ ಗುಂಪೆಯು ಬಿದ್ದಿತು. ತುಪ್ಪ, ಸಕ್ಕರೆ, ಎಣ್ಣೆ, ಬೆಲ್ಲ ಇತ್ಯಾದಿ ಸರ್ವ ಪದಾರ್ಥಗಳೂ ಉಂಟಾದವು.

---

# ಅಧ್ಯಾಯ ೩೭



## ನಾಗನಾಥನಿಗೆ ಜಯಪ್ರಾಪ್ತಿ.



ನಾಗನಾಥನು ಪೂಜಾರಿಗಳಿಗೆ ಹೇಳಿದ್ದೇನಂದರೆ—ನನಗೆ ಮನು ಷ್ಯರ ಸಹಾಯವಿಲ್ಲ; ಆದ್ದರಿಂದ ಎಲ್ಲ ಕಾರ್ಯವನ್ನು ನೀವೇ ಸಾಗಿಸಿಕೊಳ್ಳಬೇಕಾಗುವದು. ಈ ಸಿದ್ಧಾಶ್ರಮದಲ್ಲಿ ಅನ್ನಸತ್ರವು ಮುಗಿ ಯುವ ವರೆಗೆ ಎರಡುಹೊತ್ತು ಅನ್ನಸಂತರ್ಪಣೆ ನಡಿಸಬೇಕಾಗಿದೆ ಎಲ್ಲ ವರ್ಣ ದವರೂ ಇಲ್ಲಿಗೆ ಬರಲಿಕ್ಕೆ ಸಂಕೋಚವಿಲ್ಲ. ಮತ್ತು ಎಲ್ಲರಿಗೆ ಸರಿಯಾಗಿ ಅನ್ನವು ಮುಟ್ಟಬೇಕು. ಭೇದಬುದ್ಧಿಯನ್ನು ಎಳ್ಳಷ್ಟು ಮಾಡುವದು ವಿಹಿ ತವಲ್ಲ. ಸಣ್ಣವರಿಂದ ದೊಡ್ಡವರವರೆಗೂ, ಬಡವರಿಂದ ಶ್ರೀಮಂತರ ವರೆಗೂ ಸರಿಯಾಗಿ ಅನ್ನ ಮುಟ್ಟಬೇಕು. ಊರೊಳಗೆ ಒಬ್ಬರೂ ಒಲೆ ಹೊತ್ತಿಸಬಾರದು.

ಹೀಗೆಂದು ನಾಗನಾಥನು ಪೂಜಾರಿಯ ಕಡೆಯಿಂದ ಅಡಿಗೆ ಸೀರಿನವ ರನ್ನು ಗೊತ್ತು ಮಾಡಿಸಿದನು. ಊರೊಳಗಿನ ಸರ್ವತ್ರರಿಗೆ ಆಮಂತ್ರಣ ವನ್ನು ಕೊಟ್ಟು ಶುಭಮುಹೂರ್ತದಲ್ಲಿ ಅನ್ನಸಂತರ್ಪಣೆಯನ್ನು ಪ್ರಾರಂಭಿಸಿ ದನು. ಬ್ರಾಹ್ಮಣ, ಶೈವ, ಶ್ರಾವಕ, ವೈಶ್ಯ, ಶೂದ್ರ, ಗುರ್ಜರ, ಮಾರ

ವಾಡಿ ಇತ್ಯಾದಿ ಬೇರೆ ಬೇರೆ ಪ್ರಕಾರದ ಒಳಜಾತಿಯ ಜನರು ನಾಗನಾಥನ ಸಿದ್ಧಾಶ್ರಮಕ್ಕೆ ಬಂದು ಸೇರ್ಪಡೆಯಾಗಿ ಹೋಗಹತ್ತಿದರು.

ನಾನಾ ತರದ ಸ್ವಪಕ್ವಾನ್ನಗಳು ಅಲ್ಲಿ ಉತ್ತಮವಿರುತ್ತಿದ್ದವು. ಎಷ್ಟೋ ಜಾತಿಯ ಜನರು ಅಲ್ಲಿ ಹೊಟ್ಟೆತುಂಬ ಉಂಡು ಮತ್ತೆ ತಮಗೆ ಬೇಕಾದಷ್ಟು ಅನ್ನವನ್ನು ವಸ್ತ್ರದಲ್ಲಿ ಕಟ್ಟಿಕೊಂಡು ಮನೆಗೆ ಒಯ್ಯುತ್ತಿದ್ದರು! ಕೆಲವರು ತಮಗೆ ಬೇಕಾಗುವಷ್ಟು ಸೀದಾಸಾಮಗ್ರಿಗಳನ್ನು ತೆಗೆದುಕೊಂಡು ಒಂದು ಮನೆಯಲ್ಲಿ ಅಡಿಗೆ ಮಾಡಿ ಉಣ್ಣುತ್ತಿದ್ದರು! ಊರೊಳಗೆ ಎಲ್ಲಿ ನೋಡಿದಲ್ಲಿ ಅನ್ನ, ಮತ್ತು ಧಾನ್ಯ ಇವು ಹೇಳಕೂಡದಷ್ಟು ಬಿದ್ದಿದ್ದವು. ಕೆಲವರ ಮನೆಯೊಳಗೆ ದೀವಿಗೆಯ ಹೊರತು ಅಗ್ನಿಯನ್ನು ಹೊತ್ತಿಸುತ್ತಿದ್ದಿಲ್ಲ.

ಈ ಪ್ರಕಾರ ಒಂದು ತಿಂಗಳು ಕಳೆದವು. ಇಷ್ಟು ಅವಧಿಯಲ್ಲಿ ಶ್ರೀ ದತ್ತಾತ್ರಯನು ಒಂದು ಚಮತ್ಕಾರವನ್ನು ಮಾಡಿದನು. ಮೊದಲನೇ ದಿವಸ ಅವನು "ಕಪ್ಪಳ"ವೇಷವನ್ನು ತೆಗೆದುಕೊಂಡು ಭಿಕ್ಷೆಯನ್ನು ಬೇಡಿದನು ಜನರು ಅವನಿಗೆ ನಾಗನಾಥನ ಅನ್ನಸತ್ರವನ್ನು ತೋರಿಸಿದರು. ಇದರಂತೆ ಮನೆಮನೆಗೆ ಹೋದರೂ ಅನ್ನಸತ್ರವನ್ನೇ ಬೊಟ್ಟುಮಾಡಿ ತೋರಿಸಹತ್ತಿದರು. ಆಗ ಶ್ರೀ ದತ್ತಾತ್ರಯನು ಆ ಸತ್ರದ ಕಡೆಗೆ ಹೋಗುವದನ್ನು ಗೊತ್ತುಮಾಡಿಕೊಂಡನು ದೇವಾಲಯದಲ್ಲಿ ಬಂದು ದತ್ತನು ಆ ಛತ್ರದೊಳಗಿನ ಅನ್ನದ ಕಡೆಗೆ ಲಕ್ಷ್ಯಗೊಟ್ಟನು. ಅವನಿಗೆ ಅದು ಸಿದ್ಧಾನ್ನವೆಂದು ಕಂಡುಬಂತು. ಆ ನ ಅನ್ನಸತ್ರವನ್ನು ಇಟ್ಟಿರುವವರು ಯಾರೆಂದು ಶೋಧಮಾಡಿದನು. ಜನರ ಕಡೆಯಿಂದ ವಟಸಿದ್ಧ ನಾಗನಾಥನ ವೃತ್ತವನ್ನು ಕೇಳಿದ ಕೂಡಲೆ ದತ್ತನಿಗೆ ಸ್ಮರಣಕ್ಕೆ ಬಂತು. ಕಾಶೀಕ್ಷೇತ್ರದೊಳಗೆ ತಾವು ಯಾವ ಹುಡುಗನಿಗೆ ಸಿದ್ಧಿಯನ್ನು ಅರ್ಪಿಸಿರುವೆವೋ ಅದೇ ನಾಗನಾಥನು ಇಲ್ಲಿ ಸತ್ರವನ್ನು ಪ್ರಾರಂಭಿಸಿರುವನೆಂದು ತಿಳಿಯಿತು. ಈ ಅನ್ನಛತ್ರದ ಮುಖ್ಯೋದ್ದೇಶವು ನನ್ನ ದರ್ಶನಾರ್ಥವಾಗಿ ಎಂದು ತಿಳಿದು ದತ್ತನು ಉಪವಾಸದಿಂದ ಹೋಗಬೇಕೆಂದು ಹೊರಟನು. ಜನರು ಅವನಿಗೆ ಉಂಡು ಹೋಗಲಿಕ್ಕೆ ಆಗ್ರಹ ಮಾಡಿದರು ಅದಕ್ಕೆ ಅವನು—ಭಿಕ್ಷಾನ್ನವನ್ನು ಬಿಟ್ಟು ಬೇರೆ ಅನ್ನವನ್ನು ಸ್ವೀಕರಿಸಲಾರೆನೆಂದು ಹೇಳಿ ಊರೊಳಗೆ ಹೋದನು.

ಮನೆಮನೆಯನ್ನು ತಿರುಗಿ ದತ್ತನು ಧಾನ್ಯದ ಭಿಕ್ಷೆಯನ್ನು ಮಾಡಿ ಕ್ಷೇತ್ರಕ್ಕೆ ಹೋಗಿ ಊಟ ಮಾಡುತ್ತಿದ್ದನು. ಇದರಂತೆ ಒಂದು ತಿಂಗಳ ವರೆಗೆ ಸಾಗಿತು. ಆಗ ನಾಗನಾಥನು ಮನಸ್ಸಿನೊಳಗೆ ವಿಚಾರಮಾಡಿದ್ದೇನಂದರೆ—ಒಂದು ತಿಂಗಳವಾದರೂ ಇನ್ನೂ ದತ್ತದರ್ಶನವಾಗಲಿಲ್ಲ. ಇದಕ್ಕೆ ಉಪಾಯವೇನು ಮಾಡಬೇಕು? ನನ್ನ ಅನ್ನಸತ್ರವು ಪ್ರಾರಂಭವಾದಂದಿನಿಂದ ದತ್ತಾತ್ರೇಯನು ಇಲ್ಲಿಗೆ ಬಂದಿರಲಿಕ್ಕಿಲ್ಲವೇನು? ಈ ತಿಂಗಳದಲ್ಲಿ ದತ್ತನು ಉಪವಾಸವಿರಬಹುದೋ?

ಹೀಗೆ ವಿಚಾರಿಸುತ್ತ ನಾಗನಾಥನು ಊರೊಳಗಿನ ಜನರನ್ನು ಕುರಿತು—"ಈ ಊರೊಳಗೆ ಯಾರೂ ಉಪವಾಸವಿಲ್ಲವೇ? ನನ್ನ ಸತ್ರದೊಳಗೆ ಬರಲಿಕ್ಕೆ ಯಾರೂ ಸಂಕೋಚಪಡುವದಿಲ್ಲವೇ?" ಎಂದು ಕೇಳಿದನು. ನಾಗನಾಥನ ಮಾತನ್ನು ಕೇಳಿ ಅವರು—ಒಬ್ಬ ಭಿಕ್ಷುಕನು ಮಾತ್ರ ಊರೊಳಗೆ ಬಂದು ಧಾನ್ಯಗಳ ಭಿಕ್ಷೆಯನ್ನು ಮಾಡಿಕೊಂಡು ಹೋಗುತ್ತಾನೆ. ಅವನು ನಿಮ್ಮ ಸತ್ರದೊಳಗಿನ ಅನ್ನವನ್ನು ಸ್ವೀಕರಿಸಿರುವದಿಲ್ಲ.

ಇದನ್ನು ಕೇಳಿ ನಾಗನಾಥನು ಆ ಭಿಕ್ಷುಕನೇ ದತ್ತಮೂರ್ತಿಯೆಂದು ತಿಳಿದನು. ಬಳಿಕ ಅವನು—"ಅಂಥ ಅತಿಥಿಗಳು ಯಾರಾದರೂ ಬಂದರೆ ನನಗೆ ಹೇಳಬೇಕು. ನಾನು ಅವರಿಗೆ ಶರಣುಹೋಗಿ ಕರೆದುಕೊಂಡು ಬಂದು ಊಟಕ್ಕೆ ಹಾಕುವೆನು. ನೀವು ನಿಮ್ಮ ನಿಮ್ಮ ಮನೆಗಳಿಗೆ ನಮ್ಮಲ್ಲಿಯ ಧಾನ್ಯವನ್ನು ಒಯ್ದು ಇಡಿರಿ. ಆ ಅತಿಥಿಯು ಭಿಕ್ಷೆಗೆ ಬಂದರೆ ಅವನಿಗೆ ಆ ಧಾನ್ಯವನ್ನು ನೀಡಿರಿ. ಅವನು ಒಂದು ವೇಳೆ ಆ ಧಾನ್ಯವನ್ನು ಸ್ವೀಕರಿಸದಿದ್ದರೆ ನಮ್ಮ ಅನ್ನ ಸತ್ರಕ್ಕೆ ಊಟಕ್ಕಾಗಿ ಕಳಿಸಿರಿ. ಅಥವಾ ನನ್ನನ್ನು ಲಗುಬಗೆಯಿಂದ ಕರೆಯಿರಿ" ಎಂದು ನಾಥನು ಊರ ಜನರೆಲ್ಲರಿಗೆ ಹೇಳಿಕೊಂಡನು. ಮತ್ತು ಅವರ ಮನೆಗೆ ಸಿದ್ಧವಾದ ಧಾನ್ಯಗಳನ್ನು ಕಳಿಸಿಕೊಟ್ಟನು. ಜನರು ನಾಥನ ಮಾತಿನಂತೆ ತಮ್ಮ ತಮ್ಮ ಮನೆಗಳಲ್ಲಿ ಅತಿಥಿಯ ಮಾರ್ಗವನ್ನು ನೋಡುತ್ತ ಕುಳಿತುಕೊಂಡರು.

ಮರುದಿವಸ ಕ್ರಮದಂತೆ ದತ್ತಾತ್ರೇಯನು ಊರಲ್ಲಿ ಭಿಕ್ಷೆಯ ಸಲುವಾಗಿ ತಿರುಗಹತ್ತಿದನು. ಜನರು ತಮ್ಮ ಮನೆಗಳಿಗೆ ಬಂದ ಕೂಡಲೆ ನಾಥನ ಕಡೆಯಿಂದ ತಂದ ಧಾನ್ಯಗಳನ್ನು ಹಾಕಹತ್ತಿದರು. ಅವು ಸಿದ್ಧಿಯ ಧಾನ್ಯ

ವಾದ್ದರಿಂದ ದತ್ತನು ಅವುಗಳನ್ನು ಹಾಕಿಸಿಕೊಳ್ಳಲಿಲ್ಲ. ಜನರು ಬಹಳ ಆಗ್ರಹವನ್ನು ಮಾಡಿ ನೋಡಿದರು. ಆದರೂ ದತ್ತನು ಸ್ವೀಕರಿಸದ್ದರಿಂದ ಜನರು ಕೂಡಲೆ ಹೋಗಿ ನಾಗನಾಥನಿಗೆ ಹೇಳಿದರು. ಮತ್ತು ಅವರು ಸನ್ನೆಯಿಂದ ಅತಿಥಿಯನ್ನು ನಾಗನಾಥನಿಗೆ ತೋರಿಸಲು ಅವನು ಅತಿಥಿಯ ಚರಣದ ಮೇಲೆ ಮಸ್ತಕವನ್ನಿಟ್ಟು ಅಂದದ್ದೇನಂದರೆ—"ಮಹಾರಾಜ, ಯೋಗತಿಲಯೇ, ತಾವು ನಮ್ಮಂಥ ದೀನರ ತಾಯಿಯೋಪಾದಿಯಲ್ಲಿರುವಿರಿ. ತಮ್ಮ ಅಂತಃಕರಣವು ಕೋಮಲವಾಗಿರುತ್ತದೆ. ಹೀಗಿದ್ದು ಈ ಅನಾಥನನ್ನು ಯಾಕೆ ತಿರಸ್ಕರಿಸುತ್ತೀರಿ? ತಾವು ತಾಯಿಯಾಗಿದ್ದು ನಾನು ತಮ್ಮ ಕರುವಾಗಿದ್ದೇನೆ. ನನ್ನ ಮೇಲೆ ಅನುಗ್ರಹಿಸಿರಿ. ತಾವು ಇಲ್ಲದ್ದರಿಂದ ನಾನು ಘೋರವಾದ ಅರಣ್ಯದಲ್ಲಿ ಬಿದ್ದಿದ್ದೇನೆ! ನಾನು ತಮ್ಮ ಮಾರ್ಗದ ಪ್ರತೀಕ್ಷೆಯನ್ನು ಮಾಡಿ ಮಾಡಿ ಬೇಸತ್ತಿದ್ದೇನೆ! ತಾವು ಇಷ್ಟು ನಿರ್ದಯರಾದ ಕಾರಣವೇನು? ಹೀಗೆಂದು ನಾಗನಾಥನು ಗುರುಚರಣದ ಮೇಲೆ ಅಶ್ರುಪಾತವನ್ನು ಮಾಡಹತ್ತಿದನು.

ನಾಗನಾಥನ ಈ ಭಾವಯುಕ್ತವಾದ ದೀನವಾಣಿಯನ್ನು ಕೇಳಿ ದತ್ತನ ಅಂತಃಕರಣವು ಕರಗಿತು. ಅವರು ನಾಗನಾಥನನ್ನು ಅಪ್ಪಿಕೊಂಡರು. ಅವರು ನಾಗನಾಥನ ತಲೆಯ ಮೇಲೆ ತಮ್ಮ ಎಡಗೈಯನ್ನಿಟ್ಟು ಬಲಗೈಯಿಂದ ಅವನ ಕಣ್ಣುಗಳನ್ನು ಒರಿಸಿದರು. ಮತ್ತು ಪ್ರೀತಿಯಿಂದ ಏಕಾಂತಸ್ಥಳಕ್ಕೆ ಕರೆದುಕೊಂಡು ಹೋದರು. ಅಲ್ಲಿ ಅವನ ತಲೆಯಮೇಲೆ ವರದ ಹಸ್ತವನ್ನಿಟ್ಟು ಮಂತ್ರಾಕ್ಷರಗಳನ್ನು ಉಪದೇಶಿಸಿದರು. ಆ ಮಂತ್ರ ಪ್ರಭಾವದಿಂದ ಆತ್ಮಜ್ಞಾನವಾಗಿ ಬ್ರಹ್ಮಪರಾಯಣನಾದನು. ಅವನಲ್ಲಿರುವ ಅಜ್ಞಾನವು ಸಮೂಲನಾಶವಾಯಿತು. ಮೇಘಪಟಲವು ಹರಿಯಲು ಹೇಗೆ ಸೂರ್ಯನು ಸ್ವಚ್ಛವಾಗಿ ಕಾಣಿಸುವನೋ ಅದರಂತೆ ಅವನಿಗೆ ಆತ್ಮಜ್ಞಾನವಾಗಲು ಬ್ರಹ್ಮಾನಂದದಲ್ಲಿ ಮುಣುಗಿ ಹೋದನು. ನಾಗನಾಥನು ದತ್ತಚರಣದ ಮೇಲೆ ಪ್ರೇಮಾನಂದದಿಂದ ಮಸ್ತಕವನ್ನಿಟ್ಟನು.

ದತ್ತನು ನಾಗನಾಥನನ್ನು ಎಬ್ಬಿಸಿ ಆಲಿಂಗಿಸಿದನು; ಮತ್ತು ಅಂದದ್ದೇನಂದರೆ:—ನೀನು ಆವಿರ್ಹೋತ್ರ ನಾರಾಯಣನ ಅವತಾರಿಕನಿರುವಿ. ಎಂದು ಹೇಳಿದನು. ಬಳಿಕ ದತ್ತನು ನಾಗನಾಥನನ್ನು ಕರೆದುಕೊಂಡು

ಹೋಗಬೇಕೆಂದು ವ್ಯಾನ ಮಂತ್ರದ ಪ್ರಯೋಗವನ್ನು ಮಾಡಿ ನಾಗನಾಥನ ಹಣೆಗೆ ವಿಭೂತಿಯನ್ನು ಸವರಿದನು. ಆ ಮೇಲೆ ವಾಯುವೇಗದಿಂದ ಅವರು ಒಂದು ಕ್ಷಣದಲ್ಲಿ ಅಲ್ಲಿಂದ ಬದರಿಕಾಶ್ರಮಕ್ಕೆ ಹೋದರು. ಅವರು ಶಿವಾಲಯದಲ್ಲಿ ಹೋದಕೂಡಲೆ ಉಮಾಕಾಂತನು ಪ್ರಕಟನಾದನು. ಶ್ರೀಶಂಕರ ದತ್ತಾತ್ರೇಯ ಇವರು ಒಬ್ಬರಿಗೊಬ್ಬರು ಅಪ್ಪಿಕೊಂಡರು. ದತ್ತನು ಶಂಕರನಿಗೆ ನಾಗನಾಥನ ಇತಿಹಾಸವನ್ನು ಹೇಳಿದನು. ಅದನ್ನು ಕೇಳಿ ಶಂಕರನು ನಾಗನಾಥನಿಗೆ ದೀಕ್ಷೆಯನ್ನು ಕೊಡುವದಾಗಿ ಹೇಳಿದನು. ಶಂಕರನ ಸೂಚನೆಯ ಮೇರೆಗೆ ದತ್ತನು ಆ ಸ್ಥಳದಲ್ಲಿ ಆರು ತಿಂಗಳವರೆಗೆ ಇದ್ದು ನಾಗನಾಥನಿಗೆ ಎಲ್ಲ ಅಸ್ತ್ರವಿದ್ಯೆಗಳನ್ನು ಕಲಿಸಿದನು. ನಾಗನಾಥನು ಹದಿನಾಲ್ಕು ವಿದ್ಯೆ ಅರವತ್ತುನಾಲ್ಕು ಕಲೆಗಳಲ್ಲಿ ಪಾರಂಗತನಾದನು. ಬಳಿಕ ದತ್ತಗುರುಗಳು ಅವನನ್ನು ನಾಗಅಶ್ವತ್ಥಕ್ಕೆ ಕರೆದುಕೊಂಡು ಹೋದರು. ಅಲ್ಲಿ ನಾಗನಾಥನು ಸರ್ವಸಾಧನಗಳನ್ನು ಮಾಡಿಕೊಂಡು ದೇವತೆಗಳನ್ನು ಪ್ರಸನ್ನ ಮಾಡಿಕೊಂಡನು. ದೇವಾಧಿದೇವತೆಗಳು ವರಪ್ರದಾನ ಮಾಡಲು, ಅವರು ಮತ್ತೆ ಬದರಿಕಾಶ್ರಮಕ್ಕೆ ಹೋದರು. ಅಲ್ಲಿ ದತ್ತನು ನಾಗನಾಥನಿಗೆ ನಾಥದೀಕ್ಷೆಯನ್ನು ಕೊಟ್ಟು ತಪಸ್ಸಿಗೆ ಕೂಡ್ರಿಸಿದನು. ತಪಸ್ಸು ಮುಗಿಯಲು, ನಾಗನಾಥನು ತೀರ್ಥ-ಯಾತ್ರೆಗೆ ಹೊರಟನು.

ನಾಗನಾಥನು ಗುರುಗಳ ಆಜ್ಞೆಯ ಮೇರೆಗೆ ಅನೇಕ ಪುಣ್ಯಕ್ಷೇತ್ರಗಳನ್ನು ಸಂಚರಿಸುತ್ತ ಬಾಲೇಘಾಟಕ್ಕೆ ಬಂದನು. ಅಲ್ಲಿ ಅವನು ಒಂದು ಅರಣ್ಯದಲ್ಲಿ ವಾಸಮಾಡಿದನು. ಕಸ್ತೂರಿಯನ್ನು ಬಚ್ಚಿಟ್ಟರೆ ಅದರ ಸುವಾಸನೆಯು ಮುಚ್ಚಲಾರದು. ಅದರಂತೆ ನಾಗನಾಥನ ಕೀರ್ತಿಯು ಊರೊಳಗೆ ಹಬ್ಬಿತು. ಸಹಸ್ರಗಟ್ಟಲೆ ಜನರು ನಾಗನಾಥನ ದರ್ಶನಕ್ಕೆ ಬರಹತ್ತಿದರು. ನಾಗನಾಥನು ಇರುವ ಅರಣ್ಯದಲ್ಲಿ ಒಂದು ಊರೇ ಆಯಿತು. ಈ ಮೇರೆಗೆ ನಾಗನಾಥನ ಮಹಾತ್ಮೆಯು ದಿವಸ ದಿವಸಕ್ಕೆ ಬೆಳೆಯಹತ್ತಿತು.

ಕೆಲವು ದಿವಸಗಳನಂತರ ಮಚ್ಛಿಂದ್ರನಾಥನು ಅಲ್ಲಿಗೆ ಹೋದನು. ಅಲ್ಲಿ ನಾಗನಾಥನ ಶಿಷ್ಯರು ಮಚ್ಛೀಂದ್ರನಿಗೆ ಅಡ್ಡೀಮಾಡಿದರು. ಮತ್ತು ಅಂದದ್ದೇನಂದರೆ:—ಗೋಸಾವಿಗಳೇ, ನೀವು ಇಲ್ಲಿಯೇ ನಿಲ್ಲಿರಿ; ನಾಗನಾಥನ ಅಪ್ಪಣೆಯ ಹೊರ್ತು ಯಾರೂ ಆಶ್ರಮದಲ್ಲಿ ಬರಕೂಡದು. ನಾವು

ನಾಗನಾಥಗುರುಗಳನ್ನು ಕೇಳಿಕೊಂಡು ಬರುವೆವು; ಎಂದರು. ಆ ಶಿಷ್ಯರ ಮಾತನ್ನು ಕೇಳಿ ಮಚ್ಛೀಂದ್ರನು ಕ್ರೋಧದಿಂದ ಸಂತಪ್ತನಾದನು. ನಾಗನಾಥನು ಸಂತನಿದ್ದು, ಈ ಅಟ್ಟಹಾಸವನ್ನು ಯಾಕೆ ನಡಿಸಿದ್ದಾನೆ? ಎಂದು ನಾಗನಾಥನಿಗೆ ದೋಷಕೊಟ್ಟನು. ದೇವದ್ವಾರ, ಸಾಧುದ್ವಾರ ಇವುಗಳು ಯಾವಾಗಲೂ ಮುಕ್ತವಿರಬೇಕು. ಆದರೆ ಇಲ್ಲಿ ಪ್ರತಿಬಂಧವಿದ್ದದರಿಂದ ಮಚ್ಛೀಂದ್ರನಿಗೆ ನಾಗನಾಥನ ಬಗ್ಗೆ ತಿರಸ್ಕಾರವುಂಟಾಯಿತು. ನಾಗನಾಥನು ಸಾಧುವೇಷದಿಂದ ಜನರಿಗೆ ಮೋಸಮಾಡುತ್ತಿರುವದರಿಂದ ಇವನನ್ನು ಶಿಕ್ಷಿಸಬೇಕೆಂದು ಮಾಡಿದನು. ಸಂತಜನರ ಸಹವಾಸದಲ್ಲಿದ್ದು, ಕಪಟಾಚರಣೆಯನ್ನು ಮಾಡುವ ಆ ಶಿಷ್ಯರಿಗೆ ಮಚ್ಛೀಂದ್ರನು ಒಳಿತಾಗಿ ಶಿಕ್ಷಿಸಿದನು. ಆ ಶಿಷ್ಯರ ಒದರುವಿಕೆಯನ್ನು ಕೇಳಿ ನಾಗನಾಥನ ಏಳುನೂರು ಜನ ಶಿಷ್ಯರು ಅಲ್ಲಿಗೆ ಬಂದರು. ಆ ಶಿಷ್ಯರ ಸಮುದಾಯವನ್ನು ಕಂಡು ಮಚ್ಛೀಂದ್ರನು ಸ್ಪರ್ಶ ಅಸ್ತ್ರದ ಪ್ರಯೋಗ ಮಾಡಿ ಆ ಶಿಷ್ಯರನ್ನೂ ಭೂಮಿಗೆ ಅಂಟಿಸಿ ಬಳಿಕ ಮಚ್ಛಿಂದ್ರನು ಅವರ ಕಪಾಳಕ್ಕೆ ಹೊಡೆಯುಹತ್ತಿದನು ಅದರಿಂದ ಎಲ್ಲ ಜನರು ಒದರಹತ್ತಿದರು

ಈ ಕಾಲಕ್ಕೆ ನಾಗನಾಥನು ತನ್ನ ಆಶ್ರಮದ ಅಂತಭಾಗದಲ್ಲಿ ಸಮಾಧಿಸೌಖ್ಯವನ್ನು ಅನುಭವಿಸುತ್ತ ಕುಳಿತುಕೊಂಡಿದ್ದನು. ಹೊರಗಿನ ಗದ್ದಲವನ್ನು ಕೇಳಿ ಸಮಾಧಿಭಂಗವಾಗಲು, ಎಚ್ಚತ್ತನು. ಧ್ಯಾನಭಂಗವಾದ್ದರಿಂದ ನಾಗನಾಥನು ಕ್ರುದ್ಧನಾದನು. ತನ್ನ ಶಿಷ್ಯರು ಒದರುವದನ್ನು ಕೇಳಿ ಸಿಟ್ಟಿಗೆದ್ದನು. ಮಚ್ಛಿಂದ್ರನಾಥನು ಕಣ್ಣಿಗೆ ನಾಥದೀಕ್ಷೆಯನ್ನು ಕೈಕೊಂಡಂತೆ ಕಾಣುತ್ತಾನೆ. ಇಂಥ ಯತಿಯು ಭ್ರಷ್ಟನಾಗಿರುವನು. ಎಂದು ಅವನನ್ನೂ, ಅವನ ಗುರುಗಳನ್ನೂ ನಿಂದಿಸಹತ್ತಿದನು. ಮತ್ತು ಮಚ್ಛಿಂದ್ರನನ್ನು ಶಿಕ್ಷಿಸಿ, ಅವನ ನಾಥಪಂಥವನ್ನು ಸೆಳೆದುಕೊಳ್ಳಬೇಕೆಂದು ಯೋಚಿಸಿ ತನ್ನ ಜೋಳಿಗೆಯೊಳಗಿನ ವಿಭೂತಿಯನ್ನು ತೆಗೆದುಕೊಂಡು ಗರುಡಬಂಧನ ವಿದ್ಯೆಯ ಪ್ರಯೋಗಮಾಡಿ ಸ್ವರ್ಗದೊಳಗಿನ ಗರುಡನನ್ನು ಬಂಧಿಸಿದನು. ಆ ಮೇಲೆ ವಿಭಕ್ತ ಅಸ್ತ್ರದ ಪ್ರಯೋಗಮಾಡಿ ತನ್ನ ಶಿಷ್ಯರನ್ನು ಬಿಡಿಸಿದನು. ಭೂಮಿಯಿಂದ ಮುಕ್ತವಾಗಿ ಆ ಶಿಷ್ಯಸಮುದಾಯವು ನಾಗನಾಥನ ಮರೆಗೆ ಬಂದು ಕುಳಿತಿತು. ಇವರೆಲ್ಲರನ್ನೂ ಚೂರ್ಣಮಾಡ

ಬೇಕೆಂದು ಮಚ್ಛಿಂದ್ರನು ಪರ್ವತಾಸ್ತ್ರವನ್ನು ಬಿಟ್ಟನು. ಆ ಅಸ್ತ್ರವು ತನ್ನ ಮೇಲೆ ಒರುವದನ್ನು ಕಂಡು ನಾಗನಾಥನು ವಜ್ರಾಸ್ತ್ರವನ್ನು ಬಿಟ್ಟು ಆ ಪರ್ವತವನ್ನು ಚೂರು ಮಾಡಿದನು. ತನ್ನ ಪರ್ವತವನ್ನು ನಾಶಮಾಡುವ ವಜ್ರಾಂಕಿತ ಇಂದ್ರನು ಬರುವದನ್ನು ಕಂಡು ಮಚ್ಛಿಂದ್ರನು ವಾತಾ ಕರ್ಷಣ ಪ್ರಯೋಗವನ್ನು ಮಾಡಿ ಇಂದ್ರನನ್ನು ಭೂಮಿಗೆ ಕೆಡವಿದನು. ವಜ್ರಕಾಳಿಯ ಜಪವನ್ನು ಮಾಡಿ ವಜ್ರಾಸ್ತ್ರವನ್ನು ನಾಶಗೊಳಿಸಿದನು. ಅದನ್ನು ಕಂಡು ನಾಗನಾಥನು ಕಿಡಿಕಿಡಿಯಾದನು. ಅವನು ವಾತಪ್ರೇರಕ ಅಸ್ತ್ರದ ಜಪಮಾಡಿ ಇಂದ್ರನನ್ನು ಸಾವಧಗೊಳಿಸಿದನು. ಅಮರೇಂದ್ರನು ಶುದ್ಧಿಯ ಮೇಲೆ ಬಂದು ಇಬ್ಬರೂ ನಾಥರು ಪ್ರತಾಪಿಗಳಾಗಿ ತೋರು ತ್ತಾರೆ. ಆದ್ದರಿಂದ ಇಲ್ಲಿ ನನ್ನ ಆಟವು ನಡೆಯಲಾರದೆಂದು ಇಂದ್ರನು ಸ್ವರ್ಗಲೋಕಕ್ಕೆ ಓಡಿಹೋದನು. ಇದನ್ನು ಕಂಡು ಮಚ್ಛಿಂದ್ರನು ಮತ್ತಿಷ್ಟು ಕೋಪಿಷ್ಟನಾದನು. ಅವನು ಶಕ್ತಿಮಂತ್ರದ ಜಪವನ್ನು ಮಾಡಿ ವಾಸವವೆಂಬ ಹೆಸರಿನ ಪ್ರಚಂಡ ಶಕ್ತಿಯನ್ನು ನಾಗನಾಥನಮೇಲೆ ಬಿಟ್ಟನು. ಅದು ಪ್ರಲಯಕಾಲದ ಅಗ್ನಿಯಂತೆ ಸರ್ವಭಕ್ಷಕವಾಗಿತ್ತು. ಆ ಶಕ್ತಿಯ ವಿಕ್ರಾಳ ಶಬ್ದವನ್ನು ಕೇಳಿ ಪರ್ವತವು ನಡುಗಹತ್ತಿತು. ಅದರ ಕರ್ಕಶ ವಾದ ಶಬ್ದದಿಂದ ಧರಣಿಯು ಧ್ವಂಸವಾಗುವಂತೆ ತೋರಿತು ಅರಣ್ಯದೊಳ ಗಿನ ಪಶುಪಕ್ಷಿಗಳು ಹಾರಿಹೋದವು. ನಾಗನಾಥನು ಬಂಧನವೆಂಬ ಮಂತ್ರ ವನ್ನು ಜಪಿಸಿ ಪ್ರತ್ಯೇಕ ಅಸ್ತ್ರದ ಮಂತ್ರದೇವತೆಗಳನ್ನು ಬಂಧಿಸಿಬಿಟ್ಟನು. ಸರ್ವ ದೈವತಗಳು ಕುಂಠಿತವಾದ ಕೂಡಲೆ ಮಚ್ಛಿಂದ್ರನು ಹೇಮಾದ್ರಿ ಯೆಂಬ ಹೆಸರಿನ ಅಸ್ತ್ರವನ್ನು ಬಿಟ್ಟನು. ಅದನ್ನು ನಿವಾರಿಸುವದಕ್ಕಾಗಿ ನಾಗನಾಥನು ವಾಸವೀ ಅಸ್ತ್ರವನ್ನು ಬಿಟ್ಟನು. ಶಕ್ತಿಯನ್ನು ನಾಶಗೊಳಿ ಸುವದಕ್ಕಾಗಿ ಮಚ್ಛಿಂದ್ರನು ಶಾಕಾಸ್ತ್ರವನ್ನು ಜಪಿಸಿದನು. ಆದರೆ ನಾಗ ನಾಥನ ಅಸ್ತ್ರದ ಮುಂದೆ ಮಚ್ಛಿಂದ್ರನ ಶಾಕಾಸ್ತ್ರದ ಆಟವು ನಡೆಯಲಿಲ್ಲ. ಆಗ ಮಚ್ಛಿಂದ್ರನಿಗೆ ಯಾವ ವಿಚಾರವೂ ತೋರದೆ ಸ್ತಬ್ಧನಾಗಿ ನಿಂತನು. ನಾಗನಾಥನು ಇದನ್ನು ಕಂಡು ಪನ್ನಗಾಸ್ತ್ರದ ಜಪವನ್ನು ಮಾಡಿದನು. ಅದರಿಂದ ಸಹಸ್ರಗಟ್ಟಲೆ ತಕ್ಷಕಗಳು ಉತ್ಪನ್ನವಾಗಿ ಮಚ್ಛಿಂದ್ರನನ್ನು ದಂಶ ಮಾಡಹತ್ತಿದವು. ಸರ್ಪವಿಷದಿಂದ ಮಚ್ಛಿಂದ್ರನು ಹಣ್ಣಾದನು. ಮತ್ತು

ತಾನು ಬದುಕಲಾರೆನೆಂದು ತಿಳಿದು ಗರುಡಾಸ್ತ್ರವನ್ನು ಜಪಿಸಿದನು. ನಾಗನಾಥನು ಮೊದಲೇ ಗರುಡನನ್ನು ಬಂಧಿಸಿದ್ದರಿಂದ ಮಚ್ಛಿಂದ್ರನು ಬಿಟ್ಟ ಗರುಡಾಸ್ತ್ರವು ಹಾರಿಹೋಯಿತು. ಎಲ್ಲ ತಕ್ಷಕಗಳೂ ಒಂದೇಸವನೆ ಕಚ್ಚುತ್ತ ನಡೆದದ್ದರಿಂದ ಮಚ್ಛಿಂದ್ರನು ವ್ಯಾಕುಲನಾದನು. ತನಗೆ ಅಂತ್ಯಕಾಲವು ಒದಗಿಬಂತೆಂದು ಅವನು ಗುರುಗಳ ಸ್ಮರಣೆಯನ್ನು ಮಾಡಲಾರಂಭಿಸಿದನು.

ಅವನ ಬಾಯೊಳಗಿಂದ ಜೊಲ್ಲು ಬೀಳಹತ್ತಿತು. ಕಣ್ಣುಗಳು ಬೆಳ್ಳಗಾದವು. ಅವನ ಬಾಯಿಂದ ದತ್ತನಾಮೋಚ್ಚಾರಣೆಯನ್ನು ಕಂಡು ನಾಗನಾಥನೂ ವಿಚಾರವಶನಾದನು. ಈ ಯತಿಯು ನಮ್ಮ ದತ್ತಗುರುಗಳನ್ನು ಯಾಕೆ ಸ್ಮರಿಸುತ್ತಾನೆ; ಇದನ್ನು ತಿಳಿದುಕೊಳ್ಳುವದಕ್ಕಾಗಿ ಅವನು ಮಚ್ಛೀಂದ್ರನ ಸಮೀಪಕ್ಕೆ ಹೋಗಿ ಅವನ ಗುರುಗಳ ಹೆಸರನ್ನು ವಿಚಾರಿಸಿದನು. ಅದನ್ನು ಕೇಳಿ ಮಚ್ಛೀಂದ್ರನು—"ನಾನು ಮಚ್ಛೀಂದ್ರನೆಂಬ ಹೆಸರಿನಿಂದ ಪ್ರಖ್ಯಾತನಾಗಿದ್ದು, ನನಗೆಶ್ರೀ ದತ್ತಾತ್ರಯನ ಅನುಗ್ರಹವಾಗಿದೆ. ನಾಥಪಂಥದೊಳಗಿನ ಮೊದಲನೇ ಯತಿಯು ನಾನಾಗಿದ್ದೇನೆ. ದತ್ತಾತ್ರಯನ ಮೊದಲನೇ ಪುತ್ರನು ನಾನೇ ಇದ್ದೇನೆ. ನನ್ನ ಹಿಂದೆ ಜಾಲಂದರ, ಭರ್ತರಿ, ರೇವಣ ಹೀಗೆ ದತ್ತ ಸುತರು ಆಗಿದ್ದಾರೆ; ಎಂದನು.

ಮಚ್ಛೀಂದ್ರನ ಮಾತನ್ನು ಕೇಳಿ ನಾಗನಾಥನ ಮನಸ್ಸು ಕರಗಿತು. ಅವನು ಗರುಡ ಬಂಧನವನ್ನು ಬಿಡಿಸಿದನು. ಅಸಂಖ್ಯ ಗರುಡರು ಪೃಥ್ವಿಯ ಮೇಲೆ ಇಳಿದರು. ಗರುಡರ ಭಯಕ್ಕಾಗಿ ಸರ್ಪಗಳು ತಮ್ಮ ವಿಷವನ್ನು ಶೋಷಣಮಾಡಿಕೊಂಡು ಓಡಿಹೋದವು ನಾಗನಾಥನು ಮಚ್ಛೀಂದ್ರನ ಚರಣದ ಮೇಲೆ ಮಸ್ತಕವನ್ನಿಟ್ಟು—"ಹೇ ನಾಥ, ತಾವು ನನ್ನ ಗುರುಬಂಧು ಇದ್ದು ಎಲ್ಲ ಯತಿಗಳಲ್ಲಿ ಶ್ರೇಷ್ಠರಿದ್ದೀರಿ. ಅಂದಮೇಲೆ ತಾವು ನನಗೆ ಬಾಂಧವರಂತೆ ಇರುವಿರಿ. ಮತ್ತು ನನ್ನ ಗುರುಗಳೇ ಆಗಿರುವಿರಿ ಎಂದು ಪ್ರಾರ್ಥಿಸಿದನು. ನಾಗನಾಥನೂ ದತ್ತಪುತ್ರನಿರುವನೆಂದು ತಿಳಿದು ಮಚ್ಛಿಂದ್ರನು ಅವನ ಮೇಲಿನ ಸಿಟ್ಟನ್ನು ಬಿಟ್ಟನು. ಅವನಲ್ಲಿ ಬಂಧುಪ್ರೇಮವು ಉತ್ಪನ್ನವಾಯಿತು. ಮಚ್ಛಿಂದ್ರನಿಗೆ ನಾಗನಾಥನ ಪರಾಕ್ರಮವನ್ನು ಕಂಡು ಕೌತುಕವಾಯಿತು. ಅದರಿಂದ ಮಚ್ಛಿಂದ್ರನು ನಾಗನಾಥನನ್ನು

ಗೌರವಿಸಿದನು. ನಾಗನಾಥನು ಮಚ್ಛಿಂದ್ರನನ್ನು ಬಹಳ ಪೂಜ್ಯಬುದ್ಧಿಯಿಂದ ಆಶ್ರಮಕ್ಕೆ ಕರೆದೊಯ್ದು ಆಸನದ ಮೇಲೆ ಕುಳ್ಳಿರಿಸಿದನು. ಮತ್ತು ಮಚ್ಛಿಂದ್ರನನ್ನು ಆದರದಿಂದ ಒಂದು ತಿಂಗಳವರೆಗೆ ತನ್ನ ಬಳಿಯಲ್ಲಿರಿಸಿಕೊಂಡನು.

ಒಂದು ದಿವಸ ಅವರಿಬ್ಬರು ಆಶ್ರಮದಲ್ಲಿ ಕುಳಿತಿರುವಾಗ ಮಚ್ಛಿಂದ್ರನು ಆಶ್ರಮದ ದ್ವಾರವನ್ನು ಪ್ರತಿಬಂಧಿಸಿರುವ ಕಾರಣವನ್ನು ವಿಚಾರಿಸಿ ಭಾವಿಕಜನರು ಸಾಧುದರ್ಶನಕ್ಕಾಗಿ ಬರುತ್ತಾರೆ. ಅವರಿಗೆ ಪ್ರತಿಬಂಧಿಸುವದು ಸರಿಯಲ್ಲ. ಹೀಗೆ ಪ್ರತಿಬಂಧಿಸಿದ್ದರಿಂದಲೇ ತನಗೆ ಯುದ್ಧ ಮಾಡುವ ಸಮಯವು ಬಂತು ಎಂದನು. ನಾಗನಾಥನು ಅದಕ್ಕೆ—"ನಾನು ಯಾವಾಗಲೂ ಆತ್ಮಧ್ಯಾನದಲ್ಲಿ ತಲ್ಲೀನನಾಗಿರುತ್ತೇನೆ. ಜನರು ಬಂದು ನನ್ನ ಧ್ಯಾನಕ್ಕೆ ಪ್ರತಿಬಂಧ ಮಾಡುವರೆಂದು ತಿಳಿದು ಶಿಷ್ಯರನ್ನು ಕಾವಲಿರಿಸಿ ಹಚ್ಚಿರುವೆನು ಎಂದನು. ಆಗ ಮಚ್ಛಿಂದ್ರನು ಉಪದೇಶಿಸಿದ್ದೇನೆಂದರೆ—"ಹೇ ಗುರುಬಂಧೂ, ಈ ಕೃತ್ಯವು ನಿಮಗೆ ಶೋಭಿಸಲಾರದು. ಪ್ರಾರಬ್ಧ ಪಾತಕವು ನಷ್ಟವಾಗಿ ದೇಹವು ಪವಿತ್ರವಾಗಬೇಕೆಂಬ ಇಚ್ಛೆಯಿಂದ ಎಷ್ಟೋ ದೀನ, ಬಡವರು ಸಾಧುಗಳ ದರ್ಶನಕ್ಕೆ ಬರುತ್ತಾರೆ. ಮಾರ್ಗದಲ್ಲಿ ಅಡ್ಡಿಯಾಗಲು ವಿಮುಖರಾಗಿ ತಿರುಗಿ ಹೋಗುತ್ತಾರೆ. ಇದು ತಮಗೆ ಶೋಭಿಸಲಾರದು. ನಾಥಪಂಥದವರಿಗೆ ಇದು ತೀರ ಕ್ಷುಲ್ಲಕತನವು. ಪರೋಪಕಾರಕ್ಕಾಗಿಯೇ ತಾವು ಜನ್ಮವನ್ನು ಎತ್ತಿರುತ್ತೀರಿ. ಜಗತ್ತಿನೊಳಗಿನ ಸಾತ್ವಿಕ ಮತ್ತು ದೀನ ಜನರ ದುಃಖವನ್ನು ಹರಣ ಮಾಡುವದೇ ತಮ್ಮ ಕರ್ತವ್ಯವಾಗಿದೆ. ಇನ್ನು ಮೇಲೆಯಾದರೂ ತಾವು ನಾನು ಹೇಳುವ ಮಾರ್ಗವನ್ನು ಸ್ವೀಕರಿಸಬೇಕು.

ಹೀಗೆ ಉಪದೇಶಿಸಿ ಮಚ್ಛಿಂದ್ರನಾಥನು ತೀರ್ಥಯಾತ್ರೆಗೆ ಹೋದನು. ಮಚ್ಛಿಂದ್ರನ ಉಪದೇಶದಂತೆ ನಾಗನಾಥನು ದ್ವಾರವನ್ನು ಕಾಯುವದನ್ನು ಬಿಡಿಸಿ ಎಲ್ಲರಿಗೆ ದರ್ಶನಲಾಭವನ್ನು ಕೊಡಹತ್ತಿದನು. ಜನರು ಗುಂಪುಗುಂಪಾಗಿ ನಾಗನಾಥನ ಭೆಟ್ಟಿಗಾಗಿ ಬರಹತ್ತಿದರು. ನಾಥನ ಕೃಪೆಯಿಂದ ಎಷ್ಟೋ ಜನರ ಪೀಡೆಯು ನಾಶವಾಯಿತು. ಹೀಗಿರಲು ಕೆಲವು ದಿವಸಗಳ ನಂತರ ಮಠದಲ್ಲಿ ಒಬ್ಬ ಸ್ತ್ರೀಯು ಮೃತಪಟ್ಟಳು. ಅವಳು ನಾಥನ

ಚಾಂಗುಲನೆಂಬ ಹೆಸರಿನ ಶಿಷ್ಯನ ಹೆಂಡತಿಯಾಗಿದ್ದಳು. ನಾಗನಾಥನು ಕೃಪೆಮಾಡಿ ಆ ಸ್ತ್ರೀಯನ್ನು ಸಜೀವಗೊಳಿಸಿದನು, ಈ ಸುದ್ದಿಯು ಊರೊಳಗೆ ಹಬ್ಬಿತು. ಆ ಮೇಲೆ ಕೇಳುವದೇನು? ನಾಥನ ಆಶ್ರಮಕ್ಕೆ ಪ್ರತಿದಿವಸ ಪ್ರೇತವನ್ನು ತರಹತ್ತಿದರು. ನಾಥನಾದರೂ ಆ ಪ್ರೇತಗಳನ್ನು ಎಬ್ಬಿಸಿ ಮನೆಗೆ ಕಳಿಸುತ್ತಿದ್ದನು.

ನಾಗನಾಥನ ಆಶ್ರಮದೊಳಗೆ ನಡೆದ ಈ ವಿಲಕ್ಷಣ ಕೃತಿಯನ್ನು ಕಂಡು ಯಮಧರ್ಮನಿಗೆ ಬಹಳ ವ್ಯಥೆಯು ಉಂಟಾಯಿತು. ಅವನು ಸತ್ಯಲೋಕಕ್ಕೆ ಹೋದನು. ಅಲ್ಲಿ ತನ್ನ ಸಂಕಟವನ್ನು ಬ್ರಹ್ಮದೇವನಿಗೆ ಅರುಹಿದನು. ಬ್ರಹ್ಮದೇವನು ಲಗಬಗೆಯಿಂದ ವಡವಾಳಕ್ಕೆ ಬಂದನು. ಅವನು ನಾಗನಾಥನಿಗೆ ಬಹುಪರಿಯಿಂದ ಸ್ತುತಿಸಿ ಪ್ರೇತಗಳನ್ನು ಸಜೀವ ಗೊಳಿಸುವದನ್ನು ಬಿಡಿಸಿದನು. ನಾಗನಾಥನು ತನ್ನ ಒಂಬತ್ತು ಮಂದಿ ಶಿಷ್ಯರನ್ನು ಅನುಗ್ರಹಿಸಿದನು. ಮತ್ತು ಅವರಿಗೆ ಎಲ್ಲ ವಿದ್ಯೆಗಳನ್ನು ಉಪ ದೇಶಿಸಿ ಶಾಬರೀವಿದ್ಯೆಯ ಜ್ಞಾನಮಾಡಿಕೊಟ್ಟನು. ಚಾಂಗುಲ, ಧರ್ಮ, ದೇವ, ಭೌಮ, ಸಿದ್ಧ, ಭೋಜನ, ಕೋಕಿಳಾ, ಸುಂದರ, ಜಕ್ಷು ಎಂಬ ಒಂಭತ್ತು ಮಂದಿ ಶಿಷ್ಯರು ಪ್ರಖ್ಯಾತರಾದರು. ಅವರಿಗೆ ಸಿದ್ಧರೆಂಬ ಪದ ವಿಯು ಪ್ರಾಪ್ತವಾಯಿತು. ನಾಗನಾಥನು ಒಟ್ಟಿಗೆ ಒಂದು ಕೋಟಿ ಒಂದು ಲಕ್ಷ ಮಂತ್ರವನ್ನು ರಚಿಸಿದನು. ಸಮಾಧಿಯೋಗವು ಮುಗಿಯುವ ಕಾಲಕ್ಕೆ ನಾಗನಾಥನು ಭ್ರಮಿಷ್ಠನಾದ ಬಹಿರಂಭಟ್ಟ ಎಂಬ ಬ್ರಾಹ್ಮಣ ನನ್ನು ಉದ್ಧಾರ ಮಾಡಿದನು. ಇದರಂತೆ ನಾಗನಾಥನು ದಾಮಾಜೀ ಎಂಬ ಭಕ್ತನನ್ನು ಉದ್ಧಾರ ಮಾಡಿದನು.



# ಅಧ್ಯಾಯ ೩೮

## ಚರ್ಪಟಿನಾಥನ ಚರಿತ್ರ.



ಶಂಕರ-ಪಾರ್ವತಿ ಇವರ ಲಗ್ನ ಸಮಾರಂಭಕ್ಕಾಗಿ ಅನೇಕ ಸುರರು ಆಗ ಮಿಸಿದ್ದರು. ಬ್ರಹ್ಮದೇವನೂ ಆ ಲಗ್ನಕ್ಕೆ ಬಂದಿದ್ದನು. ಪಾರ್ವತೀಮಾತೆಯ ಸೌಂದರ್ಯದಿಂದ ಬ್ರಹ್ಮದೇವನಿಗೆ ಮೋಹವುಂಟಾಯಿತು. ಶ್ರೀ ಶಂಕರ ನಿಗೆ ರೂಪವತಿಯಾದ ಪಾರ್ವತಿಯು ಪ್ರಾಪ್ತಳಾದ್ದರಿಂದ ಆತನಿಗೆ ಉತ್ತಮ ವಾದ ಸಂತತಿಯು ಪ್ರಾಪ್ತವಾಗುವದು. ಅದರಂತೆ ನನಗೂ ಪಾರ್ವತಿ ಯಿಂದ ಆಗಬೇಕೆಂದು ಬಯಸಿದನು. ಈ ಇಚ್ಛೆಯು ಬ್ರಹ್ಮದೇವನಿಗೆ ಬಹು ಕಾಲದಿಂದ ಇತ್ತು. ಇಚ್ಛೆಯ ಪ್ರಾಬಲ್ಯದಿಂದ ಅವನಿಗೆ ಅರವತ್ತು ಸಾವಿರ ಪುತ್ರರು ಉತ್ಪನ್ನರಾದರು. ಅವರೇ ಮುಂದೆ ವಾಲಖಿಲ್ಯರೆಂಬ ಹೆಸರಿನಿಂದ ಪ್ರಸಿದ್ಧರಾದರು, ಎಷ್ಟೋ ಜೀವರಾಶಿಗಳು ನಿರ್ಮಾಣವಾದವು; ಆದರೆ ಅವು ಆ ಕಾಲಕ್ಕೆ ಉದಯವಾಗಲಿಲ್ಲ. ಅವು ತೀರ ಸೂಕ್ಷ್ಮವಾಗಿ ದ್ದದರಿಂದ ಅದೃಶ್ಯರೂಪದಿಂದ ಉಳಿದಿದ್ದವು. ಲಗ್ನವಿಧಿಯು ಮುಗಿಯಲು, ಸೇವಕರು ಆ ಕಸವನ್ನು ಬಳೆಯುವಾಗ ಲಾಜಾಹೋಮದ ಬೂದಿಯನ್ನೂ ಬಳಿದು ಗಂಗೆಯಲ್ಲಿ ಒಗೆದುಬಿಟ್ಟರು. ಪ್ರವಾಹದಲ್ಲಿ ಹರಿಯುತ್ತ ಆ ಕಸವು ದರ್ಭದಿನಡುಗಡ್ಡೆಯಲ್ಲಿ ಸಿಕ್ಕಿಕೊಂಡಿತು. ಆ ಕಸದಲ್ಲಿ ಬ್ರಹ್ಮಜನ್ಯ ಬೀಜವು ವಾಸವಾಗಿತ್ತು. ಆ ಬೀಜದಲ್ಲಿ ಪಿಪ್ಪಲಾಯನ ಹೆಸರಿನ ನಾರಾಯಣನು ಬೆರೆತುಕೊಂಡನು. ಕೆಲ ಹೊತ್ತಿನ ಮೇಲೆ ಕೆಲವು ಚಿಗರೆಗಳು ದರ್ಭವನ್ನು ಮೇಯುವದಕ್ಕಾಗಿ ಆ ಗಡ್ಡೆಗೆ ಬಂದವು. ಅದರೊಳಗಿನ ಒಂದು ಚಿಗ ರೆಯ ಮನಸ್ಸು ಪುತ್ರೋತ್ಪತ್ತಿಯ ಇಚ್ಛೆಯಿಂದ ವ್ಯಾಪ್ತವಾಗಿತ್ತು.

ಚಿಗರೆಯು ದರ್ಭಮೂಲವನ್ನು ಕೆದರಹತ್ತಿತು. ಮತ್ತು ಆ ಚಿಗ ರೆಯ ಮುಖದೊಳಗಿನ ಜೊಲ್ಲು ಆ ಗಡ್ಡೆಯ ಮೇಲೆ ಬಿದ್ದಿತು. ಅದರ ಹಸಿಯು ಅಲ್ಲಿರುವ ಬ್ರಹ್ಮಜೀವನಕ್ಕೆ ಮುಟ್ಟಿತು. ಅಲ್ಲಿ ಜೀವವು ಅದೃಶ್ಯ

ರೂಪದಿಂದ ಇತ್ತು. ಜನುವು ಅದಕ್ಕೆ ತಲುಪಲು, ಆ ಜೀವವು ಮೆಲ್ಲ ಮೆಲ್ಲನೆ ದೇಹರೂಪದಿಂದ ಬೆಳೆಯುತ್ತಿತು. ನವಮಾಸಗಳು ತುಂಬಲು, ಅದು ಪೂರ್ಣದೇಹವನ್ನು ಹೊಂದಿ ಉದಯವಾಯಿತು.

ಅದೇ ಕಾಲಕ್ಕೆ ಆ ಸ್ಥಳದಲ್ಲಿ ಸತ್ಯಶ್ರವ್ಯನೆಂಬ ಹೆಸರಿನ ಒಬ್ಬಬ್ರಾಹ್ಮಣನು ದರ್ಭವನ್ನು ಕೊಯ್ಯುವ ಸಲುವಾಗಿ ಬಂದನು. ಆ ಬ್ರಾಹ್ಮಣನು ಸುಶೀಲ ಮತ್ತು ಪವಿತ್ರನಾಗಿದ್ದು, ಕಾಶೀಕ್ಷೇತ್ರದಲ್ಲಿ ವಾಸಿಸುತ್ತಿದ್ದನು. ಆ ಬ್ರಾಹ್ಮಣನು ಗಡ್ಡೆಯೊಳಗಿರುವ ಕೂಸನ್ನು ಕಂಡನು. ಆ ಮಗುವು ದೇದೀಪ್ಯಮಾನವಾದ ಕಾಂತಿಯಿಂದ ಹೊಳೆಯುತ್ತಿತ್ತು. ಅದು ಸೂರ್ಯತೇಜದಿಂದ ಸಗುಣಸ್ವರೂಪವನ್ನು ಹೊಂದಿರುವದಾಗಿ ಕಂಡುಬಂತು. ಆದರೆ ಆ ಕೂಸನ್ನು ಮುಟ್ಟಲಿಕ್ಕೆ ಆ ಬ್ರಾಹ್ಮಣನಿಗೆ ಧೈರ್ಯವಾಗಲಿಲ್ಲ. ಮೋಹ ಮಾತ್ರ ಉಂಟಾಯಿತು. ಹೀಗಾಗಿ ಅವನು ವಿಚಾರದಲ್ಲಿ ಮುಣುಗಿದನು. ಭಾಗೀರಥಿಯ ದಂಡೆಯ ಮೇಲೆ ದೊಡ್ಡ ದೊಡ್ಡ ವನಗಳಿದ್ದು, ಅದರಲ್ಲಿ ಅನೇಕ ಘಾತಕವಾದ ಪಶುಗಳು ವಾಸಮಾಡಿಕೊಂಡಿದ್ದು ಬ್ರಾಹ್ಮಣನಿಗೆ ತಿಳಿದಿತ್ತು. ಆ ಕ್ರೂರ ಪಶುಗಳು ನೀರು ಕುಡಿಯಲಿಕ್ಕೆ ಬಂದಾಗ ಈ ಕೂಸಿಗೆ ಅಪಾಯಗೊಳಿಸಬಹುದೆಂದು ಯೋಚಿಸಿ, ಬ್ರಾಹ್ಮಣನು ಕೂಸಿನ ಬಳಿಯಲ್ಲಿ ನಿಂತುಕೊಂಡನು. ಮುಟ್ಟಿದರೆ ಅಪಾಯವಾಗಬಹುದೆಂಬ ಭೀತಿಯಿಂದ ಕೂಸನ್ನು ಸ್ಪರ್ಶಮಾಡಲಿಲ್ಲ.

ಕೂಸು ಕೈಕಾಲುಗಳನ್ನು ಅಲ್ಲಾಡಿಸುತ್ತ ರೋದನ ಮಾಡುತ್ತಿತ್ತು. ಆ ಕೂಸಿನ ಬಾಲಲೀಲೆಯನ್ನು ಕಂಡು ಸ್ವರ್ಗದೊಳಗಿನ ದೇವತೆಗಳು ಆನಂದಪಟ್ಟರು. ಸಾಕ್ಷಾತ್ ಪಿಪ್ಪಲಾಯನ ನಾರಾಯಣನೇ ಜನಿಸಿದ್ದರಿಂದ ಅವನ ದರ್ಶನದಿಂದ ನಾವು ಕೃತಾರ್ಥರಾದೆವೆಂದು ದೇವತೆಗಳು ನಮಸ್ಕಾರಮಾಡಿದರು. ಆ ಹುಡುಗನ ಮೇಲೆ ದೇವತೆಗಳು ಹೂವಿನ ಮಳೆಗರೆದರು. ಅದಕ್ಕೆ ಆ ಬ್ರಾಹ್ಮಣನು ಅಂಜಿ ಓಡಿದನು. ಆಗ ದೇವತೆಗಳು ನಾರದರನ್ನು ಕಳಿಸಿ ಬ್ರಾಹ್ಮಣನನ್ನು ನಿಲ್ಲಿಸಿದರು. ನಾರದನು ಮುಂದೆ ಬಂದು ಧೈರ್ಯ ಹೇಳಿದನು. ನಾರದನ ಮಾತನ್ನು ಕೇಳಿ ಸತ್ಯಶ್ರವ್ಯ ಬ್ರಾಹ್ಮಣನಿಗೆ ಕೇಮುಟ್ಟಿಗೆ ಧೈರ್ಯಬಂತು ಆಗ ಎಲ್ಲ ಸಂಗತಿಯನ್ನು ಹೇಳಿದನು. ನಾರದನು ಅದನ್ನು ಕೇಳಿ ಆ ಬ್ರಾಹ್ಮಣನ ಕೈಹಿಡಕೊಂಡು ಒಂದು ಗಿಡದ

ಅಡಿಯಲ್ಲಿ ಕರೆದುಕೊಂಡು ಹೋಗಿ ಕೂಡ್ರಿಸಿ ಧೈರ್ಯಕೊಟ್ಟನು. ಅದರಿಂದ ಬ್ರಾಹ್ಮಣನ ಚಿತ್ತವು ಶಾಂತವಾಯಿತು. ಆಗ ನಾರದರು— "ಬ್ರಾಹ್ಮಣಾ, ನೀನು ಗಡ್ಡೆಯಲ್ಲಿ ದರ್ಭೆ ಕೊಯ್ಯುವಾಗ ದೂರಿಂದ ನಾನು ನಿನ್ನನ್ನು ನೋಡಿದೆನು. ಆ ಸಮಯದಲ್ಲಿ ಆಕಾಶದೊಳಗೆ ದೇವತೆಗಳು ಸಂಚರಿಸುವದನ್ನೂ ಕಂಡೆನು. ದೇವಗಣಗಳು ಆ ಕೂಸಿನ ಮೇಲೆ ಪುಷ್ಪದ ಮಳೆಗರೆದರು. ಆ ದೇವತೆಗಳಿಗೆ ನಿನ್ನ ಹೆಸರು ಗೊತ್ತಾಗಿ ಒದರುವದನ್ನು ಕೇಳಿದೆನು. ಆಗ ನನಗೂ ನಿನ್ನ ಹೆಸರು ಸತ್ಯಶ್ರವ್ಯನೆಂದು ಗೊತ್ತಾಯಿತು. ನಿನ್ನ ಊರು ಯಾವದು? ನಿನ್ನ ಮನೆ ಎಲ್ಲಿದೆ? ಹೇಗೇ ಇರಲಿ; ಈಗ ನಾನು ನಿನಗೆ ಹೇಳುವದಿಷ್ಟೇ; ನೀನು ಆ ಗಡ್ಡೆಯೊಳಗಿರುವ ಹುಡುಗನನ್ನು ನಿಃಶಂಕೆಯಿಂದ ಮನೆಗೆ ತೆಗೆದುಕೊಂಡು ಹೋಗಿ ಪ್ರೇಮದಿಂದ ಪಾಲನ ಮಾಡು. ಎಲೋ ಬ್ರಾಹ್ಮಣಾ, ಆ ಬಾಲಕನು ಸಾಮಾನ್ಯನಿರದೆ ಸಾಕ್ಷಾತ್ ಪಿಪ್ಪಲಾಯನನೆಂಬ ನಾರಾಯಣನ ಅವತಾರಿಕನಿದ್ದಾನೆ. ಆದ್ದರಿಂದ ಏನೂ ಸಂದೇಹಪಡದೆ ಮನೆಗೆ ಒಯ್ದು ರಕ್ಷಣೆ ಮಾಡು."

ನಾರದರ ಮಾತನ್ನು ಕೇಳಿ ಸತ್ಯಶ್ರವ್ಯ ಬ್ರಾಹ್ಮಣನು ಸ್ತಬ್ಧನಾದನು. ನನ್ನ ಹೆಸರು ಸ್ವರ್ಗದೊಳಗಿನ ದೇವತೆಗಳಿಗೆ ಹೇಗೆ ಗೊತ್ತಾಯಿತು? ಎಂದು ವಿಚಾರಿಸಿದನು. ಕಡೆಗೆ ಈ ಮಾತು ಸತ್ಯವೋ ಅಸತ್ಯವೋ ಎಂದು ತಿಳಿದುಕೊಳ್ಳುವದಕ್ಕಾಗಿ ಅವನು ಆಕಾಶದ ಕಡೆಗೆ ನೋಡಿದನು, ಆಗ್ಗೆ ನಾರದರ ಕೃಪೆಯಿಂದ ಆಕಾಶದೊಳಗಿನ ದೇವತೆಗಳ ಸಮೂಹವು ಕಂಡಿತು. ಅದನ್ನು ಕಂಡ ಒಳಿಕ ವಿಪ್ರರೂಪಿಯಾದ ನಾರದನ ಮಾತಿನಮೇಲೆ ಪೂರ್ಣ ನಂಬಿಗೆಯು ಕೂಳಿತಿತು. ಆಗ ಬ್ರಾಹ್ಮಣನು ನಾರದನಿಗೆ ಅಲ್ಲಿಯವರೆಗೆ ಬಂದು ಆ ಕೂಸನ್ನು ನನ್ನ ಕೈಯೊಳಗೆ ಕೊಡಬೇಕೆಂದು ಪ್ರಾರ್ಥಿಸಿದನು. ಸತ್ಯಶ್ರವ್ಯನು ಆ ಹುಡುಗನನ್ನು ಬಿಗಿಯಾಗಿ ಅಪ್ಪಿಕೊಂಡು ಬಹಳ ಆನಂದವನ್ನು ಹೊಂದಿದನು. ನಾರದನು ಆ ಹುಡುಗನಿಗೆ ಚರ್ಪಟನೆಂಬ ಹೆಸರನ್ನಿಟ್ಟು ದೇವಲೋಕಕ್ಕೆ ಹೊರಟುಹೋದನು. ಸತ್ಯಶ್ರವ್ಯನು ಚರ್ಪಟನೊಡನೆ ತನ್ನ ಊರ ಮಾರ್ಗವನ್ನು ಹಿಡಿದನು.

ಸತ್ಯಶ್ರವ್ಯ ಬ್ರಾಹ್ಮಣನ ಹೆಂಡತಿಯ ಹೆಸರು ಚಂದ್ರಾಬಾಯಿ ಎಂದಿತ್ತು. ಅವಳು ಸುಂದರಳೂ, ಸುಲಕ್ಷಣವುಳ್ಳವಳೂ, ಸದ್ಗುಣಿಯೂ,

ಧರ್ಮಶೀಲಳೂ ಇದ್ದಳು. ಪಾತಿವ್ರತ್ಯದಿಂದ ಅನುಸೂಯೆಯನ್ನು ಹೋಲು ತ್ತಿದ್ದಳು. ಸತ್ಯಶ್ರವ್ಯಬ್ರಾಹ್ಮಣನು ಮನೆಗೆ ಹೋಗಿ ಹೆಂಡತಿಯನ್ನು ಕುರಿತು—ನಾನು ಇಂದು ದರ್ಭವನ್ನು ಕೊಯ್ಯಲಿಕ್ಕೆ ಹೋದಾಗ ಒಂದು ಅಪೂರ್ವಲಾಭವಾಗಿದೆ. ದೇವತೆಗಳು ನಮಗೆ ಈ ಪುತ್ರನನ್ನು ದಯಪಾಲಿ ಸಿದ್ದಾರೆ ನೋಡು; ಇವನ ಹೆಸರು ಚರ್ಪಟನೆಂದು ಅದೆ. ನೀನು ಇವನನ್ನು ಚನ್ನಾಗಿ ರಕ್ಷಿಸು, ಎಂದನು. ಪತಿಯ ಮಾತನ್ನು ಕೇಳಿ ಚಂದ್ರಾಬಾ ಯಿಗೆ ಆನಂದವಾಗಿ ಸುದೈವದಿಂದ ಈ ಸದ್ವಂಶ ಬಳ್ಳಿಯು ದೊರೆಯಿತು ಎಂದಳು. ಚಂದ್ರಾಬಾಯಿಯು ಆ ಬಾಲಕನನ್ನು ರಕ್ಷಿಸತೊಡಗಿದಳು. ದರಿದ್ರನಿಗೆ ಧನವು ದೊರೆತಂತೆ ಚಂದ್ರಾಬಾಯಿಯ ಸ್ಥಿತಿಯಾಯಿತು. ಬಳಿಕ ಆ ಕೂಸನ್ನು ಎರೆದು ಹಾಲುಣಿಸಿ ತೊಟ್ಟಿಲದೊಳಗೆ ಮಲಗಿಸಿದಳು.

ಸತ್ಯಶ್ರವ್ಯ ಮತ್ತು ಚಂದ್ರಾಬಾಯಿ ಈ ದಂಪತಿಗಳು ಬಹಳ ಉತ್ಸಾ ಹದಿಂದ ಚರ್ಪಟನನ್ನು ಉತ್ತಮ ರೀತಿಯಿಂದ ಸಂಗೋಪನೆಮಾಡಿದರು. ಚರ್ಪಟನಿಗೆ ಏಳನೇ ವರ್ಷವು ಮುಗಿಯಲು ಆ ಬ್ರಾಹ್ಮಣನು ಅವನಿಗೆ ಮೌಂಜೀಬಂಧನವನ್ನು ಮಾಡಿದನು. ಆ ಮೇಲೆ ಚರ್ಪಟನು ತಂದೆಯ ಬಳಿ ಯಲ್ಲಿ ವೇದಾಧ್ಯಯನ ಮಾಡಿ ನ್ಯಾಯ, ಮೀಮಾಂಸ, ವ್ಯಾಕರಣ ಇವುಗ ಳಲ್ಲಿ ನಿಪುಣನಾದನು. ಈ ಕ್ರಮದಿಂದ ಕೆಲವು ದಿವಸಗಳು ಕಳೆಯಲು ನಾರದ ಋಷಿಗಳು ಸಂಚರಿಸುತ್ತ ಸತ್ಯಶ್ರವ್ಯ ಬ್ರಾಹ್ಮಣನ ಗ್ರಾಮಕ್ಕೆ ಬಂದರು. ಆಗ ಅವರಿಗೆ ಚರ್ಪಟಿಯ ಸ್ಮರಣವಾಗಿ ಅತಿಥಿ ವೇಷದಿಂದ ಆ ಬ್ರಾಹ್ಮಣನ ಮನೆಗೆ ಹೋದರು. ಅಲ್ಲಿ ಅವರು ಸತ್ಯಶ್ರವ್ಯನಿಂದ ಸನ್ಮಾ ನಹೊಂದಿದರು. ಬಳಿಕ ಬ್ರಾಹ್ಮಣನು ಚರ್ಪಟಿಯನ್ನು ತೋರಿಸಿದನು. ಆ ಕಾಲಕ್ಕೆ ಚರ್ಪಟಿಗೆ ಹನ್ನೆರಡು ವರ್ಷಗಳು ಆಗಿದ್ದವು. ಅವನು ವಿದ್ಯೆ ಯ ತೇಜದಿಂದ ಮಿನುಗುತ್ತಿದ್ದನು. ಚರ್ಪಟಿಯು ಬ್ರಹ್ಮದೇವನ ಪುತ್ರ ನಾದ್ದರಿಂದ ನಾರದನು ಆ ಹುಡುಗನನ್ನು ಬಂಧುಸಮಾನ ಭಾವಿಸಿದನು. ಬಳಿಕ ನಾರದನು ಬದರಿಕಾಶ್ರಮಕ್ಕೆ ಹೋಗಿ ಶ್ರೀ ದತ್ತಾತ್ರೇಯ, ಮಚ್ಛಿಂ ದ್ರ, ಶಂಕರ ಈ ಮೂರೂ ಮೂರ್ತಿಗಳ ದರ್ಶನವನ್ನು ಹೊಂದಿ ಸಂತುಷ್ಟ ನಾದನು. ದತ್ತಾತ್ರೇಯ, ಮಚ್ಛಿಂದ್ರ, ಶಂಕರರು ನಾರದರಿಗೆ ಬಂದ ಕಾರ ಣವನ್ನು ವಿಚಾರಿಸಲು, ನಾರದನು ಚರ್ಪಟಿಯ ಎಲ್ಲ ಸಂಗತಿಯನ್ನು ಹೇಳಿ

ದನು. ಆಗ ಶಂಕರನು ದತ್ತಾತ್ರೇಯನಿಗೆ ಚರ್ಪಟಿಯ ಮೇಲೆ ಅನುಗ್ರಹ ಮಾಡಲು ಹೇಳಿದನು.

ಆದಿನಾಥ ಶಂಕರನ ಮಾತನ್ನು ಕೇಳಿ ದತ್ತಾತ್ರೇಯನು ಹೇಳಿದ್ದೇನಂದರೆ—"ಪಶ್ಚಾತ್ತಾಪವಾದ ವಿನಃ ನಿಜವಾದ ಹಿತಪ್ರಾಪ್ತಿಯಾಗಲಾರದು. ಎಲ್ಲಿಯ ವರೆಗೆ ಚರ್ಪಟನಿಗೆ ಪಶ್ಚಾತ್ತಾಪವಾಗಿ ವೈರಾಗ್ಯವು ಪ್ರಾಪ್ತವಾಗಿಲ್ಲವೋ ಅಲ್ಲಿಯ ವರೆಗೆ ಅವನಿಗೆ ಅನುಗ್ರಹವಾಗುವದು ದುಸ್ತರವೇ ಸರಿ.

ಆತ್ರೇಯನ ಈ ಮಾತನ್ನು ಕೇಳಿ ನಾರದರು—ತಮ್ಮ ಮಾತು ಯಥಾರ್ಥವದೆ. ಅಷ್ಟು ಕೆಲಸವನ್ನು ಮಾತ್ರ ನಾನು ಮಾಡುತ್ತೇನೆ. ಚರ್ಪಟನಿಗೆ ಸಂಸಾರದಲ್ಲಿ ಬೇಸರ ಹುಟ್ಟಿ ಪಶ್ಚಾತ್ತಾಪವಾಗುವ ಯುಕ್ತಿಯನ್ನು ನಾನು ಯೋಜಿಸುತ್ತೇನೆ. ತಾವು ಮಾತ್ರ ಚರ್ಪಟಿಯ ಬಗ್ಗೆ ಸದ್ಬುದ್ಧಿಯನ್ನು ಧಾರಣ ಮಾಡಬೇಕು ಎಂದನು.

ಹೀಗೆ ನಿರ್ಧರಿಸಿ ನಾರದರು ಭೂಲೋಕಕ್ಕೆ ಹೋದರು. ಅವರು ವಿದ್ಯಾರ್ಥಿಯ ವೇಷದಿಂದ ಸತ್ಯಶ್ರವ್ಯನಿಗೆ ಭೆಟ್ಟಿಯಾದರು. ಮತ್ತು ವಿದ್ಯಾಭ್ಯಾಸ ಮಾಡುವ ಇಚ್ಛೆಯಿಂದ ವಿದ್ಯಾರ್ಥಿಯಾಗಿ ಇರಹತ್ತಿದರು. ಮತ್ತು ತನ್ನ ಹೆಸರು ಕುಲುಂಬನೆಂದು ಹೇಳಿದರು. ಕುಲುಂಬ, ಮತ್ತು ಚರ್ಪಟ, ಈ ಇಬ್ಬರು ಒಂದೇ ಆಸನದಲ್ಲಿ ಕುಳಿತು ಸತ್ಯಶ್ರವ್ಯನಲ್ಲಿ ಸದ್ವಿದ್ಯೆಯನ್ನು ಅಭ್ಯಾಸಿಸತೊಡಗಿದರು.

ಕುಲುಂಬನು ತನ್ನ ಕೆಲಸ ಸಾಧಿಸುವದಕ್ಕಾಗಿ ಬಹಳ ಯತ್ನಮಾಡಿದನು. ಆದರೂ ಬಹಳ ದಿವಸಗಳವರೆಗೆ ಸಾಧಿಸಲಿಲ್ಲ. ಕೆಲವು ದಿವಸದ ಮೇಲೆ ಊರೊಳಗಿನ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಶ್ರೀಮಂತ ಕಾರ್ಯವು ಬಂದಿತು. ಆ ಕೆಲಸಕ್ಕಾಗಿ ಒಬ್ಬ ಬ್ರಾಹ್ಮಣನು ಬೇಕಾಗಿದ್ದನು. ಆ ಬ್ರಾಹ್ಮಣನು ಸತ್ಯಶ್ರವ್ಯ ಬ್ರಾಹ್ಮಣನಲ್ಲಿಗೆ ಹೋದನು. ಆ ಕಾಲಕ್ಕೆ ಸತ್ಯಶ್ರವ್ಯಬ್ರಾಹ್ಮಣನು ದೇವಪೂಜೆ ಮಾಡುತ್ತಿದ್ದನು. ಅವನು ಆ ಬ್ರಾಹ್ಮಣನ ವಿಜ್ಞಾಪನೆಯನ್ನು ಮಾನ್ಯಮಾಡಿ ಚರ್ಪಟ ಮತ್ತು ಕುಲುಂಬ ಇವರನ್ನು ಅವನ ಮನೆಗೆ ಕಳಿಸಿದನು. ಇದೇ ಸಮಯವೇ ಕುಲುಂಬನಿಗೆ ಉಪಯೋಗಕ್ಕೆ ಬಿದ್ದಿತು.

ಚರ್ಪಟನು ಬ್ರಾಹ್ಮಣನ ಮನೆಗೆ ಹೋಗಿ ಅವನ ಕೆಲಸವನ್ನು ಯಥಾಸಾಂಗವಾಗಿ ಮುಗಿಸಿದನು. ಬ್ರಾಹ್ಮಣನು ದಕ್ಷಿಣೆ ಕೊಡುವದಕ್ಕಾಗಿ ಅವರ ಕೈಯಲ್ಲಿ ಉದಕವನ್ನು ಬಿಟ್ಟನು. ಅದನ್ನು ಕಂಡು ಕುಟುಂಬನು ಚರ್ಪಟನಿಗೆ ಹೀಗೆ ಉಪದೇಶಿಸಿದನು—"ಚರ್ಪಟಾ, ನೀನು ಸಾಧಾರಣ ಬ್ರಾಹ್ಮಣನಲ್ಲ! ನೀನು ಯೋಗಾಭ್ಯಾಸವನ್ನು ಮಾಡುವ ಬ್ರಾಹ್ಮಣನಿರುವಿ. ಹೀಗೆ ನೀನು ಜನರಿಗೆ ಕೈ ಒಡ್ಡುವದು ಸರಿಯಲ್ಲ. ನೀನು ಇಸಕೊಳ್ಳಬೇಡ. ನಿನ್ನ ತಂದೆಯು ಬಂದು ದಕ್ಷಿಣೆಯನ್ನು ಇಸುಕೊಂಡು ಹೋಗುವನು. ಈ ಬ್ರಾಹ್ಮಣನು ನಿನ್ನ ಯೋಗ್ಯತೆಗೆ ಅನುಗುಣವಾಗಿ ದಕ್ಷಿಣೆಯನ್ನು ಕೊಡಲಾರನು. ಒಂದು ವೇಳೆ ಕೊಟ್ಟಷ್ಟು ದಕ್ಷಿಣೆಯನ್ನು ತೆಗೆದುಕೊಂಡು ಹೋದರೆ ನಿಮ್ಮ ತಂದೆಗೆ ಸರಿಬರಲಾರದು. ವಿದ್ವತ್ತಿಗೆ ಸರಿಯಾಗಿ ದಕ್ಷಿಣೆಯನ್ನು ಕೊಡುವ ಯಜಮಾನರು ಈ ಕಾಲದಲ್ಲಿ ದೊರೆಯುವದಿಲ್ಲ. ದ್ರವ್ಯಮೋಹದಿಂದ ಕೊಟ್ಟಷ್ಟು ದಕ್ಷಿಣೆಯನ್ನು ತೆಗೆದುಕೊಂಡು ಹೋದರೆ ಗುರುಗಳು ಧಿಃಕರಿಸುವರು.

ಹೀಗೆ ಅನೇಕ ಮಾತುಗಳನ್ನು ಹೇಳಿ ಚರ್ಪಟಿಯ ಮನಸ್ಸನ್ನು ತಿರುಗಿಸಿದನು. ಇಷ್ಟರಲ್ಲಿ ಯಜಮಾನನು ದಕ್ಷಿಣೆಯನ್ನು ತಂದು ಚರ್ಪಟಯ ಕೈಯಲ್ಲಿ ಹಾಕಿದನು. ಅಲ್ಪ ದಕ್ಷಿಣೆಯನ್ನು ನೋಡಿ ಚರ್ಪಟಿಗೆ ಖಿನ್ನವಾಯಿತು. ಕುಟುಂಬನು ಮೊದಲೇ ಈ ಮಾತನ್ನು ಹೇಳಿದ್ದನು. ಅದರಂತೆ ಆಗಲು ಚರ್ಪಟನು ಆ ಯಜಮಾನನ ಮೇಲೆ ಸಿಟ್ಟಾದನು. ಮತ್ತು ಅಂದದ್ದೇನಂದರೆ:—"ನೀವು ಎಲ್ಲ ಬ್ರಾಹ್ಮಣರನ್ನು ಒಂದೇಬಗೆಯಾಗಿ ತಿಳಿಯುತ್ತೀರಿ; ಯಾರಿಗೆ ಎಷ್ಟು ದಕ್ಷಿಣೆಯನ್ನು ಕೊಡಬೇಕೆಂಬುವದು ನಿಮಗೆ ಗೊತ್ತಾಗುವದಿಲ್ಲ!"

ಚರ್ಪಟನು ಜಡಿದ ಮಾತು ಯಜಮಾನನ ಮನಸ್ಸಿಗೆ ನಟ್ಟಿತು. ಎಲೋ ಬ್ರಾಹ್ಮಣಾ, ಯಾಚಕರಾದ ನಿಮಗೆ ಒಂದು ರಾಜ್ಯವನ್ನು ದಯಪಾಲಿಸಿದರೂ ಸಮಾಧಾನವಾಗಲಾರದು. ನಾವು ಹೆಚ್ಚಿನ ದಕ್ಷಿಣೆಯನ್ನು ಎಲ್ಲಿಂದ ತರಬೇಕು? ಒಂದು ವೇಳೆ ಯಜಮಾನನು ಬಡವನಾಗಿದ್ದರೆ, ಹೇಗೆ ಮಾಡಬೇಕು? ಎಂದನು. ಅದಕ್ಕೆ ಚರ್ಪಟನು:—ನಾವು ವಿಚಾರಿಸದೆ ನಿನ್ನಂಥ ಕಂಗಾಲನ ಮನೆಗೆ ಬಂದದ್ದೇ ತಪ್ಪು; ಮೊದಲೇ ವಿಚಾರ ಮಾಡಿದ್ದರೆ, ಹೀಗೆ ತ್ರಾಸವಾಗುವ ಕಾರಣವಿದ್ದಿಲ್ಲ; ಎಂದನು.

ಮಾತು ಮಾತಿಗೆ ಹೆಚ್ಚಿ ಜಗಳವು ವಿಕೋಪಕ್ಕೆ ಹೋಯಿತು. ಇದನ್ನು ಕಂಡು ಕುಲುಂಬನು ಅಲ್ಲಿಂದೆದ್ದು ಮನೆಗೆ ಹೋಗಿ ಸತ್ಯಶ್ರವ್ಯನನ್ನು ಕುರಿತು ಹೇಳಿದ್ದೇನಂದರೆ:—"ಗುರುಗಳೇ, ಚರ್ಪಟನು ಯಜಮಾನನೊಡನೆ ಜಗಳಾಡುತ್ತಲಿದ್ದಾನೆ. ಅವನ ಔದ್ಧತ್ಯವನ್ನು ಕಂಡು ಯಜಮಾನನಿಗೆ ತ್ರಾಸವಾಗಿದೆ. ಕೂಡಿದ ಜನರು ಚರ್ಪಟನಿಗೇ ಬಯ್ಯುವರು. ನಿಜವಾಗಿ ವಿಚಾರಿಸಿದರೆ ನಮ್ಮಂಥ ಯಾಚಕರಲ್ಲಿ ವಿನಯಾದಿಗಳು ಇರಬೇಕು. ಆರ್ಜವ ವೃತ್ತಿಯನ್ನು ಬಿಟ್ಟು ಉದ್ಧಾಮತನದಿಂದ ನಡೆದರೆ ಹೇಗೆ ಸಾಗಬೇಕು? ಸಾತ್ವಿಕವೃತ್ತಿಗೆ ಮನ್ನಣೆಯು ದೊರೆತಂತೆ ತಾಮಸವೃತ್ತಿಗೆ ಎಂದೂ ದೊರೆಯಲಾರದು.

ಕುಲುಂಬನು ಆಡಿದ ಮಾತುಗಳನ್ನು ಕೇಳಿ ಸತ್ಯಶ್ರವ್ಯನಿಗೆ ಸಿಟ್ಟು ಬಂತು. ಅವನು ಹಾಗೆಯೇ ಯಜಮಾನನ ಮನೆಗೆ ಹೋದನು. ಚರ್ಪಟ ಮತ್ತು ಯಜಮಾನರಿಬ್ಬರು ಒದರಾಡುತ್ತಿದ್ದರು. ಬೆಂಕಿಯ ಮೇಲೆ ತುಪ್ಪ ಹಾಕಿದರೆ ಹೇಗೆ ಅದು ಪ್ರಜ್ವಲಿಸುವದೋ, ಸುರಾಪಾನ ಮಾಡಿದ ಮನುಷ್ಯನಿಗೆ ಭೂತ ಬಡಿದರೆ ಅವನು ಹೇಗೆ ಹುಚ್ಚಾಟಮಾಡುವನೋ, ಅದರಂತೆ ಸತ್ಯಶ್ರವ್ಯನು ಮತ್ತಿಷ್ಟು ಕೋಪಿಷ್ಠನಾದನು. ಅವನು ಯಾವದನ್ನೂ ವಿಚಾರಿಸಿದೆ ಚರ್ಪಟನನ್ನು ಹೊಡೆದನು. ಯಜಮಾನನೊಡನೆ ಬಡಿದಾಡಿ ಚರ್ಪಟನು ಮೊದಲೇ ತಪ್ತನಾಗಿದ್ದನು. ಅದರೊಳಗೆ ಸತ್ಯಶ್ರವ್ಯನ ಪೆಟ್ಟಿನಿಂದ ಕೋಪಾತಿಶಯದಿಂದ ತಪ್ತನಾದನು. ಅವನ ಕಣ್ಣುಗಳು ಕ್ರೋಧದಿಂದ ಕೆಂಪಾದವು. ಸಿಟ್ಟಿನ ಭರದಲ್ಲಿ ಆ ಕೂಡಲೆ ಎದ್ದು ಊರಹೊರಗೆ ದೇವಿಯ ದೇವಾಲಯದಲ್ಲಿ ಹೋಗಿ ಕುಳಿತನು; ಮತ್ತು ತಿರುಗಿ ಮನೆಗೆ ಹೋಗಲಿಕ್ಕಿಲ್ಲೆಂದು ಮನಸ್ಸಿನಲ್ಲಿ ನಿಶ್ಚಯ ಮಾಡಿದನು.

ಇಷ್ಟರಲ್ಲಿ ನಾರದನು ವಿದ್ಯಾರ್ಥಿಯ ವೇಷವನ್ನು ಬದಲಿಸಿ ಒಬ್ಬ ದಿವ್ಯ ಬ್ರಾಹ್ಮಣನ ವೇಷವನ್ನು ಧರಿಸಿ ದೇವಿಯ ದರ್ಶನದ ನಿಮಿತ್ಯದಿಂದ ಆ ದೇವಾಲಯಕ್ಕೆ ಹೋದನು. ದೇವಿಗೆ ವಂದಿಸಿ ಚರ್ಪಟನ ಬಳಿಯಲ್ಲಿ ಕುಳಿತು ಅಂದದ್ದೇನಂದರೆ:—ನಿನ್ನ ಮುಪ್ಪಿನ ತಂದೆಯು ಸಿಟ್ಟಿನವನೆಂಬಂತೆ ತೋರುತ್ತದೆ. ಮಕ್ಕಳ ಕೂಡ ಹೇಗೆ ವರ್ತಿಸಬೇಕೆಂಬುವದು ನಿಮ್ಮ ತಂದೆಗೆ ಗೊತ್ತಾಗಲಿಲ್ಲ. ಮಕ್ಕಳು ದೊಡ್ಡವರಾಗಲು, ಸ್ನೇಹಬುದ್ಧಿಯಿಂದ ನಡೆಯ

ಬೇಕು. ಇದಕ್ಕೆ ವಿರುದ್ಧವಾಗಿ ನಡೆಯುವ ತಂದೆಯ ದರ್ಶನವನ್ನು ಕೂಡ ತೆಗೆದುಕೊಳ್ಳಬಾರದು. ಇಂಥವರೊಡನೆ ಕಾಲಕ್ರಮಣ ಮಾಡುವದಕ್ಕಿಂತ ಅರಣ್ಯವಾಸ ಮಾಡುವದು ಯೋಗ್ಯವೆನಿಸುವದು. ಹೀಗೆ ಬ್ರಾಹ್ಮಣವೇಷ ಧಾರಿಯಾದ ನಾರದನು ಮಾತಾಡಿದನು.

ಬ್ರಾಹ್ಮಣನ ಮಾತನ್ನು ಕೇಳಿ ಚರ್ಪಟನು ಮತ್ತಿಷ್ಟು ರೇಗಿಗೆದ್ದನು. ಮನಸ್ಸಿನಲ್ಲಿ ಅನುತಾಪ ಹೊಂದಿ ಬ್ರಾಹ್ಮಣನಿಗೆ ಅಂದದ್ದೇನಂದರೆ:— ಮಹಾರಾಜ, ಕೃಪೆಮಾಡಿ ನನ್ನದೊಂದು ಕೆಲಸವನ್ನು ಮಾಡಿರಿ. ನಮ್ಮ ಮನೆಯಲ್ಲಿ ಕುಲುಂಬ ಹೆಸರಿನ ಒಬ್ಬ ಬ್ರಾಹ್ಮಣನಿದ್ದಾನೆ. ಅವನು ನನ್ನ ಸಹಾಧ್ಯಾಯಿಯಿದ್ದಾನೆ. ತಾವು ಅವನನ್ನು ಇಲ್ಲಿಗೆ ಕಳಿಸಿದರೆ, ನಾವಿಬ್ಬರೂ ಕೂಡಿಕೊಂಡು ದೂರದೇಶಕ್ಕೆ ಹೋಗುವೆವು.

ಬ್ರಾಹ್ಮಣನು ಚರ್ಪಟನ ಮಾತಿಗೆ ಒಪ್ಪಿಕೊಂಡನು. ದೇವಾಲಯದ ಹೊರಗೆ ಹೋಗಿ ಕೆಲಹೊತ್ತು ತಡೆದ ಬಳಿಕ ಕುಲುಂಬನ ವೇಷವನ್ನು ಧರಿಸಿಕೊಂಡು ಚರ್ಪಟನ ಬಳಿಗೆ ಬಂದನು. ಅವನನ್ನು ಕಂಡು ಚರ್ಪಟನಿಗೆ ಆನಂದವಾಯಿತು. ಚರ್ಪಟನು ಕುಲುಂಬನನ್ನು ಕಂಡು—"ಸತ್ಯಶ್ರವ್ಯನಿಗೆ ಹುಚ್ಚು ಹಿಡಿದಂತೆ ಕಾಣುತ್ತದೆ. ನಾವು ಇನ್ನು ಇಲ್ಲಿರುವದು ಯೋಗ್ಯವಲ್ಲ; ದೂರದೇಶಕ್ಕೆ ಹೋಗಿ ವಿದ್ಯೆಯನ್ನು ಕಲಿಯೋಣ ಎಂದನು. ಕೂಡಲೆ ಅವರಿಬ್ಬರು ಪ್ರಯಾಣ ಬೆಳಿಸಿದರು. ಐದು ಹರದಾರಿಗಳನ್ನು ನಡೆದ ಬಳಿಕ ಕುಲುಂಬನು—ಚರ್ಪಟಾ, ನಾವು ಈಗ ಬದರಿಕಾಶ್ರಮವನ್ನು ನೋಡಲಿಕ್ಕೆ ಹೋಗೋಣ, ಆ ಮೇಲೆ ಕಾಶಿಗೆ ಬರೋಣ. ಕಾಶಿಯಲ್ಲಿ ಅನೇಕ ವಿದ್ವಾಂಸರು ವಾಸಮಾಡಿಕೊಂಡಿರ.ವರು ಎಂದನು.

ಕುಲುಂಬನ ವಿಚಾರವು ಚರ್ಪಟನಿಗೆ ಸರಿದೋರಿತು. ಮಾರ್ಗದಲ್ಲಿ ಭಿಕ್ಷೆಯನ್ನು ಬೇಡುತ್ತ ಬೇಡುತ್ತ ಬದರಿಕಾಶ್ರಮಕ್ಕೆ ಹೋದರು. ದೇವಾಲಯದಲ್ಲಿ ಹೋಗಿ ಅವರು ಕೇದಾರೇಶ್ವರನಿಗೆ ನಮಸ್ಕಾರ ಮಾಡಿದರು. ಅಲ್ಲಿ ಶ್ರೀ ದತ್ತಾತ್ರಯ ಮತ್ತು ಮಚ್ಛಿಂದ್ರನಾಥ ಇವರು ಪ್ರಕಟರಾದರು. ನಾರದನು ಅವರಿಗೆ ನಮಸ್ಕರಿಸಲು ಚರ್ಪಟನೂ ವಂದಿಸಿದನು. ಬಳಿಕ ಚರ್ಪಟನು ಅವರಾರು ಎಂದು ಕೇಳಲು ಅದಕ್ಕೆ ಕುಲುಂಬನು—"ಎಲೋ ನೀನು ಇವರ ಗುರ್ತು ಹಿಡಿಯಲಿಲ್ಲವೋ ಇವನು ಸಾಕ್ಷಾತ್ ದತ್ತಾತ್ರಯ

ನಿದ್ದಾನೆ. ಇನ್ನೊಬ್ಬರು ಪ್ರಖ್ಯಾತಿ ಹೊಂದಿದ ಮಚ್ಛೀಂದ್ರನಾಥರು. ಮತ್ತು ನಾನು ಕುಲುಂಬನಲ್ಲ. ಬ್ರಹ್ಮಪುತ್ರನಾರದನಿದ್ದೇನೆ. ನಿನ್ನ ಕೆಲ ಸಕ್ಕಾಗಿ ಈ ವೇಷವನ್ನು ಹಾಕಿಕೊಂಡಿದ್ದೇನೆ.'' ಎಂದು ನಾರದರು ತಮ್ಮ ಮೂಲವೇಷವನ್ನು ಧರಿಸಿದರು. ಅದನ್ನು ಕಂಡು ಚರ್ಪಟನು ನಾರದರನ್ನು ಕುರಿತು ಕೈ ಜೋಡಿಸಿ ಅಂದದ್ದೇನಂದರೆ—''ಸ್ವಾಮಿ, ನನ್ನನ್ನು ಸನಾಥನಾಗಿ ಮಾಡಬೇಕು.'' ಅವನ ಇಚ್ಛೆಯನ್ನರಿತು ನಾರದರು—''ನಾವು ಮೂವರೂ ಕೂಡಿ ನಿನ್ನ ಸ್ವರೂಪವನ್ನು ತೋರಿಸಿ ಸನಾಥನನ್ನಾಗಿ ಮಾಡುವೆವು! ನಿನಗೆ ಆ ಸ್ವರೂಪವು ಪ್ರಾಪ್ತವಾಗಬೇಕಾದರೆ ಗುರುಗಳ ಅನುಗ್ರಹವು ಅವಶ್ಯವಾಗಿ ಬೇಕು. ನಿನ್ನ ಕಿವಿಯೊಳಗೆ ಗುರುಗಳಿಂದ ಮಂತ್ರೋಪದೇಶವಾದರೆ ನೀನು ಬ್ರಹ್ಮಸ್ವರೂಪವನ್ನು ಹೊಂದುವಿ. ನೀನು ಶ್ರೀ ದತ್ತಾತ್ರೇಯರಿಗೆ ಶರಣುಹೋಗಿ ಅವರಿಂದ ಅನುಗ್ರಹವನ್ನು ಹೊಂದು'' ಎಂದರು. ನಾರದರ ಸೂಚನೆಯ ಮೇರೆಗೆ ಚರ್ಪಟನು ದತ್ತಾತ್ರೇಯನಿಗೆ ವಿಜ್ಞಾಪಿಸಿಕೊಂಡನು. ದತ್ತಾತ್ರೇಯನು ಚರ್ಪಟಿಯ ತಲೆಯಮೇಲೆ ವರದಹಸ್ತವನ್ನಿಟ್ಟನು. ಚರ್ಪಟನು ಕಾಯಾ, ವಾಚಾ, ಮನಸ್ಸಿನಿಂದ ತಮ್ಮನ್ನು ಭಜಿಸುವದನ್ನು ಕಂಡು ದತ್ತಾತ್ರೇಯರು ಅವನ ಕಿವಿಯೊಳಗೆ ಮಂತ್ರೋಪದೇಶ ಮಾಡಿ ಅವನ ಅಜ್ಞಾನವನ್ನು ನಾಶಗೊಳಿಸಿದರು. ಚರ್ಪಟನು ಬ್ರಹ್ಮಾನಂದವನ್ನು ಹೊಂದಿ ಸೂರ್ಯನಂತೆ ತೇಜಃಪುಂಜನಾದನು. ಶಂಕರನು ಚರ್ಪಟಿಯನ್ನು ಆಲಿಂಗಿಸಿದನು. ಮತ್ತು ದತ್ತಾತ್ರೇಯನಿಗೆ—''ತಾವು ಈ ಚರ್ಪಟಿಯ ಕಡೆಯಿಂದ ಎಲ್ಲ ವಿದ್ಯೆಗಳ ಅಭ್ಯಾಸ ಮಾಡಿಸಬೇಕು. ಮತ್ತು ಇವನಿಗೆ ನಾಥದೀಕ್ಷೆಯನ್ನು ಕೊಡಿರಿ ಎಂದನು.

ಶಂಕರನ ಅಪ್ಪಣೆಯ ಮೇರೆಗೆ ದತ್ತಾತ್ರೇಯನು ಚರ್ಪಟನಿಗೆ ಎಲ್ಲ ವಿದ್ಯೆಗಳನ್ನು ಕಲಿಸಿದನು. ಅವನು ಸಕಲ ವಿದ್ಯೆಗಳಲ್ಲಿ ಪಾರಂಗತನಾದ ಬಳಿಕ ತಪಸ್ಸನ್ನು ಮಾಡಿದನು. ಬಳಿಕ ಎಲ್ಲ ದೇವತೆಗಳು ಚರ್ಪಟನಮೇಲೆ ಕೃಪೆ ಮಾಡಲು, ಅವನು ಲೋಕೋಪಕಾರಾರ್ಥವಾಗಿ ಒಂಬತ್ತುಕೋಟಿ ಏಳುಲಕ್ಷ ಶಾಬರೀ ಕವಿತ್ವಗಳನ್ನು ಮಾಡಿದನು. ಅವನ ಮಂತ್ರಪ್ರಭಾವದಿಂದ ಸ್ವರ್ಗದೊಳಗಿನ ದೇವತೆಗಳು ಪ್ರಸನ್ನರಾಗಿ ಶುಭದಾಯಕವಾದ ಆಶೀರ್ವಾದವನ್ನು ಕೊಟ್ಟರು. ಚರ್ಪಟನಿಗೆ ನಾಥಪಂಥದ ದೀಕ್ಷೆಯನ್ನು

ಕೊಟ್ಟು, ದತ್ತಾತ್ರೇಯನು ಗಿರಿನಾರ ಪರ್ವತಕ್ಕೆ ಹೋದನು. ಚರ್ಪಟನು ತೀರ್ಥ-ಯಾತ್ರೆಗಾಗಿ ಪೃಥ್ವಿಯಲ್ಲಿ ಸಂಚರಿಸಹತ್ತಿದನು. ಗೋಕರ್ಣ, ಮಹಾಬಳೇಶ್ವರ, ಜಗನ್ನಾಥ, ಹರಿಹರೇಶ್ವರ ಇತ್ಯಾದಿ ಅನೇಕ ತೀರ್ಥಗಳಲ್ಲಿ ಚರ್ಪಟನು ಸ್ನಾನ ಮಾಡಿದನು. ರಾಘವ, ಚಾಳ, ಗೋಕಾಟ, ಜಾಂಬು, ನೈಮಿತ್ಯಕ, ಸುರೇಂದ್ರ, ಕಹುಷ, ದ್ವಾರಭೈರವ ಮತ್ತು ರಣಸಿದ್ಧ ಹೀಗೆ ಒಂಭತ್ತು ಜನರು ಚರ್ಪಟಿಯ ಪಟ್ಟಶಿಷ್ಯರಿದ್ದು, ಶಾಬರೀ ವಿದ್ಯೆಯಲ್ಲಿ ನಿಪುಣರಾಗಿದ್ದರು. ಹೀಗೆ ಒಟ್ಟಿಗೆ ಎಂಬತ್ತುನಾಲ್ಕು ಜನ ಸಿದ್ಧರು ನಿರ್ಮಾಣರಾದರು.

## ಅಧ್ಯಾಯ ೩೯



### ಚರ್ಪಟನಾಥನ ವಿಜಯ.

ಗಯಾ, ಪ್ರಯಾಗ, ಕಾಶಿ, ಜಗನ್ನಾಥ, ಮಲ್ಲಿಕಾರ್ಜುನ, ಫಣಿ ಪರ್ವತ, ರಾಮೇಶ್ವರ, ಕುಮಾರಿ, ಬಾರಾಮುಲ್ಲಾರ, ಹಿಂಗಲಾಜ, ಬಾರಾ ಜ್ಯೋತಿರ್ಲಿಂಗ ಇತ್ಯಾದಿ ಸರ್ವಗುಪ್ತ ಮತ್ತು ಪ್ರಕಟ ತೀರ್ಥಗಳನ್ನು ಸಂಚರಿಸಿ ಚರ್ಪಟಿನಾಥನು ಪೃಥ್ವೀಪ್ರದಕ್ಷಿಣೆಯನ್ನು ಮಾಡಿದನು. ಬಳಿಕ ಚರ್ಪಟಿಯ ಮನಸ್ಸಿನಲ್ಲಿ ಸ್ವರ್ಗ ಮತ್ತು ಪಾತಾಳ ಇವುಗಳಲ್ಲಿಯ ತೀರ್ಥ ಕ್ಷೇತ್ರಗಳನ್ನು ನೋಡಬೇಕೆಂಬ ಇಚ್ಛೆಯುಂಟಾಯಿತು. ಕೂಡಲೆ ಚರ್ಪಟನು ಬದರಿಕಾಶ್ರಮಕ್ಕೆ ಹೋದನು. ಅಲ್ಲಿ ಶಂಕರನಿಗೆ ನಮಸ್ಕಾರಮಾಡಿ ವ್ಯಾನ ಅಸ್ತ್ರದಿಂದ ವಿಭೂತಿಯನ್ನು ಅಭಿಮಂತ್ರಿಸಿ ತನ್ನ ಹಣೆಗೆ ಹಚ್ಚಿಕೊಂಡದ್ದರಿಂದ ವಾತಗತಿಯು ಪ್ರಾಪ್ತವಾಯಿತು. ಆಮೇಲೆ ಆದಿತ್ಯ ಹೆಸರಿನ ಮಂತ್ರವನ್ನು ಜಪಿಸಿ ನಾರಾಯಣನ ದರ್ಶನವನ್ನು ಹೊಂದಿದನು. ನಾರಾಯಣನು ಚರ್ಪಟಿಯನ್ನು ರಕ್ಷಿಸಹತ್ತಿದನು. ಬಳಿಕ ಚರ್ಪಟಿಯು ಯೋಗಬಲದಿಂದ ಮಹೇಂದ್ರಪರ್ವತಕ್ಕೆ ಹೋದನು. ಆ ಪರ್ವತವು ಬರ್ಫದಿಂದ ಆಚ್ಛಾದಿತವಾಗಿತ್ತು. ಅವನ ಮೈಮೇಲೆ ಬರ್ಫವು ಬೀಳಲು, ನಾರಾಯ

ಣನ ತೇಜದಿಂದ ಆಬಭರ್ಣವು ಕರಗಿ ನೀರಾಗಿ ಹೋಯಿತು. ಈ ಮೇರೆಗೆ ಮಾರ್ಗಕ್ರಮಿಸುತ್ತ ಆವನು ಸ್ವರ್ಗಕ್ಕೆ ಹೋಗಿ ಮುಟ್ಟಿದನು. ಪ್ರಥಮತಃ ಅವನು ಸತ್ಯಲೋಕಕ್ಕೆ ಹೋಗಿ ಬ್ರಹ್ಮದೇವರಿಗೆ ಅಭಿವಂದಿಸಿದನು. ಬ್ರಹ್ಮದೇವನು ಚರ್ಪಟಿಯಿಂದ ಎಲ್ಲ ಸಂಗತಿಯನ್ನು ತಿಳಿದನು. ಮತ್ತು ಚರ್ಪಟಿಯ ಸ್ವಭಾವವನ್ನರಿತು ಸಮಾಧಾನ ಹೊಂದಿದನು. ಮತ್ತು ಬಾಳಾ, ನೀನು ಇಲ್ಲಿ ಒಂದು ವರ್ಷದವರೆಗೆ ವಾಸಮಾಡು. ಅಷ್ಟು ಅವಧಿಯಲ್ಲಿ ಪರ್ವಕಾಲವು ಬರುವದು; ಆಗ ನಾವೆಲ್ಲರೂ ಕೂಡಿ ತೀರ್ಥದ ಸ್ನಾನಕ್ಕೆ ಹೋಗೋಣ ಎಂದು ಹೇಳಿದನು.

ಚರ್ಪಟಿಯೂ ತಂದೆಯ ಇಚ್ಛೆಯನ್ನು ಮಾನ್ಯಮಾಡಿದನು. ಆತನು ನಾರದರೊಡನೆ ಕಾಲಕ್ರಮಿಸುತ್ತಿದ್ದನು. ಒಬ್ಬರನ್ನೊಬ್ಬರು ಅಗಲಿದರೆ ಸಮಾಧಾನವಾಗುತ್ತಿದ್ದಿಲ್ಲ. ಈ ಪ್ರಕಾರ ಸ್ವರ್ಗಲೋಕದೊಳಗಿನ ಆನಂದವನ್ನು ಅನುಭವಿಸುತ್ತಿರಲು, ಬಹಳ ದಿವಸಗಳು ಗತಿಸಿದವು. ಆ ಮೇಲೆ ನಾರದನು ಕೆಲಸದ ನಿಮಿತ್ಯ ಒಬ್ಬನೇ ಅಮರ ಪುರಕ್ಕೆ ಹೋದನು. ಇಂದ್ರನು ನಾರದರು ಬಂದದ್ದನ್ನು ನೋಡಿ ತಿರಸ್ಕಾರಮಾಡಿದನು. ಅದಕ್ಕೆ ನಾರದರು ಇವನಿಗೆ ಚನ್ನಾಗಿ ಕೈತೋರಿಸಬೇಕೆಂದು ನಿಶ್ಚಯಿಸಿದರು.

ಹೀಗೆ ಮನಸ್ಸಿನಲ್ಲಿ ಸಂಕಲ್ಪಮಾಡಿ ನಾರದರು ಆ ಕಾಲಕ್ಕೆ ಬಂದ ಸಿಟ್ಟನ್ನು ತೋರಗೊಡಲಿಲ್ಲ. ಮಹೇಂದ್ರನೊಡನೆ ನಾಲ್ಕು ಸವಿ ಮಾತುಗಳನ್ನು ಆಡಿ ಸತ್ಯಲೋಕಕ್ಕೆ ಹೋದರು. ಅವರ ಮನಸ್ಸಿನಲ್ಲಿ ಇಂದ್ರನು ಆಡಿದ ಮಾತುಗಳು ಕಟೆಯುತ್ತಿದ್ದವು. ಇಂದ್ರನನ್ನು ಯಾವ ಬಗೆಯಿಂದ ಹಣ್ಣಿಗೆ ತರಬೇಕೆಂದು ವಿಚಾರಿಸುತ್ತಿರಲು, ಚರ್ಪಟಿಯ ಸ್ಮರಣವಾಯಿತು. ಚರ್ಪಟಿಯ ಕ್ರೋಧಾನಲವನ್ನು ಪ್ರಜ್ವಲಿಸಿ ಇಂದ್ರನ ಆಹುತಿಯನ್ನು ಕೊಡಬೇಕೆಂದು ಗೊತ್ತುಮಾಡಿದನು. ಬಳಿಕ ಅವನು ತನ್ನ ಉದ್ದೇಶವನ್ನು ಪೂರ್ಣಗೊಳಿಸುವದಕ್ಕಾಗಿ ಒಂದು ದಿವಸ ಚರ್ಪಟಿಯನ್ನು ಕರೆದು— "ಹೇ ಪ್ರಿಯ ಬಂಧೂ, ನನ್ನ ಮನಸ್ಸಿನಲ್ಲಿ ದೇವೇಂದ್ರನ ನಂದನವನಕ್ಕೆ ಹೋಗಿ ಕ್ರೀಡಿಸಬೇಕೆಂಬ ಇಚ್ಛೆಯಾಗಿದೆ, ಎಂದನು. ಚರ್ಪಟಿಯೂ ನಾರದರ ಮಾತಿಗೆ ಒಪ್ಪಿಕೊಂಡನು. ಬಳಿಕ ಅವರಿಬ್ಬರು ಹೊರಟರು.

ನಾರದರು ಚರ್ಪಟಿಗೆ ಗಮನ ಕಲೆಯನ್ನು ಕಲಿಸಿದರು. ಆ ವಿದ್ಯೆಯ ಸಹಾಯದಿಂದ ಒಂದು ಕ್ಷಣದಲ್ಲಿ ಇಚ್ಛಿತಸ್ಥಳಕ್ಕೆ ಹೋದರು. ಆ ಉದ್ಯಾ-

ನವು ನಾನಾ ಪ್ರಕಾರದ ವೃಕ್ಷಗಳಿಂದ ಶೋಭಿತವಾಗಿತ್ತು. ಎಷ್ಟೋ ವೃಕ್ಷಗಳು ಮುಗಿಲಮುಟ್ಟುವಂತೆ ಬೆಳೆದಿದ್ದವು. ಆ ತೋಟದೊಳಗಿನ ಪುಷ್ಪಗಳ ಸುವಾಸನೆಯಿಂದ ಸುತ್ತುಮುತ್ತಿನ ಪ್ರದೇಶವು ಸುಗಂಧಯುಕ್ತ ವಾಗಿತ್ತು. ಆ ಉಪವನವನ್ನು ನೋಡಿ ಚರ್ಪಟಿಗೆ ಬಹಳ ಆನಂದವಾಯಿತು. ಅವರಿಬ್ಬರು ಅಲ್ಲಿ ಹಲವು ಪ್ರಕಾರದಿಂದ ಕ್ರೀಡಿಸಹತ್ತಿದರು. ಆಡುತ್ತಾಡುತ್ತ ಅವರು ಅಮೃತವೃಕ್ಷದ ಬಳಿಯಲ್ಲಿ ಹೋದರು. ಆ ವೃಕ್ಷಗಳು ಅಮೃತ ಫಲಭಾರದಿಂದ ಬಾಗಿದ್ದವು. ಚರ್ಪಟಿಗೆ ಆ ಹಣ್ಣುಗಳನ್ನು ತಿನ್ನುವ ಇಚ್ಛೆ ಯುಂಟಾಯಿತು. ಇಬ್ಬರೂ ನೂರುಗಟ್ಲೆ ಹಣ್ಣುಗಳನ್ನು ಹರಿದು ಅವುಗಳ ಮೇಲಿನ ಶೊಗಟೆ, ಬೀಜ ಇವುಗಳನ್ನು ತೆಗೆದು ಅದರೊಳಗಿನ ಅಮೃತ ರಸ ವನ್ನು ಮನಸೋಕ್ತವಾಗಿ ಪ್ರಾಶನ ಮಾಡಿದರು. ಹಣ್ಣುಗಳನ್ನು ಕೊಯ್ಯು ವಾಗ ಆ ಗಿಡಗಳ ಟೊಂಗೆ ಮುಂತಾದವುಗಳು ಕೆಲವು ಕಡೆಗೆ ಮುರಿದು ಬಿದ್ದವು. ಆ ಮೇಲೆ ಅವರು ಎಷ್ಟೋ ಸುವಾಸಿಕ ಹೂಗಳನ್ನು ಹರಿ ದರು. ಬಳಿಕ ಅವರು ಸತ್ಯಲೋಕಕ್ಕೆ ಹೋದರು. ಅವರು ಈ ಕ್ರಮ ವನ್ನು ಪ್ರತಿನಿತ್ಯ ನಡಿಸಿದರು. ತೋಟದ ರಕ್ಷಣಕ್ಕಾಗಿ ಇದ್ದ ದೂತರು ದಿನಾಲು ಯಾರು ಬರುವರೆಂಬದನ್ನು ನೋಡುವದಕ್ಕಾಗಿ ಒಂದುದಿನ ಗುಪ್ತ ಸ್ಥಳದಲ್ಲಿ ಅಡಗಿಕೊಂಡು ಕುಳಿತರು.

ಚರ್ಪಟಿ ಮತ್ತು ನಾರದರು ನಿತ್ಯ ಕ್ರಮದಂತೆ ಆ ಉಪವನಕ್ಕೆ ಪ್ರಾಪ್ತರಾದರು. ಚರ್ಪಟಿಯು ನಾರದನನ್ನು ಹಿಂದೆ ಬಿಟ್ಟು ತಾನೊಬ್ಬನೇ ಹೂಗಿಡಗಳ ಕಡೆಗೆ ಹೋದನು. ಅವನು ಇನ್ನು ಗಿಡಗಳಿಗೆ ಕೈ ಹಚ್ಚ ತಕ್ಕವನು ಅಷ್ಟರಲ್ಲಿ ರಕ್ಷಕರು ಹಿಂದಿನಿಂದ ಹೋಗಿ ಹಿಡಿದರು. ಇದನ್ನು ಕಂಡು ನಾರದರು ಹಿಂದೆಗೆದರು. ವನಪಾಲನು ಚರ್ಪಟನನ್ನು ಚನ್ನಾಗಿ ಥಳಿಸಿದನು.

ಆ ಪ್ರಹರದಿಂದ ಚರ್ಪಟಿನಾಥನು ಕೋಪಾಯಮಾನನಾದನು. ಆ ತಪೋನಾಥನು ಅಗ್ನಿಯಂತೆ ಉಗ್ರವಾಗಿ ಕಾಣಹತ್ತಿದನು. ಅವನ ಕ್ರೋಧಜ್ವಾಲೆಯು ಪ್ರದೀಪ್ತವಾಗಿ ಆ ವನಪಾಲಕರನ್ನು ಆಹುತಿಕೊಡುವ ದಕ್ಕೆ ಸಿದ್ಧನಾದನು. ಚರ್ಪಟಿಯು ವಾತಾಕರ್ಷಣದ ಜಪಮಾಡಿ ವನ ರಕ್ಷಕರ ಮೇಲೆ ವಿಭೂತಿಯನ್ನು ಹಾಕಿದನು. ಆ ಅಸ್ತ್ರವು ಎಲ್ಲ ರಕ್ಷಕರ

ಹೃದಯದಲ್ಲಿ ಸೇರಿತು. ಅವರ ದೇಹದೊಳಗಿನ ವಾಯು ಕುಂಠಿತವಾಯಿತು. ಶ್ವಾಸೋಚ್ಛ್ವಾಸವು ಇಲ್ಲದಂತಾಗಲು ಕಸವಿಸಿ ಬಟ್ಟು ಭೂಮಿಯ ಮೇಲೆ ಬಿದ್ದರು! ಅವರ ಶರೀರವು ನಡುಗಹತ್ತಿತು. ಬಾಯೊಳಗಿಂದ ರಕ್ತವು ಹರಿಯಹತ್ತಿತು.

ಇಷ್ಟರಲ್ಲಿ ಅಲ್ಲಿಗೆ ಮತ್ತೆ ಕೆಲವು ಜನ ವನಪಾಲಕರು ಬಂದರು. ಅವರು ಚರ್ಪಟಿಯ ಪ್ರಚಂಡ ರೂಪವನ್ನು ಕಂಡು ಗಾಬರಿಯಾಗಿ ಓಡಿ ಹೋದರು. ಆ ದೂತರು ತಮ್ಮ ಯಜಮಾನನ ಕಡೆಗೆ ಹೋಗಿ ಕೈಜೋಡಿಸಿ ಅಂದದ್ದೇನಂದರೆ—"ರಾಜಾ, ಉಪವನದಲ್ಲಿ ಒಬ್ಬ ಯತಿಯು ಪ್ರಾಪ್ತನಾಗಿದ್ದಾನೆ. ಅವನು ಸೂರ್ಯನಂತೆ ಕಾಂತಿಮಾನನಾಗಿದ್ದಾನೆ. ಅವನು ನೋಡಲಿಕ್ಕೆ ಸಣ್ಣವನಾಗಿ ತೋರಿದರೂ ವನಪಾಲಕರಿಗೆ ಯಮಸ್ವರೂಪನಾಗಿದ್ದಾನೆ. ಅವನು ತೋಟದೊಳಗಿನ ಗಿಡ, ವೃಕ್ಷಗಳನ್ನೂ ಹೂ ಮತ್ತು ಹಣ್ಣುಗಳನ್ನೂ ನಾಶಗೊಳಿಸುತ್ತಿದ್ದಾನೆ, ಎಂದರು.

ದೂತರು ಹೇಳಿದ್ದನ್ನು ಕೇಳಿ ಇಂದ್ರನು ಎಲ್ಲ ದೇವ ಸೈನ್ಯವನ್ನು ಕರಿಸಿ ಹೇಳಿದ್ದೇನಂದರೆ:—" ನೀವೆಲ್ಲರು ಉಪವನದಲ್ಲಿ ಹೋಗಿ ಆ ದುಷ್ಟ ಹುಡುಗನನ್ನು ಹಿಡಿದುಕೊಂಡು ಬಂದು ಶಾಸನ ಮಾಡಿರಿ; ಅವನು ನಿಮ್ಮೆಲ್ಲರನ್ನು ಲೆಕ್ಕಿಸದಿದ್ದರೆ ಅವನ ಮೇಲೆ ಶಸ್ತ್ರಾಸ್ತ್ರದ ಪ್ರಯೋಗವನ್ನು ಮಾಡಿರಿ. ಯಾವ ರೀತಿಯಿಂದಾದರೂ ಯುಕ್ತಿಪ್ರಯುಕ್ತಿಗಳಿಂದ ಅವನನ್ನು ಪ್ರತಿಬಂಧಿಸಿ ಬಂದ ಅರಿಷ್ಟವನ್ನು ನಾಶಗೊಳಿಸಿರಿ."

ಮಹೇಂದ್ರನ ಆಜ್ಞೆಯಾಗಲು, ಸರ್ವ ದೇವಸೈನ್ಯವು ಚರ್ಪಟನ ಮೇಲೆ ಧಾವಿಸಿತು. ಆ ದೇವಸೈನ್ಯವೆಂದರೆ ಸಾಕ್ಷಾತ್ ವಡವಾನಲವೇ ಆಗಿತ್ತು. ಆ ಸೈನ್ಯವು ಕುಸುಮವಟಿಯ ಸಮೀಪಕ್ಕೆ ಬರಲು, ಚರ್ಪಟನು ಜಾಗೃತನಾದನು. ಅಷ್ಟರಲ್ಲಿ ದೇವಸೈನ್ಯವು ತನ್ನ ಬಳಿಯಲ್ಲಿಯೇ ಬಂದುಬಿಟ್ಟಿತು. ಚರ್ಪಟನು ಅವರೊಡನೆ ವ್ಯರ್ಥವಾಗಿ ಯುದ್ಧವನ್ನು ಬೆಳಿಸುವ ಹವ್ಯಾಸಕ್ಕೆ ಹೋಗದೆ ನಿವಾರ್ಣವೆಂಬ ಹೆಸರಿನ ಅಸ್ತ್ರವನ್ನು ಜಪಿಸಿದನು. ಅವನು ವಾತಾಕರ್ಷಣ ಪ್ರಯೋಗಮಾಡಿ ದೇವಗಣಗಳ ಮೇಲೆ ವಿಭೂತಿಯನ್ನು ತೂರಿದನು. ಆ ಅಸ್ತ್ರದ ಪ್ರಭಾವದಿಂದ ದೇವಸೈನ್ಯವು ಕ್ಷಾಣಗುಂದಿತು. ಕೈಯೊಳಗಿನ ಶಸ್ತ್ರಗಳು ಕಳಚಿ ಬಿದ್ದವು. ಅವರಲ್ಲಿ ಪ್ರೇತಕಳೆಯು ಪ್ರಾಪ್ತವಾಯಿತು.

ದೇವಗಣವು ಪ್ರೇತಾವಸ್ಥೆಯಲ್ಲಿ ಬಿದ್ದದ್ದನ್ನು ಕಂಡು ಸೇವಕರು ಮಹೇಂದ್ರನಿಗೆ ದೂರಿಕೊಂಡರು. ಸೇವಕರ ಮಾತನ್ನು ಕೇಳಿ ಮಹೇಂದ್ರನು ಧೈರ್ಯಳದಿಂದ ತನ್ನ ಸೇವಕರಿಗೆ ಐರಾವತವನ್ನು ಸಿದ್ಧಗೊಳಿಸುವದಕ್ಕಾಗಿ ಅಜ್ಞಾಪಿಸಿದನು. ಮತ್ತು ಮಹಾಪ್ರಲಯ ಮಾಡುವ ವಜ್ರದಿಂದ ಆ ಚರ್ಪಟಿಯನ್ನು ನಾಶಗೊಳಿಸುವದಕ್ಕಾಗಿ ಸಿದ್ಧನಾದನು.

ಸ್ವತಃ ಮಹೇಂದ್ರನೇ ಯುದ್ಧಕ್ಕೆ ಹೊರಡುವದನ್ನು ಕಂಡು ಸೇವಕರು:—"ರಾಜಾ, ತಾವೇನು ಸಾಮಾನ್ಯ ಶೂರರಲ್ಲ! ಆದರೆ ಆ ನಾಥನು ಚಪಲನಿದ್ದು, ಶಸ್ತ್ರಾಸ್ತ್ರವಿಲ್ಲದೆ ಕೆಲವೊಂದು ವಿಪರೀತ ಕೆಲಸವನ್ನು ಮಾಡುತ್ತಾನೆ. ಅವನ ಮುಂದೆ ನಿಲ್ಲುವ ವೀರರು ಒಮ್ಮಿಂದೊಮ್ಮೆ ಶ್ವಾಸಕುಂಠಿತರಾಗಿ ಭೂಮಿಯ ಮೇಲೆ ಬೀಳುತ್ತಾರೆ. ಅವನಲ್ಲಿ ಯಾವದೊಂದು ಗುಪ್ತವಿದ್ಯೆಯು ಇರಲಿಕ್ಕೆ ಬೇಕು. ಅಂಥಲ್ಲಿ ನಿಮ್ಮ ವಜ್ರಾಯುಧವು ಉಪಯೋಗ ಬೀಳಲಾರದು. ತಮ್ಮ ಜೀವದ ಮೇಲೆ ಕಠಿಣ ಪ್ರಸಂಗವು ಒದಗಿದರೆ ಎಲ್ಲ ಕಾರಭಾರವು ನಿಂತುಹೋಗುವದು. ಆದ್ದರಿಂದ ತಾವು ಪಂಚವದನನೂ ದಶಹಸ್ತನೂ ಆದ ಶಂಕರನನ್ನು ತಮ್ಮ ಸಹಾಯಕ್ಕೆ ಕರೆದುಕೊಂಡು ಹೋಗಿರಿ. ಎಂದರು.

ಸೇವಕರ ಸೂಚನೆಯನ್ನು ಕೇಳಿ ಮಹೇಂದ್ರನು ಪಾಲಿಸಿದನು. ಐರಾವತದ ಮೇಲೆ ಆರೂಢನಾಗಿ ಕೈಲಾಸಕ್ಕೆ ಹೋದನು. ಶ್ರೀ ಶಂಕರನು ತನ್ನ ಗಣಗಳಿಂದ ಪರಿವೇಷ್ಟಿತನಾಗಿ ಕುಳಿತುಕೊಂಡಿದ್ದನು. ಇಂದ್ರನು ಧಾವಿಸುತ್ತ ಶಂಕರನ ಚರಣಗಳಮೇಲೆ ಮಸ್ತಕವನ್ನಿಟ್ಟು ನಮ್ರತೆಯಿಂದ—"ಹೇ ಆದಿನಾಥ! ತಾವು ಕೃಪೆ ಮಾಡಿ ನನ್ನನ್ನು ಅಮರಪುರಿಯ ಸಿಂಹಾಸನಕ್ಕೆ ಸ್ಥಾಪಿಸಿರುತ್ತೀರಿ. ಕಾಲಕಾಲಕ್ಕೆ ದಾನವರಿಂದ ನನಗೆ ತ್ರಾಸವಾದಾಗ ತಾವು ಬಂದು ನನ್ನನ್ನು ರಕ್ಷಿಸಿರುವಿರಿ. ಆದರೆ ಈಗ ನನ್ನ ಮೇಲೆ ಘೋರವಾದ ಸಂಕಟವು ಪ್ರಾಪ್ತವಾಗಿದೆ. ನನ್ನ ಸರ್ವ ಸೈನ್ಯವು ಯುದ್ಧದಲ್ಲಿ ಮೃತಪಟ್ಟಿರುತ್ತದೆ. ತಮಗೆ ಈ ಸಂಗತಿಯನ್ನು ತಿಳಿಸುವದಕ್ಕಾಗಿ ನಾನೊಬ್ಬನು ಜೀವಿಸಿದ್ದೇನೆ.

ದೇವೇಂದ್ರನ ಮಾತನ್ನು ಕೇಳಿ ಶಂಕರನು ಅಂಥ ಬಲಾಢ್ಯನಾದ ವೈರಿಯು ಯಾರೆಂದು ಕೇಳಿದನು; ಅದಕ್ಕೆ ಇಂದ್ರನು:—" ನನ್ನ ಶತ್ರು

ವನ್ನು ಇನ್ನೂ ನಾನು ನೋಡಿಲ್ಲ. ಅವನು ಅಮರಪುರಿಯ ಉಪವನವನ್ನು ನಾಶಗೊಳಿಸಿದ್ದಕ್ಕಾಗಿ ದೇವಗಣಗಳನ್ನು ಅವನ ಮೇಲೆ ಕಳಿಸಿಕೊಟ್ಟೆನು. ಆ ಶತ್ರುವು ಅವರೆಲ್ಲರನ್ನು ನಾಶಗೊಳಿಸಿರುವನು. ಇದನ್ನು ಕೇಳಿ ನಾನು ತಮ್ಮ ಚರಣದರ್ಶನಕ್ಕಾಗಿ ಬಂದಿದ್ದೇನೆ.

ಇದನ್ನು ಕೇಳಿ ಶಂಕರನು ಗಣಗಳಿಗೆ ಆಜ್ಞಾಪಿಸಿದ್ದೇನಂದರೆ—''ನೀವೆಲ್ಲರೂ ಯುದ್ಧಸನ್ನದ್ಧರಾಗಿ ನನ್ನೊಡನೆ ನಡೆಯಿರಿ. ಯಾರಾದರೂ ಒಬ್ಬರು ವೈಕುಂಠಕ್ಕೆ ಹೋಗಿ ಈ ಸಂಗತಿಯನ್ನು ಭಗವಾನ್ ವಿಷ್ಣುವಿಗೆ ತಿಳಿಸಿರಿ.

ಶಂಕರನ ಆಜ್ಞೆಯ ಮೇರೆಗೆ ಕೆಲವು ಗಣಗಳು ವೈಕುಂಠಕ್ಕೆ ಹೋದರು. ಸಮಸ್ತ ಪರಿವಾರದೊಡನೆ ಸ್ವತಃ ಶಂಕರನು ದೇವೇಂದ್ರನ ಸಹಾಯಕ್ಕೆ ಅಮರಾವತಿಗೆ ಹೋದನು. ಕುಸುಮವಟಿಯಲ್ಲಿ ಶಿವಗಣಗಳ ಪ್ರವೇಶವಾದ ಕೂಡಲೆ ಅವರು ಭಯಂಕರವಾದ ರಣಕಂದನ ನಡಿಸಹತ್ತಿದರು. ಅವರೊಡನೆ ವ್ಯರ್ಥವಾಗಿ ಯುದ್ಧವನ್ನು ಮಾಡದೆ ಚರ್ಪಟಿಯು ಅವರ ಮೇಲೆಯೂ ವಾತಾಕರ್ಷಣ ಅಸ್ತ್ರವನ್ನು ಬಿಟ್ಟನು. ಆ ಅಜಿಂಕ್ಯ ಅಸ್ತ್ರದಿಂದ ಶ್ರೀಶಂಕರನು ಸಹವಾಗಿ ಸರ್ವರೂ ಭೂಮಿಯ ಮೇಲೆ ಬಿದ್ದರು. ಸ್ವತಃ ದೇವೇಂದ್ರನೂ ಗಡಬಡ ಉರುಳಾಡುತ್ತ ಮೂರ್ಛಿತನಾಗಿ ಬಿದ್ದನು. ವೃಕ್ಷದ ಬೊಡ್ಡೆಯು ಮುರಿದರೆ ಅದರ ಟೊಂಗೆ ಎಲೆ ಮುಂತಾದವುಗಳು ಹೇಗೆ ಭೂಮಿಗೆ ಬೀಳುವವೋ ಹಾಗೆ ಶ್ರೀ ಶಂಕರ ಮತ್ತು ಆತನ ಸರ್ವ ಗಣ, ದೇವೇಂದ್ರ ಇವರೆಲ್ಲರು ಬಿದ್ದರು. ಅಮರೇಂದ್ರನು ತನ್ನ ಕೈಕಾಲುಗಳನ್ನು ಜಾಡಿಸುತ್ತಿದ್ದನು. ಇದನ್ನು ಕಂಡು ನಾರದರಿಗೆ ನಗೆ ಬಂದಿತು. ಗರ್ವಪಡುವ ಇಂದ್ರನ ಈ ಅವಸ್ಥೆಯನ್ನು ನೋಡಿ ಶ್ರೀ ನಾರದರಿಗೆ ಬಹಳ ಸಮಾಧಾನವಾಯಿತು.

ದೇವಗಣಗಳೊಳಗಿನ ಎಷ್ಟೋ ಜನರು ಶವರೂಪವನ್ನು ಹೊಂದಿ ಬಿದ್ದರು. ವೈಕುಂಠಲೋಕಕ್ಕೆ ಹೋದ ದೂತರು ಶ್ರೀ ವಿಷ್ಣುವಿಗೆ ಇಂದ್ರನ ಸರ್ವವೃತ್ತಾಂತವನ್ನು ತಿಳಿಸಿದರು. ಭಗವಾನ್ ವಿಷ್ಣುವು ಗರುಡನ ಮೇಲೆ ಆರೂಢನಾಗಿ ತನ್ನ ಸೈನ್ಯದೊಡನೆ ಇಂದ್ರಲೋಕಕ್ಕೆ ಬಂದನು. ಉಪವನದಲ್ಲಿ ಹೋದಬಳಿಕ ಆ ಸೈನಿಕರು ಒಮ್ಮೆಲೆ ಗರ್ಜನೆಯನ್ನು ಮಾಡಿ

ದರು. ಶಿವ ಮತ್ತು ಇಂದ್ರನು ಗಣಗಳ ಸಹಿತ ವ್ಯಾಕುಲರಾಗಿ ಬಿದ್ದದ್ದನ್ನು ನೋಡಿ ವಿಷ್ಣುವು ಕೋಪಾಯಮಾನನಾದನು; ಅವನು ತನ್ನ ಗಣಗಳಿಗೆ ಸೂರ್ಯನಂತೆ ತೇಜಸ್ಸನ್ನು ಧರಿಸಲಿಕ್ಕೆ ಹೇಳಿದನು. ಸರ್ವ ಸೈನಿಕರು ತಮ್ಮ ತಮ್ಮ ಶಸ್ತ್ರಗಳನ್ನು ಸಜ್ಜುಗೊಳಿಸಿದರು. ಸ್ವತಃ ವಿಷ್ಣುವು ಸುದರ್ಶನ ಚಕ್ರವನ್ನು ಧರಿಸಿದನು. ಆ ಎಲ್ಲ ಸಿದ್ಧತೆಯನ್ನು ಕಂಡು ಚರ್ಪಟನು ಕೈಯೊಳಗೆ ವಿಭೂತಿಯನ್ನು ಧರಿಸಿದನು. ವಿಷ್ಣುವಿನ ಸುದರ್ಶನ ಚಕ್ರದ ಪ್ರಭಾವವು ಅವನಿಗೆ ಗೊತ್ತಿತ್ತು. ಆದ್ದರಿಂದ ಅದನ್ನು ಬಿಡುವ ಮೊದಲೇ ಚರ್ಪಟನು ಸುದರ್ಶನದ ಮೇಲೆ ಮೋಹನಾಸ್ತ್ರವನ್ನು ಪ್ರಯೋಗ, ಮಾಡಿದನು. ಆ ಮೋಹನಾಸ್ತ್ರದಿಂದ ಸುದರ್ಶನಚಕ್ರವು ಮೋಹವನ್ನು ಹೊಂದಿ ಅಚಲವಾಯಿತು. ಬಳಿಕ ಆ ವಿಷ್ಣುವಿನ ಗಣಗಳ ಮೇಲೆ ವಾತಾಕರ್ಷಣ ಪ್ರಯೋಗ ಮಾಡಿದನು. ಆದರಿಂದ ಗಣಗಳಿಗೆ ಉಳಿದವರಂತೆ ಅವಸ್ಥೆಯಾಯಿತು. ಸರ್ವ ಸೈನ್ಯದ ಪ್ರಾಣೋತ್ಕ್ರಮಣದ ಸ್ಥಿತಿಯನ್ನು ನೋಡಿ ಶ್ರೀ ವಿಷ್ಣುವು ಸುದರ್ಶನದ ಪ್ರಯೋಗ ಮಾಡಿದನು.

ಭಗವಂತನು ಆ ಜಾಜ್ವಲ್ಯ ಸುದರ್ಶನ ಚಕ್ರವನ್ನು ಬಿಟ್ಟಕೂಡಲೆ ಅದು ನಾಥನ ಹತ್ತರಹೋಗಿ ಮೋಹಮಗ್ನವಾಗಿ ನಿಂತುಬಿಟ್ಟಿತು. ಚರ್ಪಟಿನಾಥನು ಪ್ರತ್ಯಕ್ಷ ಪಿಪ್ಪಲಾಯನ ನಾಮಕ ನಾರಾಯಣನಿರುವನೆಂದು ತಿಳಿದು ಆ ಚಕ್ರವು ಆತನ ಚರಣದಲ್ಲಿ ಲೀನವಾಯಿತು. ತನ್ನ ಸ್ವಾಮಿಯ ಪ್ರಾಣ ತೆಗೆದುಕೊಳ್ಳಲಿಕ್ಕೆ ನಾಚಿಕೊಂಡು ನಾಥನಿಗೆ ನಮಸ್ಕಾರ ಮಾಡಿ ಆತನ ಬಲಗೈಯಲ್ಲಿ ಹೋಗಿ ಕುಳಿತುಕೊಂಡಿತು. ಸುದರ್ಶನದ ಪ್ರಾಪ್ತಿಯಿಂದ ಚರ್ಪಟಿನಾಥನು ಎರಡನೇ ವಿಷ್ಣುವಿನಂತೆ ತೋರಹತ್ತಿದನು. ಸುದರ್ಶನವು ಮೋಹವನ್ನು ಹೊಂದಿ ಚರ್ಪಟಿಯ ಸ್ವಾಧೀನವಾದದ್ದನ್ನು ಕಂಡು ಬಹಳ ಆಶ್ಚರ್ಯವಾಯಿತು. ಆ ಮೇಲೆ ವಿಷ್ಣುವು ತನ್ನ ಗದೆಯನ್ನು ಸಜ್ಜುಗೊಳಿಸಿ ಚರ್ಪಟಿಯ ಮೇಲೆ ಧಾವಿಸಿದನು. ನಾಥನು ವಾತಾಕರ್ಷಣದ ಜಪವನ್ನು ಮಾಡಿ ಭಗವಾನ್ ವಿಷ್ಣುವಿನ ಮೇಲೆ ವಿಭೂತಿಯನ್ನು ತೂರಿದನು. ಆ ಅಸ್ತ್ರವು ವಿಷ್ಣುವಿನಲ್ಲಿ ಸೇರಿ ಶ್ವಾಸವನ್ನು ಕುಂತಿಸಿ ನಿಶ್ಚೇಷ್ಟಿತನನ್ನಾಗಮಾಡಿ ಭೂಮಿಗೆ ಕೆಡವಿಬಿಟ್ಟಿತು. ಆತನು ಹತವೀರ್ಯನಾಗಲು ಕೈಯೊಳಗಿನ ಗದಾ ಮತ್ತು ಪಾಂಚಜನ್ಯಗಳು ಕಳಚಿ ಬಿದ್ದವು. ಶ್ರೀ

ವಿಷ್ಣುವು ನಿಶ್ಚೇಷ್ಟಿತನಾಗಲು, ಚರ್ಪಟಿನಾಥನು ಆತನ ಸನ್ನಿಧಿಯಲ್ಲಿಹೋಗಿ ದೇಹವನ್ನು ನಿರೀಕ್ಷಿಸಹತ್ತಿದನು. ಅವನ ಕೊರಳೊಳಗಿನ ಕೌಸ್ತುಭವನ್ನು ನೋಡಿದ ಕೂಡಲೆ ಚರ್ಪಟಿಗೆ ಮೋಹವುತ್ಪನ್ನವಾಯಿತು. ವಿಷ್ಣುವಿನ ವೈಜಯಂತೀ ಮಾಲೆಯನ್ನು ತೆಗೆದುಕೊಂಡು ತಾನು ಧರಿಸಿಕೊಂಡನು. ಮತ್ತು ವಿಷ್ಣುವಿನ ಕಿರೀಟವನ್ನು ಹಾಕಿಕೊಂಡನು.

ಈ ವೇಳೆಗೆ ವಿಷ್ಣುವಿನ ಶಂಖ, ಚಕ್ರ, ಗದಾ ಇತ್ಯಾದಿ ಆಯುಧಗಳನ್ನು ತನ್ನ ಕೈಯೊಳಗೆ ತೆಗೆದುಕೊಂಡು ಅವನು ಶಂಕರನ ಕಡೆಗೆ ಹೋದನು. ಅಲ್ಲಿಯೂ ಶಂಕರನ ಆಯುಧಗಳನ್ನು ತೆಗೆದುಕೊಂಡು ಸತ್ಯಲೋಕಕ್ಕೆ ಹೋದನು. ಚರ್ಪಟನು ಹರಿಹರ ರೂಪವನ್ನು ಧರಿಸಿ ಬ್ರಹ್ಮದೇವನ ಮುಂದೆ ಹೋಗಿ ನಿಲ್ಲಲು, ಆ ವಿಶಾಲಬುದ್ಧಿಯುಳ್ಳ ಬ್ರಹ್ಮದೇವನು ತನ್ನ ಮನಸ್ಸಿಗೆ ಸಂಕೋಚಪಟ್ಟನು. ಚರ್ಪಟಿಯ ಬಳಿಯಲ್ಲಿ ಈ ಆಯುಧಗಳು ಇರುವ ಕಾರಣವೇನೆಂದು ವಿಚಾರಿಸಿದನು. ಚರ್ಪಟಿಯು ಕುಸುಮವಟಿಯಲ್ಲಿ ಆದ ಎಲ್ಲ ಸಂಗತಿಯನ್ನು ಬ್ರಹ್ಮದೇವನಿಗೆ ಕಥನಮಾಡಿದನು. ತನ್ನ ದಿವ್ಯಪುತ್ರನು ಹರಿಹರರನ್ನು ಮೂರ್ಛಿತರನ್ನಾಗಮಾಡಿ ಅವರ ಆಯುಧಗಳನ್ನು ಸೆಳೆದುಕೊಂಡು ಬಂದದ್ದನ್ನು ಅರಿತು ಬ್ರಹ್ಮದೇವನು ಗಾಬರಿಯಾದನು. ಅವನು ಕೌತುಕದಿಂದ ಚರ್ಪಟಿಯನ್ನು ಗೌರವಿಸಿ.—"ಬಾಳಾ, ಭಗವಾನ್ ವಿಷ್ಣುವು ನಿನ್ನ ಅಜ್ಜನಾಗಿದ್ದಾನೆ. ಮಹಾದೇವನು ನನ್ನ ಮತ್ತು ಜಗತ್ತಿನ ಆರಾಧ್ಯ ದೈವತವಾಗಿದ್ದಾನೆ. ಆ ಹರಿಹರರನ್ನು ಹೀಗೆ ಚೈತನ್ಯಶೂನ್ಯರನ್ನಾಗಮಾಡಿದರೆ, ಎಲ್ಲ ಜಗತ್ತು ನಿರಾಶ್ರಿತವಾಗುವದು. ನನ್ನ ಜೀವಿತಕ್ಕೂ ಅಪಾಯ ಸಂಭವಿಸಬಹುದು. ಆ ಆದಿದೇವನ ಕ್ಲೇಶವನ್ನು ತ್ವರಿತವಾಗಿ ದೂರಮಾಡು. ಹಾಗೆ ನಿನ್ನ ಇಚ್ಛೆಯು ಇಲ್ಲದಿದ್ದರೆ ನನ್ನನ್ನೂ ಅವರಂತೆ ಮೂರ್ಛಿತನನ್ನಾಗಮಾಡಿ ಬಳಿಕ ನಿನ್ನ ಮನಸ್ಸಿಗೆ ಬಂದಂತೆ ಸಂಚರಿಸು." ಎಂದನು.

ತಂದೆಯ ಮಾತನ್ನು ಕೇಳಿ ಆ ಬ್ರಹ್ಮಪುತ್ರನ ಮನಸ್ಸು ಕರಗಿತು. ಚರ್ಪಟಿಯು ಬ್ರಹ್ಮದೇವನೊಡನೆ ಪುನಃ ಅಮರಪುರಕ್ಕೆ ಹೋದನು. ಹರಿಹರರು ಕ್ಲೇಶಪಡುವದನ್ನು ಕಂಡು ಬ್ರಹ್ಮದೇವನು ಕಳವಳಪಟ್ಟನು. ಚರ್ಪಟಿಯು ಕೂಡಲೆ ವಾತಪ್ರೇರಕ ಅಸ್ತ್ರವನ್ನು ಜಪಿಸಿ ಮೂರ್ಛಿತ ವೀರರನ್ನು

ಸಾವಧಗೊಳಿಸಿದನು. ವೃತಪಟ್ಟು ಬಿದ್ದ, ಸರ್ವ ಸೇವಕರನ್ನು ಸಂಜೀವಿನೀ ಮಂತ್ರವನ್ನು ಜಪಿಸಿ, ಸಜೀವಗೊಳಿಸಿದನು. ಹರಿಹರರು ಸಾವಧರಾಗಲು, ಚರ್ಪಟಿಯು ಅವರ ಚರಣಗಳನ್ನು ಹಿಡಿದುಕೊಂಡನು. ಬ್ರಹ್ಮದೇವನು ಚರ್ಪಟಿಯ ಅವತಾರಚರಿತ್ರವನ್ನು ಹರಿಹರರಿಗೆ ಕಥನಮಾಡಿದನು. ಆ ಚರ್ಪಟಿಯು ತನ್ನ ಅಂಶವೇ ಆಗಿದ್ದಾನೆಂದು ತಿಳಿದು ಸಮಾಧಾನವನ್ನು ಹೊಂದಿದನು. ಬ್ರಹ್ಮದೇವನು ಚರ್ಪಟಿಯ ಮೇಲಿನ ಎಲ್ಲ ಆಭರಣಗಳನ್ನು ತೆಗೆದು ಹರಿಹರರಿಗೆ ಒಪ್ಪಿಸಿದನು. ಸರ್ವದೇವತೆಗಳಿಗೆ ಚರ್ಪಟಿಯು ಪಿಪ್ಪಲಾಯನ ನಾರಾಯಣನ ಅವತಾರಿಕನೆಂಬದು ತಿಳಿದುಬಂತು. ಆಗ ಹರಿಹರರು ಆತನಿಗೆ ಆಶೀರ್ವಾದ ಮಾಡಿ ತಮ್ಮ ತಮ್ಮ ಲೋಕಕ್ಕೆ ಹೊರಟು ಹೋದರು. ಬ್ರಹ್ಮದೇವನೂ ಚರ್ಪಟಿಯು ಸಹವಾಗಿ ಸತ್ಯಲೋಕಕ್ಕೆ ಹೋದನು.

ಬಳಿಕ ಚರ್ಪಟಿಯು ಸ್ವರ್ಗದೊಳಗಿನ ಎಲ್ಲ ತೀರ್ಥ-ಯಾತ್ರೆಗಳನ್ನು ತೀರಿಸಿಕೊಂಡು ಪೃಥ್ವಿಯ ಮೇಲೆ ಬಂದನು.

---

# ಅಧ್ಯಾಯ ೪೦

## ಇಂದ್ರನ ಸೋಮಯಾಗ ಮತ್ತು ನಾಥರ ಗೌಪ್ಯ.

ಚರ್ಪಟಿಯು ಮಾಡಿದ ಅಪಮಾನದಿಂದ ಇಂದ್ರನು ಲಜ್ಜಿತನಾದನು. ಅವನು ಹೇಗಾದರೂ ಮಾಡಿ ವಾತಾಕರ್ಷಣ ಅಸ್ತ್ರವನ್ನು ಸಂಪಾದಿಸಬೇಕೆಂದು ಇಚ್ಛಿಸಿ ಸಿಂಹಲದ್ವೀಪದಲ್ಲಿ ಸೋಮಯಾಗ ಮಾಡಬೇಕೆಂದು ನಿರ್ಧರಿಸಿದನು. ಈ ಯಾಗಕ್ಕೆ ಎಲ್ಲ ನಾಥರನ್ನೂ ಕರೆಯಲಿಕ್ಕೆ ಉಪರಿಕ್ಷವಸುವು ಪೃಥ್ವಿಗೆ ಬಂದನು. ಇಂದ್ರನು ಈ ಬಗ್ಗೆ ಬೃಹಸ್ಪತಿಯನ್ನು ವಿಚಾರಿಸಿದನು.

ಇಂದ್ರನ ವಿಜ್ಞಾಪನೆಯನ್ನು ಕೇಳಿ ಬ್ರಹಸ್ಪತಿಯು ಇಂತು ಉಪಾಯ ಹೇಳಿದನು. ನೀವು ಸೋಮಯಾಗವನ್ನು ಮಾಡುವ ಯೋಜನೆಯನ್ನೇ

ಮಾಡಿರಿ. ಅದರ ನಿಮಿತ್ಯದಿಂದ ಎಲ್ಲ ನಾಥರನ್ನು ಇಲ್ಲಿಗೆ ಬರಮಾಡಿಕೊಳ್ಳಿರಿ. ಆ ನಾಥರು ಇಲ್ಲಿಗೆ ಬಂದ ಕೂಡಲೆ ಅಪಾರಭಕ್ತಿಯಿಂದ ಅವರಿಗೆ ಮೋಹ ಉತ್ಪನ್ನಮಾಡಿ ನಿಮ್ಮ ಕಾರ್ಯವನ್ನು ಸಾಧಿಸಿಕೊಳ್ಳಬೇಕು. ಗುರುಗಳ ಈ ಯುಕ್ತಿಗೂ ದೇವೇಂದ್ರನಯುಕ್ತಿಗೂ ಸರಿಹೋಯಿತು. ಉಪರಿಕ್ಷನು ಮಹೇಂದ್ರನ ಆಜ್ಞೆಯಂತೆ ವಿಮಾನದಲ್ಲಿ ಕುಳಿತು ಬದರಿಕಾಶ್ರಮಕ್ಕೆ ಹೋದಾಗ ಮಚ್ಛಿಂದ್ರನೂ ಅಲ್ಲಿಯೇ ಇದ್ದನು. ಬೇರೆ ಗೋರಕ್ಷ, ಧರ್ಮನಾಥ ಚೌರಂಗಿ, ಕಾನೀಫ, ಗೋಪೀಚಂದ, ಅಡಬಂಗ, ಜಾಲಂದರ, ಇತ್ಯಾದಿ ನಾಥರು ಮಚ್ಛಿಂದ್ರನ ದರ್ಶನಕ್ಕಾಗಿಯೂ ಗಯಾ ತೀರ್ಥಸ್ನಾನದ ಸಲುವಾಗಿಯೂ ಬದರಿಕಾಶ್ರಮಕ್ಕೆ ಬಂದರು. ಉಪರಿಕ್ಷ ವಸುವನ್ನು ಕಂಡ ಕೂಡಲೆ ಮಚ್ಛಿಂದ್ರನು ಧಾವಿಸಿ ಬಂದು ನಮಸ್ಕಾರ ಮಾಡಿದನು. ಪಿತಾ ಪುತ್ರರ ಕ್ಷೇಮಸಮಾಚಾರದ ಮಾತುಗಳು ಆದ ಬಳಿಕ ಮಚ್ಛಿಂದ್ರನು ಉಪರಿಕ್ಷ ವಸುವಿಗೆ ಬಂದ ಕಾರಣವನ್ನು ವಿಚಾರಿಸಿದನು. ಇಂದ್ರನು ಸೋಮಯಾಗವನ್ನು ಮಾಡತಕ್ಕವನಿದ್ದಾನೆ. ಆ ಯಾಗಕ್ಕೆ ಯಾವತ್ತು ನಾಥರು ಬರಬೇಕೆಂದು ಇಚ್ಛಿಸುತ್ತಾನೆ. ಆದ್ದರಿಂದ ತಮ್ಮೆಲ್ಲರನ್ನು ಕರೆಯಲಿಕ್ಕೆ ಬಂದಿರುವೆನು. ತಾವಾದರೂ ಕೃಪೆಮಾಡಿ ಬರಬೇಕಂದು ಆಗ್ರಹ ಪೂರ್ವಕವಾಗಿ ಹೇಳಿದನು. ಮಚ್ಛಿಂದ್ರನಾಥನು ಉಪರಿಕ್ಷ ವಸುವಿನ ಒತ್ತಾಯದಿಂದ ದೇವೇಂದ್ರನ ಯಜ್ಞಕ್ಕ ನಾಥರೊಡನೆ ಬರಲಿಕ್ಕೆ ಒಪ್ಪಿಕೊಂಡನು. ಬಳಿಕ ಜಾಲಂದರ, ಕಾನೀಫ, ಚೌರಂಗಿ, ಮಚ್ಛಿಂದ್ರ, ಗೋರಕ್ಷ, ಅಡಬಂಗ, ಗೋಪೀಚಂದ ಇತ್ಯಾದಿ ಯೋಗಿಗಳು ವಿಮಾನದಲ್ಲಿ ಕುಳಿತರು. ಪ್ರಥಮತಃ ಅವರ ವಿಮಾನವು [illegible] ಪಟ್ಟಣಕ್ಕೆ ಹೋಯಿತು.

ಉಪರಿಕ್ಷ ವಸು ಗಂಧರ್ವರೊಡನೆ ಆ ಉಪವನವನ್ನು ನೋಡಲಿಕ್ಕೆ ಹೋದನು. [illegible] ಯೋಗ್ಯವೆಂದು ತಿಳಿದು [illegible]ದ ಸಿದ್ಧತೆಯನ್ನು ಮಾಡಿದನು. ಇಂದ್ರನು ಶಚೀದೇವಿಯೊಡನೆ ಪುಣ್ಯಾಹವಾಚನಕ್ಕಾಗಿ ಕುಳಿತುಕೊಂಡು ಯಜ್ಞದೀಕ್ಷೆಯನ್ನು ಕೈಕೊಂಡನು. ಬೃಹಸ್ಪತಿಯು ಆಚಾರ್ಯನಾದನು. ನವನಾಥರು ಯಜ್ಞಕುಂಡದ ಹತ್ತರ ಕುಳಿತು ಆಹುತಿಯನ್ನು ಹಾಕುತ್ತಿದ್ದರು. ಸಿಂಹಲದ್ವೀಪದಲ್ಲಿರುವ ಉಪವನದಲ್ಲಿ ಯಜ್ಞ ನಡೆದದ್ದರಿಂದ ಮಚ್ಛಿಂದ್ರನಿಗೆ ಕೀಲೋತಳೆ ಮತ್ತು ಮೀನನಾಥ ಇವರ ಸ್ಮರಣೆಯಾಗಿ ಅವರನ್ನು ಕರೆದುಕೊಂಡು ಬಂದನು. ವಸುವಿನ ವಚನದಂತೆ ತನಗೆ ಮಚ್ಛಿಂದ್ರನ ಭೆಟ್ಟಿಯಾದ್ದರಿಂದ ಕೀಲೋತಳೆಗೆ ಆನಂದವಾಯಿತು. ವಿಯೋಗ ದುಃಖವು ಪುನಃ ನೆನಪಿಗೆ ಬಂದು ಇಬ್ಬರು ಅಶ್ರುಪಾತವನ್ನು ಮಾಡಹತ್ತಿದರು.

ಮಚ್ಛಿಂದ್ರನಾಥನು ತನ್ನ ಸ್ಥಳದಲ್ಲಿ ಚೌರಂಗಿಯನ್ನು ಕುಳ್ಳಿರಿಸಿದನು. ಮಚ್ಛಿಂದನಿಗೆ ಪುತ್ರಮೋಹ ಉತ್ಪನ್ನವಾಗಿ ಮೀನನಾಥನಿಗೆ ಸರ್ವ ವಿದ್ಯೆಯನ್ನು ಅರ್ಪಿಸಬೇಕೆಂಬ ಸ್ಫೂರ್ತಿಯುಂಟಾಗಿ ಯಜ್ಞವು ನಡೆದಿರಲು ಮೀನ

ನಾಥನನ್ನು ಏಕಾಂತದಲ್ಲಿ ಕರೆದುಕೊಂಡುಹೋಗಿ ವಿದ್ಯೆಯನ್ನು ಕಲಿಸಹತ್ತಿದನು. ಇದನ್ನು ಕಂಡು ಜ್ಞಾನಸಂಪನ್ನ ಮತ್ತು ಕಾರ್ಯದಕ್ಷನಾದ ಬೃಹಸ್ಪತಿಯು ಸಂಕೇತದಿಂದ ಇಂದ್ರನಿಗೆ ಸೂಚಿಸಿದ್ದೇನಂದರೆ—"ಮಹಾರಾಜಾ, ನೀವು ಯಜ್ಞವನ್ನು ಮಾಡುತ್ತ ಕೂಡ್ರುವದು ಯೋಗ್ಯವಲ್ಲ."

ಮಚ್ಛಿಂದ್ರನಾಥನು ಯಾವ ಸ್ಥಳದಲ್ಲಿ ವಿೂನನಾಥನಿಗೆ ವಿದ್ಯೆಯನ್ನು ಕಲಿಸುತ್ತಿದ್ದನೋ ಆ ಸ್ಥಳದಲ್ಲಿ ಗುಪ್ತವಾಗಿ ಸೇರುವದಕ್ಕೆ ಇಂದ್ರನು ಒಂದು ಯುಕ್ತಿಯನ್ನು ಯೋಜಿಸಿದನು, ಅವನು ನವಿಲಿನ ರೂಪದಿಂದ ಅಲ್ಲಿರುವ ಒಂದು ಗಿಡದ ಮೇಲೆ ಹೋಗಿ ಕುಳಿತನು. ಹೀಗೆ ಪೇಳುತ್ತ ಮಚ್ಛಿಂದ್ರನು ವಿೂನನಾಥನಿಗೆ ವಾತಾಕರ್ಷಣ ಅಸ್ತ್ರವನ್ನು ಉಪದೇಶಿಸಿದನು. ಅದು ಸುಲಭವಾಗಿ ಇಂದ್ರನ ಕಿವಿಗೆ ಬಿತ್ತು. ಆ ನಂತರ ಮಚ್ಛಿಂದ್ರನಾಥನು ವಿೂನನಾಥನಿಗೆ ವಾತಪ್ರೇರಕ ಅಸ್ತ್ರವನ್ನು ಹೇಳಿದನು. ಅದೂ ಇಂದ್ರನಿಗೆ ಕೇಳಬಂತು. ಹೀಗೆ ವಿೂನನಾಥನ ಅಭ್ಯಾಸ ಪೂರ್ಣವಾಗುವವರೆಗೆ ನಡೆದಿತ್ತು. ಅಷ್ಟು ಅವಧಿಯಲ್ಲಿ ಇಂದ್ರನು ಆ ಎರಡೂ ಅಸ್ತ್ರಗಳ ಅಭ್ಯಾಸಮಾಡಿದನು. ಈ ಪ್ರಕಾರ ಅವನು ಕಪಟದಿಂದ ಆ ಎರಡೂ ಅಸ್ತ್ರಗಳನ್ನು ಸಂಪಾದನ ಮಾಡಿಕೊಂಡನು.

ಯಜ್ಞಕ್ರಿಯೆಯು ಪೂರ್ಣವಾದ ಬಳಿಕ ಸರ್ವಾನುಮತದಿಂದ ಅಗ್ರಪೂಜೆಯನ್ನು ಮಚ್ಛಿಂದ್ರನಿಗೆ ಮಾಡಬೇಕೆಂದು ಗೊತ್ತಾಗಿ ಮಹೇಂದ್ರ ಮತ್ತು ಉಪರಿಚ್ಛವಸು ಇವರು ಮಚ್ಛಿಂದ್ರನನ್ನು ಯಥೋಪಚಾರದಿಂದ ಪೂಜಿಸಿದರು. ನಂತರ ಇಂದ್ರನು ಉಳಿದ ನಾಥರಿಗೂ ವಸ್ತ್ರ ಭೂಷಣಗಳನ್ನು ಕೊಟ್ಟು ಸಂತುಷ್ಟರನ್ನಾಗಮಾಡಿದನು. ಈ ಮೇರೆಗೆ ಎಲ್ಲ ನಾಥರನ್ನು ಸನ್ಮಾನಿಸಿ ಇಂದ್ರನು ಅವರನ್ನು ಸುವರ್ಣದ ಆಸನದ ಮೇಲೆ ಕುಳ್ಳಿರಿಸಿದನು. ಮತ್ತು ಅವರ ಮುಂದೆ ಕೈಜೋಡಿಸಿಕೊಂಡು ನಿಂತು ಅಂದದ್ದೇನಂದರೆ:—" ಹೇ ನಾಥಮಹಾರಾಜ, ನನ್ನ ಕಡೆಯಿಂದ ದೊಡ್ಡದೊಂದು ಅಪರಾಧವಾಗಿದೆ. ತಾವು ಸುಶೀಲರೂ, ಶಾಂತಸ್ವಭಾವದವರೂ ಇರುವಿರಿ. ಸಮಾಧಾನದಿಂದ ನಾನು ಮಾಡಿದ ಅಪರಾಧವನ್ನು ಕ್ಷಮಿಸಬೇಕು. ಮಚ್ಛಿಂದ್ರನಾಥನು ವಿೂನನಾಥನಿಗೆ ವಿದ್ಯೆಯನ್ನು ಕಲಿಸುವಾಗ ನಾನು ನವಿಲಿನ ವೇಷವನ್ನು ಧರಿಸಿ ಎಲ್ಲ ವಿದ್ಯೆಯನ್ನು ಕಲಿತುಕೊಂಡಿದ್ದೇನೆ. ಈ ವಿದ್ಯೆಯು ನನಗೆ ವಿೂನನಾಥನಿಂದ ದೊರೆತಿದ್ದು, ಅದು ಎಲ್ಲ ನಾಥರ ಪ್ರಸಾದವೆಂದೇ ತಿಳಿಯುತ್ತೇನೆ. ಈ ವಿದ್ಯೆಯು ನನಗೆ ಸಫಲವಾಗುವಂತೆ ಅನುಗ್ರಹಿಸಿ ಸನಾಥನನ್ನಾಗಮಾಡಬೇಕೆಂದು ಪ್ರಾರ್ಥಿಸುವೆನು. "

ಇಂದ್ರನು ನಮ್ರತೆಯಿಂದ ಆಡಿದ ಮಾತುಗಳನ್ನು ಕೇಳಿ ನಾಥರು ಸಮ್ಮತಿ ಪಡಲಿಲ್ಲ. ಕಪಟತನದಿಂದ ಇಂದ್ರನು ವಿದ್ಯೆಯನ್ನು ಕಲಿತದ್ದಕ್ಕಾಗಿ ನಾಥರೆಲ್ಲರು ಕಷ್ಟಬ್ಧರಾದರು, ಇದಕ್ಕಾಗಿ ಗಂಡನೆ ಮಾಡಬೇಕೆಂದು

ಯೋಚಿಸಿ ಇಂದ್ರನಿಗೆ ಹೇಳಿದ್ದೇನೆಂದರೆ:—ಮಹೇಂದ್ರಾ, ನೀನು ಬಹಳ ಕಪಟಿಯೂ, ನೀಚನೂ ಇರುವಿ. ಸೋಮಯಾಗದ ನಿಮಿತ್ತಮಾಡಿ ನಮ್ಮನ್ನು ಇಲ್ಲಿಗೆ ಕರಿಸಿ ಮೋಸಮಾಡಿರುವಿ. ಚೋರತನಮಾಡಿ ನೀನು ನಮ್ಮ ಬಳಿಯಲ್ಲಿ ಕಲಿತ ವಿದ್ಯೆಯು ನಿನಗೆ ಫಲದ್ರೂಪವಾಗಲಾರದು.

ನಾಥರ ಶಾಪವಾಣಿಯನ್ನು ಕೇಳಿ ಇಂದ್ರನು ಖಿನ್ನನಾದನು. ಆವನು ಬೃಹಸ್ಪತಿ, ಮತ್ತು ಉಪರಿಕ್ಷ ವಸುವಿನ ಮೋರೆಯನ್ನು ನೋಡ ಹತ್ತಿದನು. ಅವರಿಗೆ ದಯುಹುಟ್ಟಿ ನಾಥರಿಗೆ ಗೌರವಯುಕ್ತವಾದ ವಾಣಿಯಿಂದ—"ಹೇ ಸಾಮರ್ಥ್ಯಸಂಪನ್ನರಾದ ಯತಿಗಳೇ ತಾವು ಕೋಪಿಸಬಾರದು. ಇಂದ್ರನ ಮೇಲೆ ದಯಮಾಡಬೇಕು! ತಮ್ಮ ಯೋಗದಿಂದಲೇ ಇಂದ್ರನಿಗೆ ಸರ್ವಾಧಿಕಾರವು ಪ್ರಾಪ್ತವಾಗಿದೆ. ಇಂದ್ರನಿಗೆ ಬುದ್ಧಿ ಹೋಗಿ ತಮ್ಮ ಔದಾರ್ಯವನ್ನು ಲಕ್ಷಿಸದಿದ್ದದ್ದು ದೊಡ್ಡ ಅಪರಾಧವಾಗಿದೆ. ಆದರೂ ಅವನ ಮನಸ್ಸಿನೊಳಗಿನ ಆದರಭಾವವನ್ನೂ ಮತ್ತು ವಿದ್ಯೆಯನ್ನು ಕಲಿಯುವ ಉತ್ಕಟವಾದ ಇಚ್ಛೆಯನ್ನೂ ಅರಿತು ದೊಡ್ಡ ಮನಸ್ಸಿನಿಂದ ಇಂದ್ರನನ್ನು ಉಃಶಾಪವಾಣಿಯಿಂದ ರಕ್ಷಿಸಬೇಕು ಎಂದು ಹೇಳಿದರು.

ಈ ಪ್ರಕಾರ ಬೃಹಸ್ಪತಿ ಉಪರಿಕ್ಷ ವಸು ಇವರು ನಾಥರಿಗೆ ಬಹು ರೀತಿಯಿಂದ ವಿಜ್ಞಾಪಿಸಿಕೊಂಡದ್ದರಿಂದ ನಾಥರ ಮನಸ್ಸು ಕರಗಿತು. ಅವರು ಉಃಶಾಪವಾಣಿಯಿಂದ—"ಇಂದ್ರನಿಗೆ ಈ ವಿದ್ಯೆಯು ಫಲದ್ರೂಪವಾಗಬೇಕೆಂಬ ಉತ್ಕಟ ಇಚ್ಛೆ ಇದ್ದರೆ ಅವನು ಹನ್ನೆರಡು ವರ್ಷಗಳ ವರೆಗೆ ಪ್ರಖರವಾದ ತಪಸ್ಸನ್ನಾಚರಿ[illegible]ಕು. ವಾತಾಕರ್ಷಣದಂಥ ಆ-ಪಂಕ್ಯ ಮತ್ತು ನಿವಾ[illegible]ಲಭವಾಗಿ ಪ್ರಾಪ್ತವಾಗಲಾರದು. ಅವನು [illegible] ಸ್ಸನ್ನು ಮಾಡಬೇಕು. ಅಂದರೆ ಆ ವಿದ್ಯೆಯು ಫಲ[illegible]. ಮತ್ತು ನಿವಾರಣ ಈ ಅಸ್ತ್ರದಿಂದ ನಾಥಸಂಘದೊಳಗಿನ[illegible] ಮೇಲೆ ತ್ರಾಸಕೊಡ ಹೋದರೆ ಆ ಅಸ್ತ್ರವು ಎಂದೂ [illegible] ಬೀಳಲಾರದು ಎಂದರು.

ಹೀಗೆ ಹೇಳಿ ಎಲ್ಲ ನಾಥರು ವಿಮಾನದಲ್ಲಿ ಕುಳಿತರು. ಮಚ್ಛೇಂದ್ರನಾಥನು ಕಣ್ಣುತುಂಬ ನೋಡುತ್ತಿಂದು ಪ್ರಯಾಸದಿಂದ ಕೀಲೋತ್ಕಳೆಯ ಅಪ್ಪಣೆಯನ್ನು ಪಡೆದುಕೊಂಡನು. ಆ ವಿಮಾನವು ಕೆಲವು ಕಾಲದ ಮೇಲೆ ಪುನಃ ಮೃತ್ಯುಲೋಕಕ್ಕೆ ಬಂದಿತು. ಎಲ್ಲ ನಾಥರು ಕೆಳಗೆ ಇಳಿದು ತೀರ್ಥ-ಕ್ಷೇತ್ರಗಳನ್ನು ನೋಡುತ್ತ ಹೇಲಾಪಟ್ಟಣಕ್ಕೆ ಹೋದರು. ಅಲ್ಲಿ ಮೈನಾವತಿಯನ್ನು ಆಕೆಯ ಮನೆಗೆ ಕಳಿಸಿ ಮುಂದೆ ನಡೆದರು.

ನಾಥನ ಸೂಚನೆಯ ಮೇರೆಗೆ ಮಹೇಂದ್ರನು ಸಹ್ಯಾದ್ರಿಪರ್ವತದ ಮೇಲೆ ತೀವ್ರವಾಗಿ ತಪಸ್ಸನ್ನು ಮಾಡಿದನು ಇಂದ್ರನು ಆ ಕಾಲಕ್ಕೆ ಆ ಪರ್ವತದ ಮೇಲೆ ಮಂತ್ರಪ್ರಯೋಗದಿಂದ ನೀರನ್ನು ಬಿಡಲು ಅದು

ನದಿಯ ರೂಪವನ್ನು ಹೊಂದಿ ಭೀಮರಥಿಗೆ ಬಂದು ಕೂಡಿತು. ಇಂದ್ರನು ಆ ಕಾಲಕ್ಕೆ ಮಣಿಕರ್ಣಿಕೆಯ ನೀರನ್ನು ತಂದಿದ್ದನು. ಇಂದ್ರನ ಕೈಯಿಂದ ಬಿದ್ದನೀರು ಇಂದ್ರಾಯಣಿಯಲ್ಲಿ ಬಿದ್ದು ಆ ನದಿಯು ಪಾವನವಾಯಿತು. ಆ ನದಿಯ ಯೋಗದಿಂದ ತೇಜಸ್ಸು ಪ್ರಾಪ್ತವಾಗಿ ಇಂದ್ರನಿಗೆ ನಾಥವಿದ್ಯೆಯು ಲಭಿಸಿತು. ಆ ಮೇಲೆ ಮಹೇಂದ್ರನು ಪುನಃ ತನ್ನ ಅಮರಪುರಕ್ಕೆ ಹೋಗಿ ಸುಖದಿಂದ ರಾಜ್ಯಕಾರಭಾರವನ್ನು ಆಚರಿಸಹತ್ತಿದನು.

ನಾಥರು ಎಷ್ಟೋ ಕಾಲದವರೆಗೆ ತೀರ್ಥಾಟನ ಮಾಡಿ ಗುಪ್ತರಾದರು. ಭೂತಲದ ಮೇಲೆ ಹೀಗೆ ಪ್ರತ್ಯಕ್ಷವಾಗಿ ಸಂಚರಿಸುವದು ಅವರಿಗೆ ಬೇಸರಾಯಿತು. ಅವರು ಬೇರೆ ಬೇರೆ ಸ್ಥಳದಲ್ಲಿ ಗುಪ್ತವಾಗಿ ವಾಸ್ತವ್ಯ ಮಾಡಿದರು. ಕಾನ್ಹೋಬಾ ಈ ಹೆಸರನ್ನು ಧರಿಸಿ ಮಚ್ಛಿಂದ್ರನಾಥನು ಒಂದು ಪರ್ವತದ ಮೇಲೆ ವಾಸ ಮಾಡಿದನು. ಜಾಲಂಧರನಾಥನು ಗರ್ಭಗಿರಿಯ ಮೇಲೆ ಉಳಿದನು. ಕಾನೀಫನು "ರಾಜಾಬಾಗಶರ" ಈ ಹೆಸರಿನಿಂದ ಕಲಬುರ್ಗಿಯಲ್ಲಿ ವಾಸಮಾಡಿದನು. ಗಹನೀನಾಥನು ಗೌಬೀಪೀರನೆಂಬ ಹೆಸರಿನಿಂದ ಗರ್ಭಗಿರಿಯ ಬಳಿಯಲ್ಲಿ ಇರಹತ್ತಿದನು. ನಾಗನಾಥನು ವಡವಾಳದಲ್ಲಿ ವಾಸಿಸಿದನು ರೇವಣನಾಥನು ವೀಟಗ್ರಾಮದಲ್ಲಿ ಗುಪ್ತನಾದನು. ಚರ್ಪಟ, ಚೌರಂಗೀ, ಮತ್ತು ಅಡಬಂಗ ಇವರು ಮಾತ್ರ ಒಂದೇ ಸ್ಥಳದಲ್ಲಿ ವಾಸ ಮಾಡಲಿಲ್ಲ. ಗುಪ್ತರೀತಿಯಿಂದ ಯಾವಾಗಲೂ ತೀರ್ಥಾಟನ ಮಾಡುತ್ತ ಇರಬೇಕೆಂದು ಸಂಕಲ್ಪ ಮಾಡಿಕೊಂಡರು. ಭರ್ತರೀನಾಥನು ಪಾತಾಳಲೋಕದಲ್ಲಿ ಹೋಗಿ ನಿಂತನು. ಮೀನನಾಥನು ಸ್ವರ್ಗಲೋಕದಲ್ಲಿ ವಾಸಿಸಿದನು. ಗೋರಕ್ಷನಾಥನು ಗಿರಿನಾರಪರ್ವತಕ್ಕೆ ಹೋಗಿ ಶ್ರೀ ದತ್ತಾತ್ರಯನ ಆಶ್ರಮದಲ್ಲಿ ಇರಹತ್ತಿದನು. ಗೋಪೀಚಂದ ಮತ್ತು ಧರ್ಮನಾಥ ಇವರು ತಮ್ಮ ತಮ್ಮ ಸಾಮರ್ಥ್ಯದಿಂದ ವೈಕುಂಠಲೋಕಕ್ಕೆ ಹೋದರು. ಭಗವಾನ್ ವಿಷ್ಣುವು ಮೈನಾವತಿಯನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ತನ್ನ ಬಳಿಯಲ್ಲಿರಿಸಿಕೊಂಡನು. ಈ ಪ್ರಕಾರ ಸರ್ವನಾಥರು ಬೇರೆ ಬೇರೆ ಸ್ಥಳಗಳಲ್ಲಿ ವಾಸಮಾಡಿದರು. ಅವರ ಕೃಪೆಯಿಂದ ನಿರ್ಮಾಣರಾದ ಅನೇಕ ಸಿದ್ಧರು ಮುಂದೆ ನಾಥಸಂಪ್ರದಾಯವನ್ನು ದೊಡ್ಡ ಪ್ರಮಾಣದಿಂದ ಪ್ರಸಾರ ಮಾಡಿದರು.

**ಶ್ರೀ ನಾಥ ಚರಣಾರವಿಂದಾರ್ಪಣಮಸ್ತು.**

**ಶುಭಂಭವತು.**

**ಸಂಪೂರ್ಣ.**

ಆನಂದವನ-ಅಗಡಿಯ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಭಿ. ಪ. ಕಾಳೆ, ಇವರಿಂದ ಮುದ್ರಿಸಲ್ಪಟ್ಟಿತು.